# 'ಗೌಡಾಲು ಸಮುದಾಯದ ಅಧ್ಯಯನ'

(ಚಿಕ್ಕಮಗಳೂರು ಜಿಲ್ಲೆಯನ್ನು ಪರಿಗಣಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಸಮಾಜಶಾಸ್ತ್ರದ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕರು

ಬಸವರಾಜ ಎ.ಡಿ.

ಮಾರ್ಗದರ್ಶಕರು

ಡಾ.ಸಿ.ಟಿ.ಗುರುಪ್ರಸಾದ

ಸಹ ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೦

# ‘ಗೌಡಾಲು ಸಮುದಾಯದ ಅಧ್ಯಯನ’

(ಚಿಕ್ಕಮಗಳೂರು ಜಿಲ್ಲೆಯನ್ನು ಪರಿಗಣಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಸಮಾಜಶಾಸ್ತ್ರದ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ




ಸಂಶೋಧಕರು

**ಬಸವರಾಜ ಎ.ಡಿ.**

ಮಾರ್ಗದರ್ಶಕರು

**ಡಾ.ಸಿ.ಟಿ.ಗುರುಪ್ರಸಾದ**

ಸಹ ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೦

## ಸಂಶೋಧಕರ ಪ್ರಮಾಣ ಪತ್ರ

**ಗೌಡಾಲು ಸಮುದಾಯದ ಅಧ್ಯಯನ** (ಚಿಕ್ಕಮಗಳೂರು ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ.ಸಿ.ಟಿ.ಗುರುಪ್ರಸಾದ್, ಸಹ ಪ್ರಾಧ್ಯಾಪಕರು, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.


ಬಸವರಾಜ ಎ.ಡಿ.
ಸಂಶೋಧಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ


ದಿನಾಂಕ : 28-6-2010.
ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಗೌಡಾಲು ಸಮುದಾಯದ ಅಧ್ಯಯನ** (ಚಿಕ್ಕಮಗಳೂರು ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಅಡಿಯಲ್ಲಿ **ಬಸವರಾಜ.ಎ.ಡಿ.** ಅವರು ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಸಮಾಜಶಾಸ್ತ್ರದ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

28/6/10

ಡಾ. ಹಿ.ಚಿ.ಗುರುಪ್ರಸಾದ್
ಸಹ ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೮-೦೬-೨೦೧೦
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಗೌಡಾಲು ಸಮುದಾಯದ ಅಧ್ಯಯನ

*(ಚಿಕ್ಕಮಗಳೂರು ಜಿಲ್ಲೆಯನ್ನು ಪರಿಗಣಿಸಿ)*

* * *

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

೧.೧. ಅಧ್ಯಯನಕ್ಕಾಗಿ ಕಂಡುಕೊಂಡ ವಿಧಾನಗಳು

೧.೨. ಇಲ್ಲಿಯವರೆಗೆ ನಡೆದ ಅಧ್ಯಯನಗಳು

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

### ಪ್ರವೇಶ

ಭಾರತ ದೇಶ ವಿವಿಧ ಜನಸಮುದಾಯಗಳು ವಾಸಿಸುವ ನಾಡಾಗಿದೆ. ಇಲ್ಲಿಯ ಜನ ಹಲವಾರು ಭಾಷೆ, ಜಾತಿ, ಧರ್ಮ, ವೃತ್ತಿಗಳಿಗೆ ಸೇರಿದವರಾಗಿದ್ದಾರೆ. ಬಹುಮುಖಿ ಸಂಸ್ಕೃತಿಯ ತವರೂರಾದ ಭಾರತದಲ್ಲಿ ವಿವಿಧ ರೀತಿಯ ಜೀವನಕ್ರಮಗಳು ಹೆಣೆದುಕೊಂಡಿವೆ. ಭಾರತಾದ್ಯಂತ ಪ್ರಾದೇಶಿಕ ಭಿನ್ನತೆಯ ಹಿನ್ನೆಲೆಯಲ್ಲಿ ವೈವಿಧ್ಯಮಯವಾದ ಬುಡಕಟ್ಟು, ಸಮುದಾಯಗಳು ಜಾತಿ ಇವೆ. ಇವು ವಿವಿಧ ಜಾತಿ, ಭಾಷೆಗಳ ಹಿನ್ನೆಲೆಯ ಬದುಕನ್ನು ಮೈಗೂಡಿಸಿಕೊಂಡ ಸಮುದಾಯಳಾಗಿವೆ. ಯಾವುದೇ ಬುಡಕಟ್ಟಿಗೆ ಅವರದೇ ಆದ ಅನನ್ಯತೆಗಳಿವೆ. ಸಾಂಸ್ಕೃತಿಕ ಆಚರಣೆಗಳಲ್ಲಿ ಒಂದು ಬುಡಕಟ್ಟಿನಿಂದ ಮತ್ತೊಂದು ಬುಡಕಟ್ಟಿಗೆ ಸಾಮ್ಯವಿರುವಂತೆ ಕಂಡರೂ ಮೂಲದಲ್ಲಿ ವ್ಯತ್ಯಾಸಗಳಿವೆ. ಭಾರತದ ಸಾಮಾಜಿಕ ವ್ಯವಸ್ಥೆಯು ಸ್ತರವಿನ್ಯಾಸ ರೀತಿಯ ಏಣಿ ಶ್ರೇಣಿಯ ಹಿನ್ನೆಲೆಯ ಬದುಕನ್ನು ರೂಢಿಸಿಕೊಂಡಿದೆ. ಬುಡಕಟ್ಟು ಜನರು ಅವರದೇ ಆದ ಕಾಡಿನಲ್ಲಿ ಹಾಡಿಗಳನ್ನು ರೂಪಿಸಿಕೊಂಡು ವಾಸಿಸುತ್ತಿದ್ದಾರೆ. ಬುಡಕಟ್ಟು ಸಮುದಾಯದ ಬದುಕಿನ ಸ್ಥೂಲ ನೋಟವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

೨೦ ಮತ್ತು ೨೧ನೇ ಶತಮಾನದ ಕರ್ನಾಟಕದಲ್ಲಿ ಸಂಸ್ಕೃತಿ ಅಧ್ಯಯನ, ಚಿಂತನೆಗಳು ತೀವ್ರಗತಿಯಲ್ಲಿ ನಡೆಯುತ್ತಿವೆ. ಪ್ರಾಚೀನ ಕರ್ನಾಟಕದ ಚರಿತ್ರೆಯ ಅಧ್ಯಯನಗಳನ್ನು ಇಂದು ಹೋಲಿಕೆ ಮಾಡಿದರೆ ವಸ್ತು ನಿಷ್ಠವಾದ ಅಧ್ಯಯನಗಳ ಹಿನ್ನೆಲೆಯಲ್ಲಿ ಸಮುದಾಯಗಳು ಕಟ್ಟಿಕೊಂಡ ಬಹುಮುಖಿ ಸಂಸ್ಕೃತಿಯ ಆಯಾಮಗಳು ಇತ್ತೀಚಿನ ಸಂಶೋಧನಾ ಅಧ್ಯಯನಗಳಿಗೆ ವಸ್ತು ವಿಷಯಗಳಾಗಿ ಪ್ರಾಮುಖ್ಯತೆ ಪಡೆದುಕೊಳ್ಳುತ್ತಿವೆ.

ಇಂದು ಮಾನವ ಸಮುದಾಯಗಳನ್ನು ಕುರಿತು ಸಮಾಜದ ವಿಶಿಷ್ಟತೆಯನ್ನು ತಿಳಿಯಲು ವಿವಿಧ ಮಾದರಿಗಳಲ್ಲಿ ಹಲವಾರು ಉದ್ದೇಶಗಳಿಗಾಗಿ ಅಧ್ಯಯನ ಮಾಡಲಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ತಳಸಮುದಾಯಗಳು ಮತ್ತು ಅಲಕ್ಷಿತ ಸಮುದಾಯಗಳ ಅಧ್ಯಯನಗಳು ಮುಖ್ಯ ಧಾರೆಗೆ ಬರಬೇಕಾಗಿದೆ. ಆದ್ದರಿಂದ ಸಮುದಾಯಗಳ ಅಧ್ಯಯನಗಳು ವೈಜ್ಞಾನಿಕವಾದ ಅಧ್ಯಯನಗಳಾಗುತ್ತವೆ.

ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳ ಅಧ್ಯಯನಗಳ ಸಂದರ್ಭದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನಕಾರರು, ಸಂಸ್ಕೃತಿ ಚಿಂತಕರು ಮತ್ತು ಶಿಕ್ಷಣಕ್ಕೆ ತಮ್ಮ ಜೀವನವನ್ನು ಮುಡಿಪಾಗಿಟ್ಟವರು ಸಮುದಾಯಗಳ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡು ಅಧ್ಯಯನ ಮಾಡುತ್ತಿದ್ದಾರೆ.

ಭಾರತದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನಗಳು ಯಾವಾಗ ಪ್ರಾರಂಭವಾದವು ಎಂಬುದನ್ನು ನಾವು ಅವಲೋಕಿಸಿದರೆ, ವಸಾಹತುಶಾಹಿ ಕಾಲಘಟ್ಟದಲ್ಲಿ ನಡೆದ ಅಧ್ಯಯನಗಳನ್ನು ಚರ್ಚಿಸಲೇಬೇಕಾಗುತ್ತದೆ. ೧೮೯೪ರಲ್ಲಿ ಕಂಪನಿ ಆಡಳಿತ ಭಾರತದಲ್ಲಿ ನಡೆಸಿದ ಯಾವುದೇ ಅಧ್ಯಯನಗಳ ಕಾರ್ಯ ಕ್ಷೇತ್ರ ಮತ್ತು ಆ ಜಾಡುಗಳು ಇಂದು ನಡೆಯುವ ಅಧ್ಯಯನಗಳಿಗಿಂತ ಭಿನ್ನವಾಗಿದ್ದವು. ಆರ್ಥಿಕ ಶೋಷಣೆ ವಸಾಹತು ಆಡಳಿತದ ಪ್ರಮುಖ ಧ್ಯೇಯೋದ್ದೇಶವಾಗಿತ್ತು. ಆದ್ದರಿಂದ ಬುಡಕಟ್ಟು ಸಮುದಾಯಗಳನ್ನು ಕುರಿತು ವಸಾಹತುಗಳು ಕೈಗೊಂಡ ಅಧ್ಯಯನಗಳು ಕುತೂಹಲಕಾರಿಯಾದ ಅಂಶಗಳನ್ನೊಳಗೊಂಡಿವೆ. ಭಾರತದಂತಹ ತೃತೀಯ ಜಗತ್ತಿನ ದೇಶದ ಸಮುದಾಯಗಳ ಭಾಷೆ, ಧರ್ಮ, ಸಂಸ್ಕೃತಿ, ನೈಸರ್ಗಿಕ ಸಂಪತ್ತನ್ನು ಏಕೆ ಅಧ್ಯಯನ ಮಾಡಬೇಕು ಎಂಬುದನ್ನು ಕುರಿತು ವಸಾಹತು ಆಡಳಿತಕ್ಕೆ ಸ್ಪಷ್ಟ ಕಲ್ಪನೆಗಳಿದ್ದವು. ಆದರೆ ಅವು ಸ್ವಾರ್ಥಪರವಾಗಿದ್ದವು. ಕಂಪನಿಯ ಆಡಳಿತ ಹಲವು ಸಂಸ್ಕೃತಿಗಳ ತಾಣವಾಗಿದ್ದ ಭಾರತವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಳ್ಳಲು ಹಲವು ತಂತ್ರಗಳನ್ನು ರೂಪಿಸಿಕೊಳ್ಳಲೇ ಬೇಕಾಗಿತ್ತು. ಶತಮಾನಗಳಿಂದ ರಾಜಶಾಹಿ ಮತ್ತು ಪ್ರಭುತ್ವಶಾಹಿಗಳಿಂದ ನಿರಂತರವಾಗಿ ಆಳ್ವಿಕೆಗೆ ಒಳಪಟ್ಟಿದ್ದ ಸಮುದಾಯಗಳು ಭೌತಿಕವಾಗಿ ಮತ್ತು ಬೌದ್ಧಿಕವಾಗಿ ಕುಂದಿ ಹೋಗಿದ್ದರು. ಅಲ್ಲದೆ ಕ್ರಿ.ಪೂ. ೬ನೇ ಶತಮಾನದಿಂದಲೂ ಬುಡಕಟ್ಟು ಸಮುದಾಯಗಳು ವಿವಿಧ ಸಂಸ್ಥೆಗಳಲ್ಲಿ ತಮ್ಮ ಬದುಕನ್ನು ಸಾಗಿಸುತ್ತಾ ಬಂದವರಾಗಿದ್ದರು. ಈಶಾನ್ಯ ಭಾರತದಲ್ಲಿ ಬ್ರಿಟಿಷ್ ಸೈನ್ಯ ಹೀನಾಯವಾಗಿ ಬುಡಕಟ್ಟು ಸಮುದಾಯಗಳಿಂದ ಹೊಡೆಸಿಕೊಂಡು ಹಿಂದುರುಗಿದ ಮೇಲೆ ವಸಾಹತು ಆಡಳಿತಕ್ಕೆ ಭಾರತದಲ್ಲಿ ವಾಸಿಸುವ ಸಮುದಾಯಗಳ ಮನಸ್ಸಿನ ಅರಿವಾಯಿತು. ಆದ್ದರಿಂದ ಭಾರತವನ್ನು ಆಳ್ವಿಕೆ ಮಾಡಬೇಕಾದರೆ ಸಮುದಾಯಗಳನ್ನು ಅರ್ಥ ಮಾಡಿಕೊಳ್ಳಬೇಕು ಎಂಬ ಮನೋಭಾವನೆಯಿಂದ ಕಪಟ ತಂತ್ರದ ಹಿನ್ನೆಲೆಯಲ್ಲಿ ಭಾರತದ ಬುಡಕಟ್ಟು ಸಮುದಾಯಗಳ ಅಧ್ಯಯನಗಳು ಆರಂಭಗೊಂಡವು. ಬುಡಕಟ್ಟು ಸಮಾಜಗಳ ಅಧ್ಯಯನಗಳು ಓರಿಯಂಟಲ್ (Oriental) ಮತ್ತು ಕಲೋನಿಯಲ್ (Colonioal) ಮಾದರಿಯಲ್ಲಿ ಪ್ರಾರಂಭಗೊಂಡವು.

ಭಾರತದ ಚರಿತ್ರೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಕೊನೆ ಹಾಗೂ ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ದೇಶವು ಪರಕೀಯರ ವಶದಲ್ಲಿತ್ತು. ಭಾರತೀಯ ಜೀವನದ ಮೇಲೆ ಯಾಜಮಾನ್ಯವನ್ನು ಹೇರಿದ ಸಮಾಜದಲ್ಲಿ ಭಾರತೀಯ ಸಮಾಜದ ಜೀವನದ ಮಾರ್ಗ ಹಲವಾರು ನೆಲೆಗಳಲ್ಲಿ ನವೀನತೆಯ ಸ್ವರೂಪಗಳನ್ನು ಪಡೆದುಕೊಂಡಿತು. ಪಾಶ್ಚಿಮಾತ್ಯರ ಪ್ರಭಾವವು ಭಾರತದ ಸಾಮಾಜಿಕ ವ್ಯವಸ್ಥೆಯನ್ನು ಪರೀಕ್ಷೆಗೆ ಒಳಪಡಿಸಿತು. ಬಂಡವಾಳಶಾಹಿಯ ಹಿನ್ನೆಲೆಯನ್ನು ಹೊಂದಿದ್ದ ವಸಾಹತು ಆಡಳಿತ ನೀತಿಯು ಭಾರತದ ನಿಸರ್ಗ ಸಂಪತ್ತನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿದ್ದಲ್ಲದೆ ಅರಣ್ಯದ ಒಳಗಡೆ ಬದುಕನ್ನು ಮಾಡುತ್ತ ಗುಡ್ಡಗಾಡಿನ ಬುಡಕಟ್ಟು ಸಮುದಾಯಗಳನ್ನು ಅತಂತ್ರದ ಸ್ಥಿತಿಯಲ್ಲಿ ಸಿಲುಕಿಸಿತು. ೧೯ನೇ ಶತಮಾನದ ಕೊನೆಯ ವೇಳೆಗೆ ಬ್ರಿಟಿಷ್ ಆಡಳಿತದ ಅರಣ್ಯ ಕಾಯಿದೆಯು ತನ್ನದೇ ಆದ ನಿರ್ಬಂಧಗಳನ್ನು ಬುಡಕಟ್ಟುಗಳ ಮೇಲೆ ಹಾಕಿತು. ಪ್ರಸ್ತುತ ೨೦೦೬-೨೦೦೭ರ ಅರಣ್ಯ ಕಾಯಿದೆಯು ಅರಣ್ಯದ ಒಳಗಡೆ ಇರುವ ಬಂಡವಾಳಶಾಹಿಗಳ ಮತ್ತು ಜಮೀನ್ದಾರರ ಪರವಾಗಿ ಇರುವುದನ್ನು ಗಮನಿಸಿದರೆ ೨೧ನೇ ಶತಮಾನದ ಸ್ವಾತಂತ್ರ್ಯ ಭಾರತದಲ್ಲಿಯೂ ಬುಡಕಟ್ಟುಗಳ ಸ್ಥಿತಿ ಶೋಚನೀಯವಾಗಿದೆ.

ಬುಡಕಟ್ಟುಗಳು ಬ್ರಿಟಿಷರ ವಿರುದ್ಧ ಹೋರಾಟವನ್ನು ಮಾಡಿರುವುದು ಗಮನಿಸಿದರೆ ಆದಿವಾಸಿಗಳ ಸ್ಥಿತಿಯು ಯಾವ ರೂಪದಲ್ಲಿತ್ತು ಎಂಬುದು ತಿಳಿಯುತ್ತದೆ. ಅನೇಕ ಬಾರಿ ಬ್ರಿಟಿಷ್ ಸೈನ್ಯ ಆದಿವಾಸಿಗಳಿಂದ ಸೋತು ಹಿಂದಿರುಗಿತ್ತು ಎಂಬುದು ಕೂಡ ಗಮನಾರ್ಹ. ಆದಿವಾಸಿಗಳ ಗೆರಿಲ್ಲಾ ಯುದ್ಧ ಮಾದರಿಯು ಬ್ರಿಟಿಷರನ್ನು ದಿಕ್ಕು ತಪ್ಪಿಸಿದೆ. ಇಲ್ಲಿ ಗಮನಿಸಲೇಬೇಕಾದ ಸಂಗತಿಯೆಂದರೆ ಆದಿವಾಸಿಗಳ ಸಂಪ್ರದಾಯಬದ್ಧ ಸಮುದಾಯ ನಿಷ್ಠೆ ಮತ್ತು ತಮ್ಮ ಅನನ್ಯತೆಗಳ ಕುರಿತು ಬುಡಕಟ್ಟುಗಳಿರುವ ನಂಬಿಕೆಗಳಿಂದಾಗಿ ಹೊರಗಿನ ಯಾವುದೇ ವ್ಯಕ್ತಿಗಳು ಬಂದಾಗ ಅವರನ್ನು ನಡೆಸಿಕೊಳ್ಳುವ ಕ್ರಮಗಳೇ ಕಠೋರವಾಗಿದ್ದವು. ಈ ಕಾರಣದಿಂದ ಅರಣ್ಯದ ಬಗ್ಗೆ ಇದ್ದ ದೈವತ್ವದ ಭಾವನೆ ಮತ್ತು ಜಟಿಲತೆಗಳೆರಡೂ ಬುಡಕಟ್ಟುಗಳಿಗೆ ಮೈಗೂಡಿದ್ದವು. ಇಲ್ಲಿಯವರೆಗೆ ಆದಿವಾಸಿಗಳಿಗೆ ಅರಣ್ಯವೇ ಬದುಕಿನ ಉಸಿರಾಗಿಬಿಟ್ಟಿದೆ. ಆದರೆ ವಸಾಹತು ಆಡಳಿತ ಆದಿವಾಸಿಗಳ ಮತ್ತು ಅರಣ್ಯಗಳ ನಡುವಿನ ಸಂಬಂಧವನ್ನು ವ್ಯವಸ್ಥಿತವಾಗಿ ಗ್ರಹಿಸದೆ ಬುಡಕಟ್ಟು ಸಮುದಾಯಗಳನ್ನು ಹೊರ ಹಾಕಿದೆ. ಈ ಕೆಳಗಿನ ನಕಾಶೆಯನ್ನು ಅವಲೋಕಿಸಿದರೆ ಸಮಾಜ ಮತ್ತು ಸರ್ಕಾರ ಬುಡಕಟ್ಟುಗಳನ್ನು ಕಂಡ ಬಗೆಯನ್ನು ತಿಳಿಯಬಹುದು.

**ಸರ್ಕಾರ-ವ್ಯವಸ್ಥೆ**




೧. ಕಾಡು

೨. ಗಿರಿಜನರು

೩. ಭೂಮಾಲೀಕರು

೪. ಅರಣ್ಯ ಇಲಾಖೆ

೫. ಕಾಡುಗಳ್ಳರು

ಈ ಸಮುದಾಯಗಳ ಅರ್ಥ ಬಲವನ್ನು ನಾಶ ಮಾಡಬಹುದು ಎಂಬುದನ್ನು ಮನವರಿಕೆ ಮಾಡಿಕೊಂಡ ವಸಾಹತುಶಾಹಿಯು ಆದಿವಾಸಿಗಳ ಬದುಕಿನ ಪರಿಕರಗಳಾದ ಆಯುಧಗಳನ್ನು ವಶಪಡಿಸಿಕೊಂಡಿತು. ಈ ಹಿನ್ನೆಲೆಯಿಂದ ಅರಣ್ಯವನ್ನು ಮೊದಲಬಾರಿಗೆ ರಾಷ್ಟ್ರೀಕರಿಸುವ ಕಾನೂನುಗಳು ರಚನೆಯಾದವು. ಬ್ರಿಟಿಷರು ಮತ್ತು ಬಂಡವಾಳಶಾಹಿಗಳು ಸೇರಿಕೊಂಡು ಕಾನೂನುಗಳನ್ನು ಮುಂದೆ ಇಟ್ಟು ಇಂಡಿಯಾದ ಅರಣ್ಯಗಳನ್ನು ಧ್ವಂಸ ಮಾಡಲು ಪ್ರೇರೆಪಿಸುತ್ತಿರುವ ಬಗೆಯನ್ನು ನೋಡುವಂತಾಯಿತು. ಅರಣ್ಯದೊಳಗಿದ್ದ ಸಸ್ಯ ಸಂಪತ್ತು ಮತ್ತು ಅರಣ್ಯ ಉತ್ಪನ್ನಗಳು ಬ್ರಿಟಿಷರಿಂದ ಹಿಡಿದು ಇಲ್ಲಿಯವರೆಗೆ ಜಮೀನ್ದಾರರು, ಬಂಡವಾಳಶಾಹಿಗಳು ಮತ್ತು ದರೋಡೆಕೋರರ ಕೈಗೆ ಸಿಕ್ಕು ಬಲಿಯಾಗಿ ನಾಶವಾಗುತ್ತಾ ಹೋಯಿತು. ಸುವ್ಯವಸ್ಥಿತವಾದ ಕಾನೂನೀಕರಣದ ಮೂಲಕ ಬುಡಕಟ್ಟು ಸಮುದಾಯಗಳನ್ನು ಹೀನಾಯವಾಗಿ ಶೋಷಿಸಿ ಕಾಡಿನಿಂದ ಒಕ್ಕಲೆಬ್ಬಿಸುವ ಕಾರ್ಯ ಪ್ರಾರಂಭಗೊಂಡು ಬುಡಕಟ್ಟುಗಳ ಹಕ್ಕುಗಳನ್ನು ಕಿತ್ತುಕೊಂಡು ಭಿಕ್ಷೆ ಬೇಡಿ ತಿನ್ನುವ ಬದುಕಿಗೆ ದೂಡಿರುವ ಸ್ಥಿತಿಯನ್ನು ಮರೆಯಲಾಗದು.[೧]

ಈ ಎಲ್ಲ ಅಪಾಯಗಳ ಜೊತೆ, ವಸಾಹತು ಆಡಳಿತದಿಂದ ಭಾರತದ ಕೆಳಸ್ತರದ ಜಾತಿ ಮತ್ತು ಬುಡಕಟ್ಟುಗಳಿಗೆ ಕೆಲವು ಉಪಯುಕ್ತತೆಗಳು ಆಗಿವೆ. ಹೇಳಲಿಕ್ಕೆ ಆಗದ ರೋಗಗಳಿಂದ ಬಳಲುತ್ತಿದ್ದ ಬುಡಕಟ್ಟು ಜನರು ಕಾಡಿನಲ್ಲಿ ಸಿಗುವ ಗಿಡಮೂಲಿಕೆಗಳಿಂದ ಗುಣವಾಗುತ್ತಿದ್ದರು. ಆದರೆ ಗುಣವಾಗಲು ಹೆಚ್ಚು ಸಮಯ ಹಿಡಿಯುತ್ತಿತ್ತು. ಆದರೆ ಕ್ರಿಶ್ಚಿಯನ್ ಪಾದ್ರಿಗಳಾಗಿ ಭಾರತಕ್ಕೆ ಮತಾಂತರದ ಉದ್ದೇಶವನ್ನು ಇಟ್ಟುಕೊಂಡು ಬಂದಿದ್ದವರು ಸಮಾಜ ಸುಧಾರೇತರರಾಗಿ ಆದಿವಾಸಿಗಳ ಅಭಿವೃದ್ಧಿಯ ಕಡೆ ಗಮನ ಹರಿಸಿದ ಬಗೆಯನ್ನು ಮರೆಯುವಂತಿಲ್ಲ. ಅಂತವರಲ್ಲಿ ವೆರಿಯರ್ ಎಲ್ವಿನ್ ಅವರು ಒಬ್ಬರಾಗಿದ್ದಾರೆ. ಇವರು ಆದಿವಾಸಿಗಳ ಜೀವನ ಸುಧಾರಣೆಗೆ ಪಣತೊಟ್ಟು ನಿಂತವರಾಗಿದ್ದಾರೆ. ಹಲವು ಲಸಿಕೆಗಳನ್ನು ತಂದು ಆದಿವಾಸಿಗಳ ಆರೋಗ್ಯ ಕಾಪಾಡುವಲ್ಲಿ ಪಾದ್ರಿಗಳು ಯಶಸ್ವಿಯಾದರು. ಕೆಳಜಾತಿ ಜನರು ಮತ್ತು ಬುಡಕಟ್ಟು ಜನರನ್ನು ಮುಟ್ಟಬಾರದು ಎನ್ನುವ ಹಿಂದೂ ಧರ್ಮದ ಪುರೋಹಿತರಿಗಿಂತ ಕ್ರಿಶ್ಚಿಯನ್ ಪಾದ್ರಿಗಳು ಮಾನವೀಯವಾಗಿ ಕಂಡ ಬಗೆಯನ್ನು ನೋಡಲಾಗಿದೆ. ಭಾರತಕ್ಕೆ ವಸಾಹತುಶಾಹಿಯ ಬಹುಮುಖ್ಯ ಕೊಡುಗೆಯೆಂದರೆ ಶಿಕ್ಷಣ ಮತ್ತು ಆಧುನಿಕತೆ, ಬ್ರಿಟಿಷ್ ಆಡಳಿತದ ಜೊತೆ ಜೊತೆಗೆ ಕ್ರೈಸ್ತ ಪಾದ್ರಿಗಳು ಮಾಡಿದ ಸುಧಾರಣೆ ಕಾರ್ಯಗಳು ಬುಡಕಟ್ಟುಗಳ ಬದುಕಿನಲ್ಲಿ ಸಾಂಸ್ಕೃತಿಕ ಎಚ್ಚರವನ್ನು ನೀಡಿದವು. ಸುಧಾರಣೆಯ ಜೊತೆಯಲ್ಲಿ ಶಿಕ್ಷಣವನ್ನು ಆರೋಗ್ಯ ಸೇವೆಗಳನ್ನು ಕಾಡಿನಲ್ಲಿ ವಾಸ ಮಾಡುವ ಬುಡಕಟ್ಟುಗಳಿಗೆ ಮತ್ತು ಅವರ ಮಕ್ಕಳಿಗೆ ಒದಗಿಸಿದರು. ಕ್ರೈಸ್ತ ಪಾದ್ರಿಗಳು ತಮ್ಮ ಧರ್ಮದ ಬಗೆಗೆ ಉದಾರವಾಗಿ ಮಾತನಾಡಿ ಹಿಂದೂಧರ್ಮವನ್ನು ಟೀಕೆ ಮಾಡಿದರು. ಬಹುಮುಖಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಬುಡಕಟ್ಟುಗಳು ವಸಾಹತುಶಾಹಿಯ ಏಕಸಂಸ್ಕೃತಿಗೆ ಹೊಂದಿಕೊಳ್ಳುವಲ್ಲಿ ಬಹಳಷ್ಟು ಪ್ರತಿರೋಧಗಳನ್ನು ಒಡ್ಡಿವೆ. ಅಲ್ಲದೆ ವಸಾಹತುಶಾಹಿಯ ದಬ್ಬಾಳಿಕೆಯ ವಿರುದ್ಧವಾಗಿಯೂ ಹೋರಾಟಗಳನ್ನು ಎದುರಿಸಿ ಬುಡಕಟ್ಟು ಸಮುದಾಯಗಳು ತಮ್ಮ ಸಂಸ್ಕೃತಿಯ ವೈವಿಧ್ಯತೆಗಳನ್ನು ಕಾಪಾಡಿಕೊಂಡು ಬಂದಿವೆ.[೨]

ಯಂತ್ರನಾಗರಿಕತೆ, ಬಂಡವಾಳಶಾಹಿ, ಕೈಗಾರೀಕರಣ, ವ್ಯವಸ್ಥೆಯ ಸ್ಥಾಪನೆ, ವೈಜ್ಞಾನಿಕ ಆವಿಷ್ಕಾರಗಳು ಇಡೀ ಭಾರತವನ್ನು ಸ್ಪರ್ಧೆಗೆ ಈಡು ಮಾಡಿವೆ. ಈ ಎಲ್ಲ ಅಂಶಗಳಿಂದ ಭಾರತೀಯ ಸಮಾಜದ ಜೀವನ ಕ್ರಮವು ಹೊಸ ಹೊಸ ಬಗೆಯ ಆವಿಷ್ಕಾರಗಳಿಗೆ ಮುಖ್ಯವಾಯಿತು. ಯಂತ್ರನಾಗರಿಕತೆಯ ಮೋಹ ಸಾಂಪ್ರದಾಯಿಕ ಜೀವನಕ್ರಮದ ಬದಲಾವಣೆ ಇಲ್ಲವೇ ನಾಶ. ಪಾರಂಪರಿಕ ಉತ್ಪಾದನಾವಸ್ಥೆಯ ಜಾಗದಲ್ಲಿ ಅತ್ಯಾಧುನಿಕ ಯಂತ್ರನಾಗರಿಕತೆಯ ಹೆಜ್ಜೆಗಳು ಮೂಡತೊಡಗಿದವು. ಮಾನವ ಕುಲದ ಬದುಕನ್ನು ಆರ್ಥಿಕತೆ ನಿಯಂತ್ರಿಸಿದೆ. ಬಂಡವಾಳಶಾಹಿ ವ್ಯವಸ್ಥೆಯ ಪ್ರಧಾನ ಉದ್ದೇಶ ಲಾಭ ನಿರೀಕ್ಷೆಯೇ ಆಗಿದೆ. ಸಾಮ್ರಾಜ್ಯಶಾಹಿ ದೇಶಗಳ ಪ್ರಮುಖ ಧೋರಣೆಯೂ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಲ್ಲಿಯ ನೈಸರ್ಗಿಕ ಸಂಪನ್ಮೂಲವನ್ನು ಜನರನ್ನು ಭೌತಿಕ ವಸ್ತುಗಳಂತೆ ಪರಿಗಣಿಸುತ್ತದೆ. ವಸಾಹತು ಆಡಳಿತದ ಜೊತೆಗೆ ದೇಣಿಗೆಯಾಗಿ ಬಂದ ಶಿಕ್ಷಣ, ಒಂದು ಮೌಲ್ಯವಾಗಿ ಬಂದ ಆಧುನಿಕತೆ ಶಕ್ತಿರಾಜಕಾರಣದೊಂದಿಗೆ ಕೈ ಜೋಡಿಸಿದ ಬಂಡವಾಳಶಾಹಿ ವ್ಯವಸ್ಥೆ ಈ ರೀತಿಗಳು ಭಾರತೀಯ ಸಮಾಜಕ್ಕೆ ಒದಗಿದ ಸಮಯವು, ಇಲ್ಲಿಯ ಸಮಾಜದ ಸ್ಥಿತಿಗತಿ ನಿಜಕ್ಕೂ ಕುತೂಹಲದ ಅಧ್ಯಯನಕ್ಕೆ ಯೋಗ್ಯವಾಗುತ್ತದೆ. ಇಂತಹ ಸಮಯದಲ್ಲಿ ಕಾಡಿನಲ್ಲಿ ವಾಸ ಮಾಡುವ ಬುಡಕಟ್ಟುಗಳ ಸ್ಥಿತಿ ಏನು? ಈ ರೀತಿಯ ವೈರುಧ್ಯಗಳಿರುವ ಬುಡಕಟ್ಟು ಸಮುದಾಯಗಳಿಗೆ ಬದುಕನ್ನು ಸಾಗಿಸುವ ಪರಿಯು ಯಾವ

ರೂಪದ್ದಾಗಿದೆ.[6] ಹೀಗಾದಲ್ಲಿ ಬುಡಕಟ್ಟುಗಳ ಮನಸಿನಲ್ಲಿರುವ ಕಿಚ್ಚು ಯಾವ ಬಗೆಯದು ಎಂಬುದು ಅಧ್ಯಯನಕ್ಕೆ ಹೆಚ್ಚು ಒತ್ತನ್ನು ಒದಗಿಸುತ್ತದೆ. ಅಲ್ಲದೆ, ಬುಡಕಟ್ಟುಗಳು ವೇಗದ ಗತಿಯಲ್ಲಿ ಬೆಳೆಯುತ್ತಿರುವ ಸಮಾಜದ ಎದುರಿಗೆ ಹೇಗೆ ಬದುಕಬಲ್ಲವು ಎಂಬ ಹಿನ್ನೆಲೆಯಲ್ಲಿ ಅಧ್ಯಯನಗಳು ನಡೆಯುತ್ತಿವೆ.

ಸಾಮಾಜಿಕ ಪರಿವರ್ತನೆ ಜಾಗತೀಕರಣದ ಫಲವಾಗಿ ಇಡೀ ಪ್ರಪಂಚವೇ ಹತ್ತು ಹಲವು ಸಾಂಸ್ಕೃತಿಕ ಭಿನ್ನತೆಗಳನ್ನು ಮರೆತು ಒಂದು ಪುಟ್ಟ ಗ್ರಾಮದಂತೆ ಕಾಣಿಸುತ್ತಿದೆ. ಬಂಡವಾಳ ವ್ಯವಸ್ಥೆ, ಉತ್ಪಾದನಾ ಚಟುವಟಿಕೆಗಳು, ಮಾರುಕಟ್ಟೆ ಈ ವರ್ತುಲದಲ್ಲಿ ಅಲಕ್ಷಿತ ಸಮುದಾಯಗಳು ನಿಲ್ಲಲು ಅಶಕ್ತವಾಗಿವೆ. ಮಾಹಿತಿ ತಂತ್ರಜ್ಞಾನದಿಂದ ವಿಶ್ವದ ಒಂದು ಭಾಗದಿಂದ ಮತ್ತೊಂದು ಭಾಗ ಸೇರಿಸುವ ಪರಿ ಬೆಳೆದು ಏಕಮಾದರಿಯ ಮಾರುಕಟ್ಟೆ ಬಂಡವಾಳ, ಆಡಳಿತ ನಡೆಸುವ ಚಿಂತನೆಗಳು ನಡೆಯುತ್ತಿವೆ. ಅಲ್ಲದೆ ಮಾಹಿತಿ ತಂತ್ರಜ್ಞಾನದಿಂದ ಇಡೀ ಪ್ರಪಂಚವೇ ಕುಬ್ಜವಾಗಿ ವಿಶ್ವಗ್ರಾಮದ ಪರಿಕಲ್ಪನೆಯೊಂದು ಹುಟ್ಟಿಕೊಂಡಿದೆ. ಜಾಗತೀಕರಣದಿಂದ ಸ್ವರೂಪ, ಲಾಭ ನಷ್ಟಗಳ ಬಗೆಗೆ ಕುತೂಹಲದಿಂದ ಮಾತನಾಡುವ ಹಾಗೂ ಅದು ತಂದೊಡ್ಡುವ ಅಪಾಯಗಳನ್ನು ನೆನೆದು ಅಧ್ಯಯನಗಳು ನಡೆಯುತ್ತಿರುವುದನ್ನು ನೋಡಲಾಗುತ್ತಿದೆ. ಬದಲಾಗಿ ದೇಶಿ ನೆಲದ ಬಹುರೂಪಿ ಸಂಸ್ಕೃತಿಯ ಜೀವಕಣದ ಬುಡಕಟ್ಟು, ಆದಿವಾಸಿ, ವಿವಿಧ ಭಾಷೆ, ಧರ್ಮ, ಜನಾಂಗಗಳಿಗೆ ಸೇರಿದವರ ಬಗೆಗೆ ಭಯ, ಭೀತಿ ಚರಿತ್ರೆಗಳನ್ನು ದಾಖಲಿಸುವಂತೆ ಮಾಡಿದೆ. ಏಕರೂಪಿ ಹೆಸರಿನಲ್ಲಿ ಮುಂದೊದಗುವ ಅಪಾಯಗಳಿಗೆ ಕಾರಣಗಳನ್ನು ಹುಡುಕುವ ನೆಪದಲ್ಲಿ ಅದಕ್ಕೆ ಪರಿಹಾರೋಪಾಯಗಳಂತೆ ಸಮುದಾಯಗಳ ಅಧ್ಯಯನವನ್ನು ಬೌದ್ಧಿಕ ಚರ್ಚೆ, ಚಿಂತನೆ, ಒಕ್ಕಲೆಬ್ಬಿಸುವಿಕೆ ಬುಡಕಟ್ಟುಗಳ ಅತಂತ್ರ ಸ್ಥಿತಿಗಳು ತಮ್ಮ ಕಾರ್ಯ ಕ್ಷೇತ್ರವನ್ನಾಗಿಸಿಕೊಂಡಿವೆ.[9]

ಪ್ರತಿಯೊಂದು ಸಮುದಾಯವು ಯಾವತ್ತೂ ಸಾಂಸ್ಕೃತಿಕ ಎಚ್ಚರವನ್ನು ತಪ್ಪಿ ಸ್ಥಿರತೆಯನ್ನು ಪಡೆಯುವುದಿಲ್ಲ. ಆದರೆ ಜಂಗಮಸ್ಥಿತಿಗೆ ಹತ್ತು ಹಲವು ಅಂಶಗಳು ಕಾರಣೀಭೂತವಾಗಿರುತ್ತವೆ. ಬೆಂಕಿಯ ಉಪಯೋಗದಿಂದ ಹಿಡಿದು ಇವತ್ತಿನ ಜಾಗತೀಕರಣ ಪ್ರಕ್ರಿಯೆಯವರೆಗೂ ಬುಡಕಟ್ಟು ಸಮುದಾಯಗಳು ಮಾತ್ರವಲ್ಲದೆ. ಇಡೀ ಮಾನವ ಸಮುದಾಯವೇ ಸ್ಥಿತ್ಯಂತರಗಳನ್ನು ಅನುಭವಿಸಿವೆ. ಬದಲಾಗಿ ಕಾಲಮಾನದ ಯುಗಧರ್ಮದ ಮೌಲ್ಯಗಳೊಂದಿಗೆ ಸಮುದಾಯಗಳು ಜಗಳ ಕಾಯುವುದರೊಂದಿಗೆ ತಮ್ಮ ಅನನ್ಯತೆಯನ್ನು ಕಾದಿಟ್ಟುಕೊಂಡಿವೆ. ಆಧುನಿಕ ವಿದ್ಯಮಾನಗಳಿಗೆ ಬುಡಕಟ್ಟು ಸಮುದಾಯಗಳು ತೆರೆದುಕೊಳ್ಳುವ ರೀತಿ ಅವುಗಳ ಕಾರಣದೊಂದಿಗೆ ಬೆಸೆದುಕೊಂಡಿರುತ್ತವೆ. ಯಾವುದೇ ಒಂದು ಸಮುದಾಯ, ಆಧುನಿಕ ವಿದ್ಯಮಾನಗಳಿಗೆ ಮುಖಾಮುಖಿಯಾಗುವಾಗ ಆ ಸಮುದಾಯ ನಂಬಿ ಬದುಕುವ ಧಾರ್ಮಿಕ-ಸಾಮಾಜಿಕ ಆಚರಣೆ, ನಂಬಿಕೆಗಳೊಂದಿಗೆ ಜಗಳ ಅನಿವಾರ್ಯಗುತ್ತದೆ. ಜೀವಂತವಾಗಿರುವ ಸಂಸ್ಕೃತಿಯ ಪ್ರಧಾನ ಲಕ್ಷಣ ಯಾವಾಗಲೂ ಸಂಘರ್ಷಮಯವಾಗಿರುತ್ತದೆ.[10]

## ಪ್ರಸ್ತುತ ಅಧ್ಯಯನದ ಉದ್ದೇಶಗಳು

ಪ್ರಸ್ತುತ ಅಧ್ಯಯನವು ಅಂತರ್‌ಶಿಸ್ತಿಯ ಅಧ್ಯಯನದ ಅನೇಕ ಅಂಶಗಳನ್ನು ಹೊಂದಿದೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಗೌಡಾಲು ಸಮುದಾಯದ ಸ್ಥಿತಿ-ಗತಿಯನ್ನು ನೋಡಲಾಗಿದೆ. ಪ್ರಸ್ತುತ ಮಹಾಪ್ರಬಂಧವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ಗೌಡಾಲು ಸಮುದಾಯದ ಸಾಮಾಜಿಕ, ಸಂರಚನೆ ಯಾವ ತೆರನಾದುದು ಎಂದು ತಿಳಿಯಲಾಗಿದೆ.

೨. ಸಮುದಾಯದ ಸಾಂಪ್ರದಾಯಿಕ, ಆರ್ಥಿಕ ಸ್ಥಿತಿಗತಿಯನ್ನು ತಿಳಿಯುವುದು.

೩. ವರ್ತಮಾನದಲ್ಲಿ ಸಮುದಾಯ ಎದುರಿಸುತ್ತಿರುವ ಸವಾಲುಗಳು ಯಾವ ಬಗೆಯದು ಎಂದು ಚರ್ಚಿಸುವುದು.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನಕ್ಕೆ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ, ಮೂಡಿಗೆರೆ, ಕೊಪ್ಪ ತಾಲೂಕುಗಳಲ್ಲಿ ಗೌಡಾಲು ಸಮುದಾಯ ಹೆಚ್ಚಾಗಿರುವ ಹಳ್ಳಿಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಗೌಡಾಲು ಸಮುದಾಯ ಅಧ್ಯಯನ ದೃಷ್ಟಿಯಿಂದ ಇವರು ವಾಸ ಮಾಡುವ ಸ್ಥಳಗಳು ಪೇಟೆಯಿಂದ ದೂರವಿದ್ದು, ಪಶ್ಚಿಮ ಘಟ್ಟದ ಇಳಿಜಾರಿನಲ್ಲಿ ಕಾಡಿನ ಮಧ್ಯೆ ಬದುಕುತ್ತಿರುವ ಹಾಗೂ ನಾಡಿನಿಂದ ಯಾವುದೇ ಸಂಪರ್ಕವಿಲ್ಲದೆ ಇರುವ ಸ್ಥಳಗಳಾಗಿವೆ. ಗೌಡಾಲುಗಳು ಇಲ್ಲಿಯ ಪ್ರದೇಶಗಳಲ್ಲಿಯೇ ವಾಸವಾಗಿರುವುದರಿಂದ ಸರ್ಕಾರದ ಪ್ರಾಥಮಿಕ ಸೌಲಭ್ಯಗಳಿಂದ ವಂಚಿತವಾಗಿದ್ದಾರೆ. ಆದ್ದರಿಂದ ಈ ಬುಡಕಟ್ಟು ಸಮುದಾಯ ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯ ಎರಡು ಮೂರು ತಾಲೂಕುಗಳಲ್ಲಿಯೇ ಹೆಚ್ಚಾಗಿರುವುದರಿಂದ ಪ್ರಸ್ತುತ ಸಂಶೋಧನೆಯ ಅಧ್ಯಯನದ ಕಾರ್ಯ ವ್ಯಾಪ್ತಿಯನ್ನಾಗಿ ಆಯ್ಕೆ ಮಾಡಿಕೊಂಡು ಚರ್ಚೆಯ ಮೂಲಕ ಮಹಾಪ್ರಬಂಧವನ್ನು ಕಟ್ಟಿಕೊಡಲಾಗಿದೆ.

**ಅಧ್ಯಯನದ ವಿಧಾನಗಳು**

ಈ ಅಧ್ಯಯನಕ್ಕೆ ಕರ್ನಾಟಕದ ಮೂಲ ಬುಡಕಟ್ಟುಗಳು ವಾಸವಾಗಿರುವ ಪಶ್ಚಿಮ ಘಟ್ಟದ ಇಳಿಜಾರುಗಳನ್ನು, ಕಂದರಗಳನ್ನು, ಹೊಂದಿದ್ದು ಕಾಡಿನ ತೋಪುಗಳಿಂದ ಆವೃತವಾಗಿರುವ ಪ್ರದೇಶದಲ್ಲಿ ವಾಸವಾಗಿರುವ ಸಮುದಾಯವಾದ ಗೌಡಾಲು ಬುಡಕಟ್ಟನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಕರ್ನಾಟಕದಲ್ಲಿ ಚಿಕ್ಕಮಗಳೂರು ಜಿಲ್ಲೆಯು ಪ್ರಚಲಿತ ದಿನಮಾನಗಳಲ್ಲಿ ಅನೇಕ ಕಾರಣಗಳಿಗಾಗಿ ಪ್ರಚಾರದಲ್ಲಿರುವ ಪ್ರದೇಶವಾಗಿದೆ. ಅಲ್ಲದೆ ಇಲ್ಲಿ ಹಲವಾರು ಬುಡಕಟ್ಟುಗಳು ಕಂಡುಬರುತ್ತವೆ. ಹಸಲರು, ಕುಣಬಿಗಳು, ಮಲೆಕುಡಿಯರು, ಮರಾಠಿ ನಾಯಕರು, ಮೇದಾರರು ಅವರದೇ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬದುಕುತ್ತಿದ್ದಾರೆ. ಇಲ್ಲಿ ಗೌಡಾಲು ಒಂದು ವಿಶಿಷ್ಟ ಮತ್ತು ಜನಸಂಖ್ಯೆಯ ದೃಷ್ಟಿಯಿಂದ ಕಡಿಮೆ ಪ್ರಮಾಣದಲ್ಲಿರುವ ಸಮುದಾಯವಾಗಿದೆ. ಇವರು ಸಾಹಸ ಮನೋಭಾವನೆಯುಳ್ಳವರಾಗಿದ್ದಾರೆ. ಇವರಲ್ಲಿ ಮಹಿಳೆಯರು ಮನೆಯ ಸುತ್ತ ಮುತ್ತ ತರಕಾರಿಗಳನ್ನು ಬೆಳೆಯುವುದಷ್ಟೇ ಅಲ್ಲದೆ ಕಾಡಿನೊಳಗೆ ನುಗ್ಗಿ ಅರಣ್ಯಉತ್ಪನ್ನಗಳನ್ನು ಸಂಗ್ರಹಿಸುವ ಪರಿಪಾಟವನ್ನು ರೂಢಿಸಿಕೊಂಡಿದ್ದಾರೆ. ಈ ರೀತಿಯ ಸ್ವಾವಲಂಬನೆಯ ಜೀವನ ಶೈಲಿ ಇವರದ್ದಾಗಿದೆ. ಪ್ರಸ್ತುತ ಗೌಡಾಲು ಬುಡಕಟ್ಟಿನ ಸಾಮಾಜಿಕ, ಆರ್ಥಿಕ, ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಿದ್ದಲ್ಲದೆ ಗೌಡಾಲು ಸಮುದಾಯಕ್ಕೆ ಯಾವ ತೆರನಾದ ಸವಾಲುಗಳಿವೆ ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ. ಆದ್ದರಿಂದ ಅಧ್ಯಯನ ದೃಷ್ಟಿಯಿಂದ ಈ ಮುಂದಿನ ಅಧ್ಯಯನ ವಿಧಾನವನ್ನು ಅನುಸರಿಸಲಾಗಿದೆ.

### ಅಧ್ಯಯನದ ವಿಧಾನ

ಅರಣ್ಯವಾಸಿಯಾದ ಗೌಡಾಲು ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದ ಅದರಲ್ಲೂ ಮಲೆನಾಡಿನಿಂದ ಆವೃತವಾಗಿರುವ ಸಮುದಾಯದ ಹೋರಾಟವನ್ನು ಸಹ ಅಧ್ಯಯನ ಮಾಡಿ ಈ ಸಮುದಾಯ ನೆಲೆಗೊಂಡ ಪ್ರದೇಶಗಳಲ್ಲಿ ಸಂಚರಿಸಿ ವಿಷಯದ ಬಗೆಗಿರುವ ಲೇಖನಗಳು, ಅನುಭವಗಳು ಹಾಗೂ ವಿಷಯಗಳನ್ನು ಅರಿತುಕೊಂಡು ಸಂಪನ್ಮೂಲಗಳಿಂದ ಮಾಹಿತಿ ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

### ಅವಲೋಕನ ವಿಧಾನ

ಗೌಡಾಲು ಬುಡಕಟ್ಟು ಸಮುದಾಯದ ಮಾಹಿತಿ ಪಡೆಯಲು ಕ್ಷೇತ್ರಕಾರ್ಯದಲ್ಲಿ ಅವಲೋಕನ ವಿಧಾನವು ಮುಖ್ಯವಾದುದ್ದು. ಎರಡು ಪ್ರಕಾರದ ಅವಲೋಕನ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

**ಸಹಭಾಗಿ ಅವಲೋಕನ:** ಗೌಡಾಲು ಬುಡಕಟ್ಟಿನ ಸಮುದಾಯದವರ ಜೊತೆಯಲ್ಲಿ ಸಹಭಾಗಿಯಾಗಿ ಸಮುದಾಯದ ಅಂತರಾಳದಲ್ಲಿ ಹುದುಗಿರುವ ಸಮುದಾಯದ ಕುರಿತ ಮಾಹಿತಿ ಹಾಗೂ ಅವರ ಬದುಕಿನ ಸವಾಲುಗಳನ್ನು ಕುರಿತು ಮಾಹಿತಿಯನ್ನು ಸಹಭಾಗಿಯಾಗಿಯೇ ಪಡೆದು ಚರ್ಚಿಸಿ ಅಧ್ಯಯನಕ್ಕೆ ಪೂರಕವಾಗುವಂತೆ ರೂಪಿಸಿಕೊಳ್ಳಲಾಗಿದೆ.

### ಪ್ರಶ್ನಾವಳಿ ವಿಧಾನ

ಈ ಕಾಡುವಾಸಿಯಾಗಿರುವ ಗೌಡಾಲು ಬುಡಕಟ್ಟು ಸಮುದಾಯವನ್ನು ಅಧ್ಯಯನ ಮಾಡಲು ಹಾಗೂ ಮಾಹಿತಿ ಪಡೆಯಲು ಪ್ರಶ್ನಾವಳಿಯು ಮುಖ್ಯ ಪಾತ್ರ ವಹಿಸುತ್ತದೆ. ಹಾಗಾಗಿ ಸಮುದಾಯಕ್ಕೆ ಸಂಬಂಧಿಸಿದಂತೆ ವಿವಿಧ ಆಯಾಮಗಳಲ್ಲಿ ಹಲವಾರು ಪ್ರಶ್ನೆಗಳನ್ನು ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ. ಪ್ರಮುಖ ಪ್ರಶ್ನೆಗಳ ಜೊತೆಗೆ ಸಂದರ್ಭಕ್ಕನುಸಾರವಾಗಿ ಪ್ರಶ್ನೆಗಳನ್ನು ಕೇಳಿ ಮಾಹಿತಿ ಪಡೆಯಲಾಗಿದೆ.

### ಸಂದರ್ಶನ ವಿಧಾನ

ಗೌಡಾಲು ಬುಡಕಟ್ಟು ಸಮುದಾಯವು ಯಾವುದೇ ಕಾರಣಕ್ಕೂ ನಿರುದ್ಯೋಗಿಯಾಗಿ ಕುಳಿತುಕೊಳ್ಳುವ ಸಮುದಾಯವಲ್ಲ. ಏಕೆಂದರೆ ತನ್ನ ಬದುಕಿನಲ್ಲಿ ಸ್ವಾಲಂಬನೆಯನ್ನು ಮೈಗೂಡಿಸಿಕೊಂಡು ಹೋರಾಟದಲ್ಲಿಯೇ ಜೀವನ ಸಾಗಿಸುವವರಾಗಿದ್ದರಿಂದ ಬದುಕಿನ ಆಶ್ರಯಕ್ಕೆ ಭೂಮಾಲೀಕರ ಮನೆ, ಗದ್ದೆ, ತೋಟಗಳಲ್ಲಿ ದಿನಗೂಲಿ ಕೃಷಿಕೂಲಿ ಮಾಡಿಕೊಂಡು ಜೀವಿಸುತ್ತಿದ್ದಾರೆ. ಅಲ್ಲದೆ ಸರ್ಕಾರ ಮತ್ತು ಸರ್ಕಾರಿ ಅಧಿಕಾರಿಗಳು ಭಿನ್ನ ಭಿನ್ನವಾಗಿ ಅಳೆಯುವುದರಿಂದ ಸಮುದಾಯದವರನ್ನು ಕುರಿತು ವಿಶಿಷ್ಟ ರೀತಿಯಲ್ಲಿ ಸಂದರ್ಶನ ಮಾಡಿ ಮಾಹಿತಿ ಪಡೆಯಲಾಗಿದೆ.

### ಸಂಖ್ಯಾಶಾಸ್ತ್ರೀಯ ವಿಧಾನ

ಸಮುದಾಯಕ್ಕೆ ಸಂಬಂಧಿಸಿದಂತೆ ಅದರಲ್ಲೂ ಮುಖ್ಯವಾಗಿ ಜಿಲ್ಲೆ, ರಾಜ್ಯ ಮತ್ತು ಇತರೆ ಸ್ವರೂಪದ ಅಂಕಿ ಅಂಶಗಳನ್ನು ಉಪಯೋಗಿಸಿಕೊಂಡು ಈ ಅಧ್ಯಯನ ವಿಷಯಕ್ಕೆ ಹೆಚ್ಚಿನ ಮಾಹಿತಿಯನ್ನು ಪಡೆದು ಮಹಾಪ್ರಬಂಧವನ್ನು ಕಟ್ಟಿಕೊಡಲಾಗಿದೆ.

**ಐತಿಹಾಸಿಕ ವಿಧಾನ**

ಗೌಡಾಲು ಬುಡಕಟ್ಟಿಗೆ ಇಡೀ ರಾಜ್ಯದಲ್ಲಿಯೇ ಒಂದು ವಿಶಿಷ್ಟ ಸ್ಥಾನ ಇದೆ. ಆದ್ದರಿಂದ ಐತಿಹಾಸಿಕವಾಗಿ ಇವರನ್ನು ಕುರಿತು ಹೇಳುವ ಕೃತಿಗಳಿಂದ ಹಾಗೂ ಸರ್ಕಾರಿ ಪ್ರಕಟಣೆ ಮತ್ತು ಪತ್ರಿಕೆಯಲ್ಲಿರುವ ಲೇಖನಗಳಿಂದ ಇತರೆ ಮಾಹಿತಿ ಪಡೆದುಕೊಂಡು ಅಧ್ಯಯನದ ವಿಷಯಕ್ಕೆ ಶಕ್ತಿ ಬರುವಂತೆ ಕಟ್ಟಿಕೊಡಲಾಗಿದೆ.

**ಧ್ವನಿಮುದ್ರಣ ಮತ್ತು ಛಾಯಾಚಿತ್ರ ವಿಧಾನ**

ಮೂಲ ಬುಡಕಟ್ಟಾದ ಗೌಡಾಲು ಸಮುದಾಯದಿಂದ ಮಾಹಿತಿ ಪಡೆಯುವ ಸಮಯದಲ್ಲಿ ಸಮುದಾಯ ಜೀವನದಲ್ಲಿ ಅನುಭವಿಸಿದ ಬವಣೆಗಳನ್ನು ಹಾಗೂ ಇವರು ಇತರೆ ಸಮುದಾಯದೊಂದಿಗೆ ಹೊಂದಿರುವ ಸಂಬಂಧಗಳು, ವಸತಿ ವ್ಯವಸ್ಥೆ, ವೇಷಭೂಷಣ, ಕಾಡಿನ ನಡುವೆ ನಡೆದ ಕೃಷಿ ಕೂಲಿ, ಭೂಮಾಲೀಕರು ದಿನಮಾನಗಳಲ್ಲಿ ನೋಡಿಕೊಳ್ಳುವ ಪರಿಯನ್ನು ಸೆರೆ ಹಿಡಿದು ಧ್ವನಿಮುದ್ರಣ ಮಾಡಿ ಪರಿಷ್ಕರಿಸಿ ಅಧ್ಯಯನಕ್ಕೆ ಪೂರಕವಾಗುವಂತೆ ಒಳಪಡಿಸಿ ಮಹಾಪ್ರಬಂಧ ರಚನೆಯನ್ನು ಮಾಡಲಾಗಿದೆ.

**ತೌಲನಿಕ ವಿಧಾನ**

ಗೌಡಾಲು ಬುಡಕಟ್ಟು ಸಮುದಾಯವು ಕರ್ನಾಟಕದ ಇತರೇ ಜಿಲ್ಲೆಗಳಲ್ಲಿ ಇರದೆ ಚಿಕ್ಕಮಗಳೂರು ಜಿಲ್ಲೆಯಲ್ಲಿಯೇ ಕೇಂದ್ರೀಕೃತವಾಗಿದೆ. ಅವರು ಕಾಡಿನ ಇಳಿಜಾರಿನ ತೋಪುಗಳಲ್ಲಿ ಯಾರಿಗೂ ತಿಳಿಯದೆ ಬದುಕನ್ನು ರೂಪಿಸಿಕೊಂಡಿರುವುದರಿಂದ ಅವರದೇ ಆದ ವೈವಿಧ್ಯತೆಯಲ್ಲಿ ಸಂರಚನೆಗೊಂಡಿದೆ. ಆದ್ದರಿಂದ ಗೌಡಾಲುಗಳು ಹಾಗೂ ಇತರೇ ಬುಡಕಟ್ಟುಗಳ ನಡುವಿನ ಸಾಂಸ್ಕೃತಿಕ ಲೋಕದ ಅಧ್ಯಯನದಲ್ಲಿ ಅವಶ್ಯಕವಾಗಿದೆ. ಇಲ್ಲಿ ಗೌಡಾಲುಗಳು ಎಷ್ಟರ ಮಟ್ಟಿಗೆ ಭಿನ್ನವಾಗಿ ತಮ್ಮ ಜೀವನ ಶೈಲಿಯನ್ನು ರೂಪಿಸಿಕೊಂಡಿದೆ ಎಂಬುದನ್ನು ಅರಿಯಲು ಮತ್ತು ವಿಷಯ ವಸ್ತುವಿಗೆ ಹೆಚ್ಚಿನ ಸತ್ವ ಒದಗಿಸಲು ಇಂತಹ ವಿಧಾನ ಉಪಯೋಗಿಸಿಕೊಂಡು ಮಾಹಿತಿ ಪಡೆದು ಪರಿಷ್ಕರಿಸಿ ಮಹಾಪ್ರಬಂಧಕ್ಕೆ ಉಪಯುಕ್ತವಾದ ರೀತಿಯಲ್ಲಿ ಬಳಸಿಕೊಳ್ಳಲಾಗಿದೆ.

**ಮಾದರಿ ನಮೂನೆ ಆಯ್ಕೆ**

ಗೌಡಾಲು ಬುಡಕಟ್ಟು ಜನರಿಗೆ ಸಂಬಂಧಿಸಿದಂತೆ ಈ ಸಂಶೋಧನೆಯ ವ್ಯಾಪ್ತಿಯಲ್ಲಿ ಗೌಡಾಲು ಬುಡಕಟ್ಟಿನವರು ಹೆಚ್ಚಾಗಿ ನೆಲೆಸಿರುವ ಮಲೆನಾಡಿನ ಚಿಕ್ಕಮಗಳೂರು ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ವಾಸವಾಗಿದ್ದ ಗೌಡಾಲು ಸಮುದಾಯದವರ ಒಟ್ಟು ಸಂಖ್ಯೆ ೭೨೬೧ ಆಗಿತ್ತು. ಈ ಮೂರು ಜಿಲ್ಲೆಯಲ್ಲಿ ಬರುವ ಮಲೆನಾಡಿನ ೮ ತಾಲ್ಲೂಕುಗಳನ್ನು ವಿಭಜಿತ ಯಾದೃಚ್ಛಿಕ ನಮೂನೆಯ ಮೂಲಕ ಆಯ್ಕೆ ಮಾಡಿಕೊಂಡು ಹೆಚ್ಚು ಗೌಡಾಲು ಕುಟುಂಬಗಳನ್ನು ಹೊಂದಿರುವ ತಾಲ್ಲೂಕುಗಳಿಗೆ ಹೆಚ್ಚು ಪ್ರಾತಿನಿಧ್ಯವನ್ನು ಮತ್ತು ಕಡಿಮೆ ಗೌಡಾಲು ಕುಟುಂಬಗಳನ್ನು ಹೊಂದಿರುವ ತಾಲ್ಲೂಕುಗಳಿಗೆ ಕಡಿಮೆ ಪ್ರಾತಿನಿಧ್ಯವನ್ನು ಕೊಟ್ಟು ತಿಳುವಳಿಕೆದಾರರನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಮಹತ್ವ**

ಪ್ರಸ್ತುತ ಅಧ್ಯಯನ ಮುಖ್ಯವಾಗಿರುವುದು ಮಲೆನಾಡಿನ ಜಮೀನ್ದಾರರ ಜಡ್ಡುಗಟ್ಟಿದ ಸಂಪ್ರದಾಯ, ಮೌಢ್ಯದೊಂದಿಗಿನ, ಜಮೀನ್ದಾರರ ದಬ್ಬಾಳಿಕೆಯ ವಿರೋಧದ ನೆಲೆಯಲ್ಲಿ, ಗ್ರಾಮಗಳಲ್ಲಿಯ

ಪುರೋಹಿತಶಾಹಿಗಳ ವಿರೋಧದ ನೆಲೆಯಲ್ಲಿ, ಗೌಡಾಲುಗಳು ತಮ್ಮ ಬದುಕನ್ನು ಕಟ್ಟಿಕೊಂಡಿರುವುದರಿಂದ. ಇಲ್ಲಿ ಕೆಳವರ್ಗದವರ ಕೂಲಿಗಳು ಮಾನವನ ಬದುಕಿನ ಸಾಧನೆಯ ಕಡೆಗೆ ಒತ್ತುಕೊಡುವ ಜೀವನ ಶ್ರದ್ಧೆ, ಹುಡುಕಾಟವೇ ಇಂದು ಮುಖ್ಯವಾಗಿರುವುದು ಅಧ್ಯಯನದ ಮಹತ್ವವಾಗಿದೆ.

ಬುಡಕಟ್ಟು ಸಮಾಜದಲ್ಲಿ ಜಮೀನ್ದಾರಿ ಪದ್ಧತಿಯ ಶೋಷಣೆಗೆ ಒಳಗಾಗಿರುವ ಸಮುದಾಯಗಳಲ್ಲಿ ಗೌಡಾಲು ಕೂಡ ಒಂದಾಗಿರುವುದರಿಂದ ಊಳಿಗಮಾನ್ಯ ವ್ಯವಸ್ಥೆಯ ವಿಕೃತ ರೂಪಗಳನ್ನು, ಮನಸ್ಥಿತಿಗಳನ್ನು ಕುರಿತು ಅಧ್ಯಯನಿಸುವಲ್ಲಿ ಪ್ರಸ್ತುತ ಮಹಾಪ್ರಬಂಧ ಮುಖ್ಯವಾಗಿದೆ.

೧. ಮಾಹಿತಿದಾರರ ವೈಯಕ್ತಿಕ ಹಿನ್ನೆಲೆಯನ್ನು ಸಂಗ್ರಹಿಸಿ, ಇದನ್ನು ಸಮಾಜಕ್ಕೆ ಪರಿಚಯಿಸುವುದು ಹಾಗೂ ವೈಯಕ್ತಿಕ ಹಿನ್ನೆಲೆ ಚೆನ್ನಾಗಿಲ್ಲವಾದರೆ ಅಂಥವರಿಗೆ ಕೆಲವು ಸವಲತ್ತುಗಳನ್ನು ಒದಗಿಸಿಕೊಡುವುದರ ಮೂಲಕ ಅನುಕೂಲತೆಗಳನ್ನು ಮಾಡಿಕೊಡುವುದು.

೨. ಇವರ ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವುದರ ಮೂಲಕ ಇವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದು ಇದರ ಮುಖ್ಯ ಉದ್ದೇಶವಾಗಿದೆ. ಬುಡಕಟ್ಟು ಸಮುದಾಯದಲ್ಲಿ ಇವರ ಸಾಮಾಜಿಕ ಸ್ಥಿತಿಗತಿಯನ್ನು ಕುರಿತು ತಿಳಿಯಲು ಈ ಅಧ್ಯಯನ ಅನುಕೂಲಕರವಾಗಿದೆ.

೩. ಈ ಹಿಂದುಳಿದ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆ ತಿಳಿಯುವುದರ ಮೂಲಕ ಇವರಲ್ಲಿ ಇರುವಂತಹ ವಿವಿಧ ಸಾಂಸ್ಕೃತಿಕ ಮೌಲ್ಯಗಳನ್ನು ತಿಳಿಯಲು ಇದು ಅನುಕೂಲಕರವಾಗಿದೆ. ಸಾಂಸ್ಕೃತಿಕವಾಗಿ ಪ್ರದೇಶದಿಂದ ಪ್ರದೇಶಕ್ಕೆ ಇವರ ಸಂಸ್ಕೃತಿ ಹೇಗೆ ವಿಭಿನ್ನವಾಗಿದೆ ಎಂಬುದನ್ನು ಅಧ್ಯಯನ ಮಾಡಲು ಈ ವಿಧಾನ ಅನುಕೂಲಕರವಾಗಿದೆ.

೪. ಇದರ ಧಾರ್ಮಿಕ ಮಾಹಿತಿಯನ್ನು ಸಂಗ್ರಹಿಸುವುದರ ಮೂಲಕ ಸಮಾಜದ ಇತರೆ ಜನಾಂಗದವರಿಗೆ ಇವರ ಧಾರ್ಮಿಕತೆಯನ್ನು ವಿವರಿಸಲು ಈ ವಿಧಾನವು ಅನುಕೂಲಕರವಾಗಿದೆ.

೫. ಈ ಬುಡಕಟ್ಟು ಸಮುದಾಯದ ಆರ್ಥಿಕ ಸ್ಥಿತಿಯನ್ನು ತಿಳಿಯಲು ಈ ವಿಧಾನವು ಅನುಕೂಲಕರವಾಗಿದೆ. ಈ ಜನಾಂಗದ ಆರ್ಥಿಕ ಸ್ಥಾನಮಾನ ಸಮಾಜದಲ್ಲಿ ಯಾವ ಪ್ರಕಾರದಲ್ಲಿದೆ ಹಾಗೂ ಇವರಲ್ಲಿ ಇರುವಂತಹ ಆರ್ಥಿಕ ಸಮಸ್ಯೆಗಳ ಬಗ್ಗೆ ತಿಳಿದು ಅವುಗಳ ನಿವಾರಣೆಗಾಗಿ ವಿವಿಧ ಯೋಜನೆಗಳನ್ನು ಹಮ್ಮಿಕೊಳ್ಳುವುದು ಹಾಗೂ ಆ ಮೂಲಕ ಅವರ ಆರ್ಥಿಕ ಸುಧಾರಣೆಗಾಗಿ ಪ್ರಯತ್ನಿಸಲು ಈ ಅಧ್ಯಯನ ಅನುಕೂಲಕರವಾಗಿದೆ.

೬. ರಾಜಕೀಯ ಕ್ಷೇತ್ರದಲ್ಲಿ ಇವರ ಸ್ಥಾನ ಯಾವ ರೀತಿಯಲ್ಲಿ ಇದೆ, ಪ್ರಗತಿಯಲ್ಲಿ ಇದ್ದಾರೆಯೋ ಅಥವಾ ಇಲ್ಲವೋ ಎಂಬುದನ್ನು ತಿಳಿದು, ಪ್ರಗತಿಯಲ್ಲಿ ಇಲ್ಲವಾದರೆ ಇವರಲ್ಲಿ ರಾಜಕೀಯ ಅರಿವನ್ನು ಬೆಳೆಸಲು ಈ ಸಂಶೋಧನೆ ಅನುಕೂಲಕರವಾಗಿದೆ.

೭. ಈ ಬುಡಕಟ್ಟು ಸಮುದಾಯ ಈ ಜಿಲ್ಲೆಯಲ್ಲಿ ಯಾವ ರೀತಿ ತಮ್ಮ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದ್ದಾರೆ ಎಂಬುದರ ಕುರಿತು ಹಾಗೂ ಇವರ ಉಗಮ, ಬೆಳವಣಿಗೆ, ವಿಕಾಸ ಇವುಗಳನ್ನು ಕುರಿತು ಅಧ್ಯಯನ ಮಾಡಲು ಈ ಸಂಶೋಧನೆಯು ಅನುಕೂಲಕರವಾಗಿದೆ.

೮. ಈ ಬುಡಕಟ್ಟು ಸಮಾಜದವರು ಆಚರಿಸುವ ಹಬ್ಬ-ಹರಿದಿನಗಳು, ಸಂಪ್ರದಾಯಗಳು, ಮದುವೆ, ಮುಂಜಿ, ಪದ್ಧತಿಗಳು, ರೂಢಿಗಳು, ಸಂಪ್ರದಾಯಗಳು ಇವುಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

೯. ಈ ಬುಡಕಟ್ಟು ಸಮುದಾಯದವರ ಜೀವನ ಶೈಲಿಯನ್ನು ಕುರಿತು ಅಧ್ಯಯನ ಮಾಡಲು, ನಡೆ-ನುಡಿ, ಉಡುಗೆ-ತೊಡುಗೆ, ರೀತಿ-ರಿವಾಜುಗಳನ್ನು, ಚಲನ-ವಲನಗಳನ್ನು ಕುರಿತು ತಿಳಿಯಲು ಈ ಸಂಶೋಧನೆಯು ಅನುಕೂಲಕರವಾಗಿದೆ.

೧೦. ಈ ಆದಿವಾಸಿಗಳ ಮನೆತನಗಳ ಹೆಸರು, ಭಾಷೆ, ವಿದ್ಯಾರ್ಹತೆ, ವೈವಾಹಿಕ ಸ್ಥಾನಮಾನ ಇವುಗಳನ್ನು ಕುರಿತು ಸಂಶೋಧನೆ ಮಾಡಿ ವಿಷಯ ಸಂಗ್ರಹಿಸಲು ಈ ಸಂಶೋಧನೆಯಲ್ಲಿ ಪ್ರಯತ್ನಿಸಲಾಗಿದೆ.

೧೧. ಈ ಬುಡಕಟ್ಟು ಸಮುದಾಯದವರ ವಸತಿಗಳ ಬಗ್ಗೆ, ಇವರ ಆದಾಯದ ಮೂಲಗಳು, ಖರ್ಚು, ಖರ್ಚುಮಾಡುವ ಕ್ಷೇತ್ರಗಳು, ವಾರ್ಷಿಕ ಖರ್ಚಿನ ಅಂದಾಜು ವೆಚ್ಚ ಇವುಗಳನ್ನು ತಿಳಿಯಲು ಈ ಸಂಶೋಧನೆಯು ಅನುಕೂಲಕರವಾಗಿದೆ.

೧೨. ಈ ಸಂಶೋಧನೆಯಿಂದ ಬುಡಕಟ್ಟು ಸಮುದಾಯದವರು ಹೊಂದಿರುವ ಭೂಮಿ, ಸೈಟು, ಅದರಲ್ಲಿಯೂ ಗೇಣಿ ಭೂಮಿ, ರೆವಿನ್ಯೂ, ಫಾರೆಸ್ಟ್ ಲ್ಯಾಂಡ್, ಸ್ವಂತಭೂಮಿ, ಎಷ್ಟು ಎಕರೆಗಳಷ್ಟು ಭೂಮಿಯನ್ನು ಹೊಂದಿದ್ದಾರೆ, ಎಷ್ಟು ಜನ ಹೊಂದಿಲ್ಲ ಈ ಮಾಹಿತಿಯನ್ನು ಕುರಿತು ಅಧ್ಯಯನ ನಡೆಸಲಾಗಿದೆ.

೧೩. ಈ ಗೌಡಾಲು ಬುಡಕಟ್ಟು ಸಮುದಾಯದವರ ಮೇಲೆ ರಾಷ್ಟ್ರೀಯ ಉದ್ಯಾನವನ ನೀತಿಯು ಯಾವ ರೀತಿಯಲ್ಲಿ ಪ್ರಭಾವ ಬೀರಿದೆ ಅಥವಾ ಪ್ರಭಾವ ಬೀರಿಲ್ಲ, ಪ್ರಭಾವ ಬೀರಿದ್ದರೆ ಇದರಿಂದ ಇವರಿಗೆ ಅನುಕೂಲತೆಗಳು ಆಗಿದೆಯೋ ಅಥವಾ ಅನನುಕೂಲತೆಗಳು ಆಗಿದೆಯೋ ಎಂಬುದನ್ನು ಕುರಿತು ಅಧ್ಯಯನ ನಡೆಸಿ, ತಿಳಿದುಕೊಳ್ಳಲು ಈ ಸಂಶೋಧನೆಯು ಸೂಕ್ತವಾಗಿದೆ.

೧೪. ಈ ಸಮುದಾಯಗಳಲ್ಲಿ ಇರುವಂತಹ ಜಾನುವಾರುಗಳು, ಅವುಗಳ ವಿಧಗಳು, ತಮ್ಮ ದಿನನಿತ್ಯ ಜೀವನದಲ್ಲಿ ಹೊಂದಿರುವಂತ ಗೃಹೋಪಯೋಗಿ ವಸ್ತುಗಳು, ವಾಹನಗಳ ವಿವರಗಳನ್ನು ತಿಳಿಯಲು ಈ ಸಂಶೋಧನೆಯಲ್ಲಿ ಪ್ರಯತ್ನಿಸಲಾಗಿದೆ.

೧೫. ಈ ಬುಡಕಟ್ಟು ಸಮುದಾಯದಲ್ಲಿ ಸ್ತ್ರೀಯರ ಸ್ಥಾನಮಾನ, ಅವರ ಜವಾಬ್ದಾರಿ, ಪುರುಷರ ಸ್ಥಾನಮಾನ, ಅವರ ಜವಾಬ್ದಾರಿಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

೧೬. ಈ ಬುಡಕಟ್ಟು ಸಮುದಾಯದವರು ಪಟ್ಟಣ ಪ್ರದೇಶಗಳೊಂದಿಗೆ ಹೊಂದಿರುವ ಸಂಪರ್ಕ, ವಲಸೆಯ ವಿವರ, ಸ್ತ್ರೀಯರ ಸ್ವಾತಂತ್ರ್ಯದ ಬಗ್ಗೆ ಇವರ ಅಭಿಪ್ರಾಯ, ಇವರ ಮಕ್ಕಳ ವಿದ್ಯಾಭ್ಯಾಸದ ಮಟ್ಟ ಈ ಅಂಶಗಳನ್ನು ಕುರಿತು ಅಧ್ಯಯನ ಮಾಡಲು ಈ ಸಂಶೋಧನೆಯು ಅನುಕೂಲಕರವಾಗಿದೆ.

೧೭. ಈ ಬುಡಕಟ್ಟು ಸಮುದಾಯದ ಕೌಟುಂಬಿಕ ವ್ಯವಸ್ಥೆ ತಿಳಿಯಲು ಉದಾಹರಣೆಗೆ

ಅ. ಅವಿಭಕ್ತ ಕುಟುಂಬ, ಆ. ವಿಭಕ್ತ ಕುಟುಂಬ, ಇ. ಮಾತೃ ಪ್ರಧಾನ ಕುಟುಂಬ, ಈ. ಪಿತೃ ಪ್ರಧಾನ ಕುಟುಂಬ ಮತ್ತು ಪಿತ್ರಾರ್ಜಿತ ಆಸ್ತಿಯಲ್ಲಿ ಗಂಡುಮಕ್ಕಳಿಗೆ ಪಾಲು ಇರುವಂತೆ ಹೆಣ್ಣು ಮಕ್ಕಳಿಗೆ ಪಾಲು ಇದೆಯೋ ಅಥವಾ ಇಲ್ಲವೋ ಎಂಬುದನ್ನು ತಿಳಿಯುವಲ್ಲಿ ಈ ಸಂಶೋಧನೆ ಮಹತ್ವ ಪಡೆದಿದೆ.

೧೮. ಈ ಬುಡಕಟ್ಟು ಸಮುದಾಯದಲ್ಲಿ ಗುರಿಕಾರ(ಯಜಮಾನ) ಪದ್ಧತಿ ಯಾವ ಪ್ರಕಾರದಲ್ಲಿ ಇದೆ, ಇವರಲ್ಲಿ ಇರುವ ಸದಸ್ಯರು ಮತ್ತು ಅಧ್ಯಕ್ಷರನ್ನು ಕುರಿತ ವಿವರ, ಇವರು ಹೊಂದಿರುವ ಅಧಿಕಾರದ ವಿವರ ಇವುಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

೧೯. ಈ ಬುಡಕಟ್ಟು ಸಮುದಾಯದ ಧಾರ್ಮಿಕ ಕಾರ್ಯಗಳಲ್ಲಿ ಪುರೋಹಿತರ ಪಾತ್ರವೇನು ಎಂಬುದನ್ನು ಕುರಿತು ತಿಳಿಯಲು ಈ ಅಧ್ಯಯನ ಅನುಕೂಲಕರವಾಗಿದೆ. ಇಲ್ಲಿನ ಧಾರ್ಮಿಕ ಕ್ರಿಯೆಗಳಲ್ಲಿ ಪುರೋಹಿತರಿಗೆ ಇವರು ಕೊಡುವಂತಹ ಪ್ರಾಮುಖ್ಯತೆ ಕುರಿತು ಅಧ್ಯಯನ ಮಾಡಲಾಗಿದೆ.

೨೦. ಈ ಬುಡಕಟ್ಟು ಸಮುದಾಯದಲ್ಲಿ ಇರುವಂತಹ ಇತರೆ ಉಪಪಂಗಡಗಳು, ವರದಕ್ಷಿಣೆ ಬಗ್ಗೆ ಇವರ ನಿಲುವು, ಪ್ರೇತಗಳ ಕುಲೆಗಳ ಬಗ್ಗೆ ಇವರಲ್ಲಿ ಇರುವಂತಹ ನಂಬಿಕೆ, (ಕುಲೆಗಳಿಗೆ) ವಿವಾಹ ಮಾಡುವ ಶಾಸ್ತ್ರ ಇವುಗಳನ್ನು ಕುರಿತು ಚರ್ಚಿಸಲಾಗಿದೆ.

೨೧. ಈ ಬುಡಕಟ್ಟು ಸಮುದಾಯದಲ್ಲಿ ಕಂಡುಬರುವ ಹಬ್ಬ-ಹರಿದಿನಗಳು, ಉದಾಹರಣೆಗೆ: ದೀಪಾವಳಿ, ಚೌತಿ, ಯುಗಾದಿ, ಕೋಡನ ಅಮವಾಸ್ಯೆ, ನವರಾತ್ರಿ ಜಾತ್ರೆ ಹಬ್ಬ, ಭೂಮಿಪೂಜೆ, ಕುಲದೇವರ ಬಗ್ಗೆ ಇವರ ನಿಲುವು, ಇವುಗಳ ಬಗ್ಗೆ ಅಧ್ಯಯನ ಮಾಡಲು ಈ ಸಂಶೋಧನೆಯು ಅನುಕೂಲಕರವಾಗಿದೆ.

೨೨. ಬುಡಕಟ್ಟು ಜನರು ಆಡುವಂತಹ ಆಟಗಳು, ಅವುಗಳ ಪ್ರಕಾರಗಳು, ಮಕ್ಕಳಲ್ಲಿ, ಮಹಿಳೆಯರಲ್ಲಿ ಮತ್ತು ಪುರುಷರಲ್ಲಿ ಕಂಡುಬರುವ ವಿವಿಧ ಪ್ರಕಾರದ ಆಟಗಳನ್ನು ಕುರಿತು ಅಧ್ಯಯನ ಮಾಡಲು ಈ ಸಂಶೋಧನೆಯು ಸೂಕ್ತವಾಗಿದೆ.

೨೩. ವಿವಿಧ ಸಂಘ-ಸಂಸ್ಥೆಗಳ ಬಗ್ಗೆ ಇರುವ ನಿಲುವಿನ ಕುರಿತು ಮತ್ತು ಮಹಿಳೆಯರು ಹಾಗೂ ಪುರುಷರು ಯಾವ ಯಾವ ಸಂಘಗಳಲ್ಲಿ ಭಾಗಿಯಾಗಿದ್ದಾರೆ, ಈ ಸಂಘಗಳಲ್ಲಿ ಇವರ ಪಾತ್ರವೇನು ಎಂಬುದರ ಕುರಿತು ವಿಷಯ ಸಂಗ್ರಹಿಸಲು ಈ ಸಂಶೋಧನೆ ಅನುಕೂಲಕರವಾಗಿದೆ.

೨೪. ಸರಕಾರವು ಈ ಬುಡಕಟ್ಟು ಸಮುದಾಯಕ್ಕಾಗಿ ಹಮ್ಮಿಕೊಂಡಿರುವ ಯೋಜನೆಗಳು, ಆ ಯೋಜನೆಗಳು ಇವರ ಮೇಲೆ ಯಾವ ರೀತಿಯಲ್ಲಿ ಪ್ರಭಾವ ಬೀರುತ್ತಿವೆ, ಇದರಿಂದ ಈ ಸಮುದಾಯಕ್ಕೆ ಎಷ್ಟರ ಮಟ್ಟಿಗೆ ಅನುಕೂಲವಾಗಿದೆ ಎಂಬುದರ ಬಗ್ಗೆ ಸಮಗ್ರ ಮಾಹಿತಿ ಸಂಗ್ರಹಿಸುವುದು ಮತ್ತು ಇವರಲ್ಲಿ ಇರುವ ಸಮಸ್ಯೆಗಳನ್ನು ಸಮಾಜಕ್ಕೆ ತಿಳಿಸುವುದು ಈ ಸಂಶೋಧನೆಯ ಪ್ರಮುಖ ಆದ್ಯತೆಯಾಗಿದೆ.

೨೫. ಈ ಗೌಡಾಲು ಬುಡಕಟ್ಟು ಸಮುದಾಯಗಳ ಮೇಲೆ ಬಾಹ್ಯ ಶಕ್ತಿಗಳ ಪ್ರಭಾವ ಯಾವ ರೀತಿ ಇದೆ, ಇವರು ನೆಲೆಸಿರುವ ಸ್ಥಳಗಳಲ್ಲಿ ಇವರಿಗೆ ಇರುವ ಅನುಕೂಲತೆ ಮತ್ತು ಅನಾನುಕೂಲತೆಗಳೇನು ಎಂಬುದರ ಕುರಿತು ಅಧ್ಯಯನ ಮಾಡಲಾಗಿದೆ.

೨೬. ಕೊನೆಯದಾಗಿ ಈ ಗೌಡಾಲು ಬುಡಕಟ್ಟು ಸಮುದಾಯದ ಬಗ್ಗೆ ಇಲ್ಲಿಯವರೆಗೆ ಯಾವುದೇ ಸಂಶೋಧನೆಗಳು ನಡೆದಿಲ್ಲ. ಅದರಲ್ಲಿಯೂ ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಇವರ ಬಗ್ಗೆ ಸಂಶೋಧನೆ ನಡೆದಿಲ್ಲ. ಈ ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ನಮ್ಮ ಆಧುನಿಕ ಸಮಾಜಕ್ಕೆ ಪರಿಚಯಿಸುವುದು ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

**ಮಹಾಪ್ರಬಂಧದ ಸ್ವರೂಪ**

ಈ ಮಹಾಪ್ರಬಂಧವು ಒಟ್ಟು ಐದು ಅಧ್ಯಾಯಗಳನ್ನು ಒಳಗೊಂಡು ಅದರ ಜೊತೆಗೆ ಸಮಾರೋಪವನ್ನು ಹೊಂದಿರುತ್ತದೆ. ಇಲ್ಲಿ ಮುಖ್ಯವಾದ ಐದು ಅಧ್ಯಾಯಗಳು ಈ ಕೆಳಗಿನ ವಸ್ತು ವಿಷಯಗಳನ್ನು ಒಳಗೊಂಡಿರುತ್ತದೆ. ಒಂದನೇ ಅಧ್ಯಾಯವು ಒಟ್ನಾರೆ ಮಹಾಪ್ರಬಂಧದ ತಾತ್ವಿಕತೆಯನ್ನು ಸರಳವಾಗಿ ವಿವರಿಸುತ್ತದೆ. ಎರಡನೇ ಅಧ್ಯಾಯವು ಗೌಡಾಲು ಸಮಾಜದ ಸಂರಚನೆಯನ್ನು ಕಂಡಿದೆ. ಅಂದರೆ ಇವರ ಮೂಲ, ಭೌಗೋಳಿಕ ಪರಿಸರ ಒಟ್ಟು ಜನಸಂಖ್ಯೆ' ಗೌಡಾಲುಗಳ ಕೃಷಿ ಪದ್ಧತಿ, ಕೃಷಿಯೇತರ ಚಟುವಟಿಕೆ ಮತ್ತು ಅರಣ್ಯ ಉತ್ಪನ್ನಗಳು ಮತ್ತು ದಿನಗೂಲಿಗಳಾಗಿರುವ ಬಗೆಗೆ ಚರ್ಚಿಸಲಾಗಿದೆ.

**ಅಧ್ಯಾಯ ಮೂರು:** ಗೌಡಾಲು ಬುಡಕಟ್ಟಿನ ಸಾಂಸ್ಕೃತಿಕ ಚಟುವಟಿಕೆಗಳು ಸಮುದಾಯದ ಅಂತರಾಳದಲ್ಲಿ ಯಾವ ರೀತಿಯಾಗಿ ಮನೆಮಾಡಿಕೊಂಡಿವೆ. ಎಂಬುದನ್ನು ಸ್ಥೂಲವಾಗಿ ಚರ್ಚಿಸಿ ಪ್ರಮುಖವಾಗಿ ದೇವರು ಮತ್ತು ನಂಬಿಕೆಗಳು, ವಿಧಿನಿಷೇಧಗಳು, ಹಬ್ಬ-ಆಚರಣೆಗಳು ಯಾವ ಯಾವ ರೂಪದಲ್ಲಿ ಸಮುದಾಯದ ಸಾಮಾಜಿಕ ಬೇರುಗಳಾಗಿವೆ ಎಂಬುದನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ.

**ಅಧ್ಯಾಯ ನಾಲ್ಕು:** ಗೌಡಾಲುಗಳು ವರ್ತಮಾನದಲ್ಲಿ ಯಾವ ತೆರನಾದ ಬದುಕನ್ನು ಸಾಗಿಸುತ್ತಿದ್ದಾರೆ ಹಾಗೂ ಇವರು ಎದುರುಗೊಳ್ಳುವ ಸವಾಲುಗಳು ಯಾವ ಸ್ವರೂಪದವು ಎಂಬುದನ್ನು ಕುರಿತು ಚರ್ಚಿಸಿರುವುದಲ್ಲದೆ ಭೂಮಾಲೀಕರು ಮತ್ತು ಗೌಡಾಲುಗಳ ನಡುವಿನ ಸಂಬಂಧವು ಭೂಸ್ವಾಧೀನ ಹಕ್ಕಿನ ಹಿನ್ನೆಲೆಯಲ್ಲಿ ಹೇಗೆ ಹೆಣೆದುಕೊಂಡಿದೆ ಎಂಬುದನ್ನು ಚರ್ಚಿಸಿದೆ. ರಾಜಕೀಯವು ಸಮುದಾಯದಲ್ಲಿ ಯಾವ ರೀತಿ ತನ್ನ ಸ್ಥಾನವನ್ನು ಸ್ಥಿರಗೊಳಿಸಿದೆ ಎಂದು ತಿಳಿದು ಮಹಾಪ್ರಬಂಧಕ್ಕೆ ಪೂರಕವಾಗಿ ಚಿತ್ರಿಸಲಾಗಿದೆ. ಅಲ್ಲದೆ ಸರ್ಕಾರಿ ಸೌಲಭ್ಯಗಳು ಇವುಗಳನ್ನು ಎಷ್ಟರ ಮಟ್ಟಿಗೆ ಸರಳೀಕರಣಗೊಂಡಿವೆ ಎಂಬುದನ್ನು ಕೂಡ ಚರ್ಚೆಗೆ ಒಳಪಡಿಸಿದೆ. ಗೌಡಾಲುಗಳ ಅಭಿವೃದ್ಧಿಯಲ್ಲಿ ಇತರೆ ಸಂಘ-ಸಂಸ್ಥೆಗಳ ಪಾತ್ರಗಳು ಯಾವ ಯಾವ ರೀತಿಯಲ್ಲಿ ಪೂರಕವಾಗಿ ರೂಪಿತಗೊಂಡಿವೆ ಅಥವಾ ಇಲ್ಲವೇ ಎಂದು ಮಹಾಪ್ರಬಂದದಲ್ಲಿ ಕಟ್ಟಿಕೊಡಲಾಗಿದೆ. ಗೌಡಾಲು ಸಮುದಾಯವನ್ನು ಆಧುನಿಕ ಸಮಾಜಕ್ಕೆ ಮುಖಾಮುಖಿ ಮಾಡಿ ವರ್ತಮಾನದಲ್ಲಿ ಇವರ ಪಾತ್ರವೇನು? ಇವರು ಸರ್ಕಾರ ಮತ್ತು ಸೌಲಭ್ಯಗಳಲ್ಲಿ ಹೇಗೆ ತಮ್ಮ ಪಾತ್ರದ ಪ್ರಭಾವವನ್ನು ಬೀರಿದ್ದಾರೆ. ಯೋಜನೆಗಳ ಬಗ್ಗೆ ಇವರಿಗೆ ಯಾವ ರೀತಿಯ ಜ್ಞಾನವಿದೆ ಎಂಬುದನ್ನು ಪರಿಶೀಲಿಸಿ. ಆಧುನಿಕ ಸಂದರ್ಭದಲ್ಲಿ ಗೌಡಾಲುಗಳು ಯಾವ ರೀತಿ ಬದುಕಿನ ಸ್ಥಿತ್ಯಂತರಕ್ಕೆ ಒಳಗಾಗಿದ್ದಾರೆ ಮತ್ತು ಸಮುದಾಯಕ್ಕೆ ಯೋಜನೆಗಳ ಸಫಲತೆ ಹಾಗೂ ವಿಫಲತೆಯನ್ನು ಇಲ್ಲಿ ಚರ್ಚಿಸಲಾಗಿದೆ. ಮುಂದುವರಿದು ಇತರೆ ಸಮುದಾಯಗಳ ಮಧ್ಯ ಗೌಡಾಲುಗಳು ಯಾವ ತೆರನಾದ ಸಂಬಂಧ, ಸಂಪರ್ಕವನ್ನು ಇಟ್ಟುಕೊಂಡಿದ್ದಾರೆ ಎಂದು ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಐದು:** ಸಮಾರೋಪದಲ್ಲಿ ಗೌಡಾಲು ಸಮುದಾಯದ ಬದುಕಿನ ದಾರಿ ಕುರಿತು ವಿಮರ್ಶಾತ್ಮಕವಾಗಿ ಚರ್ಚಿಸುತ್ತ ಬುಡಕಟ್ಟುಗಳು, ಸಾಮಾಜಿಕ ವ್ಯವಸ್ಥೆಯಲ್ಲಿ ಹೇಗೆ ತಮ್ಮ ಅಸ್ತಿತ್ವವನ್ನು ಇಟ್ಟುಕೊಂಡಿವೆ ಮತ್ತು ಬಹುರೂಪಿ ಸಂಸ್ಕೃತಿಯ ಜೀವಕಣದ ಬುಡಕಟ್ಟು ಸಮಾಜಕ್ಕೆ ವಸಾಹತುಶಾಹಿಯು ತಂದ ಬದಲಾವಣೆಯು

ಒಂದು ರೀತಿಯಲ್ಲಿ ಬಿರುಗಾಳಿಯಾಗಿ ಪ್ರಳಯ ರೂಪಿಯಂತೆ ಬಂದೆರಗಿದೆ. ಈ ಸಂದರ್ಭದಲ್ಲಿ ಬುಡಕಟ್ಟು ಬದುಕಿನ ಗರ್ಭದೊಳಗೆ ಉದ್ಭವವಾದ ಪಲ್ಲಟಗಳನ್ನು ಮಹಾಪ್ರಬಂಧದ ಮೂಲಕ ಗೌಡಾಲು ಸಾಮಾಜಿಕ ಸಂಬಂಧಗಳನ್ನು ಅವುಗಳ ಬಹುಮುಖಗಳನ್ನು ಕಂಡುಕೊಳ್ಳಲಾಗಿದೆ. ಈ ರೀತಿಯ ಆಲೋಚನೆಯ ಅಂಶಗಳನ್ನು ಉಪಸಂಹಾರದಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮಹಾಪ್ರಬಂಧದ ಫಲಿತಗಳನ್ನು ಕೂಡ ಉಪಸಂಹಾರದಲ್ಲಿ ಹೇಳಲಾಗಿದೆ. ಆದ್ದರಿಂದ ಪ್ರಸ್ತುತ ನಡೆದ ಅಧ್ಯಯನ ಸ್ಥೂಲವಾದ ವಿವರಗಳು ಇಲ್ಲಿ ಚರ್ಚೆಗೆ ಒಳಪಟ್ಟು ಸಂರಚನೆಗೊಂಡಿರುವುದು ಸಂಶೋಧನೆಯ ದೃಷ್ಟಿಯಿಂದ ಮುಖ್ಯವಾಗಿದೆ.

**೧.೧. ಅಧ್ಯಯನಕ್ಕಾಗಿ ಕಂಡುಕೊಂಡ ವಿಧಾನಗಳು**

ಗೌಡಾಲು ಸಮುದಾಯದ ಅಧ್ಯಯನ (ಚಿಕ್ಕಮಗಳೂರು ಜಿಲ್ಲೆಯನ್ನು ಪರಿಗಣಿಸಿ) ಎಂಬ ಈ ಮಹಾಪ್ರಬಂಧವು ಸಮಾಜಶಾಸ್ತ್ರೀಯ ದೃಷ್ಟಿಯಿಂದ ಪ್ರಾರಂಭವಾಗಿದ್ದರಿಂದ ಸಮಾಜಶಾಸ್ತ್ರೀಯ ಅಧ್ಯಯನ ವಿಧಾನದ ರೂಪುರೇಷಗಳ ಆಧಾರದ ಅನ್ವಯ ರೂಪಗೊಂಡಿದೆ. ಇಲ್ಲಿ ಆದಿವಾಸಿ ಸಮುದಾಯದ ನಿಜವಾದ ಚಿತ್ರಣವನ್ನು ಹಲವು ರೀತಿಯ ಅಧ್ಮಯನ ಪಿಧಿ ವಿಧಾನಗಳಾದ ಪ್ರಾಥಮಿಕ ಮತ್ತು ಆನುಷಂಗಿಕ ವಿಧಾನಗಳ ಮೂಲಕ ಸಿದ್ಧಪಡಿಸಲಾಗಿದೆ.

**ಪ್ರಶ್ನಾವಳಿ ವಿಧಾನ**

ಗೌಡಾಲು ಸಮುದಾಯದ ಅಧ್ಮಯನವು ವಿಷಯಕ್ಕನುಗುಣವಾಗಿ ಸಮಕಾಲೀನ ಸಂದರ್ಭದಲ್ಲಿ ಸಮುದಾಯದ ಸ್ಥಿತಿಗತಿಯನ್ನು ಅರಿತುಕೊಳ್ಳಲು ಸೂಕ್ತವಾದ ಪ್ರಶ್ನೆಗಳನ್ನು ರಚಿಸಿಕೊಂಡು ಸಮೀಕ್ಷಿಸಲಾಗಿದೆ. ಆದರೆ ಫಲಿತಗಳನ್ನು ಮಹಾಪ್ರಬಂಧದಲ್ಲಿ ನಮೂದಿಸಲಾಗಿದೆ. ಪ್ರತ್ಯೇಕವಾದ ವಿಷಯ ಹಾಗೂ ವ್ಯಕ್ತಿಗಳ ಅಧ್ಯಯನಕ್ಕೆ ಪ್ರಶ್ನೆಗಳನ್ನು ರಚಿಸಿ ಅವುಗಳಿಂದ ಪಡೆದ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಸಂದರ್ಶನ ವಿಧಾನ**

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಚಿಕ್ಕಮಗಳೂರು ಜಿಲ್ಲೆಯಲ್ಲಿ ಬರುವಂತ ಗೌಡಾಲು ಸಮುದಾಯದ ಜೀವನವನ್ನು ಅರಿತುಕೊಳ್ಳುವುದಲ್ಲದೆ ಪ್ರಸ್ತುತ ಸಂದರ್ಭದಲ್ಲಿ ಅವರ ಬದುಕಿನ ಹೋರಾಟದ ದಾರಿ ಯಾವುದು ಹಾಗೂ ಕಾಡಿನ ಮಧ್ಯ ಯಾವ ರೀತಿಯ ಸಂಬಂಧಗಳ ಸರಮಾಲೆಯಿದೆ ಎಂಬುದನ್ನು ಕ್ಷೇತ್ರಕಾರ್ಯ ಮಾಡಿ ವಿಶ್ಲೇಷಿಸಲಾಗಿದೆ. ಸಮುದಾಯದ ಹಿರಿಯರು, ಯುವಕರು ಮತ್ತು ಸ್ತ್ರೀಯರಿಂದ ಮಾಹಿತಿಯನ್ನು ಪಡೆದು ಪ್ರಬಂಧ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ.

**ಅವಲೋಕನ ವಿಧಾನ**

ಈ ಅಧ್ಯಯನದಲ್ಲಿ ಅವಲೋಕನ ವಿಧಾನಕ್ಕೂ ಆದ್ಯತೆ ನೀಡಲಾಗಿದೆ. ಗೌಡಾಲುಗಳಲ್ಲಿ ಪರಿವರ್ತನ ಸಮಾಜದ ಜೀವನ ಮಟ್ಟ, ವೃತ್ತಿ, ಕಾಡು ಉತ್ಪನ್ನಗಳ ಸಂಗ್ರಹದಲ್ಲಿ ಮಹಿಳೆಯರ ಪಾತ್ರ, ಧಾರ್ಮಿಕ ಆಚರಣೆಗಳು, ಭೂಮಾಲೀಕರು ಮತ್ತು ಇವರ ನಡುವಿನ ಸಂಬಂಧಗಳನ್ನು ಕುರಿತು ಸೂಕ್ಷ್ಮವಾಗಿ ಅವಲೋಕಿಸಲಾಗಿದೆ.

## ಸಂಖ್ಯಾಶಾಸ್ತ್ರೀಯ ವಿಧಾನ

ಇದು ಬಹುಮುಖ್ಯವಾದ ವಿಧಾನವಾಗಿದೆ. ಒಂದು ಸಮುದಾಯದ ಬದುಕಿನ ರೂಪುರೇಷೆಗಳನ್ನು ರಚಿಸಲು ಇದು ಸಹಾಯಕವಾಗುತ್ತದೆ. ಆದ್ದರಿಂದ ಗೌಡಾಲು ಬುಡಕಟ್ಟು ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಾನಮಾನದ ಹಾಗೂ ಬದುಕಿನ ಪ್ರತಿಯೊಂದು ಮಜಲುಗಳನ್ನು ಗುರುತಿಸಲು ಇದರಿಂದ ಸಾಧ್ಯ. ಹಾಗಾಗಿ ಇಡೀ ಗೌಡಾಲು ಚಿಕ್ಕಮಗಳೂರಿನ ಭೂಮಾಲೀಕರ ಆಶ್ರಯದಲ್ಲಿ ತಮ್ಮ ಜೀವನವನ್ನು ಸಾಗಿಸುವುದನ್ನು ಗುರುತಿಸಲು ಇದನ್ನು ಬಳಸಿಕೊಳ್ಳಲಾಗಿದೆ.

## ಸಾಹಿತ್ಯದ ಅಧ್ಯಯನ

ಗೌಡಾಲು ಜನಾಂಗವನ್ನು ಕುರಿತ ಕೆಲವು ಅಧ್ಯಯನಗಳು ನಡೆದಿದ್ದರೂ ಸಮಾಜಶಾಸ್ತ್ರೀಯವಾಗಿ ಸಂಶೋಧನೆಗಳು ನಡೆದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಂಡಾಗ ವಿಷಯಕ್ಕೆ ಸಂಬಂಧಿಸಿದ ಸಂಶೋಧನಾ ಲೇಖನಗಳನ್ನು, ಗ್ರಂಥಗಳನ್ನು ಹಾಗೂ ಬೇರೆ ಬೇರೆ ಸಮುದಾಯಗಳ ಬಗ್ಗೆ ನಡೆದ ಅಧ್ಯಯನಗಳನ್ನೂ ಕೂಡ ಪರಾಮರ್ಶೆ ಮಾಡಲಾಗಿದೆ.

* ಮೈತ್ರಿ (೨೦೦೨)ಅವರ 'ಬುಡಕಟ್ಟು ಕುಲಕಸುಬುಗಳು' ಗ್ರಂಥದಲ್ಲಿ ಒಟ್ಟು ೪೯ ಬುಡಕಟ್ಟುಗಳ ಬಗ್ಗೆ ವಿಸ್ತಾರವಾಗಿ ವಿವರಣೆಯನ್ನು ನೀಡಿದ್ದು, 'ಗೌಡಾಲು' ಎಂಬ ಪದದ ಅರ್ಥ ಹಾಗೂ ಅದರ ಉಗಮದ ಬಗ್ಗೆ ವಿವರಿಸಿದ್ದಾರೆ. ಗೌಡಾಲು ಸಮುದಾಯದವರ ವಿವಿಧ ಪಂಗಡಗಳಾದ ತುಳು ಗೌಡಾಲು, ನಾಮಧಾರಿ ಗೌಡಾಲು, ಮಲೆಗೌಡಾಲು, ಕುಂಬ್ರಿ ಗೌಡಾಲು ಮತ್ತು ಕಬ್ಬಿನ ಮಲೆಯರ ಬಗ್ಗೆ ವಿವರಣೆಯನ್ನು ನೀಡಿದ್ದು, ಅವರ ಕಸುಬುಗಳ ಜೊತೆಗೆ ದೈವಿಕ ಆರಾಧನೆಯ ಬಗ್ಗೆ ಸ್ಥೂಲವಾಗಿ ವಿವರಣೆ ನೀಡಿದ್ದಾರೆ.

* ಬೋರಲಿಂಗಯ್ಯ ಮತ್ತು ಪ್ರಭಾಕರ(೨೦೦೪) ಅವರ 'ಬುಡಕಟ್ಟು ಅಧ್ಯಯನ - ೨' ಕೃತಿಯಲ್ಲಿ ಒಟ್ಟು ೧೪ ಲೇಖನಗಳಿದ್ದು, ಇವುಗಳಲ್ಲಿ 'ಗೌಡ್ಲು' ಎಂಬ ಹೆಸರಿನ ವ್ಯಾಪ್ತಿಯ ಕೊಡುಗೆ ಗೌಡರು, ಕಬ್ಬಿನ ಗೌಡರು, ನಾಮಧಾರಿ ಗೌಡರು ಎಂಬ ಮೂರು ಪ್ರತ್ಯೇಕ ಸಮುದಾಯಗಳನ್ನು ಗುರುತಿಸಿದ್ದಾರೆ. ಹಾಗೆಯೇ 'ಕೊಡುಗೆ ಗೌಡ' ಎಂಬ ಹೆಸರು ಬಂದಿರುವ ಹಿನ್ನೆಲೆಯನ್ನು ಕುರಿತು ವಿವರಿಸಲಾಗಿದೆ. ಇವರ ದೈವಿಕ ನಂಬಿಕೆಗಳು, ಇವರು ನೆಲೆಸಿರುವ ಕ್ಷೇತ್ರಗಳು, ಮಲೆ ಕುಡಿಯರಿಗೂ ಇವರಿಗೂ ಇರುವಂತಹ ವ್ಯತ್ಯಾಸವನ್ನು ವಿವರಿಸಿದ್ದಾರೆ. ಹಾಸು ಮುಂಡಾಸ, ಮುಂಡೆ ಬಸುರು, ಹಂಜರಿಕೆ ನೀರು, ಉತ್ತಾರ್ರ ಬೆಂಕಿ, ಇತ್ತಾರದ ದವಸೆ, ಬೈಗೆ ಹೆಂಡ, ಇವುಗಳನ್ನು ವಿಸ್ತಾರವಾಗಿ ವಿವರಿಸಿದ್ದಾರೆ. ಹೀಗೆ ಇವರು ನೀಡಿರುವ ಮಾಹಿತಿಯಿಂದ ನನ್ನ ಸಂಶೋಧನೆಯಲ್ಲಿ ಸಮುದಾಯದವರ ಐತಿಹಾಸಿಕ ಹಿನ್ನೆಲೆ ಸಂಗ್ರಹಿಸಲು ಸಾಧ್ಯವಾಗಿ, ಅವುಗಳ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

* ಮೈತ್ರಿ ಮತ್ತು ಚಲುವರಾಜು(೨೦೦೬)ಅವರ 'ಬುಡಕಟ್ಟು ಅಧ್ಯಯನ' ಸಂಪುಟ - ೩, ಸಂಚಿಕೆ - ೨, ಜುಲೈ-ಡಿಸೆಂಬರ್, ಈ ಕೃತಿಯಲ್ಲಿ ಒಟ್ಟು ೧೫ ವಿವಿಧ ಬುಡಕಟ್ಟು ಸಮುದಾಯಗಳ ಬಗ್ಗೆ ವಿವರಿಸಿದ್ದು, ಇಲ್ಲಿ ಮುಖ್ಯವಾಗಿ ಗೌಡಾಲು ಸಮುದಾಯದವರ ಜನಸಂಖ್ಯೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ೧೯೬೧

ರಿಂದ ೨೦೦೧ರವರೆಗೆ ಇವರ ಜನಸಂಖ್ಯೆ ಬಗ್ಗೆ ವಿವರಿಸಲಾಗಿದೆ. ಈ ಅಂಶಗಳ ಅಧ್ಯಯನದ ಮೇಲೆ ನನ್ನ ಸಂಶೋಧನೆಯನ್ನು ಇನ್ನೂ ವಿಸ್ತಾರವಾಗಿ ಬೆಳೆಸಿಕೊಂಡು ಹೋಗಲು ಸಹಾಯಕವಾಗಿದೆ. ಹಾಗೆಯೇ ಇತರೆ ಬುಡಕಟ್ಟು ಜನಾಂಗಗಳ ಜನಸಂಖ್ಯಾ ಪ್ರಮಾಣ ನೀಡಿದ್ದು, ಇವು ನನ್ನ ಸಂಶೋಧನೆಗೆ ಪೂರಕವಾಗಿದೆ.

* ಮೈತ್ರಿ, ಚಲುವರಾಜು(೨೦೦೬)ಅವರ ಬುಡಕಟ್ಟು ಅಧ್ಯಯನ ಸಂಪುಟ ೩, ಸಂಚಿಕೆ ೧, ಜನವರಿ ಜೂನ್, ಕೃತಿಯಲ್ಲಿ ಒಟ್ಟು ೧೨ ವಿವಿಧ ಪಂಗಡಗಳ ಬಗ್ಗೆ ವಿವರಣೆ ನೀಡಿದ್ದು, ಅವರ ಜಿಲ್ಲಾವಾರು ಜನಸಂಖ್ಯೆ, ಅವರ ಕಲೆ, ಸಂಸ್ಕೃತಿ, ಸಮಸ್ಯೆಗಳು, ಸಾಮಾಜಿಕ ಹಿನ್ನೆಲೆ, ಜೀವನಮಟ್ಟ, ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಇರುವವರ ವಿವರ, ಜನಸಂಖ್ಯೆ, ಶಿಕ್ಷಣವನ್ನು ಕುರಿತು ಅಧ್ಯಯನ ಮಾಡಲಾಗಿದ್ದು ಇವು ನನ್ನ ಸಂಶೋಧನೆಗೆ ಪೂರಕವಾಗಿದ್ದು, ಇನ್ನೂ ಹೆಚ್ಚಿನ ಮಾಹಿತಿಗಳ ಕುರಿತು ವಿಷಯ ಸಂಗ್ರಹಿಸಲಾಗಿದೆ.

* ಕರ್ನಾಟಕ ವಿಮೋಚನಾ ರಂಗ (೨೦೦೦)ದ 'ಆದಿವಾಸಿಗಳಿಗೆ ಎತ್ತಂಗಡಿ ಸಾಮ್ರಾಜ್ಯ ಶಾಹಿಗಳಿಗೆ ರತ್ನಗಂಬಳಿ' ಕೃತಿಯಲ್ಲಿ ಒಟ್ಟು ೧೧ ವಿವಿಧ ಘಟನೆಗಳು ಮತ್ತು ಸಂಗತಿಗಳನ್ನು ವಿವರಿಸಿದ್ದು, ೧೯೮೭ರ ರಾಷ್ಟ್ರೀಯ ಉದ್ಯಾನವನ ನೀತಿಯ ಪರಿಣಾಮದಿಂದ ಆಗುತ್ತಿರುವ ಪರಿಣಾಮ ಅದರ ಸಾಧಕ ಬಾಧಕಗಳು, ಇದರಿಂದ ಗೌಡಾಲು ಜನರ ಮೇಲೆ ಆಗುತ್ತಿರುವ ಪರಿಣಾಮಗಳನ್ನು ಅಧ್ಯಯನ ಮಾಡಲಾಗಿದ್ದು, ಇದು ನನ್ನ ಸಂಶೋಧನೆಗೆ ಪೂರಕವಾಗಿದೆ. ಈ ಅಂಶವನ್ನು ಆಧಾರವಾಗಿಟ್ಟುಕೊಂಡು ನನ್ನ ಸಂಶೋಧನೆಯನ್ನು ವಿಸ್ತರಿಸಲಾಗಿದೆ.

* ಶ್ರೀ ಕಲಶೇಶ್ವರ ಸ್ವಾಮಿಯವರ ದೇವಸ್ಥಾನದ ಕೈಪಿಡಿಯಲ್ಲಿ ಒಟ್ಟು ೬ ಅಧ್ಯಾಯಗಳಿದ್ದು, ೩೦ ಉತ್ಸವಗಳ ಬಗ್ಗೆ ವಿವರಣೆ ಇದ್ದು, ಗೌಡಾಲು ಬುಡಕಟ್ಟು ಜನರು 'ಬಿಟ್ಟಿ' ಕೆಲಸ ಅಥವಾ ಉಚಿತವಾಗಿ ದೇವರ ಸೇವೆಯನ್ನು ಮಾಡುವುದರ ಕುರಿತು ವಿವರಿಸಲಾಗಿದೆ. ಇವರ ಹಬ್ಬ-ಹರಿದಿನಗಳು, ದೇವಸ್ಥಾನದಲ್ಲಿ ಜಾತ್ರೆಯ ಸಂದರ್ಭದಲ್ಲಿ ಇವರು ಮಾಡುವಂತಹ ಕೆಲಸಗಳನ್ನು ಕುರಿತು, ಹಲ್ಲಿ ಹಬ್ಬ, ಸೂರೆ ಕುಣಿತ, ಕೋಲಾಟ, ಅಂಟಿಗೆ-ಪಂಟಿಗೆಯನ್ನು ಕುರಿತು ವಿಸ್ತೃತವಾದ ವಿವರಣೆ ಇದೆ. ಇದು ನನ್ನ ಸಂಶೋಧನೆಯನ್ನು ಪ್ರೇರೇಪಿಸಿದೆ. ಇವುಗಳ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿ ಸಂಶೋಧಿಸಲಾಗಿದೆ.

**ವಿಷಯ ಅಧ್ಯಯನ ವಿಧಾನ**

ಗೌಡಾಲು ಬುಡಕಟ್ಟು ಸಮುದಾಯ ರೂಪಿಸಿಕೊಂಡ ಬದುಕಿನ ಹೋರಾಟದ ಹಲವು ಮುಖಗಳನ್ನು ಅರಿತುಕೊಳ್ಳಲು ಹಾಗೂ ಸಂಬಂಧಿಸಿದ ಪುಸ್ತಕಗಳನ್ನು, ಲೇಖನಗಳನ್ನು ಹಾಗೂ ಗೌಡಾಲುಗಳ ಬಗ್ಗೆ ಗೊತ್ತಿರುವ ವಿದ್ವಾಂಸರಿಂದ ವಿಷಯವನ್ನು ತಿಳಿಯಲು ಈ ವಿಧಾನ ಸಹಾಯಕವಾಗಿದೆ. ಅದೇ ರೀತಿ ಗೌಡಾಲುಗಳ ಬಗ್ಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿಯೇ ಸಮುದಾಯದಿಂದ ಹೊರಗೆ ಇದ್ದ ಪರಿಸರವಾದಿ ಹೋರಾಟಗಾರರನ್ನು ಭೇಟಿ ಮಾಡಿ ಅವರು ಕೊಟ್ಟ ಅನುಭವಪೂರ್ಣ ಮಾಹಿತಿಯನ್ನು ಚರ್ಚಿಸಿ ವಿಷಯವನ್ನು ಸಮಗ್ರವಾಗಿ ಸಂಗ್ರಹಿಸಲಾಗಿದೆ. ಇಲ್ಲಿ ಗೌಡಾಲು ಜೀವನ, ಬೆಡಗು, ಹಬ್ಬ ಹರಿದಿನಗಳು ಹಾಗೂ ಇವರ ಸಮಸ್ಯೆಗಳನ್ನು ಕುರಿತು ಸಾಮಾಜಿಕ, ಆರ್ಥಿಕ, ಹಾಗೂ ರಾಜಕೀಯ ವಿಷಯವನ್ನು ಅರಿಯಲು ಈ ವಿಧಾನವನ್ನು

ಅನುಸರಿಸಲಾಗಿದೆ. ಗೌಡಾಲುಗಳನ್ನು ಕುರಿತು ಕೆಲಸ ಮಾಡಿದ ವಿಶ್ವವಿದ್ಯಾಲಯದ ವಿದ್ವಾಂಸರ ಹತ್ತಿರ ಚರ್ಚಿಸಿ ವಿಷಯವನ್ನು ಸಂಗ್ರಹಿಸಲು ಈ ವಿಧಾನವನ್ನು ಬಳಸಲಾಗಿದೆ.

**ಸಹಭಾಗಿತ್ವ**

ಈ ವಿಧಾನವನ್ನು ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಪಶ್ಚಿಮ ಘಟ್ಟದ ಕಂದರ ಮತ್ತು ಇಳಿಜಾರುಗಳಲ್ಲಿ ಕಾಡಿನಲ್ಲಿ ಅರಿಯುವ ನೀರಿನ ಆಶ್ರಯದಲ್ಲಿ ಯಾರಿಗೂ ತಿಳಿಯದಂತೆ ತಮ್ಮ ಬದುಕನ್ನು ಸಾಗಿಸಿಕೊಂಡು ಬಂದಿರುವ ಗೌಡಾಲು ಹಲವಾರು ವಿಷಯಗಳನ್ನು ತಿಳಿಯಲು ಈ ವಿಧಾನ ಸಹಾಯಕವಾಗಿದೆ. ಇದರ ಅನ್ವಯ ಮೊದಮೊದಲು ಕಾಡಿನ ಒಳಗೆ ಹೋಗಲು ಯಾವುದೇ ಅರಣ್ಯ ಅಧಿಕಾರಿಗಳು ಹಾಗೂ ಪೊಲೀಸ್ ಇಲಾಖೆಯವರು ಬಿಡದೆ ಇದ್ದುದರಿಂದ ಹಾಗೂ ಯಾರಾದರೂ ಹೊಸ ಮುಖದವರು ಕಾಡಿನೊಳಗೆ ಬಂದರೆ ಇವರು ಯಾರು ಎಂದು ತಮ್ಮ ಹತ್ತಿರ ಬಂದರೆ ಯಾವುದೇ ಮಾಹಿತಿಯನ್ನು ಗೌಡಾಲುಗಳು ಕೊಡದೇ ನಿರಾಕರಿಸುತ್ತಾರೆ. ಆ ನಂತರ ಪದೇ ಪದೇ ಅಧ್ಯಯನ ವಿಷಯಕ್ಕೆ ಪೂರಕವಾದ ಮಾಹಿತಿಯನ್ನು ಪಡೆದು ಸಮುದಾಯದ ಜೀವಂತಿಕೆಯನ್ನು ಅಧ್ಯಯನ ಮಾಡಲಾಗಿದೆ. ಇವರೊಡನೆ ಕೆಲವು ದಿವಸಗಳು ಎಲ್ಲೆಲ್ಲಿ ಗೌಡಾಲುಗಳಿದ್ದಾರೋ ಅಲ್ಲಲ್ಲಿ ಕ್ಷೇತ್ರಕಾರ್ಯ ಮಾಡಿಕೊಂಡು ಛಾಯಾಚಿತ್ರಗಳನ್ನು ತೆಗೆದುಕೊಂಡಿದ್ದಲ್ಲದೆ ಕೆಲವು ವಿಶೇಷ ಸಂದರ್ಭದಲ್ಲಿ ಹಬ್ಬ, ಮದುವೆ, ನಾಮಕರಣ, ಋತುಮತಿ, ಮುಂತಾದ ಸಭೆ ಸಮಾರಂಭಗಳಲ್ಲಿ ಗೌಡಾಲುಗಳು ಯಾವ ರೀತಿಯ ಸಾಂಸ್ಕೃತಿಕ ಆಚರಣೆಗಳನ್ನು ಮಾಡುತ್ತಾರೆ ಎಂಬ ವಿಷಯವನ್ನು ಸಂಗ್ರಹಿಸಿಕೊಳ್ಳಲಾಯಿತು.

''ಯುರೋಪಿನ ಮಾನವಶಾಸ್ತ್ರೀಯ ಅಧ್ಯಯನ ವಿಧಾನದ ಮೂಲಕ ಭಾರತದಲ್ಲಿ ಬುಡಕಟ್ಟುಗಳನ್ನು ಅಧ್ಯಯನ ಮಾಡಲಾಯಿತು. ಮಾನವಶಾಸ್ತ್ರವೆಂಬ ಶೈಕ್ಷಣಿಕ ಶಿಸ್ತು ಬುಡಕಟ್ಟುಗಳನ್ನು ಮತ್ತು ಆದಿಮ ಸಮಾಜಗಳನ್ನು ಅಧ್ಯಯನ ಮಾಡಲೆಂದೇ ಹುಟ್ಟಿದ ಶಾಸ್ತ್ರ ಶಿಸ್ತಾಗಿ ಇಂಡಿಯಾದಲ್ಲಿ ರೂಪಾಂತರಗೊಂಡಿತು. ಇದನ್ನು ಮೊದಲು Ethnology, Ethnography ಎಂಬ ಹೆಸರಿನಲ್ಲಿ ಅಧ್ಯಯನಕಾರರು ಬಳಸುತ್ತಿದ್ದರು. ಬ್ರಿಟಿಷರು ಬರುವ ಮೊದಲು ಈ Tribeಪದಕ್ಕೆ ಕನ್ನಡದಲ್ಲಿ ಬುಡಕಟ್ಟು ಎಂಬ ಪದ ಬಳಕೆ ಇತ್ತು ಎಂದು ಕಂಡುಬರುವುದಿಲ್ಲ. ಈ ಕಾರಣದಿಂದ Tribe ಎಂಬ ಪದವನ್ನು ಬ್ರಿಟಿಷರೇ ತಮ್ಮ ಅಧ್ಯಯನದ ಸಂದರ್ಭದಲ್ಲಿ ಬಳಸಿದರು. ಇದಕ್ಕೂ ಮುನ್ನ Ethnic ಎಂಬ ಪದವನ್ನು Race ಎಂಬ ಪದಕ್ಕೆ ಇಲ್ಲವೇ Uncivilized ಎಂಬ ಪದಕ್ಕೆ ಪರ್ಯಾಯವಾಗಿ ಬಳಸಲಾಗುತ್ತಿತ್ತು. Ethnic ಅಂದರೆ 'ಜನಾಂಗಿಕ'. ನಾಗರಿಕವಲ್ಲದ ಅಥವಾ ಮಾನವ ವಿಕಾಸದ ಚರಿತ್ರೆಯಲ್ಲಿ ಸ್ಥಗಿತಗೊಂಡ ಹಂತದ ಜನಸಮುದಾಯವನ್ನು ಸೂಚಿಸಲು ಈ ಪದವನ್ನು ಬಳಸಲಾಗುತ್ತಿತ್ತು. ಯುರೋಪಿನಿಂದ ಆಚೆಗಿರುವ ಮತ್ತು ವಸಾಹತು ರಾಷ್ಟ್ರಗಳಲ್ಲಿನ ಜನರು ಇನ್ನೂ Ethnic ಅಥವಾ ಜನಾಂಗಿಕ ಹಂತದಲ್ಲಿದ್ದಾರೆಂದು ಭಾವಿಸಿದ ಯುರೋಪಿನ ವಿದ್ವಾಂಸರು ಈ ಜನರನ್ನು ಸಂಬೋಧಿಸುವಾಗ Ethnic ಎಂಬ ಪದವನ್ನು ಬಳಸಿದರು. ಹಾಗೆ ನೋಡಿದರೆ Ethnic ಎಂಬ ಪದವು ಯುರೋಪಿನ ನಾಗರಿಕ ಗಣ್ಯತೆಯಿಂದ ಹುಟ್ಟಿದ ಪದವಾಗಿದೆ. ಅದಕ್ಕೆ ಇದನ್ನು ಮುಂದೆ Ethnography ಮತ್ತು Ethnology ಎಂಬ ಹೆಸರಿನ ಮೂಲಕ ಒಂದು ಜ್ಞಾನಶಿಸ್ತನ್ನಾಗಿ ರೂಪಿಸಲು ಯತ್ನಿಸಲಾಯಿತು. ಇದು ಮುಂದೆ Anthropology

ಎಂಬ ಶೈಕ್ಷಣಿಕ ಶಿಸ್ತಿನಲ್ಲಿ ಹೆಚ್ಚೂ ಕಡಿಮೆ ಸೇರಿ ಹೋಯಿತು. ಆದರೂ ಇಂದಿಗೂ ಈ ಪದ ಬಳಕೆ ನಿಂತಿಲ್ಲ.''[೬]

''ಮುಂದೆ Tribe ಎಂಬ ಪದವು ಸ್ವತಂತ್ರ ಭಾರತದಲ್ಲಿ ರಾಜಕೀಯ ಮತ್ತು ಆಡಳಿತಾತ್ಮಕ ಪರಿಭಾಷೆಯಾಗಿ ರೂಪಾಂತರಗೊಂಡಿತು. ಆದರೆ ಅಲ್ಲಿಯವರೆಗೂ Ethnic ಮತ್ತು Tribe ಎಂಬ ಪದಗಳು ಯುರೋಪ್ ಮತ್ತು ಯುರೋಪೇತರ ಜನಗಳನ್ನು ವಿಂಗಡಿಸುವ ಪದಗಳಾಗಿಯೇ ಬಳಕೆಯಲ್ಲಿದ್ದವು. ಭಾರತದಲ್ಲಿ ೧೭೭೪ರಲ್ಲಿ ವಿಲಿಯಂ ಜೋನ್ಸ್‌ರ ನಾಯಕತ್ವದಲ್ಲಿ ಪ್ರಾರಂಭವಾದ Asiatic Society of Bengal ಎಂಬ ಸಂಸ್ಥೆಯ ಜೊತೆ ಜೊತೆಯಲ್ಲಿ ಭಾರತದಲ್ಲಿ ಸಮುದಾಯ ಅಧ್ಯಯನಗಳು ಪ್ರಾರಂಭವಾದವು. ವಿಲಿಯಂ ಜೋನ್ಸ್‌ರ ಸದರಿ ಸಂಸ್ಥೆಯು ಇಂಡಾಲಜಿಯ ಅಧ್ಯಯನಗಳಲ್ಲಿ ತೊಡಗಿಕೊಂಡರೂ ಸಹ ಈ ಅಧ್ಯಯನಗಳ ಜೊತೆ ಜೊತೆಯಲ್ಲಿಯೇ ಸಮುದಾಯ ಅಧ್ಯಯನಗಳು ಪ್ರಾರಂಭವಾದವು. ಹಾಗೆ ನೋಡಿದರೆ ಭಾರದಲ್ಲಿ ಕಂಪನಿ ಆಡಳಿತದ ಸಂದರ್ಭದಲ್ಲಿ ನಡೆದ ಸಾಮಾಜಿಕ ಅಧ್ಯಯನಗಳು ಹೆಚ್ಚಿನ ಪಾಲು ಬುಡಕಟ್ಟುಗಳ ಅಧ್ಯಯನಕ್ಕಾಗಿಯೇ ಮೀಸಲಾಗಿವೆ. ವಸಾಹತು ಆಡಳಿತದ ಸಂದರ್ಭದಲ್ಲಿ ನಡೆದ ಅಧ್ಯಯನಗಳು ಹಲವು ಸಂಪುಟಗಳಲ್ಲಿ ಪ್ರಕಟವಾಗಿರುವ ರೀತಿಯನ್ನು ಗಮನಿಸಿದರೆ ಸಾಕು ಅಂದಿನ ಅಧ್ಯಯನಗಳು ಬುಡಕಟ್ಟುಗಳನ್ನು ಯಾವ ಬಗೆಯ ತೀವ್ರತೆಯಲ್ಲಿ ಪರಿಗಣಿಸಿದ್ದವೆಂದು ಗೊತ್ತಾಗುತ್ತದೆ. ಈ ಅಧ್ಯಯನಗಳನ್ನು ವಿದ್ಯಾರ್ಥಿ ಮೂರು ಹಂತಗಳಲ್ಲಿ ಗುರುತಿಸುತ್ತಾರೆ.''[೭]

೧. ರೂಪಗೊಳ್ಳುವ ಆರಂಭದ ಕಾಲ (೧೭೭೪-೧೯೧೯)

೨. ರಚನಾತ್ಮಕ ಹಂತ ೧೯೨೦-೧೯೪೯

೩. ವಿಶ್ಲೇಷಣೆಯ ಹಂತ ೧೯೫೦ ನಂತರದ ಕಾಲಘಟ್ಟ

ಈ ಹಂತಗಳನ್ನು ಮಜುಂದಾರ್ ಮುಂತಾದ ಮಾನವಶಾಸ್ತ್ರಜ್ಞರು ಬೇರೆ ಬೇರೆ ರೀತಿಯಲ್ಲಿ ವಿಂಗಡಿಸುತ್ತಾರೆ. ಆದರೆ ತಾತ್ವಿಕವಾಗಿ ಈ ಅಧ್ಯಯನಗಳ ಸ್ವರೂಪವು ಆಯಾ ಕಾಲಘಟ್ಟಗಳಲ್ಲಿ ಬದಲಾಗದೇ ಇದ್ದ ಕಾರಣ ಈ ಬಗೆಯ ವಿಂಗಡನೆಯೂ ಕೃತಕವಾಗಿ ಕಾಣುತ್ತದೆ. ಸರ್ ವಿಲಿಯಂ ಜೋನ್ಸ್ ೧೭೭೪ರಲ್ಲಿ ಸ್ಥಾಪಿಸಿದ ಏಶಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್ ಸಂಸ್ಥೆಯ ಜೊತೆಗೆ ಭಾರತದಲ್ಲಿ ಮಾನವಶಾಸ್ತ್ರೀಯ ಅಧ್ಯಯನಗಳು ಪ್ರಾರಂಭವಾದವು ಇಲ್ಲೂ ಸಹ ಬುಡಕಟ್ಟುಗಳನ್ನು ಅಧ್ಯಯನ ಮಾಡಿದ್ದು ಆರಂಭದ ಹಂತದಲ್ಲಿ ವಸಾಹತುಶಾಹಿ ಆಡಳಿತದ ವಿವಿಧ ಸ್ತರಗಳಲ್ಲಿ ಕಾರ್ಯನಿರತರಾಗಿದ್ದ ಆಡಳಿತಗಾರರು ಜೊತೆಗೆ ಮಿಶನರಿಗಳು, ಪ್ರವಾಸಿಗರು ಮತ್ತು ಕೆಲವು ಮಾನವಶಾಸ್ತ್ರಜ್ಞರು ಬುಡಕಟ್ಟುಗಳ ಅಧ್ಯಯನವನ್ನು ಕೈಗೊಂಡರು.''[೮]

''ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಭಾರತವನ್ನು ಕಂಪನಿ ಸರಕಾರವು ಪೂರ್ವ ಭಾರತ, ಮಧ್ಯ ಭಾರತ, ದಕ್ಷಿಣ ಭಾರತ ಮತ್ತು ಉತ್ತರ ಭಾರತಗಳೆಂದು ವಿಭಜಿಸಿ, ಈ ಪ್ರತಿ ಪ್ರಾಂತ್ಯಕ್ಕೂ ತಜ್ಞ ಆಡಳಿತಗಾರರನ್ನು ನೇಮಿಸಿತ್ತು. ಪೂರ್ವ ಭಾರತಕ್ಕೆ ಹರ್ಬಟ್ ರಿಸ್ಲೆ, ಡಾಲ್ಟನ್, ಜಿಮಲ್ಲೇ ಮಧ್ಯಭಾರತಕ್ಕೆ ರಿಸೆಲ್, ದಕ್ಷಿಣ ಭಾರತಕ್ಕೆ ಥರ್ಸ್ಟನ್ ಮತ್ತು ಉತ್ತರ ಭಾರತಕ್ಕೆ ಕ್ರೋಕ್ ಅವರನ್ನು ನೇಮಿಸಲಾಗಿತ್ತು ಮುಂದೆ ಇವರ ಸಂಪಾದಕತ್ವದಲ್ಲಿ ಎನ್‌ಸೈಕ್ಲೋಪಿಡಿಯಾಕ್ ಮಾದರಿಯ ಹಲವು ಸಂಪುಟಗಳಲ್ಲಿ ಭಾರತದ ಬುಡಕಟ್ಟು ಮತ್ತು

ಜಾತಿ ಸಮುದಾಯ ಮಾಹಿತಿಗಳು ಪ್ರಕಟವಾದವು. ಆದರೆ ಇದಕ್ಕೂ ಮೊದಲು ವಸಾಹತು ಆಡಳಿತದ ಅಧಿಕಾರಿಗಳು ಮತ್ತು ಕೆಲವು ಮಿಶನರಿಗಳು ಭಾರತದಲ್ಲಿ ಆಗಲೇ ಬುಡಕಟ್ಟು ಮತ್ತು ಜಾತಿ ಸಮುದಾಯಗಳನ್ನು ಅಧ್ಯಯನ ಮಾಡಲು ಪ್ರಾರಂಭಿಸಿದರು. ಹಾಗೆ ನೋಡಿದರೆ ಮದ್ರಾಸ್‌ನಿಂದ ಮಲಬಾರ್‌ವರೆಗೆ ಪ್ರಯಾಣ ಮಾಡಿ ರಚಿಸಿದ A Journey from madras Through the countries of mysore, canara and malabar ಕೃತಿಯ ದಕ್ಷಿಣ ಭಾರತದಲ್ಲಿ ಸಾಮಾಜಿಕ ಮತ್ತು ಬೌಗೋಳಿಕ ವಿವರಗಳನ್ನು ನೀಡುತ್ತದೆ. ವಸಾಹತು ಆಡಳಿತ ಈ ಕೃತಿಯನ್ನು ೧೮೦೭ರಲ್ಲಿ ಪ್ರಕಟಿಸಿತು. ಸದರಿ ಕೃತಿಯು ಮೂರು ಸಂಪುಟಗಳಲ್ಲಿ ಪ್ರಕಟವಾಗಿದೆ. ಅಂದಿನ ಗವರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿಯ ಸೂಚನೆಯ ಮೇರೆಗೆ ಫ್ರಾನ್ಸಿಸ್ ಬುಕಾನಿನ್ ತನ್ನ ಅಧ್ಯಯನ ಪ್ರವಾಸ ಕೈಗೊಂಡಿದ್ದನು. ಹಾಗೆ ನೋಡಿದರೆ ಬ್ರಿಟಿಷ್ ಆಡಳಿತದ ಭಾರತದ ಸಾಮಾಜಿಕ ಅಧ್ಯಯನಗಳಲ್ಲಿ ಇದು ಪ್ರಥಮ ಶೈಕ್ಷಣಿಕ ಪ್ರಯತ್ನವೆಂದರೆ ತಪ್ಪಾಗಲಿಕ್ಕಿಲ್ಲ.”[೯]

‘‘೧೭೯೨ರಲ್ಲಿ ಭಾರತಕ್ಕೆ ಬಂದ ಫ್ರೆಂಚ್ ಪಾದ್ರಿ ಅಬೆದುಬಾಯಿಸ್ ಹಳೆ ಮೈಸೂರು ಭಾಗದ ಸಮುದಾಯಗಳನ್ನು ಅಧ್ಯಯನ ಮಾಡಿದನು. Hindu manners customs and Ceremonies ಎಂಬ ಈತನ ಗ್ರಂಥವನ್ನು ವಸಾಹತು ಆಡಳಿತವು ೧೮೧೬ರಲ್ಲಿ ಪ್ರಕಟಿಸಿತು. ಅಬೆದುಬಾಯಿಸ್ ಫ್ರೆಂಚ್ ಭಾಷೆಯಲ್ಲಿ ಬರೆದ ಈ ಗ್ರಂಥವನ್ನು ವಸಾಹತು ಆಡಳಿತವು ಇಂಗ್ಲಿಷ್‌ಗೆ ಭಾಷಾಂತರಿಸಿ ಪ್ರಕಟಿಸಿತು. ಮೇಲಿನ ಎರಡು ಕೃತಿಗಳು ಭಾರತದಲ್ಲಿ ಸಾಮಾಜಿಕ ಅಧ್ಯಯನಗಳಿಗೆ ನಾಂದಿ ಹಾಡಿದವು. ಮುಂದೆ ಹರ್ಬರ್ಟ್ ರಿಸ್ಲೆಯವರ ನಾಯಕತ್ವದಲ್ಲಿ ರೂಪುಗೊಂಡ Ethnographic Survey of India ಸಂಸ್ಥೆಯ ಮೂಲಕ ಅಧಿಕೃತವಾಗಿ ವಸಾಹತುಶಾಹಿ ಆಡಳಿತ ಇಂಡಿಯಾದ ಬುಡಕಟ್ಟು ಮತ್ತು ಜಾತಿ ಸಮುದಾಯಗಳ ಅಧ್ಯಯನಗಳನ್ನು ಕೈಗೊಂಡಿತು.”[೧೦]

‘‘ಎಂ.ಯೆ ಶೆರ್ರಿಂಗ್ ೧೮೭೯ರಲ್ಲಿ ಮೂರು ಸಂಪುಟಗಳಲ್ಲಿ ತಮ್ಮ ಕೃತಿಯನ್ನು Hindu Tribes and castes ಹೆಸರಲ್ಲಿ ಪ್ರಕಟಿಸಿದ್ದಾರೆ. (ಹರ್ಬರ್ಟ್ ರಿಸ್ಲೆಯವರು ೧೮೯೧ರಲ್ಲಿ Tribes and castes of Bengal)ಎಂಬ ಗ್ರಂಥವನ್ನು ಬರೆದಿದ್ದಾರೆ. ಅದು ಬುಡಕಟ್ಟುಗಳ ಕುರಿತಾಗಿ ಎಡ್ಗರ್ ಥರ್ಸ್ಟನ್ Castes and Tribes of Southern India ಎಂಬ ಹೆಸರನಲ್ಲಿ ೧೯೦೯ರಲ್ಲಿ ಪ್ರಕಟಿಸಿದ್ದಾರೆ. ೧೯೨೦ರಲ್ಲಿ ಆರ್.ಇ.ಎಂಥೋವನ್ Tribes and Castes of Bombay ಎಂಬ ಹೆಸರಿನಲ್ಲಿ ೩ ಸಂಪುಟಗಳನ್ನು ಪ್ರಕಟಿಸಿದ್ದಾರೆ. ೧೯೨೨ರಲ್ಲಿ ಅನಂತ ಕೃಷ್ಣ ಅಯ್ಯರ್ The Travanvore Tribes and Castes Mysore tribes and Castes ಎಂಬ ಹೆಸರಿನಲ್ಲಿ ೪ ಸಂಪುಟಗಳನ್ನು ಹೊರತಂದಿದ್ದಾರೆ.”[೧೧]

‘‘ಬುಡಕಟ್ಟುಗಳ ಅಧ್ಯಯನ ಸಂದರ್ಭದಲ್ಲಿ ಭಾರತಕ್ಕೆ ವಿದೇಶದಿಂದ ಬಂದು ಬುಡಕಟ್ಟುಗಳಲ್ಲಿಯೇ ತಮ್ಮ ಜೀವನವನ್ನು ಮುಡಾಪಾಗಿಟ್ಟ ವೆರಿಯರ್ ಎಲ್ವಿನ್ ಮತ್ತು ಹೈಮನ್ ಡಾರ್ಫ್ ಅವರನ್ನು ನೆನಪಿಸಿಕೊಳ್ಳಲೇಬೇಕು. ಒಬ್ಬ ಪಾದ್ರಿಯಾಗಿ ಬಂದ ವೆರಿಯರ್ ಮಾನವಶಾಸ್ತ್ರದ ಚಿಂತಕನಾಗಿ ಮಧ್ಯಭಾರತದ ಬುಡಕಟ್ಟುಗಳ ಅಭಿವೃದ್ಧಿಗೆ ಹೆಚ್ಚು ಶ್ರಮಿಸಿದ್ದಾರೆ. ಎಲ್ವಿನ್ ಭಾರತದ ಪ್ರಧಾನಮಂತ್ರಿಯಾಗಿದ್ದ ಅಂದಿನ

ಜವಾಹರಲಾಲ್ ನೆಹರು ಅವರಿಗೆ ಆದಿವಾಸಿಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಯೋಜನೆಗಳಲ್ಲಿ ತಮ್ಮ ಸಲಹೆಗಳನ್ನು ನೀಡಿರುವುದನ್ನು ನೋಡಲಾಗಿದೆ. ಈ ಹಿನ್ನೆಲೆಯಿಂದ ಸ್ವಾತಂತ್ರ್ಯ ಭಾರತದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯಲ್ಲಿ ವೆರಿಯರ್‌ರ ಪಾತ್ರ ಗೋಚರಿಸುವುದನ್ನು ನೋಡಲಾಗುತ್ತದೆ. ವೆರಿಯರ್‌ರು ತಮ್ಮ ಅಧ್ಯಯನವನ್ನು ಬೈಗಾ ಸಮುದಾಯದವರನ್ನು ಕುರಿತು ಮಾಡಿರುವುದನ್ನು ನೋಡಲಾಗಿದೆ. ೧೯೩೯ರಲ್ಲಿ The Baiga ಎಂಬ ಹೆಸರಲ್ಲಿ ಕೃತಿಯನ್ನು ಬಿಡುಗಡೆ ಮಾಡಿದ್ದಾರೆ. ನಂತರ ೧೯೪೭ರಲ್ಲಿ The Muria and Their Ghutul ಹಾಗೂ ೧೯೫೫ರಲ್ಲಿ Religion of an Indian Tribeಗಳನ್ನು ತಮ್ಮ ಅಧ್ಯಯನದ ಹಿನ್ನೆಲೆಯಲ್ಲಿ ಅಭಿವೃದ್ಧಿಪರ ಆಲೋಚನೆಗಳಿಂದ ಕೂಡಿದ ಕೃತಿಗಳನ್ನು ಹೊರತಂದರು. ಬುಡಕಟ್ಟುಗಳ ಅಧ್ಯಯನಕಾರರ ನೇತಾರರಾಗಿದ್ದರಿಂದ ವೆರಿಯರ್‌ರು ತಮ್ಮ ಆತ್ಮಕಥೆಯನ್ನು Tribal World of Verier Elwin ಎಂಬ ಹೆಸರಿನಲ್ಲಿ ಪ್ರಕಟಿಸಿರುವುದನ್ನು ಕಾಣಲಾಗಿದೆ."[೭]

''ಭಾರತದ ಬುಡಕಟ್ಟುಗಳನ್ನು ಕುರಿತು ವಸಾಹತು ಕಾಲಘಟ್ಟದಿಂದ ಇಲ್ಲಿಯವರೆಗೆ ಅನೇಕರು ಅಧ್ಯಯನ ಮಾಡಿದ್ದಾರೆ. ಆಂಧ್ರ ಪ್ರದೇಶದ ಉತ್ತರಭಾಗದ ಆಧಿವಾಸಿಗಳನ್ನು ಕುರಿತು ವಾನ್‌ಫರರ್ ಹಾಗೂ ಅಮೆರಿಕಾದ ರಾಕ್‌ಫೆಲರ್ ಫೆಲೋಷಿಪ್ ಪಡೆದು ಭಾರತಕ್ಕೆ ಬಂದು ಈಶಾನ್ಯ ಭಾರತದ ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡಿದರು. ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ಸ್ವಾತಂತ್ರ್ಯಪೂರ್ವದಲ್ಲಿ ಬುಡಕಟ್ಟುಗಳ ಕುರಿತು ಮುಖ್ಯ ಅಧ್ಯಯನಗಳನ್ನು ಪಶ್ಚಿಮದ ಅಧ್ಯಯನಕಾರರೇ ಮಾಡಿರುವುದನ್ನು ಕಾಣಬಹುದು. ಅಲ್ಲದೆ ಸಮಾಜಶಾಸ್ತ್ರಜ್ಞರು ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡಿರುವುದೇ ಹೆಚ್ಚು. ಅವರಲ್ಲಿ ಡಬ್ಲು ಎಚ್.ಆರ್. ರಿವರ್ಸ್ The Todas ಎಂಬ ಹೆಸರಿನಲ್ಲಿ ಎರಡು ಸಂಪುಟಗಳನ್ನು ಪ್ರಕಟಿಸಿದ್ದಾರೆ. ರೆಡ್‌ಕ್ಲಿಪ್ ಬ್ರೌನ್ ೧೯೨೨ರಲ್ಲಿ The Andaman Islanders: A Study in Social Anthropology ಪುಸ್ತಕವನ್ನು ಹೊರತಂದಿದ್ದಾರೆ. ಮಾನವಶಾಸ್ತ್ರದ ಹಿನ್ನೆಲೆಯಿಂದ ಎಸ್.ಸಿ. ರಾಯ್ Mundas and their Country ಪುಸ್ತಕವನ್ನು ೧೯೨೨ರಲ್ಲಿ ಪ್ರಕಟಿಸಿದ್ದಾರೆ. ಭಾರತ ಸಮಾಜಶಾಸ್ತ್ರಜ್ಞ ಜಿ.ಎಸ್ ಘುರ್ರ್ರೆ ೧೯೩೨ರಲ್ಲಿ Caste and Race in India ಎಂಬ ಗ್ರಥವನ್ನು ಪ್ರಕಟಿಸಿದ್ದಾರೆ.''[೮]

### ವಸಾಹತೋತ್ತರ ಕಾಲಘಟ್ಟದ ಅಧ್ಯಯನಗಳು

''ಭಾರತದ ವಸಾಹತೋತ್ತರ ಕಾಲಘಟ್ಟದ ಅಧ್ಯಯನಗಳ ಒಲವು ಬದಲಾದಂತೆ ಇದೆ. ದ್ವಿತೀಯ ಮಹಾಯುದ್ಧದ ನಂತರ ಪ್ರಪಂಚದ ಪ್ರಬಲ ಶಕ್ತಿರಾಷ್ಟ್ರವಾಗಿ ಅಮೆರಿಕವು ಹೊರಹೊಮ್ಮಿತು. ಇದರ ಪರಿಣಾಮವಾಗಿ ಭಾರತದಲ್ಲಿ ಸಾಮಾಜಿಕ ಅಧ್ಯಯನಗಳನ್ನು ನಿಯಂತ್ರಣ ಕೇಂದ್ರ ಬಿಂದುವಾಗಿದ್ದ ಬ್ರಿಟನ್‌ನಿಂದ ಕಛೇರಿಯು ಅಮೆರಿಕಕ್ಕೆ ಸ್ಥಳಾಂತರಗೊಂಡಿತು. ಆಸ್ಕರ್ ಲಿವೀಸ್‌ನಂತಹ ಆಡಳಿತಗಾರ ಭಾರತಕ್ಕೆ ಬಂದು ಇಲ್ಲಿನ ಯೋಜನೆ ಆಯೋಗದ ಸದಸ್ಯನಾಗುತ್ತಾನೆ. ಈ ವೇಳೆಗಾಗಲೇ ಜಾಗತಿಕ ಮಟ್ಟದಲ್ಲಿ ಮಾನವಶಾಸ್ತ್ರದ ಅಧ್ಯಯನ ವಿಧಾನದಲ್ಲಿ ಅನೇಕ ಬದಲಾವಣೆಗಳು ಕಂಡವು. ಸಾಂಸ್ಕೃತಿಕವಾಗಿ ಮಾನವಶಾಸ್ತ್ರದ ಅಡಿಯಲ್ಲಿದ್ದ ಭಾರತದ ಕೆಲವು ವಸಾಹತುಗಳನ್ನು ಇಂಗ್ಲೆಂಡ್ ರಾಜಕೀಯವಾಗಿ ಸ್ವತಂತ್ರಗೊಳಿಸುತ್ತದೆ. ದ್ವಿತೀಯ ಮಹಾಯುದ್ಧವು

ಅಮೆರಿಕವನ್ನು ಬಲಿಷ್ಠ ರಾಷ್ಟ್ರವನ್ನಾಗಿ ರೂಪಿಸಿತು. ಮುಂದೆ ಅಮೆರಿಕದ ವಿಶ್ವವಿದ್ಯಾಲಯಗಳಲ್ಲಿ ಸಾಮಾಜಿಕ ಮಾನವಶಾಸ್ತ್ರವು ಅಸ್ತಿತ್ವಕ್ಕೆ ಬಂದ ಬಗೆಯನ್ನು ಕಾಣಬಹುದು. ಸಾಮಾಜಿಕ ಮಾನವಶಾಸ್ತ್ರಕ್ಕೆ ಒಂದು ರೂಪವನ್ನು ಕೊಟ್ಟವರು ರೆಡ್‌ಕ್ಲಿಫ್ ಬ್ರೌನ್. ಮಾನವಶಾಸ್ತ್ರವನ್ನು ಅದರ ಹಿನ್ನೆಲೆಯಲ್ಲಿ ಅಧ್ಯಯನದ ಮೂಲಕ ಅಮೆರಿಕದ ವಿಶ್ವವಿದ್ಯಾಲಯಗಳಲ್ಲಿ ಬೋಧಿಸಲು ಪ್ರಾರಂಭಿಸಿದೆ. ಆ ನಂತರ ಮಾನವಶಾಸ್ತ್ರದ ಹಿಡಿತ ಅಮೆರಿಕಕ್ಕೆ ಸಿಕ್ಕಿತು. ಈ ಪರಿಣಾಮವಾಗಿ ಜಾಗತಿಕ ಮಟ್ಟದಲ್ಲಿ ಸಾಮಾಜಿಕ ಅಧ್ಯಯನಗಳೆಲ್ಲವು ಅಮೆರಿಕದ ಶೈಕ್ಷಣಿಕ ಮಾದರಿಯ ವಿಧಾನವನ್ನು ಅನುಸರಿಸಲು ಪ್ರಾರಂಭಿಸಿರುವುದು ನಿಜವಾದ ಸಂಗತಿಯಾಗಿದೆ. ಯಾವಾಗ ಪ್ರಬಲ ರಾಷ್ಟ್ರಗಳು ತಮ್ಮದೇ ಆದ ಅಧ್ಯಯನದ ಹಿನ್ನೆಲೆಯಲ್ಲಿ ಒಂದು ಚೌಕಟ್ಟನ್ನು ನಿರ್ಮಾಣ ಮಾಡಿಕೊಂಡ ಮೇಲೆ ಭಾರತವು ಕೂಡ ಆ ಮಾದರಿಯನ್ನು ಅನುಸರಿಸಿದೆ. ಆದ್ದರಿಂದ ಸರಕಾರದ ನೀತಿ ನಿರೂಪಣೆಯ ಹಂತದಲ್ಲಿ ಮತ್ತು ಯೋಜನೆಗಳನ್ನು ಜಾರಿ ಮಾಡುವ ಹಂತದಲ್ಲಿ ಅನ್ವಯಿಕ ಮಾನವಶಾಸ್ತ್ರ ಮುಖ್ಯವೆಂದು ನಂಬಲಾಯಿತು. ಈ ಪರಿಣಾಮವಾಗಿ Anthropological Survey of India ಎಂಬ ಸಂಸ್ಥೆಯನ್ನು ಭಾರತ ಸ್ಥಾಪಿಸಿತು.''[೧೬]

''ವಸಾಹತೋತ್ತರ ಕಾಲಘಟ್ಟದಲ್ಲಿ ಭಾರತವನ್ನು ಇಟ್ಟು ನಾವು ಅಧ್ಯಯನಗಳ ಹಿನ್ನೆಲೆಯಲ್ಲಿ ನೋಡಿದರೆ ಸಮುದಾಯಗಳ ಅಧ್ಯಯನದಲ್ಲಿ ಮಾನವಶಾಸ್ತ್ರೀಯ ಅಧ್ಯಯನಗಳು ನಡೆದಿರುವುದನ್ನು ಗಮನಿಸಲಾಗುತ್ತದೆ. ವಸಾಹತೋತ್ತರ ಕಾಲಘಟ್ಟದ ನಂತರ ವೆರಿಯರ್ ಎಲ್ವಿನ್ ಮಾನವಶಾಸ್ತ್ರದ ಹಿನ್ನೆಲೆಯಿಂದ ಅಧ್ಯಯನ ಮಾಡಿದ್ದಾರೆ. ಎಲ್ವಿನ್ ೧೯೫೫ರಲ್ಲಿ Religion of an Indian Tribe ಪುಸ್ತಕವನ್ನು ಪ್ರಕಟಿಸಿದ್ದಾರೆ. ಭಾರತದ ಮಾನವಶಾಸ್ತ್ರಜ್ಞ ಡಿ.ಎನ್ ಮಜುಂದಾರ್ ೧೯೬೦ರಲ್ಲಿ The Affairs of Tribe; A Study in Tribal Dynamics ಎಂಬ ಪುಸ್ತಕವನ್ನು ಬರೆದಿದ್ದಾರೆ. ಜಿ.ಎಸ್. ಘುರ್ರೆ ೧೯೬೦ರಲ್ಲಿ The Scheduled Tribes ಎಂಬ ಪುಸ್ತಕವನ್ನು ಬರೆದಿದ್ದಾರೆ. ಎಫ್ ಜಿ.ಬೇಲಿ ೧೯೬೦ರಲ್ಲಿ Tribe Coste and Nation ಪುಸ್ತಕವನ್ನು ಬರೆದಿದ್ದಾರೆ. ವೆರಿಯರ್ ೧೯೫೮ರಲ್ಲಿ A philosophy of NEFA ಕೃತಿಯನ್ನು ಬರೆದಿದ್ದಾರೆ. ೧೯೨೦ರಲ್ಲಿ ಸೈಯದ್ ಸಿರಾಜ್ ಉಲ್ ಹುಸೇನ್ The Castes and Tribes of HEH Nizanis Dominions ಕೃತಿಯನ್ನು ಪ್ರಕಟಿಸಿದ್ದಾರೆ.''[೧೭]

''ಭಾರತದ ಆರಂಭದ ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ಅಮೆರಿಕದ ವಿವಿಧ ವಿಶ್ವವಿದ್ಯಾಲಯಗಳಿಂದ ತರಬೇತಿ ಪಡೆದು ಅಧ್ಯಯನ ಕೈಗೊಂಡಿದ್ದಾರೆ. ಅವರಲ್ಲಿ ಜಿ.ಎಸ್. ಘುರ್ರೆ, ಇರಾವತಿ ಕರ್ವೇ, ಎಸ್ ಸಿ.ರಾಯ್, ಎಸ್.ಸಿ. ದುಬೆ, ಎಂ.ಎನ್. ಶ್ರೀನಿವಾಸ್, ಬಿ.ಎಸ್. ಗುಹಾ, ಡಿ.ಎನ್. ಮಜುಮಂದಾರ್ ಅವರುಗಳು ಬುಡಕಟ್ಟು ಸಮುದಾಯಗಳನ್ನು ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವುದನ್ನು ಗಮನಿಸಲಾಗಿದೆ.''[೧೮]

ಬುಡಕಟ್ಟುಗಳು ಮತ್ತು ಜಾತಿಗಳನ್ನು ಕುರಿತು ವಸಾಹತೋತ್ತರ ಕಾಲಘಟ್ಟದ ಮಾನವಶಾಸ್ತ್ರದ ಅಧ್ಯಯನಕಾರರು ಹೆಚ್ಚಾಗಿ ಅಧ್ಯಯನ ಮಾಡಿದ್ದಾರೆ. ಯಾವುದೇ ಯೋಜನೆಗಳನ್ನು ರೂಪಿಸಲು ಗ್ರಾಮ, ಕುಟುಂಬ ಮತ್ತು ಸಮುದಾಯಗಳ ಅಧ್ಯಯನ ಮುಖ್ಯವೆಂದು ಗ್ರಹಿಸಿದ್ದರು. ಆದ್ದರಿಂದ ಆ ಕಾಲದಲ್ಲಿ

ಬುಡಕಟ್ಟುಗಳ ಅಧ್ಯಯನ ಮುಂದುವರಿದಿದೆ. ಸ್ವಾತಂತ್ರ್ಯ ಭಾರತದಲ್ಲಿ ಮಾನವಶಾಸ್ತ್ರೀಯ ಅಧ್ಯಯನಗಳ ಜೊತೆಗೆ ಸಾಂಸ್ಕೃತಿಕ ಅಧ್ಯಯನದ ಹಿನ್ನೆಲೆಯನ್ನು ಹೊಂದಿದ ಜನಪದ ಅಧ್ಯಯನ ಪ್ರಾರಂಭವಾಗಿದ್ದು ೨೦ನೇ ಶತಮಾನದ ಪ್ರಾರಂಭದಲ್ಲಿ ಎಂಬುದನ್ನು ಮರೆಯುವಂತಿಲ್ಲ. ಇತ್ತೀಚಿನ ದಿನಮಾನಗಳಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನಗಳು ಅಂತರಶಿಸ್ತೀಯ ಹಿನ್ನೆಲೆಯಿಂದ ನಡೆದಿವೆ ಮತ್ತು ನಡೆಯುತ್ತಿವೆ. ಆದ್ದರಿಂದ ಇವುಗಳೆಲ್ಲವು ಅಧ್ಯಯನಕ್ಕಾಗಿ ಕಂಡುಕೊಂಡ ವಿಧಾನಗಳಾಗಿವೆ.

### ೧.೨. ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಕರ್ನಾಟಕಾದ್ಯಂತ ೩೪೬೩೯೬೮ ರಾಷ್ಟ್ರ ಬುಡಕಟ್ಟು ಜನಾಂಗವಿದೆ. ಬುಡಕಟ್ಟು ಸಮುದಾಯದ ಸಾಮಾಜಿಕ ರಚನೆ, ವೈಯಕ್ತಿಕ ಆಸೆ ಆಕಾಂಕ್ಷೆಗಳು, ಜೀವನ ವಿಧಾನ, ಆಂತರಿಕ ಒಳಾಡಳಿತ ವ್ಯವಸ್ಥೆ ಇತ್ಯಾದಿಗಳು ನಾಗರಿಕರೆನ್ನಿಸಿಕೊಳ್ಳುವ ಜನಸಮೂಹದಿಂದ ಸಾಕಷ್ಟು ಭಿನ್ನವಾಗಿವೆ. ಮಾನವರೆನಿಸಿಕೊಳ್ಳುವ ಜನಸಮೂಹದಿಂದ ಸಾಕಷ್ಟು ಭಿನ್ನವಾಗಿವೆ. ಮಾನವ ವಿಜ್ಞಾನಿಗಳು, ಸಮಾಜಶಾಸ್ತ್ರಜ್ಞರುಗಳು ಅಧ್ಯಯನದಲ್ಲಿ ತಮ್ಮ ವೈಜ್ಞಾನಿಕ ವಸ್ತುನಿಷ್ಠತೆಯ ಹೆಸರಿನಲ್ಲಿ ನಗರ ಸಂಸ್ಕೃತಿಯ ದೃಷ್ಟಿ ಮಂದ ಹಾಗೂ ಹಳದಿ ಕಣ್ಣುಗಳ ಸಮಸ್ಯೆಯಲ್ಲಿ ಸಿಕ್ಕು ಹಾಕಿರುವುದು ಬುಡಕಟ್ಟು ಸಮುದಾಯದ ಪುನರ್ ಅಧ್ಯಯನ, ಸಮಗ್ರದರ್ಶನ, ಸತ್ಯನಿಷ್ಠ ಅಧ್ಯಯನದ ಅಗತ್ಯತೆಯನ್ನು ಒತ್ತಿ ಹೇಳುತ್ತದೆ. ಹಿಂದಿನ ಮತ್ತು ಇಂದಿನ ಮೌಲ್ಯಗಳ ನಡುವಿನ ಘರ್ಷಣೆಯ ಒಂದು ಪ್ರಮುಖ ಆಯಾಮವಾಗಿ ನೈಸರ್ಗಿಕ ನಿಯಮಗಳ ಮತ್ತು ಯಾಂತ್ರಿಕ ಜೈವಿಕ ವ್ಯವಸ್ಥೆಯ ನಡುವಿನ ಭಿನ್ನತೆಗಳು ಸರಿಯಾದ ಅಧ್ಯಯನಕ್ಕೆ ಒಳಪಡದಿದ್ದಾರೆ. ಇಡೀ ಮಾನವ ಬದುಕಿನ ಐತಿಹಾಸಿಕ ಪರಂಪರೆ ತನ್ನ ದಿಕ್ಕನ್ನೇ ಬದಲಿಸಿಕೊಂಡು ತಿರುಚಿದ ಅವೈಜ್ಞಾನಿಕ ವಿವರಗಳ ಸರಮಾಲೆಯಾಗಿ ಮಾರ್ಪಡುವುದು ಖಂಡಿತ. ಆದ್ದರಿಂದ ಸಮುದಾಯದ ಸಾಂಘಿಕ ಅಭಿವೃದ್ಧಿಯ ಹಾದಿಯೆಲ್ಲ ಯೋಜಕರು ಯೋಚಿಸಲೇಬೇಕಾಗಿರುವ ವಿಷಯವಾಗಿ ಬುಡಕಟ್ಟುಗಳು ಅಧ್ಯಯನದ ವಿಷಯ ವಸ್ತುವಾಗಬೇಕಾಗಿದೆ. ಬುಡಕಟ್ಟುಗಳ ತೌಲನಿಕ ಅಧ್ಯಯನಕ್ಕಿಂತ ಮುಖ್ಯವಾಗಿ ಅವುಗಳನ್ನು ಸುತ್ತುವರಿಯುತ್ತಿರುವ ಆಧುನಿಕ ಸಮಾಜಗಳ ತೌಲನಿಕ ಅಧ್ಯಯನವೇ ಹೆಚ್ಚು ಅಗತ್ಯವೆನಿಸುತ್ತದೆ.

ಬುಡಕಟ್ಟು ಸಮುದಾಯಗಳು ಪ್ರಾಚೀನ ಸಮುದಾಯಗಳ ಪ್ರತೀಕವಾಗಿ ಕಂಡರೆ ಆಧುನಿಕ ತಾಂತ್ರಿಕ ಸಮಾಜವು ಇಂದಿನ ಸಾಮುದಾಯಿಕ ರೂಪವನ್ನು ಪ್ರತಿನಿಧಿಸುತ್ತದೆ. ಇವೆರಡರ ನಡುವಿನ ಭಿನ್ನತೆ ಚಾರಿತ್ರಿಕವಾಗಿ ಸಮಯದ ಪ್ರಭಾವದಿಂದಾದುದೆಂದು ಹೇಳಲಾಗುವುದು. ಇಂದಿನ ಮಾನವ ಸಮಾಜವು ಅತ್ಯಂತ ಸಂಕೀರ್ಣ ಹಾಗೂ ವೈವಿಧ್ಯಮಯ ಅಂಶಗಳನ್ನು ಒಳಗೊಂಡಿದೆ. ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಘಟಕಗಳು ಪರಸ್ಪರ ಅಂತರ ಸಂಬಂಧ ಹೊಂದಿರುವುದರ ಜೊತೆಗೆ ಪರಸ್ಪರರಲ್ಲಿ ಬಿಗುವನ್ನು ಹೊಂದಿರುವುದು ಇಂದಿನ ಮಾನವ ಸಮಾಜದ ವಿವರಣೆಯನ್ನು ಕ್ಲಿಷ್ಟವಾಗಿಸಿದೆ. ಸಮಾಜದ ಕೆಲವು ಗುಂಪುಗಳು ಹೆಚ್ಚು ಹೆಚ್ಚು ಆಧುನೀಕರಣಗೊಂಡು ಪ್ರಾಚೀನ ಸಾಮಾಜಿಕ ಸ್ತರವಿನ್ಯಾಸಗಳನ್ನು ನಿರ್ಮಿಸಿಕೊಳ್ಳುತ್ತಾ ಸಾಗಿದಂತೆಯೇ ಅಧಿಕಾರ ಹಾಗೂ ಅಂತಸ್ತುಗಳಿಂದ ಕೆಳಗುಳಿಯಲ್ಪಟ್ಟ ಹಲವಾರು ಗುಂಪುಗಳು, ಆರ್ಥಿಕ ಸಾಂಸ್ಕೃತಿಕ ಸಾಮಾಜಿಕ ನಿಲಕ್ಷ್ಯ, ದಬ್ಬಾಳಿಕೆ ಶೋಷಣೆಗಳಿಗೆ

ಒಳಪಡುವಂತಾದವು. ಅಂತೆಯೇ ಅನೇಕ ದುರ್ಬಲ ಗುಂಪುಗಳು ಹಿಂದುಳಿದ ಗುಂಪುಗಳಾಗಿ ಪರಿಗಣಿಸಲ್ಪಟ್ಟ ಕಾಲ ಸರಿದಂತೆ ಸಾಂಸ್ಕೃತಿಕ ಹಾಗೂ ಸಾಮಾಜಿಕವಾಗಿ ಕೀಳರಿಮೆ, ನಿಕೃಷ್ಟತೆ ಹಾಗೂ ಅಂಧಕಾರದಲ್ಲಿ ತಳ್ಳಲ್ಪಟ್ಟಿರುವುದು ಐತಿಹಾಸಿಕ ಸತ್ಯ. ಇಂತಹ ಸಾವಿರಾರು ಸಮುದಾಯದ ಜನರು ಅಮೆರಿಕ, ಆಫ್ರಿಕಾ, ಏಷಿಯಾ ಭೂಖಂಡಗಳಾದಿಯಾಗಿ ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ನ್ಯಾಯವಾಗಿ ತಮಗೆ ಸೇರಬೇಕಾಗಿದ್ದ ಸವಲತ್ತುಗಳಿಂದ ವಂಚಿತರಾಗಿ, ಆಧುನಿಕ ಸಂಸ್ಕೃತಿ, ಆರ್ಥಿಕ ವ್ಯವಸ್ಥೆಯಿಂದ ನಲುಗಿ ಕಷ್ಟಕರವಾದ ಬದುಕನ್ನು ರೂಢಿಸಿಕೊಂಡು ಬರುತ್ತಿದ್ದಾರೆ.

ಗೌಡಾಲು ಬುಡಕಟ್ಟು ಮತ್ತು ಇತರ ಬುಡಕಟ್ಟು ಸಮುದಾಯದ ಬದುಕು ಅತ್ಯಂತ ಸಂಕೀರ್ಣ ಸ್ಥಿತಿಯಲ್ಲಿದೆ. ಕಾಡಿನ ನಡುವೆ ಅದರ ಆಸರೆಯಿಂದ ಸ್ವಚ್ಛಂದವಾಗಿ ಬದುಕುತ್ತಿದ್ದ ಬುಡಕಟ್ಟು ಸಮುದಾಯದ ಅಸ್ತಿತ್ವಕ್ಕೆ ಸಂಚಕಾರ ಬಂದಿದೆ. ಕಾಡಿನ ವಾಸ ಬುಡಕಟ್ಟುಗಳನ್ನು ತಲ್ಲಣಗೊಳಿಸಿದೆ. ಕಾಡನ್ನೇ ನಂಬಿ ಸಮೃದ್ಧ ಸಾಂಸ್ಕೃತಿಕ ಪರಂಪರೆಯನ್ನು ಮೈಗೂಡಿಸಿಕೊಂಡು ಅಲೆಮಾರಿಗಳಾಗಿ ಬದುಕುತ್ತಿದ್ದ ಬುಡಕಟ್ಟುಗಳು ಇಂದು ಉದಾರ ಪೋಷಣೆಗಾಗಿ ಅನಿವಾರ್ಯವಾಗಿ ನಾಗರಿಕ ಸಂಪರ್ಕದಲ್ಲಿ ಬದುಕಬೇಕಾಗಿದೆ. ನಾಗರಿಕ ಸಂಪರ್ಕದ ಹೊಡೆತದಿಂದ ಬುಡಕಟ್ಟು ಸಮುದಾಯಗಳ ಕುಟುಂಬಗಳು ತತ್ತರಿಸುತ್ತಿವೆ. ಕುಲ, ಬಳಿ ಸಂಪ್ರದಾಯಗಳ ಬಗ್ಗೆ ಅಚಲವಾದ ವಿಶ್ವಾಸವಿಟ್ಟಿದ್ದ ಬುಡಕಟ್ಟುಗಳು ಔಪಚಾರಿಕ ಶಿಕ್ಷಣದ ಅರೆಪ್ರಜ್ಞೆಯ ಅಟ್ಟಹಾಸದಿಂದ ನೌಕರಿ ಆಮಿಷಗಳಿಗೆ ಬಲಿಯಾಗಿ ತಮ್ಮ ಸಾಂಪ್ರದಾಯಿಕ ಬದುಕಿಗೆ ತಿಲಾಂಜಲಿಯನ್ನು ಕೊಡುತ್ತಿರುವುದು ದುರಂತವೇ ಸರಿ. ಈ ಎಲ್ಲ ಹಿನ್ನೆಲೆಯಿಂದ ಬುಡಕಟ್ಟು ಸಮುದಾಯಗಳ ಅಧ್ಯಯನ ದೃಷ್ಟಿಯಿಂದ ಇಲ್ಲಿಯವರೆಗೆ ಅನೇಕ ಅಧ್ಯಯನಗಳು ನಡೆದಿರುವುದನ್ನು ಅವಲೋಕಿಸಬಹುದಾಗಿದೆ.

ಗೌಡಾಲು ಸಮುದಾಯವನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಹಾಗೂ ಸಾಹಿತ್ಯಕ ಆಕಾರವನ್ನು ಸಂಗ್ರಹಿಸಲು ಹೊರಟರೆ ಯಾವುದೇ ಅಧ್ಯಯನಗಳು ಗೌಡಾಲುಗಳನ್ನು ಕುರಿತು ನಡೆಯದೇ ಇರುವುದು ಗೋಚರಿಸುತ್ತದೆ. ಆದರೆ ಕೆ.ಎಸ್.ಸಿಂಗ್ ಹಾಗೂ ಡಾ. ಕೆ.ಎಂ. ಮೇತ್ರಿ ತಮ್ಮ ಅಧ್ಯಯನದ ಹಿನ್ನೆಲೆಯಲ್ಲಿ ಗೌಡಾಲು ಬುಡಕಟ್ಟು ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಮಾತ್ರ ಇದೆ, ಅದು ೨೮೨೨೨ರಷ್ಟು ಜನಸಂಖ್ಯೆಯಿದೆ ಎಂಬುದನ್ನು ಹೇಳುತ್ತಾ ಅವರ ಪಂಗಡಗಳ ಬಗ್ಗೆ ಪರಿಚಯಿಸುತ್ತಾರೆ. ಆದರೆ ಇಲ್ಲಿಯವರೆಗೆ ಯಾವುದೇ ಸಂಶೋಧನಾತ್ಮಕ ಕೃತಿಗಳು ಬರದೇ ಇರುವುದರಿಂದ ಇದು ಗೌಡಾಲು ಬುಡಕಟ್ಟನ್ನು ಕುರಿತು ಮೊದಲ ಕೃತಿಯಾಗಿದೆ. ಆದ್ದರಿಂದ ಇಲ್ಲಿಯವರೆಗೆ ನಡೆದ ಅಧ್ಯಯನಗಳಿಗೆ ಸಾಹಿತ್ಯಕ ಆಧಾರಗಳಿಲ್ಲದೇ ಇರುವುದರಿಂದ ಪ್ರಾಥಮಿಕ ಮಾಹಿತಿಗಳೇ ಮೂಲ ಆಧಾರಗಳಾಗಿವೆ.

ಚಿಕ್ಕಮಗಳೂರು ಜಿಲ್ಲೆಯು ಹಲವಾರು ಕಾರಣಗಳಿಂದ ದಿನದ ಸುದ್ದಿಯಲ್ಲಿರುತ್ತದೆ. ಅಲ್ಲದೆ ಕರ್ನಾಟಕದಲ್ಲಿ ಯಾವುದೇ ಹೋರಾಟಗಳು, ಪರಿಸರ ಚಳುವಳಿ, ಕುದುರೆಮುಖ ಗಣಿಗಾರಿಕೆಯ ವಿರೋಧಿ ಹೋರಾಟಗಳು, ಮುಂತಾದವುಗಳಿಂದ ಕರ್ನಾಟಕದ ೨೮ ಜಿಲ್ಲೆಗಳಲ್ಲಿ ತನ್ನದೇ ಆದ ಅಸ್ತಿತ್ವವನ್ನು ಇಟ್ಟುಕೊಂಡು ಬಂದಿರುವುದನ್ನು ಕಾಣಲಾಗುವುದು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಇತ್ತೀಚಿನ ದಿನಮಾನದಲ್ಲಿ ನಡೆಯುತ್ತಿರುವ ಧೋರಣೆಗಳಿಗೆ

ಹಲವಾರು ಸಮಸ್ಯೆಗಳು ಕಾರಣವಾಗಿದೆ. ಬುಡಕಟ್ಟುಗಳು ಸಾಂಪ್ರದಾಯಿಕ ಪೂಜೆ, ಗಿಡ ಮರಗಳಿಗೆ ಮಾಡುವ ಪೂಜೆ ನಿಸರ್ಗ ಸಿರಿಯನ್ನು ಕೊಂಡಾಡುವ ಹಾಡುಗಳಿಗೆ ಸಂಚಕಾರ ತಂದಿದ್ದರಿಂದ ಮತ್ತು ಅರಣ್ಯ ಇಲಾಖೆಯವರು ಪ್ರಕೃತಿದತ್ತವಾಗಿ ಬೆಳೆದು ನಿಂತಿರುವ ಅರಣ್ಯವನ್ನು ಕಡಿದು ಅವರದೇ ಆದ ಗಿಡಮರಗಳನ್ನು ನೆಡಲು ಚಿಕ್ಕಮಗಳೂರು ಜಿಲ್ಲೆಯ ಬುಡಕಟ್ಟು ಸಮುದಾಯಗಳ ಮೇಲೆ ಕ್ರೂರವಾದ ದೌರ್ಜನ್ಯವನ್ನು ಮಾಡುತ್ತಲೇ ಬಂದಿದ್ದಾರೆ. ಅಲ್ಲದೆ ಕಾಡಿನಿಂದ ಗೌಡಾಲು ಬುಡಕಟ್ಟು ಮತ್ತು ಇತರೆ ಬುಡಕಟ್ಟುಗಳು ಬದುಕಿಗಾಗಿ ಬೇರೆ ಬೇರೆ ದಾರಿಯನ್ನು ಹುಡುಕಿಕೊಂಡು ಅಲೆಮಾರಿಗಳಾಗಿ ಬದುಕಿನ ಬಂಡಿಯನ್ನು ಸಾಗಿಸುತ್ತಿದ್ದಾರೆ. ಅರಣ್ಯ ಇಲಾಖೆ, ಬಂಡವಾಳಶಾಹಿಗಳು ಮತ್ತು ಜಮೀನ್ದಾರರು ಸೇರಿ ಬುಡಕಟ್ಟುಗಳು ಕಾಡಿಗೆ ಬಾರದ ಹಾಗೆ ಮಾಡಲು ದುಷ್ಟಪ್ರಯತ್ನಗಳಗಳನ್ನು ಮಾಡುತ್ತಾಲೇ ಬಂದಿದ್ದಾರೆ. ಇದಕ್ಕೆ ಮುಖ್ಯವಾದ ಕಾರಣಗಳನ್ನು ಹುಡುಕುತ್ತಾ ಹೋದರೆ ಅನೇಕ ಸಿಗುತ್ತವೆ. ರಾಷ್ಟ್ರೀಯ ಉದ್ಯಾನವನ ನಿರ್ಮಾಣ, ರೆಸಾರ್ಟ್‌ಗಳನ್ನು ಕಾಡಿನಲ್ಲಿ ಸ್ಥಾಪನೆ ಮಾಡಿರುವುದು, ಬಂಡವಾಳಶಾಹಿಗಳಿಗೆ ಆಹ್ವಾನವನ್ನು ನೀಡಿರುವುದೆಲ್ಲವನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಿದ ಹಿನ್ನೆಲೆಯಿಂದ ಹೇಳುವುದಾದರೆ ಆಧುನಿಕರೆನಿಸಿಕೊಂಡವರಿಗೆ ಮತ್ತು ಶ್ರೀಮಂತರೆನ್ನಿಸಿಕೊಂಡವರ ಹಾಗೂ ದುಷ್ಟ ರಾಜಕಾರಣಿಗಳ ವಿಲಾಸಿ ಬದುಕಿಗೆ ಸೌಲಭ್ಯವನ್ನು ಕಲ್ಪಿಸಿಕೊಟ್ಟ ಹುನ್ನಾರವೇ ವಿನಾಃ ಮತ್ತೇನು ಅಲ್ಲವೆಂದು ತಿಳಿಯುತ್ತದೆ.

ಕರ್ನಾಟಕದಾದ್ಯಂತ ಪ್ರಪಂಚದ ಇತರೆ ಭಾಗಗಳಲ್ಲಿರುವಂತೆಯೇ ಮಾಲೇರು, ಗೌಡಾಲು, ಮಲೆಕುಡಿಯ, ಕುಡುಬಿ, ಹಸಲರು, ಇರಳಿಗರು, ಪಂಜರಿಯರವರು, ಕಾಡುಗೊಲ್ಲ, ಜೇನುಕುರುಬ, ಸಿದ್ದಿಯರು, ಹಾಲಕ್ಕಿ, ಗಾಮೊಕ್ಕಲಿಗ, ಗೌಳಿಗರು, ಅಗೇರರು ದಿನನಿತ್ಯದ ಕಸುಬುಗಳಾದ ಆಹಾರ ಸಂಗ್ರಹಣೆ, ಕೂಲಿ, ಕಸೂತಿ, ಬಿದಿರು, ಬುಟ್ಟಿಯ ಹೆಣಿಗೆ, ಮುಂತಾದ ಜೀವನೋಪಾಯದ ಮಾರ್ಗಗಳನ್ನು ಅನುಸರಿಸುತ್ತಿದ್ದಾರೆ.

ಬುಡಕಟ್ಟು ಸಮುದಾಯದ ಜನರ ಬದುಕು ಸ್ವಚ್ಛಂದ ಹಾಗೂ ಸ್ವಾತಂತ್ರ್ಯಪ್ರಿಯವಾದುದು. ಕುಮ್ರಿ ಬೇಸಾಯ ಮಾಡುತ್ತಾ ಬೆಳೆದ ಬೆಳೆಯನ್ನು ಬಳಸುತ್ತಾ ಬೇಟೆ, ಜೇನು, ಗೆಡ್ಡೆ ಗೆಣಸುಗಳನ್ನು ತಿಂದು ಬದುಕುತ್ತಿರುವುದನ್ನು ಕಾಣಲಾಗುವುದು. ಗೌಡಾಲುಗಳು ಮತ್ತು ಇತರ ಬುಡಕಟ್ಟು ಸಮುದಾಯಗಳು ಕಾಡು ಅಥವಾ ಅರಣ್ಯವನ್ನು ತಾಯಿ ಅಥವಾ ದೇವರು ಎಂಬ ನಂಬಿಕೆಯನ್ನು ಇಟ್ಟುಕೊಂಡು ಕಾಡಿನಲ್ಲಿರುವ ವಸ್ತುಗಳಲ್ಲಿ ತಮಗೆ ಅಗತ್ಯವಿದ್ದಷ್ಟನ್ನು ಮಾತ್ರ ಬಳಸಿಕೊಂಡು ಜೀವಿಸುವವರಾಗಿದ್ದಾರೆ. ಆದರೆ ಕಾಡು ಸಮೃದ್ಧಿಯಾಗಿ ನೀಡುವಂಥ ಶಕ್ತಿಯನ್ನು ಹೊಂದಿದ್ದರೂ ಸಹ ಅದು ನೀಡುವ ಅರಣ್ಯಉತ್ಪನ್ನಗಳನ್ನು ತಮಗೆ ಬೇಕಾದಷ್ಟನ್ನು ಮಾತ್ರ ತೆಗೆದುಕೊಂಡು ಉಳಿದದ್ದನ್ನು ಕಾಡಿಗೆ ಅರ್ಪಿಸುವ ಪರಿಪಾಟವುಳ್ಳವರೆಂದರೆ ಬುಡಕಟ್ಟುಗಳು ಮಾತ್ರ ಎಂದರೆ ಅತಿಶಯೋಕ್ತಿಯಾಗಲಾರದು. ಬುಡಕಟ್ಟು ಸಮುದಾಯದವರು ಆಧುನಿಕ ಸಮಾಜದ ಜನರಂತೆ ಇಪ್ಪತ್ತು ಎಕರೆ, ಹತ್ತು ಎಕರೆ, ಐದು ಎಕರೆಗಳಂತೆ ಇಂತಿಷ್ಟು ಎಂಬ ಆಸ್ತಿಯ ಒಡೆತನದ ಕಲ್ಪನೆಯಿಲ್ಲದವರು. ಕಾರಣ ಕಾಡಿನ ಮಧ್ಯೆ ಬದುಕಿದ ಜನ ಇಡೀ ಕಾಡು ನಮ್ಮದು ಎಂಬ ಸಾಮುದಾಯಿಕ ಕಲ್ಪನೆಗೆ ತಮಗರಿವಿಲ್ಲದಂತೆಯೇ ಬದ್ಧರಾದವರು. ನಮ್ಮನ್ನು ಕಾಪಾಡುವುದೇ ಕಾಡು, ಕಾಡಿನ ನಾಶವೂ ಕೂಡ ಕಾಡಿನಿಂದಲೇ ಎಂಬ ಸರ್ವವ್ಯಾಪಿ

ಕಲ್ಪನೆ ಬುಡಕಟ್ಟು ಸಮುದಾಯದಲ್ಲಿದೆ. ಆದ್ದರಿಂದ ಪಶ್ಚಿಮ ಘಟ್ಟದಲ್ಲಿರುವ ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನಕ್ಕೊಳಪಡಿಸಿದ ಅನೇಕ ಜನ ಚಿಂತಕರು ನಮ್ಮ ಕಣ್ಣಮುಂದೆ ಬಂದು ನಿಲ್ಲುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಇಲ್ಲಿಯವರೆಗೆ ನಡೆದ ಅಧ್ಯಯನಗಳನ್ನು ನೋಡಲಾಗಿದೆ.

''ಭಾರತದ ಬುಡಕಟ್ಟುಗಳನ್ನು ಕುರಿತು ವಸಾಹತು ಕಾಲಘಟ್ಟ ಮತ್ತು ವಸಾಹತೋತ್ತರ ಕಾಲಘಟ್ಟದಲ್ಲಿ ನಡೆದಿರುವ ಅಧ್ಯಯನಗಳಲ್ಲೆವು ಸಮುದಾಯಗಳ ದುಃಖವನ್ನು ಹೊರಹಾಕುವಂತವುಗಳಾಗಿದ್ದರೂ ಕೂಡ ಭಾರತದ ಚರಿತ್ರೆಯ ಉದ್ದಕ್ಕೂ ನಡೆದುಕೊಂಡು ಬಂದಿರುವ ಸಾಮಾಜಿಕ ಏಣಿ ಶ್ರೇಣಿಯನ್ನು ಪರಿಹರಿಸಲಾಗುತ್ತಿಲ್ಲ. ಆದ್ದರಿಂದ ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ ಆರಂಭವಾಗಿದ್ದು ಪರಕೀಯರಿಗೆ ಮಾಹಿತಿಯ ಆಕರವಾಗಿ ಈ ದೇಶದ ಮೇಲೆ ತಮ್ಮದೇ ಆದ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳಲು ಎಂಬುದು ಸಾರ್ವತ್ರಿಕವಾಗಿ ಗೊತ್ತಿರುವ ವಿಚಾರವೇ ಆಗಿದೆ. ಆದ್ದರಿಂದ ಇಂದು ನಡೆಯುವ ಯಾವುದೇ ಬುಡಕಟ್ಟುಗಳ ಅಧ್ಯಯನವು ಆ ಬುಡಕಟ್ಟಿಗೆ, ಸಾಮಾಜಿಕ ಜ್ಞಾನ ಮತ್ತು ಸರ್ಕಾರದ ಈ ಯೋಜನೆಗಳು ತಲುಪುವಂತಿರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಅನೇಕ ಅಧ್ಯಯನಗಳು ಬುಡಕಟ್ಟುಗಳನ್ನು ಕುರಿತು ನಡೆದಿವೆ ಮತ್ತು ನಡೆಯುತ್ತಲಿವೆ. ಇಲ್ಲಿ ಗೌಡಾಲು ಸಮುದಾಯದ ಅಧ್ಯಯನದ ಬಗ್ಗೆ ಚರ್ಚೆ ಮಾಡುವುದಕ್ಕಿಂತ ಪೂರ್ವದಲ್ಲಿ ಇಲ್ಲಿಯವರೆಗೆ ಬುಡಕಟ್ಟುಗಳನ್ನು ಕುರಿತು ಅಧ್ಯಯನ ಮಾಡಿದ ಕಡೆ ಗಮನ ಹರಿಸಲೇಬೇಕಾಗಿದೆ.''[೧೭] ಈ ಹಿನ್ನೆಲೆಯಲ್ಲಿ ನೋಡುವುದಾದರೆ. Edgar Thurston ೧೯೦೯ರಲ್ಲಿ Castes and Tribes of Southern India ಎಂಬ ಹೆಸರಲ್ಲಿ ಭಾರತದ ಬುಡಕಟ್ಟುಗಳನ್ನು ಕುರಿತು ಸುದೀರ್ಘವಾದ ಅಧ್ಯಯನ ಮಾಡಿದ ೭ ಸಂಪುಗಳನ್ನು ಹೊರತಂದಿದ್ದಾರೆ. ವಿಲಿಯಂ ಕ್ರೂಕ್ ನಾಲ್ಕು ಸಂಪುಟಗಳಲ್ಲಿ The Tribes and Castes of north western provinces ಎಂಬ ಕೃತಿಯನ್ನು ೧೮೯೬ರಲ್ಲಿ ಹೊರತಂದಿದ್ದಾರೆ. ಆರ್ ವಿ.ರಿಸೇಲ್ ಮತ್ತು ರಾಯ್ ಬಹದ್ದೂರ್ ಹಿರಾಲಾಲ್ ೧೮೬೬ರಲ್ಲಿ ಮಧ್ಯ ಭಾರತದ ಬುಡಕಟ್ಟುಗಳನ್ನು ಕುರಿತು ನಾಲ್ಕು ಸಂಪುಟಗಳನ್ನು Tribes and Castes of Central Provinces of India ವನ್ನು ಪ್ರಕಟಿಸಿದ್ದಾರೆ. ಆರ್.ಇ. ಎಂಥೋವನ್ Trices and Castes of Bombay ಎಂಬ ಹೆಸರಿನಲ್ಲಿ ೩ ಸಂಪುಟಗಳನ್ನು ೧೯೨೦ರಲ್ಲಿ ಪ್ರಕಟಿಸಿದ್ದಾರೆ. ''ಎಲ್.ಕೆ. ಅನಂತಕೃಷ್ಣ ಅಯ್ಯರ್ The Travancore Tribes and Castes ಮತ್ತು Mysore Tribes and Castes ಎಂಬ ಹೆಸರಿನಲ್ಲಿ ನಾಲ್ಕು ಸಂಪುಟಗಳಲ್ಲಿ ೧೯೨೨ರಲ್ಲಿ ಹೊರತಂದಿದ್ದಾರೆ. ಹೆರ್ಬರ್ಟ್ ರಿಸ್ಲೆ People of India ಗ್ರಂಥವನ್ನು ೧೯೦೫ರಲ್ಲಿ ಪ್ರಕಟಿಸಿದ್ದಾರೆ. ಸರ್ ವಿಲಿಯಂ ವಿಲ್ಸನ್ ಹಂಟರ್ A Brief histery of the Indian Peoples ಎಂಬ ಕೃತಿಯನ್ನು ೧೮೯೩ರಲ್ಲಿ ಪ್ರಕಟಿಸಿದ್ದಾರೆ. ಎಫ್.ಫಾಸೆಟ್ ಎಂಬಾತ ೧೯೦೧ರಲ್ಲಿ Nayars of Malabar ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ.''[೧೮]

''ವೆರಿಯರ್ ಭಾರತದಲ್ಲಿ ಬುಡಕಟ್ಟು ಸಮುದಾಯದ ಒಳಗಡೆ ಜೀವನ ಮಾಡಿ ಅವರ ಬಗ್ಗೆ ಕೃತಿಗಳನ್ನು ಹೊರತಂದಿದ್ದಾರೆ ಅವುಗಳಲ್ಲಿ The Baiga, (1939), The muria and their Ghutul (1943), Religion of an Indian Tribe (1955) ಗಳಾಗಿವೆ. ಮಹಾಶ್ವೇತಾ ದೇವಿಯವರು ಬುಡಕಟ್ಟು ಸಮುದಾಯದಲ್ಲಿ

ಭಾಗಿಯಾಗಿ ಅವರ ಬದುಕಿನ ಅಭಿವೃದ್ಧಿಗೆ ಶ್ರಮಿಸುತ್ತಾ ಅನೇಕ ಕೃತಿಗಳನ್ನು ಪ್ರಕಟಿಸಿದ್ದಾರೆ. ಭಾರತದಲ್ಲಿ ಇಲ್ಲಿಯವರೆಗೆ ಒಂದಲ್ಲ ಒಂದು ರೀತಿಯಲ್ಲಿ ಬುಡಕಟ್ಟು ಸಮುದಾಯಗಳನ್ನು ಕುರಿತು ಸಮಾಜಶಾಸ್ತ್ರದ ಚಿಂತಕರು ಅನೇಕ ಕೃತಿಗಳನ್ನು ಪ್ರಕಟಿಸಿದ್ದಾರೆ."[೨೪]

**ಟಿಪ್ಪಣಿಗಳು**

೧. Dr.Mukhi H.R., (2005), Sociology, p.119

೨. ಡಾ. ಮೈತ್ರಿ ಕೆ.ಎಂ. (೨೦೦೨), ಬುಡಕಟ್ಟು ಕುಲಕಸುಬುಗಳು, ಪು.೨೦

೩. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು.೪೮-೪೯

೪. ಬೋರಲಿಂಗಯ್ಯ ಹಿ.ಚಿ., ಮತ್ತು ಡಾ.ಪ್ರಭಾಕರ ಎ.ಎಸ್., (೨೦೦೫), ಬುಡಕಟ್ಟು ಅಧ್ಯಯನ, ಪು.೧೧೯

೫. ಡಾ. ಮೈತ್ರಿ ಕೆ.ಎಂ., (೨೦೦೨), ಬುಡಕಟ್ಟು ಕುಲಕಸುಬುಗಳು ಪು.೦೯

೬. ಎಸ್.ಬಿ. ಜೋಗುರ (೨೦೦೬), ಭಾರತೀಯ ಸಮಾಜದ ಅಧ್ಯಯನ, ಪು.೧೨೨

೭. Ibid, 123.

೮. ಭಾರತ ಸಂವಿಧಾನದ ೩೪೨ನೇ ಕಲಮು.

೯. Vidyarthi L.P. and Rai D.K., (1977), Tribal Culture in India, p.36.

೧೦. The New Encyclopedia of Britanica, (Vol.x:115), (Sills ed,;1972:147).

೧೧. Shashi Birathi 1992-Tribal Culture, p.2.

೧೨. Desai; (1977), Submerged Humanity, p.17.

೧೩. Majumdar D.N., (1968), Race and Culture, p.31.

೧೪. ಭಾರತೀಯ ಜನಗಣತಿಯ ಪ್ರಕಾರ (೧೯೯೧).

೧೫. Scheduled Caste and Scheduled Tribes Order (1956).

೧೬. The Commission for Scheduled Castes and Tribes, in its report for (1952)

೧೭. Ram Ahuja (1992), Social Problems in India; p.57.

೧೮. Herbert Risley's (1901), The Peoples of India

೧೯. ಡಾ. ಮೈತ್ರಿ ಕೆ.ಎಂ., (೨೦೦೨), ಬುಡಕಟ್ಟು ಕುಲಕಸುಬುಗಳು ಪು. ೨೩

೨೦. Ibid; p.26-28.

೨೧. Ibid; p.30.

೨೨. Lueeg A.A.D., Tribes of Mysore, p.67.

೨೩. ಡಾ. ಮೈತ್ರಿ ಕೆ.ಎಂ., (೨೦೦೨), ಬುಡಕಟ್ಟು ಕುಲಕಸುಬುಗಳು ಪು.೩೦-೩೪

೨೪. ಡಾ. ಎ.ಎಸ್. ಪ್ರಭಾಕರ, ಕರ್ನಾಟಕದ ಡೊಂಬರ ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧದ ಅಪ್ರಕಟಿತ ಕೃತಿ, ಪು. ೩೪ರಿಂದ ೩೮, ಮತ್ತು ೪೧

* * *

## ಅಧ್ಯಾಯ ಎರಡು

# ಗೌಡಾಲು ಸಮಾಜದ ಮೂಲ

೨.೧. ಗೌಡಾಲು ಸಮುದಾಯದ ಭೌಗೋಳಿಕ ಪರಿಸರ ಮತ್ತು ಜನಸಂಖ್ಯೆ

೨.೨. ಗೌಡಾಲು ಸಮುದಾಯದ ಸಾಮಾಜಿಕ ಸಂರಚನೆ

ಅ. ಕುಟುಂಬ ಪದ್ಧತಿ

ಆ. ನ್ಯಾಯ ಪದ್ಧತಿ

ಇ. ಉತ್ತರಾಧಿಕಾರಿ

ಈ. ಉಡುಗೆ-ತೊಡುಗೆ

ಉ. ಸಾಮಾಜಿಕ ಸಂಘ-ಸಂಸ್ಥೆಗಳು

೨.೩. ಗೌಡಾಲು ಸಮುದಾಯದ ಆರ್ಥಿಕ ಸ್ಥಿತಿಗತಿಗಳು

೨.೪. ಕೃಷಿ

೨.೫. ಕೃಷಿಯೇತರ ಚಟುವಟಿಕೆಗಳು

೨.೬. ಅರಣ್ಯ ಉತ್ಪನ್ನಗಳು ಮತ್ತು ಸಂಗ್ರಹ

೨.೭. ಪ್ರಸ್ತುತ ಕೂಲಿ ಕಾರ್ಮಿಕರಾಗಿ

ಅಧ್ಯಾಯ ಎರಡು

## ಗೌಡಾಲು ಸಮಾಜದ ಮೂಲ

ಮಾನವ ಕಾಡು-ನಾಡಿನ ವ್ಯತ್ಯಾಸವಿಲ್ಲದೆ ಅಥವಾ ಅರಿವಿಲ್ಲದೆ ಒಂದು ಹಂತದಲ್ಲಿ ತನ್ನ ರಕ್ಷಣೆಯ ಸ್ವಾರ್ಥದಿಂದ ಕಾಡಿನ ಬದುಕಿನಲ್ಲಿ ತೊಡಗಿದ ಪರಿಣಾಮವಾಗಿ ಬೇಟೆ ಸಂಸ್ಕೃತಿಯ ಬದುಕು ಅವನದಾಯಿತು. ಬೇಟೆಯಿಂದ ಮೃಗ ಪಕ್ಷಿಗಳನ್ನು ಪಳಗಿಸಿ, ತನ್ನ ಬಳಗಕ್ಕೆ ಸೇರಿಸಿಕೊಂಡ ನಂತರ ಕಾಡಿನಲ್ಲೇ ಬೇಕಾದುದನ್ನು ಆಹಾರಕ್ಕೆ ಆಯ್ಕೆ ಮಾಡಿಕೊಂಡ. ಅಲ್ಲಿ ಆಹಾರ ಸಿಗದಾಗ ಮುಂದೆ ಹೋದ. ಈ ಹಿನ್ನೆಲೆಯಿಂದ ವಲಸೆ ಸಂಸ್ಕೃತಿ ಅವನ ಬದುಕಾಯಿತು. ಆದರೆ ಸಮಾಜದ ಬದಲಾವಣೆಗೆ ಅನುಗುಣವಾಗಿ ವಲಸೆ ವೃತ್ತಿಯಿಂದ ಒಂದೆಡೆ ನೆಲೆಸಿ ಬದುಕುವುದು ಮುಂದೆ ಬುಡಕಟ್ಟುಗಳಿಗೆ ಅನಿವಾರ್ಯವಾಯಿತು. ಹೀಗಾಗಿ ಬುಡಕಟ್ಟುಗಳು ಸಹಜವಾಗಿ ನಿಸರ್ಗಕ್ಕೆ ಒಗ್ಗಿಕೊಂಡು ತಮ್ಮನ್ನು ತಾವು ಸಂಪೂರ್ಣ ಪ್ರಕೃತಿಯ ಮಡಿಲಿಗೆ ಜೋತು ಬಿದ್ದರು. ಆದಿವಾಸಿಗಳು ನಿಸರ್ಗವನ್ನು ಬಿಟ್ಟು ಬದುಕಲಾರೆವು ಎಂಬ ಹಂತಕ್ಕೆ ಬಂದು ತಲುಪಿದರು. ಆದ್ದರಿಂದ ಕಾಡಿನಲ್ಲೇ ನಾಡು-ನಾಡಿನಲ್ಲಿಯೇ ಕಾಡು ರೂಪಗೊಂಡ ಬಾಳ್ವೆಯನ್ನು ಮೈಗೂಡಿಸಿಕೊಂಡಿದ್ದಾರೆ.

ಬುಡಕಟ್ಟು ಸಮುದಾಯಗಳ ಅಧ್ಯಯನ ದೃಷ್ಟಿಯಿಂದ ಕಾಡಿನಲ್ಲಿಯೇ ವಾಸ ಮಾಡುತ್ತಿರುವವರನ್ನು ಅವಲೋಕಿಸಿದರೆ ಬೆಟ್ಟ, ಗುಡ್ಡ, ಹೊಳೆ, ತೋಡು ಬಯಲು ಬಾನು ಅವರ ಮಡಿಲಾಗಿವೆ. ಬುಡಕಟ್ಟುಗಳು ಮನೆ ಕುಟುಂಬದ ಸದಸ್ಯರ ಜೊತೆ ತಾವು ಸಂಬಂಧಿಸಿದ ಹಾಡು, ಕುಣಿತ, ಪುರಾಣ ಕಥೆಗಳನ್ನು ಕಟ್ಟಿಕೊಂಡು ಸ್ವರ್ಗ ನರಕಗಳ ಕಲ್ಪನೆಯನ್ನು ಸೃಷ್ಟಿಸಿಕೊಂಡಿದ್ದಾರೆ. ಬುಡಕಟ್ಟುಗಳಲ್ಲಿ ವ್ಯಕ್ತಿಗಿಂತ ಸಮುದಾಯದ ಉಳಿವು ಮುಖ್ಯವಾಗಿರುತ್ತದೆ. ಆ ಮೂಲಕ ವ್ಯಕ್ತಿಯ ಉಳಿವು. ಆದ್ದರಿಂದ ಸಮುದಾಯದ ಇಂತಹ ಉಳಿವಿಗಾಗಿ ವಿವಿಧ ಕಟ್ಟಳೆಗಳ ಪಾಲನೆ ವಿಧಿನಿಷೇಧಗಳ ರಚನೆ ಗೋಚರಿಸುತ್ತದೆ. ಬುಡಕಟ್ಟುಗಳು ತಮ್ಮ ದುಡಿಮೆಯ ಜೊತೆಯಲ್ಲಿ ತಮ್ಮ ಶ್ರಮದ ಆಯಾಸಕ್ಕೆ ಪರಿಹಾರವನ್ನು ಕಂಡುಕೊಂಡಿದ್ದಾರೆ. ಯಾವುದೇ ಬುಡಕಟ್ಟುಗಳ ದುಡಿತದ ದಿನಗಳು ಮನರಂಜನೆಯ ರೂಪದ ದಿನಗಳಾಗಿ ರೂಪಗೊಂಡಿವೆ. ಇಲ್ಲಿ ಹಾಡು ಕುಣಿತ ಕುಚೋದ್ಯ ಅಣಕ, ಅಭಿನಯ, ವಿನೋದ ಜಾಣ್ಮೆ, ಪುರಾಣ, ಕಥೆ, ಚಿತ್ರ ಚಿತ್ತಾರ, ಕಲೆಗಳು ಎದ್ದು ಕಾಣುತ್ತವೆ. ಈ ರೀತಿಯ ಚಿಂತನೆಯು ಗೌಡಾಲು ಬುಡಕಟ್ಟಿನ ಸಂಶೋಧನೆಯ ದೃಷ್ಟಿಯಿಂದ ಮುಖ್ಯವಾಗಿದೆ. ಆದ್ದರಿಂದ ಗೌಡಾಲು ಸಮುದಾಯವು ತನ್ನದೆ ಆದ ಶ್ರೀಮಂತಿಕೆಯ ಬದುಕನ್ನು ಹೊಂದಿದೆ.

ಇಂದು ಬುಡಕಟ್ಟುಗಳ ಸಂಸ್ಕೃತಿಯ ಮೇಲೆ ವಸಾಹತುಶಾಹಿಯು ತನ್ನ ಗಾಢ ಪ್ರಭಾವವನ್ನು ಬೀರಿದೆ. ಆದ್ದರಿಂದ ಸ್ಥಳೀಯ ಸಂಸ್ಕೃತಿ, ದೇಶೀಯ ಸಂಸ್ಕೃತಿ ಎಲ್ಲವನ್ನು ಜಾಗತೀಕರಣದ ಮಿತಿಯಲ್ಲಿ

ನೋಡಬೇಕಾಗಿರುವುದು ವಿಪರ್ಯಾಸವಾಗಿದೆ. ಕಾಡಿನ ನಾಡಿನ ಮೌಲ್ಯಗಳ ಮೇಲೆ ನಗರ ಸಂಸ್ಕೃತಿಯು ವೇಗವಾಗಿ ಪ್ರಭಾವ ಬೀರುತ್ತಿದೆ. ಇದಕ್ಕೆ ಉದಾಹರಣೆಯಾಗಿ ಆಧುನಿಕ ಬದುಕಿನಲ್ಲಿ ಎಲ್ಲ ಸಂಸ್ಕೃತಿಯಿದೆ. ಆದರೆ ಈ ಸಂಸ್ಕೃತಿ ಮೌಲ್ಯಗಳು ಯಾರವು ಎಂಬ ಪ್ರಶ್ನೆ ಸಹಜವಾಗಿ ಚಿಂತನೆ ಮಾಡುವವರಿಗೆ ತಿಳಿಯಲೇಬೇಕಾಗಿದೆ.

ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವಾಗ ಬಹುಕಷ್ಟಕರವಾದ ಕೆಲಸವೆಂದರೆ ಬುಡಕಟ್ಟಿನ ಮೂಲವನ್ನು ವಿಶದಪಡಿಸುವುದು. ಅಂತೆಯೇ ಗೌಡಾಲುಗಳ ಮೂಲವನ್ನು ನಿಕರವಾಗಿ ಹೇಳುವುದು ಸುಲಭಸಾಧ್ಯವಲ್ಲದಿದ್ದರೂ ಕ್ಷೇತ್ರಕಾರ್ಯದಲ್ಲಿ ಪಡೆದ ಮಾಹಿತಿ ಮತ್ತು ಮೂಡಿಗೆರೆ ತಾಲ್ಲೂಕಿನ ಕಳಸದ ಕಲಶೇಶ್ವರ ದೇವಸ್ಥಾನದ ಅರ್ಚಕರ ಮಾಹಿತಿಯ ಆಧಾರದ ಮೇಲೆ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

'ಗೌಡಾಲು' ಸಮುದಾಯವು ಗೋವ (Gowa) ಎಂಬುದರಿಂದ ಉಗಮಗೊಂಡಿದೆ. 'ಗೋವು' ಎಂದರೆ ಗೋವ ಪಾಲಕನೆಂದರ್ಥ. 'ಗೋ' ಎಂದರೆ ಆಕಳು, ಗೋವುಗಳ ರಕ್ಷಕ ಗೋವನಾಗುವನು. ಹೀಗೆ ಗೋವು ಪಾಲಕರೇ ಗೌಡಾಲು ಆದರೆಂದು ತಿಳಿದುಬರುತ್ತದೆ. ಇನ್ನೊಂದು ಅರ್ಥದಲ್ಲಿ ಗೌಡ ಎಂದರೆ ಮುಖ್ಯಸ್ಥ ಎಂಬ ಅರ್ಥವೂ ಇದೆ. ಈ ಹಿನ್ನೆಲೆಯಿಂದ ಗೌಡಾಲುಗಳ ಸಾಮಾಜಿಕ ಸ್ಥಾನ-ಮಾನಗಳನ್ನು ಗುರುತಿಸುತ್ತದೆ.[1]

ಗೌಡಾಲು ಸಮಾಜದ ಮೂಲದ ವಿಚಾರವಾಗಿ ವಕ್ತೃಗಳು ಹೇಳಿದ ಮಾಹಿತಿಯ ಪ್ರಕಾರ ಗೌಡಾಲುಗಳು ಕಾಶಿಯಿಂದ ಬಂದವರಾಗಿದ್ದಾರೆ. ಕಸಶೇಶ್ವರ ದೇವಸ್ಥಾನದ ಬಿಟ್ಟಿ ಕೆಲಸದಲ್ಲಿ ತೊಡಗಿಕೊಂಡು ಆ ನಂತರ ಪ್ರಭುತ್ವದ ಸುಳಿಯಲ್ಲಿ ಸಿಕ್ಕು ಕಾಡು ಸೇರಿ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಗೌಡಾಲುಗಳು ಇಂದಿಗೂ ಬಿಲ್ಲು-ಬಾಣ, ಕತ್ತಿ-ಗುರಾಣಿಗಳನ್ನು ಪೂಜಿಸುತ್ತಾರೆ. ಬಿಲ್ಲು ವಿದ್ಯೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದಿದ್ದ ಗೌಡಾಲು ಕಾಡಿನಲ್ಲಿ ಸಿಗುವ ಪ್ರಾಣಿಗಳನ್ನು ಬೇಟೆಯಾಡುವ ಪರಿಪಾಟವಿರುವುದು ಇಂದಿಗೂ ಕಂಡುಬರುತ್ತದೆ.

ಗೌಡಾಲುಗಳು ಬುಡಕಟ್ಟಿನ ಎಲ್ಲ ಲಕ್ಷಣಗಳನ್ನು ಹೊಂದಿದ್ದು ಕಾಡಿನ ಮಧ್ಯೆ ಇರುವ ಸಮುದಾಯವಾಗಿದೆ. ಈಗಲು ಯಾವುದೇ ಆಧುನಿಕ ಸಂಪರ್ಕದ ಯೋಜನೆಗಳ ಲಾಭವನ್ನು ಪಡೆಯದೆ ಬದುಕನ್ನು ಸಾಗಿಸುವ ಬುಡಕಟ್ಟು ಸಮುದಾಯವಾಗಿದೆ.

ಗೌಡಾಲು ಬುಡಕಟ್ಟಿನ ಸ್ಥಿತಿಗತಿಯ ಬಗ್ಗೆ ಯಾರೂ ಮುಖಕೊಟ್ಟು ನೋಡದೆ ಯಾರಿಗೂ ಗೊತ್ತಿರದ ಸಮುದಾಯವೊಂದು ತನಗೆ ತಿಳಿದಂತೆ ಬದುಕನ್ನು ಕಟ್ಟಿಕೊಂಡಿದೆ. ಗೌಡಾಲು ಸಮುದಾಯದ ವಕ್ತೃಗಳಾದ ಶ್ರೀನಿವಾಸಗೌಡ ಮತ್ತು ಇತರರನ್ನು ಸಂದರ್ಶನ ಮಾಡಿ ಮೂಲದ ವಿಚಾರವಾಗಿ ಕೇಳಿದಾಗ ''ನಮ್ಮ ಬುಡಕಟ್ಟು ಕಾಶಿಯಿಂದ ಮೂಡಿಗೆರೆಯ ಕಳಸದ ಕಲಶೇಶ್ವರ ದೇವಸ್ಥಾನಕ್ಕೆ ಬಿಟ್ಟಿ ಕೆಲಸ ಮಾಡಲು ಬಂದವರಾಗಿದ್ದಾರೆ'' ಎಂದು ಹೇಳುತ್ತಾರೆ. ಗೌಡಾಲು ಸಮುದಾಯವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಒಂದಾನೊಂದು ಕಾಲದಲ್ಲಿ ಕರ್ನಾಟಕಕ್ಕೆ ವಲಸೆ ಬಂದಿರುವುದು ತಿಳಿಯುತ್ತದೆ. ಅಲ್ಲದೆ ಕಾಡಿನಲ್ಲಿ ಸಿಗುವ ಗೆಡ್ಡೆ ಗೆಣಸುಗಳಿಂದ ಬದುಕನ್ನು ಕಟ್ಟಿಕೊಂಡಿದ್ದಾರೆ. ಗೌಡಾಲು ಬುಡಕಟ್ಟು ಸಾಮಾಜಿಕ ಸ್ತರವಿನ್ಯಾಸಕ್ಕೆ ಅನುಗುಣವಾಗಿ ಆಧುನಿಕ ಸಮಾಜದ ರೀತಿ ರಿವಾಜುಗಳನ್ನು ಒಪ್ಪಿಕೊಳ್ಳುತ್ತಾ ಬದುಕಿನಲ್ಲಿ ರೂಪಾಂತರಗೊಳ್ಳುತ್ತಿದ್ದಾರೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದಂತೆ ಹಾಗೂ ಅರಿವಿಗೆ ಬಂದಂತೆ ಗೌಡಾಲುಗಳು ಒಂದು ವಿಶಿಷ್ಟ ಹಬ್ಬವನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ ರಾಜರಂತೆ ಕತ್ತಿ, ಗುರಾಣಿ ಹಾಗೂ ಯುದ್ಧದ ಸಾಮಗ್ರಿಗಳನ್ನು

ತಮ್ಮ ದೈವದ ಮನೆಗೆ ಹೋಗಿ ದೈವದ ಮುಂದೆ ಇಟ್ಟು ಪೂಜೆ ಮಾಡುತ್ತಾರೆ. ಅಲ್ಲದೆ ಕತ್ತಿ ಗುರಾಣಿಗಳನ್ನು ಕೈಯಲ್ಲಿ ಹಿಡಿದುಕೊಂಡು ಸೊಪ್ಪಿನಿಂದ ಮಾಡಿದ ಕುದುರೆಗಳನ್ನು ಅಕ್ಕಪಕ್ಕದವರು ಹಿಡಿದುಕೊಂಡು ಬಾಜ ಬಜಂತ್ರಿಯವರೊಡಗೂಡಿ ಅವರಲ್ಲಿಯೇ ಇರುವ ೩ ಕೂಡಿಗೆಯ ಯಜಮಾನರಿಗೆ ಹೊಸದಾದ ಬಿಳಿಯ ಕಚ್ಚೆ ಪಂಚೆ, ಶಾಲು, ಬಿಳಿಯ ಶರ್ಟ್ ಹಾಕಿಸಿ ತಲೆಗೆ ರಾಜನು ಧರಿಸುವ ಪೇಟವನ್ನು ಹಾಕಿಸಿಕೊಂಡು ಮೂರು ಕೂಡಿಗೆಯ ಯಜಮಾನನಿಗೆ ರಾಜನಿಗೆ ಹಿಡಿಯುವ ಛತ್ರಿಯನ್ನು ಹಿಡಿದುಕೊಂಡು ಅಕ್ಕ-ಪಕ್ಕದಲ್ಲಿ ಸೇವಕರಂತೆ ಇಡೀ ರಾತ್ರಿ ಮೆರವಣಿಗೆ ಹೋಗಿ ಬೆಳಗಿನ ಜಾವ ಐದು ಗಂಟೆಯ ಸುಮಾರಿಗೆ ಕಳಸದ ಕಲಶೇಶ್ವರ ದೇವಸ್ಥಾನದ ದ್ವಾರಬಾಗಿಲಿಗೆ ಬಂದು ನಿಲ್ಲುತ್ತಾರೆ. ಅಷ್ಟು ಹೊತ್ತಿಗೆ ಕಲಶೇಶ್ವರನು ಪಲಕ್ಕಿಯಲ್ಲಿ ಕುಳಿತು ಗೌಡಾಲು ಬುಡಕಟ್ಟಿನ ಮೆರವಣಿಗೆಯನ್ನು ಅಕ್ಷತೆಕಾಳು ಮತ್ತು ಪತ್ರೆಯನ್ನು ಕೊಡುವುದರ ಮೂಲಕ ಕುಶಲವನ್ನು ವಿಚಾರಿಸಿ ಅವರೊಂದಿಗೆ ಮೆರವಣಿಗೆ ಹೊರಡುತ್ತಾನೆ. ಮುಂದೆ ಯುದ್ಧದ ಪರಿಯಲ್ಲಿ ಕಲಶೇಶ್ವರನ ಮುಂದೆ ಕುದುರೆಗಳನ್ನು ಹಿಡಿದವರು ವಾದ್ಯಗಳ ಮಧ್ಯೆ ಕುಣಿದು ಕುಣಿದು ಓಡಿ ಓಡಿಹೋಗಿ ಬಂದು ಕುದುರೆಗಳನ್ನು ಬಲಿಕೊಡುತ್ತಾರೆ. ಆದ್ದರಿಂದ ಗೌಡಾಲು ಬುಡಕಟ್ಟಿನ ಮೂಲದ ಬಗ್ಗೆ ತಿಳಿದಿರುವುದೇನೆಂದರೆ, ಒಂದು ಕಾಲದಲ್ಲಿ ಕಲಶೇಶ್ವರನ ಪೂಜಾರಿಗಳು ಗೌಡಾಲು ಬುಡಕಟ್ಟಿನವರಾಗಿರಬೇಕು. ಇಡೀ ಕಲಶೇಶ್ವರ ನಿರ್ವಹಣೆಯನ್ನು ಗೌಡಾಲು ಬುಡಕಟ್ಟಿನವರು ವಹಿಸಿಕೊಂಡಿದ್ದರು ಎಂದು ಅರ್ಥವಾಗುತ್ತದೆ. ಇದಕ್ಕೆ ಪುಷ್ಟಿ ನೀಡುವುದು ಯಾವುದೆಂದರೆ, ಕಲಶೇಶ್ವರನ ಬಿಟ್ಟಿ ಕೆಲಸ ಈಗಲೂ ಯಾವುದೇ ಹಣ ಪಡೆಯದೆ ದೇವರ ತೇರು ಕಟ್ಟುವುದರಿಂದ ದೇವಸ್ಥಾನದ ಎಲ್ಲ ಕೆಲಸವನ್ನು ಇವರೇ ಮಾಡುತ್ತಾರೆ. ಆದರೆ ಮಾಡಿದ ಕೆಲಸಕ್ಕೆ ಉಪ್ಪನ್ನು ಮಾತ್ರ ತೆಗೆದುಕೊಳ್ಳುತ್ತಾರೆ. ಉಪ್ಪು ಏಕೆ ತೆಗೆದುಕೊಳ್ಳುತ್ತಾರೆಂದರೆ ಉಪ್ಪಿನ ಋಣ ಯಾರಿಗೂ ತೀರಿಸಲಿಕ್ಕೆ ಆಗದೆ ಇರುವುದು ಎನ್ನುತ್ತಾರೆ. ಆದ್ದರಿಂದ ಗೌಡಾಲು ಬುಡಕಟ್ಟಿನ ಮೂಲದ ಬಗ್ಗೆ ಗೌಡಾಲುಗಳಲ್ಲಿಯೇ ಸರಿಯಾದ ತಿಳುವಳಿಕೆಯಿಲ್ಲವಾಗಿದೆ. ಆದರೆ ಇಲ್ಲಿ ಚರ್ಚಿಸಲೇಬೇಕಾದ ಸಂಗತಿಯೆಂದರೆ ''ಕ್ರಿ.ಪೂ. ೬ ಮತ್ತು ೭ನೇ ಶತಮಾನಗಳಿಂದ ಪಶುಪಾಲಕರಾಗಿ ಆರ್ಯರು ಬಂದ ಮೇಲೆ ವೈಷ್ಣವ, ಜೈನ ಮತ್ತು ಶೈವ ಪಂಥಗಳು ಈ ಭಾಗಗಳಲ್ಲಿ ಹುಟ್ಟಿಕೊಂಡ ಮೇಲೆ ಮೇಲು ದರ್ಜೆಯ ಕೆಲಸಗಳು ಮತ್ತು ಮೇಲು ದರ್ಜೆಯ ಅಧಿಕಾರಗಳೆಲ್ಲವೂ ಬುಡಕಟ್ಟು ಸಮುದಾಯಗಳಿಂದ ಕೈಬಿಟ್ಟಿರುವುದು ಗೋಚರಿಸುತ್ತದೆ.''[೨] ಈ ಪಂಥಗಳು ಗೌಡಾಲು ಮತ್ತು ಇತರ ಬುಡಕಟ್ಟುಗಳ ಹಿಡಿತದಲ್ಲಿದ್ದ ದೇವರು ಮತ್ತು ದೇವಸ್ಥಾನಗಳನ್ನು ಹಾಗೂ ಅವರಲ್ಲಿದ್ದ ಸಂಪತ್ತನ್ನು ತಮ್ಮದಾಗಿಸಿಕೊಂಡು ಗುಲಾಮರನ್ನಾಗಿ ಮಾಡಿಕೊಂಡಿರುವುದು ತಿಳಿಯುತ್ತದೆ.

ಗೌಡಾಲು ಬುಡಕಟ್ಟಿನವರು ಕಾಶಿಯಿಂದ ಬಂದವರಾಗಿದ್ದು ಕರ್ನಾಟಕದಲ್ಲಿರುವ ಇತರ ಬುಡಕಟ್ಟುಗಳಿಗಿಂತ ಕಡಿಮೆ ಜನಸಂಖ್ಯೆಯುಳ್ಳವರಾಗಿದ್ದಾರೆ. ಕಳಸದ ಸುತ್ತ ಮುತ್ತ ಅನೇಕ ಅಗ್ರಹಾರಗಳಿರುವುದನ್ನು ಗಮನಿಸಿದರೆ ಪ್ರಭುತ್ವವೆನ್ನುವುದು ಎಷ್ಟರ ಮಟ್ಟಿಗೆ ಗೌಡಾಲುಗಳನ್ನು ಆಳ್ವಿಕೆಗೆ ಒಳಪಡಿಸಿಕೊಂಡಿದೆಯೆಂಬುದು ತಿಳಿಯುತ್ತದೆ. ಈ ಹಿನ್ನೆಲೆಯನ್ನು ಪರಿಶೀಲಿಸಿದರೆ ಈ ದೇಶದ ಯಾವುದೇ ಬುಡಕಟ್ಟು ಸಮುದಾಯಗಳು ಪ್ರಭುತ್ವದ ಸುಳಿಗೆ ಸಿಕ್ಕು ತನ್ನ ಮೂಲ ಬದುಕನ್ನು ಮರೆತುಬಿಟ್ಟಿವೆ ಎಂದರೆ ವಿಪರ್ಯಾಸವಾಗಲಾರದು.

## ೨.೧. ಗೌಡಾಲು ಸಮುದಾಯದ ಭೌಗೋಳಿಕ ಪರಿಸರ ಮತ್ತು ಜನಸಂಖ್ಯೆ

ಚಿಕ್ಕಮಗಳೂರು ಜಿಲ್ಲೆಯು ಬೌಗೋಳಿಕ ಕರ್ನಾಟಕದ ಇತರೆ ಜಿಲ್ಲೆಗಳಲ್ಲೂ ಹೊಂದಿರುವಂತಹ ಇತಿಹಾಸವನ್ನು ತನ್ನಲ್ಲಿ ಇಟ್ಟುಕೊಂಡಿದೆ. ಆದ್ದರಿಂದ ಇಲ್ಲಿ ಪುರಾತನ ಶಿಲಾಯುಗದ ಮಾನವನು ಉಪಯೋಗಿಸುತ್ತಿದ್ದ ಉಪಕರಣಗಳು ಕಡೂರು ಪ್ರಾಂತ್ಯದ ಸಿಡಘಟ್ಟ ಹಾಗೂ ಲಿಂಗದಹಳ್ಳಿಗಳಲ್ಲಿ ಅಲ್ಲದೆ ಇನ್ನೂ ಮುಂದಿನ ಕಾಲದ ವಸ್ತುಗಳು ಈ ಜಿಲ್ಲೆಯ ಮಾನವರ ಹಾಗೂ ಸಕ್ಕರೆ ಪಟ್ಟಣಗಳಲ್ಲಿ ದೊರೆಯುತ್ತವೆ ಎಂಬುದು ಇತಿಹಾಸದಿಂದ ತಿಳಿದ ಮಾಹಿತಿಯು ಇಂದು ಅಧ್ಯಯನಕ್ಕೆ ಪೂರಕವಾಗಿದೆ.

''ಈ ಜಿಲ್ಲೆಗೆ ದಂತಕಥೆಗಳೂ ಕೂಡ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಇಲ್ಲಿ ವಿಷ್ಣುವಿನ ಅವತಾರವಾದ ವರಾಹಸ್ವಾಮಿಯು ಹಿರಣ್ಯಾಕ್ಷನ ಸಂಹಾರದ ನಂತರ ಗಂಗಾಮೂಲ ಪರ್ವತದಲ್ಲಿ ವಿಶ್ರಮಿಸಿದ್ದನಾದ್ದರಿಂದ ಇದಕ್ಕೆ ವರಾಹ ಪರ್ವತ ಎಂಬ ಹೆಸರು ಬಂದಿದೆ. ಇವನ ಬೆವರಿನಿಂದ ತುಂಗಾ, ಭದ್ರ ಹಾಗೂ ನೇತ್ರಾವತಿ ನದಿಗಳು ಉಗಮವಾದವು ಎಂದು ತಿಳಿಯುತ್ತದೆ. ಅಲ್ಲದೆ ದಕ್ಷಬ್ರಹ್ಮನು ಹರಿಹರಪುರದಲ್ಲಿ ಯಜ್ಞಮಾಡಿದನು. ಅಗಸ್ತ, ಮೈಕಂಡು, ಮಾರ್ಕಂಡೇಯ, ಗೌತಮ, ವಿಭಾಂಡಕ ಹಾಗೂ ಋಷ್ಯಶೃಂಗ ಋಷಿಗಳು ಇಲ್ಲಿ ಆಶ್ರಮ ಮಾಡಿಕೊಂಡಿದ್ದರ ಬಗ್ಗೆ ತಿಳಿಯಲಾಗಿದೆ.''[১] ಇಲ್ಲಿ ಪಾಂಡವರು ಕೂಡ, ತಮ್ಮ ವನವಾಸದ ಅವಧಿಯಲ್ಲಿ ಕೆಲಕಾಲ ಮಚ್ಚೇರಿ(ಮತ್ಸ್ಯಾಪುರ)ಯಲ್ಲಿದ್ದರು. ಜನಮೇಜಯನು ಹಿರೇಮಗಳೂರಿನಲ್ಲಿ ಸರ್ಪಯಾಗವನ್ನು ಮಾಡಿರುವನು. ಆದ್ದರಿಂದ ಗುರುದತ್ತಾತ್ರೇಯನು ಇಲ್ಲಿ ತಪಸ್ಸನ್ನಾಚರಿಸಿದನು. ಆದ್ದರಿಂದಲೇ ಈಗಿನ ದತ್ತಪೀಠವು ಬಾಬಾಬುಡನ್‌ಗಿರಿಯಲ್ಲಿದೆ.

ಈ ಜಿಲ್ಲೆಯಲ್ಲಿ ಬನವಾಸಿಯ ಕದಂಬರು ೩೪೦ರಿಂದ ೫೬೫ರಲ್ಲಿ ಆಳ್ವಿಕೆ ಮಾಡಿದ್ದಾರೆ ಅಲ್ಲದೆ ಮಾನ್ಯಖೇಟದ ರಾಷ್ಟ್ರಕೂಟರು ೭೫೭ರಿಂದ ೯೭೩ರಲ್ಲಿ ಹಾಗೂ ವಿಜಯನಗರದ ಅರಸರು ಮುಂತಾದ ಸಾಮ್ರಾಟರ ರಾಜ್ಯಗಳ ಭಾಗವಾಗಿರುವುದು ತಿಳಿಯುತ್ತದೆ. ಇಲ್ಲಿ ತಲಕಾಡಿನ ಗಂಗರು, ಕಂಚಿಯ ಪಲ್ಲವರು ತಮ್ಮ ತಮ್ಮ ಉತ್ತುಂಗದ ವೇಳೆಯಲ್ಲಿ ಈ ಜಿಲ್ಲೆಯನ್ನು ತಮ್ಮ ಅಧೀನದಲ್ಲಿರಿಸಿಕೊಂಡಿದ್ದರು ಎಂಬುದು ಇತಿಹಾಸದಿಂದ ತಿಳಿದ ಹಿನ್ನೆಲೆಯಲ್ಲಿಯೇ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿದಾರರು ಕೊಟ್ಟ ಮಾಹಿತಿಯು ಆಧಾರವಾಗಿ ನಿಲ್ಲುತ್ತದೆ. ಇಲ್ಲಿ ಅಂಗಡಿ ಹತ್ತಿರದ ಸೂಸೆವೂರು ಹೊಯ್ಸಳ ಸಾಮ್ರಾಜ್ಯ ಸ್ಥಾಪಕನ ಊರಾಗಿದ್ದದ್ದು, ತಿಳಿಯುತ್ತದೆ. ಅಲ್ಲದೆ ಹೊಯ್ಸಳರು ಕಾಲಾಂತರದಲ್ಲಿ ತಮ್ಮ ರಾಜಧಾನಿಯನ್ನು ಬೇಲೂರಿಗೆ, ನಂತರ ಹಳೇಬೀಡಿಗೆ ಸ್ಥಳಾಂತರಿಸಿದ ಬಗ್ಗೆ ಕುರುಹುಗಳು ಇಲ್ಲಿ ದೊರೆಯುತ್ತವೆ. ೧೩೪೬ರಲ್ಲಿ ವಿಜಯನಗರದ ಅರಸರು, ಶೃಂಗೇರಿಗೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಯ ಪೋಷಣೆಗೆ ೯ ಹಳ್ಳಿಗಳನ್ನು ದತ್ತು ಕೊಟ್ಟಿದ್ದರ ಬಗ್ಗೆ ತಿಳಿಯುವುದಲ್ಲದೆ ಕೆಳದಿ ಮತ್ತು ಸಂತೆಬೆನ್ನೂರುಗಳ ನಾಯಕರು ಈ ಜಿಲ್ಲೆಯನ್ನು ಆಳಿದುದರ ಬಗ್ಗೆ ಕ್ಷೇತ್ರಕಾರ್ಯದಲ್ಲಿ ವ್ಯಕ್ತಿ ಅಧ್ಯಯನದಿಂದ ಗಮನಿಸಬಹುದಾಗಿದೆ. ಅಲ್ಲದೆ ೧೫೩೬ರಲ್ಲಿ ರಣದುಲ್ಲಾಖಾನನು ಜಿಲ್ಲೆಯ ಅರಸರನ್ನು ತರೀಕೆರೆಯ ತನಕ ನಿಯಂತ್ರಿಸಿದ್ದಾನೆ. ಈ ಜಿಲ್ಲೆಯನ್ನು ೧೭೬೯ರಲ್ಲಿ ಹೈದರ್ ಅಲಿಯು ಮೈಸೂರು ರಾಜಕ್ಕೆ ಸೇರ್ಪಡಿಸಿದ್ದಾನೆ. ಆದ್ದರಿಂದ ೧೭೯೯ರ ನಂತರ ಈ ಜಿಲ್ಲೆಯು ಬ್ರಿಟಿಷರ ಆಡಳಿತದಿಂದಾಗಿ

ಮೈಸೂರಿನ ರಾಜ ಒಡೆಯರಿಗೆ ಸೇರಿದೆ. ನಂತರ ಅನೇಕ ರಾಜಕೀಯ ಬದಲಾವಣೆಗಳ ನಡುವೆ ೧೮೬೫ರಲ್ಲಿ ಕಡೂರು ಜಿಲ್ಲೆ ಎಂದು ಅಸ್ತಿತ್ವದಲ್ಲಿ ಬಂದು ಪುನಃ ೧೯೪೭ರಲ್ಲಿ ಚಿಕ್ಕಮಗಳೂರು ಜಿಲ್ಲೆಯಾಗಿದೆ.

ಈ ಜಿಲ್ಲೆಯೂ ಪೂರ್ತಿಯಾಗಿ ''ಮಲೆನಾಡು'' ಭಾಗದಲ್ಲಿ ಇದೆ. ಪಶ್ಚಿಮದಲ್ಲಿ ಪಶ್ಚಿಮ ಘಟ್ಟಗಳು ಅಥವಾ ಸಹ್ಯಾದ್ರಿ ಬೆಟ್ಟ ಶ್ರೇಣಿಗಳು, ಚಿಕ್ಕಮಗಳೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ನಡುವೆ ಬರುತ್ತವೆ. ಮೂಡಿಗೆರೆ ಶೃಂಗೇರಿ ಕಡೆಗೆ ಭೂಭಾಗವು ಎತ್ತರವಾಗಿದ್ದು, ಪೂರ್ವಕ್ಕೆ ಸೇರಿನಂತೆ ಇಳಿಜಾರಾಗುತ್ತಾ ಬಂದು ಕಡೂರು, ತರೀಕೆರೆಗಳ ಕಡೆಗೆ ಮೈದಾನದ ಭಾಗವಾಗಿರುತ್ತದೆ. ಈ ಜಿಲ್ಲೆಯ ವಾಯುವ್ಯದಲ್ಲಿ ಅರ್ಧವರ್ತುಳಾಕೃತಿಯ ಬಾಬಾಬುಡನ್‌ಗಿರಿ ಶ್ರೇಣಿಗಳಿವೆ. ಇವುಗಳಲ್ಲಿ ಹೆಬ್ಬೆಗುಡ್ಡ ೧೩೩೪ ಮೀಟರ್ ಎತ್ತರವಿದೆ. ಬಾಬಾಬುಡನ್‌ಗಿರಿ ೧೮೭೫ ಮೀಟರ್ ಎತ್ತರವಿದೆ. ಕರ್ನಾಟಕದಲ್ಲಿಯೇ ಅತಿ ಎತ್ತರವಾದ ಮುಳ್ಳಯ್ಯನಗಿರಿಯು ಇಲ್ಲಿರುವುದು ಜಿಲ್ಲೆಯ ಐತಿಹಾಸಿಕತೆಯನ್ನು ಸಾರುವಂತಾಗಿದೆ. ಗಿರಿಯು ೧೯೨೩ ಮೀಟರ್ ಎತ್ತರವಿದೆ. ಶ್ರೇಣಿಗಳ ಮಧ್ಯದಲ್ಲಿ ಜಾಗರ ಕಣಿವೆ ಇದೆ. ಇಲ್ಲಿ ವಿಶಿಷ್ಟತೆಯೆಂದರೆ ಬಲ್ಲಾಳರಾಯನದುರ್ಗ ಮತ್ತು ಮೆತ್ತಿಗುಡ್ಡ ೧೬೫೯ ಮೀಟರ್ ಎತ್ತರವಿರುವ ಶ್ರೇಣಿಗಳ ಮಧ್ಯದಿಂದ ಭದ್ರಾನದಿಯು ಹುಟ್ಟಿ ಹರಿಯುತ್ತಿದೆ. ತುಂಗಾ ನದಿಯು ಮೆತ್ತಿಗುಡ್ಡ ಶ್ರೇಣಿಯ ಉತ್ತರದ ಕಡೆ ಹರಿಯುತ್ತದೆ. ಈ ಜಿಲ್ಲೆಯಲ್ಲಿ ಕಲ್ಹತ್ತಗಿರಿ ೧೮೭೭ ಮೀಟರ್, ಕುದುರೆಮುಖ ೧೮೯೨ ಅಡಿ, ವೊಡ್ಡಿನಸಗುಡ್ಡ ೧೫೨೭ ಮೀಟರ್, ಬಲ್ಲಾಳರಾಯನದುರ್ಗ ೧೫೦೭ ಮೀಟರ್, ಗಂಗಾಮೂಲ ೧೪೫೮ ಮೀಟರ್, ಲಕ್ಕೆಗುಡ್ಡ ೧೪೨೧ ಮೀಟರ್, ಶಕುನಗಿರಿ ೧೪೮೯ ಮೀಟರ್‌ನಷ್ಟು ಎತ್ತರವಾಗಿರುವ ಇತರೇ ಮುಖ್ಯ ಶಿಖರಗಳಾಗಿವೆ. ಆದ್ದರಿಂದ ಇಂತಹ ಜಿಲ್ಲೆಯನ್ನು ಗೌಡಾಲು ಸಮುದಾಯ ತನ್ನ ವಾಸದ ನೆಲೆಯಾಗಿ ಮಾಡಿಕೊಂಡಿದೆ.

**ಮಳೆ ಉಷ್ಣತಾಮಾನ ಇತ್ಯಾದಿ**

ಜಿಲ್ಲೆಯ ವಾತಾವರಣವು ಹೆಚ್ಚಾಗಿ ತಂಪಾಗಿದ್ದು ಹಿತಕರವಾಗಿರುತ್ತದೆ. ಬೇಸಿಗೆಯಲ್ಲಿ ಕೂಡ ಮುಖ್ಯವಾಗಿ ಸಾಯಂಕಾಲ ಮತ್ತು ರಾತ್ರಿಯ ಹೊತ್ತಿನಲ್ಲಿ ತಂಪಾಗಿಯೇ ಇರುತ್ತದೆ. ಈ ಜಿಲ್ಲೆ ಹೆಚ್ಚು ಮಳೆ ಬೀಳುವ ಭಾಗವಾಗಿದೆ. ಮಾನ್ಸೂನ್ ಕಾಲದ ಮಳೆಯು ೨೦೦೦-೩೦೦೦ ಮಿ.ಮೀಟರ್‌ರವರೆಗೆ ಬೀಳುತ್ತದೆ. ಪಶ್ಚಿಮದ ಭಾಗದಲ್ಲಿ ಉದಾಹರಣೆಗೆ ಶೃಂಗೇರಿ, ಕೊಪ್ಪ, ಮೂಡಿಗೆರೆಗಳ ಕಡೆಗೆ ೩೦೦೦ ಮಿ.ಮೀಟರ್‌ಗಿಂತ ಹೆಚ್ಚಾಗಿದೆ. ಪೂರ್ವದ ಕಡೆಗೆ ಕ್ರಮೇಣ ಕಡಿಮೆಯಾಗಿರುತ್ತದೆ. ಅಜ್ಜಂಪುರದ ಕಡೆಗೆ ೭೫೦ ಮಿ.ಮೀಕ್ಕಿಂತಲೂ ಮಳೆ ಕಡಿಮೆಯಾಗಿದ್ದು ಬಾಳೆಹೊನ್ನೂರಿನ ಕಡೆಗೆ ೧೨೨ ದಿನ ಮಳೆ ಬಿದ್ದರೆ, ಕಡೂರಿನ ಕಡೆಗೆ ೪೫ ದಿನ ಮಳೆ ಬೀಳುತ್ತದೆ. ಜಿಲ್ಲೆಯಲ್ಲಿ ಸರಾಸರಿ ೯೦-೯೨ ದಿನ ಮಳೆ ಬೀಳುತ್ತದೆ. ಈ ಜಿಲ್ಲೆಯಲ್ಲಿ ಉಷ್ಣತಾಮಾನ ಸಾಧಾರಣ ಎಂದು ಹೇಳಬಹುದು. ಮಾರ್ಚ್‌ನಿಂದ ಮೇ ತಿಂಗಳವರೆಗೆ ಬೇಸಿಗೆ ಇದ್ದು ಅತಿ ಹೆಚ್ಚೆಂದರೆ ಉಷ್ಣತೆ ೩೦-೩೨ ಡಿಗ್ರಿ ಸೆ. ಇರುತ್ತದೆ. ಅದೇ ಕಾಲದ ರಾತ್ರಿಯಲ್ಲಿ ಉಷ್ಣತೆ ೧೯-೨೦ ಡಿಗ್ರಿಸೆ. ಇರುತ್ತದೆ. ಚಳಿಗಾಲದಲ್ಲಿ ಹಗಲಿನ ಉಷ್ಣತಾಮಾನ ೨೨-೨೪ ಡಿಗ್ರಿಸೆ. ಇದ್ದರೆ ರಾತ್ರಿ ೧೦ ಡಿಗ್ರಿಸೆ.ಕ್ಕಿಂತ ಕಡಿಮೆ ಇರುವುದು.

## ನದಿಗಳು

ತುಂಗಾ ಹಾಗೂ ಭದ್ರಾ ನದಿಗಳು ಜಿಲ್ಲೆಯಲ್ಲಿ ಹರಿಯುವ ಮುಖ್ಯ ನದಿಗಳಾಗಿವೆ. ಭದ್ರಾ ನದಿಗೆ ಅಣೆಕಟ್ಟು ಕಟ್ಟಲಾಗಿದ್ದು, ಇದರ ಜಲಾಶಯದಿಂದ ನೀರಾವರಿ ಹಾಗೂ ವಿದ್ಯುತ್ ಸರಬರಾಜು ಮಾಡಲಾಗುತ್ತದೆ. ಈ ನದಿಗಳು ಪಶ್ಚಿಮದ ವರಾಹ ಪರ್ವತ ಶ್ರೇಣಿಗಳಲ್ಲಿ ಉದಯಿಸುತ್ತವೆ. ಹೇಮಾವತಿ ನದಿಯು ಮೂಡಿಗೆರೆಯ ಹತ್ತಿರ ಹುಟ್ಟುತ್ತದೆ. ವೇದಾ ಮತ್ತು ಅವತಿ ನದಿಗಳು ಬಾಬಾಬುಡನ್‌ಗಿರಿಯ ಪೂರ್ವ ಭಾಗದಲ್ಲಿ ಜನಿಸುತ್ತವೆ. ಇವೆರಡು ನದಿಗಳು ಮುಂದೆ ಕಡೂರಿನ ಹತ್ತಿರ ಸೇರಿ, ವೇದಾವತಿ ನದಿಯಾಗುತ್ತದೆ. ಯಗಚಿ ನದಿ ಕೂಡ ಬಾಬಾಬುಡನ್‌ಗಿರಿಯ ದಕ್ಷಿಣ ಭಾಗದಲ್ಲಿ ಜನಿಸಿ ಹಾಸನದ ಕಡೆಗೆ ಹರಿಯುತ್ತದೆ.

## ಭೂಗರ್ಭ

ಮುಖ್ಯವಾಗಿ ಆರ್ಕೇಯಿಯನ್ ಷಿಪ್ಸ್ ಹಾಗೂ ನೀಸ್‌ಗಳಿಂದ ಈ ಜಿಲ್ಲೆಯ ಭೂಗರ್ಭ ನಿರ್ಮಿತವಾಗಿದೆ. ಕುದುರೆಮುಖ, ಗಂಗಾಮೂಲ, ಕೊಪ್ಪ ಹಾಗೂ ಬಾಬಾಬುಡನ್‌ಗಿರಿಗಳಲ್ಲಿ ಧಾರವಾಡದ ಷಿಪ್ಸ್‌ಗಳ ಪಟ್ಟಿಗಳಿದ್ದು ಇವು ಜಿಲ್ಲೆಯ ಸುಮಾರು ಅರ್ಧ ಭಾಗವನ್ನು ಆವರಿಸಿವೆ. ಉಳಿದೆಲ್ಲ ಭಾಗ ದ್ವೀಪಕಲ್ಪದ ಕಣಶಿಲೆಗಳ ನೀಸ್ ಸಂಕೀರ್ಣದಿಂದ ಆವೃತಗೊಂಡಿದೆ.

## ಖನಿಜಗಳು

ಕಳಸಾಪುರ ಅರಣ್ಯ ಪ್ರದೇಶದಲ್ಲಿ ಯುರೇನಿಯಮ್, ಕಾಗೆ ಬಂಗಾರ, ತುಂಗಭದ್ರಾ ರಾಜ್ಯ ಕಾಡುಗಳಲ್ಲಿ (ನೈಋತ್ಯದ ಭಾಗ) ಕಬ್ಬಿಣ, ಕೊಪ್ಪ, ಶೃಂಗೇರಿಗಳ ಪರಿಸರದಲ್ಲಿ ಕಾಯನೈಟ್, ತರೀಕೆರೆ ಲಕ್ಕವಳ್ಳಿಗಳ ಕಡೆಗೆ ಆಸ್‌ಬೆಸ್ಟಾಸ್, ಅಜ್ಜಂಪುರದ ಹತ್ತಿರ ಚಿನ್ನ ಮುತಾದ ಅದಿರುಗಳು ಜಿಲ್ಲೆಯಲ್ಲಿ ದೊರೆಯುತ್ತವೆ.

## ಮಣ್ಣುಗಳು

ಈ ಜಿಲ್ಲೆಯಲ್ಲಿ ಸುಮಾರು ಮೂರು ತರಹದ ಮಣ್ಣುಗಳಿವೆ. ನೈಋತ್ಯದ ಗಡಿಗುಂಟ ಪರ್ವತ ಶ್ರೇಣಿಗಳಿವೆ. ಅಲ್ಲಿ ವ್ಯವಸಾಯಕ್ಕೆ ಉಪಯುಕ್ತವಾದ ಮಣ್ಣುಗಳಿಲ್ಲ. ಅಲ್ಲಿಂದ ಮುಂದೆ ಈಶಾನ್ಯದ ಗಡಿಯವರೆಗೆ ಮೊದಲರ್ಧ ಭಾಗ ಜೇಡಿಮಿಶ್ರಿತ ಕೆಂಪು, ನಂತರ ಮರಳುಮಿಶ್ರಿತ ಕೆಂಪು ಮಣ್ಣುಗಳಿವೆ. ಈಶಾನ್ಯದ ಗಡಿಯಲ್ಲಿ ಕೊಂಚ ಕಪ್ಪುಮಿಶ್ರಿತ ಕೆಂಪು ಮಣ್ಣುಗಳಿವೆ. ಕಡೂರು ಅರಸೀಕೆರೆ ಭಾಗಗಳಲ್ಲಿ ಹತ್ತಿ, ಸೂರ್ಯಪಾನ, ರಾಗಿ, ಕಬ್ಬು ಮತ್ತು ಭತ್ತ ಬೆಳೆಯುತ್ತಾರೆ. ಇಲ್ಲಿಂದ ಪಶ್ಚಿಮದ ಕಡೆಗೆ ಹೋದಂತೆ ಅರಣ್ಯ ಹೆಚ್ಚಿದ್ದು, ಅಲ್ಲೆಲ್ಲ ಕಾಫಿ, ಮೆಣಸು, ಏಲಕ್ಕಿ ದಾಲಚಿನ್ನಿ ಮುಂತಾದವು ಚೆನ್ನಾಗಿ ಬೆಳೆಯುತ್ತಾರೆ. ಆದ್ದರಿಂದ ಇಲ್ಲಿಯ ಕಾಫಿ, ಏಲಕ್ಕಿ, ತೋಟಗಳು ಹೆಸರುವಾಸಿಯಾಗಿವೆ.

## ಕೈಗಾರಿಕೆ

ಕಾಫಿ ತೋಟಗಳು ಹಾಗೂ ಮಸಾಲೆ ಬೆಳೆಗಳಿಗೆ ಹೆಸರುವಾಸಿಯಾಗಿರುವ ಈ ಜಿಲ್ಲೆಯಲ್ಲಿ ಇವುಗಳ ಸಂಬಂಧಿತ ಉದ್ದಿಮೆಗಳಿವೆ. ವಿಶೇಷವಾಗಿ ಚಿಕ್ಕಮಗಳೂರು ಮತ್ತು ಕಡೂರಿನಲ್ಲಿ ಕಾಫಿ, ಮಸಾಲೆ ಸಾಮಾನುಗಳ

ಸಂಬಂಧಿತವಾದ ಉದ್ದಿಮೆಗಳಿವೆ. ಇವುಗಳಲ್ಲದೆ ಕಡೂರಿನಲ್ಲಿ ಪ್ಲಾಸ್ಟಿಕ್ ವಸ್ತುಗಳ ಹಾಗೂ ತರೀಕೆರೆಯಲ್ಲಿ ಕಬ್ಬಿಣ ಹಾಗೂ ಉಕ್ಕಿನ ವಸ್ತುಗಳು ತಯಾರಾಗುತ್ತವೆ. ಜಿಲ್ಲೆಯಲ್ಲಿ ೫೨ ಕಾರ್ಖಾನೆಗಳು ಎರಡು ಕೈಗಾರಿಕಾ ಪ್ರದೇಶಗಳು ಹಾಗೂ ೪೨ ಕೈಗಾರಿಕಾ ಶೆಡ್ಡುಗಳು ಇವೆ. ೧೫ ನಿಯಂತ್ರಿತ ಮಾರುಕಟ್ಟೆಗಳಿವೆ. ಇಲ್ಲಿ ಬೆತ್ತ ಹಾಗೂ ಬಿದಿರಿನ ವಸ್ತುಗಳ ತಯಾರಿಕೆ ವಿಶೇಷವಾಗಿದೆ.

## ವೈಶಿಷ್ಟ್ಯಗಳು

ಮಾರ್ಚ್ ತಿಂಗಳ ಸುಮಾರಿಗೆ ಬಾಬಾಬುಡನ್‌ಗಿರಿಯ ದತ್ತಾತ್ರೇಯ ಪೀಠದಲ್ಲಿ ಮೂರು ದಿನಗಳ ಉತ್ಸವ ತೇರು ಜರುಗುತ್ತದೆ. ಆಗ ೨೫-೩೦ ಸಾವಿರ ಭಕ್ತರು ಸೇರುತ್ತಾರೆ. ತರೀಕೆರೆ ತಾಲೂಕಿನ ಅಂತರಘಟ್ಟದಲ್ಲಿ (ಅಂತರಘಟ್ಟೆವ್ವ) ದುರ್ಗಾಂಭ ಉತ್ಸವವು ೧೦ ದಿನಗಳವರೆಗೆ ಬಹು ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಈ ವೇಳೆಯಲ್ಲಿ ಸುಮಾರು ಒಂದು ಲಕ್ಷ ಜನರು ಸೇರುತ್ತಾರೆ. ಈ ಜಿಲ್ಲೆಯು ಕಾಫಿ ತೋಟ ಹಾಗೂ ಉದ್ಯಮಗಳಿಗೆ ಹೆಸರಾಗಿದೆ. ಕಬ್ಬಿಣದ ಅದಿರಿಗೆ ನಿತ್ಯ ಹರಿದ್ವರ್ಣ ಹಾಗೂ ಉದುರೆಲೆ ಕಾಡುಗಳಿಗೆ ಸಮೃದ್ಧ ವನ್ಯ ಪ್ರಾಣಿಗಳಿಗೆ ಪ್ರಸಿದ್ಧವಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಹಲವು ಪ್ರೇಕ್ಷಣೀಯ ಸ್ಥಳಗಳಿವೆ. ಚಿಕ್ಕಪ್ರಮಾಣದ ಹಿತಕರ ವಾತಾವರಣವಿರುವ ಸಹ್ಯಾದ್ರಿ ಬೆಟ್ಟ ಶ್ರೇಣಿಗಳ ಸಾಲುಗಳಲ್ಲಿ ಕಾಣುವ ಪಟ್ಟಣದಲ್ಲಿ ಹೊಯ್ಸಳ ಹಾಗೂ ದ್ರಾವಿಡ ಶೈಲಿಯ ಕೋದಂಡರಾಮ ಮಂದಿರ, ಜಡೆಮುನಿ ಮಂದಿರಗಳಿವೆ. ಇತ್ತೀಚೆಗೆ ವಿದ್ಯಾಭ್ಯಾಸ ವ್ಯಾಪಾರ ಹಾಗೂ ಉದ್ದಿಮೆಗಳು ಬೆಳೆಯುತ್ತಿವೆ. ಬಾಬಾಬುಡನ್‌ಗಿರಿಯು ಒಂದು ಪ್ರೇಕ್ಷಣೀಯ ಸ್ಥಳವಾಗಿದೆ. ಇಲ್ಲಿ ಯಮೆನಂ ದೇಶದ ಪೀರ್, ಬಾಬಾಬುಡನ್ ಎಂಬಾತನು ೧೭ನೇ ಶತಮಾನದಲ್ಲಿ ವಾಸಿರುವ ಬಗ್ಗೆ ಮಾಹಿತಿ ಇದೆ. ಈ ಜಿಲ್ಲೆಯಲ್ಲಿ ಗದಾ ತೀರ್ಥ, ಕಾಮನ ತೀರ್ಥ, ನೆಲ್ಲಿಕಾಯಿ ತೀರ್ಥ ಎಂಬ ಚಿಕ್ಕ ಜಲಪಾತಗಳಿವೆ. ಅಲ್ಲದೆ ಬಾಬಾಬುಡನ್‌ಗಿರಿಯಲ್ಲಿ ದತ್ತಾತ್ರೇಯ ಪೀಠ ಜಯಂತಿ ಮತ್ತು ಹಝರತ್ ಬಾಬಾ ಹಯಾತ್ ಮೀರ್ ಖಲಂದರ್ ಉರುಸ್ ನಡೆಯುತ್ತವೆ. ಇಲ್ಲಿ ಕೆಮ್ಮಣ್ಣುಗುಂಡಿ ಅತಿ ಸುಂದರವಾದ ಬೆಟ್ಟದ ತಂಗುದಾಣವಿದ್ದು ಬೇಸಿಗೆ ಕಾಲದ ಹಿತಕರ ಸ್ಥಳವಾಗಿರುವುದಲ್ಲದೆ, ಮ್ಯಾಂಗನೀಸ್ ಅದಿರಿನ ಸ್ಥಾವರಗಳು ದೊರೆಯುತ್ತವೆ. ಇಲ್ಲಿ ಬಲ್ಲಾಳ ರಾಯನ ದುರ್ಗವಿದ್ದು ಹೊಯ್ಸಳಕಾಲದ ಪಾಳುಬಿದ್ದ ಕೋಟೆಯಾಗಿದೆ. ಕುದುರೆಮುಖ ಕಬ್ಬಿಣದ ಅದಿರಿಗೆ ಹೆಸರಾಗಿರುವುದಲ್ಲದೆ ಕುದುರೆಯ ಮುಖದಂತೆ ಬೆಟ್ಟದ ಸಾಲು ನಿಂತಿರುವುದು ಗೋಚರಿಸುತ್ತದೆ. ಈ ಜಿಲ್ಲೆಯಲ್ಲಿ ಗಂಗಾಮೂಲವಿದ್ದು ದೇವಿ ಭಗವತಿ ಮಂದಿರ, ತುಂಗಭದ್ರಾ ಹಾಗೂ ನೇತ್ರಾವತಿ ನದಿಗಳ ಉಗಮಸ್ಥಾನವಾಗಿದೆ.''[೩] ಇಲ್ಲಿ ಹೊಯ್ಸಳ ಶೈಲಿಯ ದೇವಾಲಯಗಳು ಮತ್ತು ೧೫೦೦ ಹೆಕ್ಟೇರುಗಳಿಗೆ ನೀರಾವರಿ ಸರಬರಾಜು ಮಾಡುವ ದೊಡ್ಡ ಕೆರೆಗಳಿವೆ. ಅಲ್ಲದೆ ಖಾಂಡ್ಯವಿದೆ. ಅಂದರೆ ಭದ್ರಾ ನದಿ ತಟದಲ್ಲಿರುವ ಒಂದಾದ ಪಂಚಕ್ಷೇತ್ರವಾಗಿದೆ. ಇಲ್ಲಿ ಶೃಂಗೇರಿಯು ಒಂದು ಪ್ರವಾಸಿ ತಾಣವಾಗಿದ್ದು. ರಾಮಾಯಣ ಕಾಲದ ಋಷ್ಯಶೃಂಗನಿಂದಾಗಿ ಶೃಂಗೇರಿ ಶಾರದಾಪೀಠ, ಶಾರದಾದೇವಿಯ ವಿಗ್ರಹ, ವಿಜಯನಗರ ಶೈಲಿಯ ವಿದ್ಯಾಶಂಕರ (೧೨ನೇ ಶತಮಾನದಲ್ಲಿ) ವಿಗ್ರಹಗಳು ಇರುವುದು ಮುಖ್ಯವಾಗಿದೆ. ಬಾಳೆಹೊನ್ನೂರಿನಲ್ಲಿ ಜಗದ್ಗುರು ರಂಭಾಪುರಿ

ಮಹಾಸಂಸ್ಥಾನವಿದೆ. ಮತ್ತೊಡಿ ವನ್ಯಪ್ರಾಣಿಧಾಮ ಹಾಗೂ ಅಭಯಾರಣ್ಯಗಳಿವೆ. ಕಳಸವು ಒಂದು ಪ್ರವಾಸಿ ತಾಣವಾಗಿ ಭದ್ರಾನದಿ ದಂಡೆಯ ಪಂಚಕ್ಷೇತ್ರಗಳಲ್ಲಿ ಒಂದಾಗಿದೆ. ಇಲ್ಲಿ ಮಧ್ವಾಚಾರ್ಯರ ಬಂಡೆಯಿದೆ. ಈ ಜಿಲ್ಲೆಯಲ್ಲಿ ಹೆಬ್ಬೆ ಜಲಪಾತವಿದ್ದು ಇದು ಕೆಮ್ಮಣ್ಣುಗುಂಡಿಯಿಂದ ೮ ಕಿ.ಮೀ. ದೂರದಲ್ಲಿದೆ. ಒಟ್ಟು ೫೫೪ ಅಡಿ ಎತ್ತರದಿಂದ ನೀರು ದುಮುಕುತ್ತದೆ. ಇಲ್ಲಿ ಕಲ್ಹತ್ತಗಿರಿಯು ೪೦೩ ಅಡಿ ಎತ್ತರವಿದ್ದು ಕೆಮ್ಮಣ್ಣುಗುಂಡಿಯಿಂದ ೧೦ ಕಿ.ಮೀ. ದೂರದಲ್ಲಿದೆ. ಹೊಯ್ಸಳ ಶೈಲಿಯ ಅಮೃತೇಶ್ವರ ದೇವಾಲಯವು ಅಮೃತಾಪುರದಲ್ಲಿದೆ. ಹೊರನಾಡಿನಲ್ಲಿ ಆದಿಶಕ್ತ್ಯಾತ್ಮಕ ಶ್ರೀ ಅನ್ನಪೂರ್ಣೇಶ್ವರಿಯ ದೇವಸ್ಥಾನವಿದ್ದು ಇತ್ತೀಚೆಗೆ ಪ್ರವಾಸ ತಾಣವಾಗಿದೆ. ಈ ಎಲ್ಲ ಇತಿಹಾಸವನ್ನು ಹೊಂದಿರುವ ಈ ಜಿಲ್ಲೆಯಲ್ಲಿ ವಾಸಿಸುತ್ತಿರುವ ಮೂಲ ಬುಡಕಟ್ಟು ಸಮುದಾಯವಾದ ಗೌಡಾಲುಗಳನ್ನು ಕುರಿತು ಅಧ್ಯಯನ ದೃಷ್ಟಿಯಿಂದ ಇಲ್ಲಿನ ಭೌಗೋಳಿಕ ಅಂಶಗಳು ಮುಖ್ಯವಾಗಿರುತ್ತದೆ.

ಯಾವುದೇ ಪ್ರದೇಶ ತನ್ನ ಸುತ್ತಮುತ್ತಲಿನ ಭೌಗೋಳಿಕ ಸಾಂಸ್ಕೃತಿಕ ಅಂಶಗಳಿಂದ ಪ್ರಭಾವಿತವಾಗಿಯೇ ರೂಪುಗೊಳ್ಳುತ್ತದೆ. ಇಂಥ ಪ್ರಭಾವಗಳಿಂದಾಗಿ ಸಾಮಾಜಿಕ ಸಂಸ್ಕೃತಿ ಆಯಾಯ ಪ್ರದೇಶಕ್ಕೆ ವಿಶಿಷ್ಟವಾಗಿ ರೂಪ ತಾಳುತ್ತದೆ. ಸಂಪ್ರದಾಯ ಭಿನ್ನ ಭಿನ್ನ ಪ್ರದೇಶಗಳಲ್ಲಿ ಆಚರಣೆಗೊಳ್ಳುವ ರೀತಿಯೂ ಭಿನ್ನ ಭಿನ್ನವಾಗಿರುತ್ತವೆ. ರೂಢಿಸಿಕೊಳ್ಳುವ ನಂಬಿಕೆಗಳು, ಸಾಹಿತ್ಯ, ಕಲೆ ಇತ್ಯಾದಿಗಳೆಲ್ಲವು ಆಯಾ ಪ್ರದೇಶದ ದೇಶೀಯ ಸಂಸ್ಕೃತಿಗೆ ವಿಶಿಷ್ಟವಾಗಿರುತ್ತದೆ. ಆದ್ದರಿಂದ ಬೇರೊಂದು ಪ್ರದೇಶದಿಂದ ಸ್ವೀಕರಿಸಿದ ಸಂಸ್ಕೃತಿಯು ಅತ್ಯಂತ ಸಹಜವಾಗಿ ಆ ಪ್ರದೇಶದ ಅಧ್ಯಯನಕ್ಕೆ ಮೊದಲು ಅಲ್ಲಿಯ ಭೌಗೋಳಿಕ ಹಿನ್ನೆಲೆ ತಿಳಿದುಕೊಳ್ಳುವುದು ಅಗತ್ಯವೆನಿಸುತ್ತದೆ.

ಕರ್ನಾಟಕದ ಆರು ಮಲೆನಾಡು ಜಿಲ್ಲೆಗಳಲ್ಲಿ ಒಂದಾಗಿರುವ ಚಿಕ್ಕಮಗಳೂರು ನೈಸರ್ಗಿಕವಾಗಿ ಸಂಪದ್ಭರಿತ ಜಿಲ್ಲೆಯಾಗಿದೆ. ಒಳ್ಳೆಯ ಹವಾಮಾನ ಹೇರಳವಾದ ನೆಲ, ಜಲ, ಕಾಡು, ಖನಿಜ, ಮಾನವ ಸಂಪನ್ಮೂಲ ಪ್ರಸಿದ್ಧವಾದ ಪುಣ್ಯಕ್ಷೇತ್ರ ಮತ್ತು ಅನೇಕ ಪ್ರೇಕ್ಷಣಿಯ ಸ್ಥಳಗಳನ್ನು ಒಳಗೊಂಡಿದೆ. ಇಲ್ಲಿ ಶೃಂಗೇರಿ ಶಾರದ ಪೀಠ, ಬಾಬಾಬುಡನ್‌ಗಿರಿಯ ದತ್ತಾತ್ರೇಯ ಪೀಠ, ಹೊರನಾಡಿನ ಅನ್ನಪೂರ್ಣೇಶ್ವರಿ, ಕಳಸದ ಕಲಶೇಶ್ವರ ದೇವಸ್ಥಾನ ಮುಂತಾದ ಪ್ರಖ್ಯಾತ ಪುಣ್ಯಕ್ಷೇತ್ರಗಳಿವೆ.

ಕರ್ನಾಟಕದಲ್ಲಿಯೇ ಅತಿ ಎತ್ತರವಾದ ಗಿರಿ ಶಿಖರವಾದ ಮುಳ್ಳಯ್ಯನ ಗಿರಿ ನಿತ್ಯ ಹರಿದ್ವರ್ಣ ಗಿರಿಧಾಮಗಳಾದ ಕೆಮ್ಮಣ್ಣುಗುಂಡಿ, ಕುದುರೆಮುಖ, ಬಾಬಾಬುಡನಗಿರಿ ಹಾಗೂ ಪಶ್ಚಿಮಘಟ್ಟದ ನಿತ್ಯ ಹರಿದ್ವರ್ಣ ಬೆಟ್ಟ ಶ್ರೇಣಿಗಳು ತನ್ನ ಮಡಿಲಲ್ಲಿ ಸಸ್ಯ, ಲೋಹ, ಖನಿಜ ಶಿಲೆ, ಔಷಧಿ ತುಂಬಿಕೊಂಡಿದೆ. ಇದರ ಜೊತೆಗೆ ಸುಂದರವಾದ ಮಾಣಿಕ್ಯದಾರ, ಹಬ್ಬೆಕಾಳ, ಹಸ್ತಿ ಜಲಪಾತಗಳು, ಗಂಗಡಿಕಲ್ಲುಬೆಟ್ಟ, ನಲ್ಲಿವೀಡು ಬೆಟ್ಟ, ಲಕ್ಕೆ ಡ್ಯಾಮ್‌ಗಳು ಪ್ರವಾಸಿಗರನ್ನು ಆಕರ್ಷಿಸುತ್ತವೆ.

''ಜಿಲ್ಲೆಯು ಒಟ್ಟು ಏಳು ತಾಲ್ಲೂಕುಗಳನ್ನು ಹೊಂದಿದ್ದು, ಕಡೂರು ತಾಲ್ಲೂಕು ಪೂರ್ಣ ಹಾಗೂ ಚಿಕ್ಕಮಗಳೂರು ಮತ್ತು ತರೀಕೆರೆ ತಾಲ್ಲೂಕುಗಳ ಕೆಲ ಭಾಗಗಳು ಮೈದಾನ ಪ್ರದೇಶಕ್ಕೆ ಒಳಪಟ್ಟಿದ್ದು, ಉಳಿದ ನಾಲ್ಕು ತಾಲ್ಲೂಕುಗಳಾದ ಶೃಂಗೇರಿ, ಕೊಪ್ಪ, ನರಸಿಂಹರಾಜಪುರ ಮತ್ತು ಮೂಡಿಗೆರೆ ಮಲೆನಾಡು ಪ್ರದೇಶಗಳಾಗಿವೆ. ಜಿಲ್ಲೆಯು ಆರು ನದಿಗಳ ಉಗಮಸ್ಥಾನವಾಗಿದೆ. ಅವುಗಳಲ್ಲಿ ತುಂಗಾ ಮತ್ತು ಭದ್ರಾ

ನದಿಗಳು ಪ್ರಮುಖವಾದವು. ಹೇಮಾವತಿ, ವೇದಾವತಿ, ನೇತ್ರಾವತಿ ಮತ್ತು ಯಗಚಿ ಇತರೆ ನದಿಗಳು ಇಲ್ಲಿಯೇ ಉಗಮವಾಗಿರುವುದು ಒಂದು ರೀತಿಯ ನೈಸರ್ಗಿಕ ಸಂಪತ್ತಿನ ಕಣಜವಾಗಿದೆ. ಈ ಎಲ್ಲ ಹಿನ್ನೆಲೆಯಿಂದ ಜಿಲ್ಲೆಯ ಮಲೆನಾಡು ಪ್ರದೇಶ ಮತ್ತು ಮೈದಾನ ಪ್ರದೇಶದ ಪ್ರಕೃತಿ, ಭೂಗೋಳ, ಹವಾಮಾನ, ಸಸ್ಯಜಾತಿ ಒಂದೇ ತೆರನಾಗಿರದೇ ವಿಭಿನ್ನವಾಗಿವೆ. ಮಲೆನಾಡು ಪ್ರದೇಶದ ಭೂಮಿಯು ಮರಳು ಮಿಶ್ರಿತವಾಗಿದೆ. ಆದ್ದರಿಂದ ತೋಟಗಾರಿಕೆ ಬೆಳೆಗಳನ್ನು ಬೆಳೆಯಲು ಯೋಗ್ಯವಾಗಿದೆ.''[೪] ಕಾಫಿ, ಏಲಕ್ಕಿ, ಮೆಣಸು, ಅಡಿಕೆ, ಬಾಳೆ, ತೆಂಗು ಈ ಭಾಗದ ವಾಣಿಜ್ಯ ಬೆಳೆಗಳಾಗಿವೆ. ಜಿಲ್ಲೆಯ ಒಟ್ಟು ವಿಸ್ತೀರ್ಣ ಶೇ. ೩೦ರಲ್ಲಿ (೨೧೦೮.ಕಿ.ಮೀ) ಅರಣ್ಯ ಶ್ರೀಗಂಧದ ಮರಗಳು ಹಾಗೂ ಬಿದಿರು ಹೇರಳವಾಗಿ ದೊರೆಯುತ್ತದೆ. ಇಲ್ಲಿ ದೊರೆಯುವ ಪ್ರಮುಖ ಖನಿಜ ನಿಕ್ಷೇಪಗಳೆಂದರೆ ಕಬ್ಬಿಣದ ಅದಿರು, ಗ್ರಾನೈಟ್ ಆಸ್ಬೆಸ್ಟಾಸ್, ಬಳಪದ ಕಲ್ಲು, ಕೈನೈಟ್ ಹಸಿರು ಮತ್ತು ಬಿಳಿ ಕ್ವಾರ್ಟ್ಜ್‌ಗಳಾಗಿವೆ.

ಒಂದು ವಿಶಿಷ್ಟ ಮತ್ತು ಸುಂದರವಾದ ಸ್ಥಳದಲ್ಲಿ ಗೌಡಾಲು ಸಮುದಾಯ ತನ್ನ ಬದುಕನ್ನು ಸಾಗಿಸುತ್ತಿದೆ. ಈ ಹಿನ್ನೆಲೆಯಿಂದ ಪರಿಸರದ ಬಗ್ಗೆ ಚರ್ಚೆ ಮಾಡಲೇಬೇಕು. ಏಕೆಂದರೆ ಪರಿಸರ ಎಂದಾಕ್ಷಣ ಥಟ್ಟನೆ ನಮಗೆ ಹೊಳೆಯುವುದು beautiful forest and green memries ಆಗಿರುತ್ತದೆ. ಆದ್ದರಿಂದ ಮಾನವ ಸಮಾಜಕ್ಕೆ ದೈವದತ್ತ ಕೊಡುಗೆಯೆಂದರೆ ನಿಸರ್ಗವಾಗಿದೆ. ಕಾಡಿನೊಂದಿಗೆ ಮಾನವ ಸಂಬಂಧ ಅಮೂಲ್ಯವಾದುದು. ಹೀಗಾಗಿ ಈ ಸಂಬಂಧ ಸಾಮರಸ್ಯ ಕಳೆದುಕೊಂಡಾಗ ಬದುಕು ಅಸಹನೀಯವಾಗುತ್ತದೆ. ಆದರೆ ನಾವೆಲ್ಲರೂ ಆಧುನೀಕರಣದ ಅಲೆಯಲ್ಲಿ ತೇಲಿಕೊಂಡು ಪ್ರಕೃತಿಯ ಸಾಮರಸ್ಯ ಬದುಕನ್ನು ಮರೆತು ವರ್ತಿಸುತ್ತಿದ್ದೇವೆ. ಆದ್ದರಿಂದ ತಿಳಿಯಬೇಕಾದುದೇನೆಂದರೆ ವಿಶ್ವದಾದ್ಯಂತ ಪರಿಸರದ ಕಾಳಜಿ ಬಗೆಗೆ ಜಾಗೃತಿ ಆರಂಭವಾಗಿ ಕೆಲವು ದಶಕಗಳೇ ಕಳೆದರೂ ಕಾಡಿನ ಸಂಪತ್ತು ಕಲುಷಿತಗೊಳ್ಳುತ್ತಲೇ ಇರುವುದು ವಿಷಾದನೀಯ ಸಂಗತಿಯಾಗಿದೆ. ಹೀಗಿರುವಾಗ ಚಿಕ್ಕಮಗಳೂರು ಜಿಲ್ಲೆಯನ್ನು ಗ್ರಹಿಸುವ ಪರಿಯು ಕೂಡ ಬದಲಾಗಬೇಕಾಗಿದೆ.

ಚಿಕ್ಕಮಗಳೂರು ಜಿಲ್ಲೆ ಭೌಗೋಳಿಕವಾಗಿ ಶ್ರೀಮಂತ ಜಿಲ್ಲೆಯಾಗಿದೆ. ಕಾಫಿ ಈ ಭಾಗದ ಪ್ರಮುಖ ವಾಣಿಜ್ಯ ಬೆಳೆಗಳಲ್ಲೊಂದು. ಇದು ವ್ಯಾವಹಾರಿಕವಾಗಿ ಸೃಷ್ಟಿಸಿದ ಅವಾಂತರಗಳು ಅಷ್ಟಿಷ್ಟಲ್ಲ. ಇದು ಕೆಲವರನ್ನು ದಿಢೀರ್ ಶ್ರೀಮಂತರನ್ನಾಗಿ ಮಾಡಿದರೆ ಇನ್ನೂ ಕೆಲವರನ್ನು ದಿವಾಳಿ ಎಬ್ಬಿಸಿದೆ. ಕಾಫಿ ತೋಟದಲ್ಲಿ ಕೆಲಸ ಮಾಡುವ ಕೂಲಿಕಾರರು ಮತ್ತು ಬುಡಕಟ್ಟು ಕೂಲಿಕಾರರ ಸ್ಥಿತಿ ಶೋಚನೀಯವಾಗಿದೆ. ಈ ಹಿನ್ನೆಲೆಯಿಂದ ಮಲೆನಾಡಿನ ದಟ್ಟಕಾಡಿನ ವೈವಿಧ್ಯ ಸಸ್ಯಲೋಕ ಮಾಯವಾಗುತ್ತಿರುವುದು ಕೂಡ ಕಾಣುತ್ತದೆ. ಆದ್ದರಿಂದ ಚಿಕ್ಕಮಗಳೂರು ಜಿಲ್ಲೆಯ ಭೌಗೋಳಿಕ ಚಿತ್ರಣ ಕುತೂಹಲಕಾರಿಯಾಗಿದೆ.

ಚಿಕ್ಕಮಗಳೂರು ಜಿಲ್ಲೆಯು ಅರಣ್ಯ ಪ್ರದೇಶವಾಗಿರುವುದರಿಂದ ಮಳೆಯ ಪ್ರಮಾಣವು ಅಧಿಕವಾಗಿರುತ್ತದೆ. ಈ ಜಿಲ್ಲೆಯು ರಾಜ್ಯದ ದಕ್ಷಿಣ ಪಶ್ಚಿಮ ಭಾಗದಲ್ಲಿದ್ದು, ೧೯೪೭ರವರೆಗೆ ಕಡೂರು ಜಿಲ್ಲೆಯೆಂದೇ ಕರೆಯಲ್ಪಡುತ್ತಿತ್ತು. ಆ ನಂತರ ಚಿಕ್ಕಮಗಳೂರು ಜಿಲ್ಲೆ ಎಂದು ಬದಲಾಯಿತು. ಜಿಲ್ಲೆಯು ೧೨.೫೪ರಿಂದ ೧೩.೫೪ ಉತ್ತರ ಅಕ್ಷಾಂಶ ಮತ್ತು ೭೪.೪ರಿಂದ ೭೫.೨೨ ಪೂರ್ವ ರೇಖಾಂಶದವರೆವಿಗೂ ಹಬ್ಬಿದ ಜಿಲ್ಲೆಯು

ಪೂರ್ವದಲ್ಲಿ ಹಾಸನ ಮತ್ತು ಚಿತ್ರದುರ್ಗ ಜಿಲ್ಲೆಗಳಿಂದಲೂ, ಪಶ್ಚಿಮಕ್ಕೆ ದಕ್ಷಿಣ ಕನ್ನಡ ಹಾಗೂ ಉತ್ತರ ಮತ್ತು ದಕ್ಷಿಣಕ್ಕೆ ಕ್ರಮವಾಗಿ ಶಿವಮೊಗ್ಗ, ದಾವಣಗೆರೆ, ಹಾಸನ ಜಿಲ್ಲೆಗಳಿಂದಲೂ ಆವೃತಗೊಂಡಿದೆ.

ಚಿಕ್ಕಮಗಳೂರು ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೭೨೦೧ ಚ.ಕಿ.ಮೀ. ಇದ್ದು ರಾಜ್ಯದ ವಿಸ್ತೀರ್ಣ ಶೇ. ೩.೭೫ರಷ್ಟಾಗಿರುತ್ತದೆ. ರಾಜ್ಯದ ವಿಸ್ತೀರ್ಣದಲ್ಲಿ ೧೪ನೇ ಸ್ಥಾನವನ್ನು ಪಡೆದಿದೆ. ೨೦೧೧ರ ಜನಗಣತಿಯ ವರದಿಯ ಪ್ರಕಾರ ಈ ಜಿಲ್ಲೆಯು ಒಟ್ಟು ೧೧,೩೯,೧೦೪ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಶೇಕಡವಾರು ೧೧.೩೯ ಲಕ್ಷವಾಗಿದೆ. ಇದರಲ್ಲಿ ಪುರುಷರು ೫೭೪೨೭೫ರಷ್ಟು ಸ್ತ್ರೀಯರು ೫೬೪೮೨೯ರಷ್ಟು ಜನಸಂಖ್ಯೆಯನ್ನು ಹೊಂದಿದೆ.

ಪ್ರಸ್ತುತ ಈ ಜಿಲ್ಲೆಯು ೭ ತಾಲ್ಲೂಕುಗಳನ್ನು ಹೊಂದಿದೆ. ಒಂದೊಂದು ತಾಲ್ಲೂಕು ತನ್ನದೇ ಆದ ಜನಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕ ೨ರಂತೆ ಹೊಂದಿದೆ.

| ಕ್ರ.ಸಂ | ತಾಲ್ಲೂಕುಗಳು | ಜನಸಂಖ್ಯೆ | ಪರಿಶಿಷ್ಟ ಪಂಗಡ |
|---|---|---|---|
| ೧. | ಚಿಕ್ಕಮಗಳೂರು | ೨೯೪೪೪೫ | ೨೮೭೫ |
| ೨. | ಕಡೂರು | ೨೨೮೯೦೯೨ | ೧.೩೮೬ |
| ೩. | ಮೂಡಿಗೆರೆ | ೧೪೧೨೫೫ | ೧.೧೨೯೪ |
| ೪. | ನರಸಿಂಹರಾಜಪುರ | ೬೫೬೨೪ | ೨೦೦೭ |
| ೫ | ಶೃಂಗೆರಿ | ೩೬೯೩೨ | ೨೦೭೬ |
| ೬. | ಕೊಪ್ಪ | ೨೭೬೬೩ | ೩೪೯೪ |
| ೭. | ತರೀಕೆರೆ | ೨೨೪೦೯೩ | ೩೪೦೬ |
|  | ಜಿಲ್ಲೆಯ ಒಟ್ಟು ಜನಸಂಖ್ಯೆ | ೧೧೩೯೧೦೪ | ೨೬೫೩೪ |

ಚಿಕ್ಕಮಗಳೂರು ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡದ ಜನಸಂಖ್ಯೆ ಒಟ್ಟು ೨೬೫೩೪ರಷ್ಟು ಇದೆ. ಅಲ್ಲದೆ ಈ ಜಿಲ್ಲೆಯು ಇತಿಹಾಸದ ದೃಷ್ಟಿಯಿಂದ ಮಹತ್ವವನ್ನು ಪಡೆದಿದೆ. ಇಲ್ಲಿ ಕದಂಬರು, ಗಂಗರು, ವಿಜಯನಗರದ ಅರಸರು, ಸಂತಾಲರು ಆಳ್ವಿಕೆ ಮಾಡಿದ್ದಾರೆ. ಈ ಎಲ್ಲವುಗಳಿಂದ ಚಿಕ್ಕಮಗಳೂರು ಜಿಲ್ಲೆಯು ಕರ್ನಾಟಕದಲ್ಲಿ ವಿಶಿಷ್ಟ ಜಿಲ್ಲೆಯಾಗಿದೆ.

### ೨.೨. ಗೌಡಾಲು ಸಮುದಾಯದ ಸಾಮಾಜಿಕ ಸಂರಚನೆ

ಕರ್ನಾಟಕದಲ್ಲಿ ವಿದ್ವಾಂಸರು ಗುರುತಿಸಿರುವ ಬುಡಕಟ್ಟು ಸಮುದಾಯಗಳಲ್ಲಿ ಹಾಗೂ ಸರ್ಕಾರದ ಪರಿಶಿಷ್ಟ ಪಂಗಡದ ನಿಯಮಾವಳಿಯ ಪ್ರಕಾರ ಗೌಡಾಲು ಬುಡಕಟ್ಟು ಸಮುದಾಯಗಳಲ್ಲಿ ಅಂತರ್ಗತವಾಗಿದೆ. ಈ ದೇಶದಲ್ಲಿ ನಡೆದುಹೋದ ಅನೇಕ ರಾಜಕೀಯ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಪ್ರಭಾವಗಳನ್ನು ಎಲ್ಲ ಬುಡಕಟ್ಟುಗಳಂತೆ ಹಾದು ಬಂದು ತನಗೆ ಅರಿವಿಲ್ಲದಂತೆ ಅನೇಕ ರೀತಿಯ ಬದಲಾವಣೆಗಳನ್ನು ತಂದುಕೊಂಡಿದೆ. ಈ ಬುಡಕಟ್ಟು ನಿರ್ದಿಷ್ಟವಾದ ಆರ್ಥಿಕ ಮೂಲವನ್ನು ಹೊಂದಿದೆ. ಚಾರಿತ್ರಿಕವಾಗಿ

ಊಳಿಗಮಾನ್ಯ ವ್ಯವಸ್ಥೆಯನ್ನು ಅವಲಂಬಿಸಿ ಬದುಕಿನ ಉದ್ದಕ್ಕೂ ಕಾಡಿನಲ್ಲಿ ಬಂಡವಾಳಶಾಹಿಗಳ ದಬ್ಬಾಳಿಕೆಯಲ್ಲಿ ಸಮಾಜದ ರಚನೆಗೊಂಡ ಬಗೆಯನ್ನು ಕಾಣಲಾಗುವುದು. ಗೌಡಾಲು ಸಮುದಾಯದ ನಿಯಮಗಳು ಕಟ್ಟುನಿಟ್ಟಾಗಿ ನಡೆದುಕೊಂಡು ಬಂದಿವೆ. ಇಂದಿಗೂ ಕುಲಪಂಚಾಯಿತಿಗಳು ನಡೆಯುತ್ತಿವೆ. ವಿರುದ್ಧ ಬಳಿಗಳಲ್ಲಿ ವಿವಾಹ ಪದ್ಧತಿ ಮತ್ತು ವಿಧಿನಿಷೇಧಗಳು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿರುವುದರಿಂದಾಗಿ ಗೌಡಾಲು ಬುಡಕಟ್ಟು ಸಮಾಜವು ತನ್ನ ಚಹರೆಗಳನ್ನು ಇನ್ನೂ ಉಳಿಸಿಕೊಂಡು ಇತರೆ ಬುಡಕಟ್ಟುಗಳಿಗಿಂತ ಭಿನ್ನವಾಗಿ ಸಾಮಾಜಿಕ ಸಂರಚನೆಯನ್ನು ರೂಪಿಸಿಕೊಂಡಿದೆ.

ಭಾರತದ ಎಲ್ಲ ಆದಿವಾಸಿ ಸಮುದಾಯಗಳ ಸಾಮಾಜಿಕ ವ್ಯವಸ್ಥೆಯಂತೆಯೇ ಗೌಡಾಲುಗಳು ಸಹ ಮೂಲವಾಸಿ ಬುಡಕಟ್ಟು ಸಮಾಜವಾಗಿದೆ. ಪಶ್ಚಿಮ ಘಟ್ಟದ ಅರಣ್ಯ ಸಂಸ್ಕೃತಿಯಲ್ಲಿ ಪಶುಪಾಲನಾ ವ್ಯವಸ್ಥೆಯಲ್ಲಿ ಬದುಕು ಸಾಗಿಸಿಕೊಂಡು ಬೇಟೆಯ ವೃತ್ತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಅರಣ್ಯಉತ್ಪನ್ನಗಳನ್ನು ಸಂಗ್ರಹಿಸುತ್ತಾ ಅರಣ್ಯದ ಪರಿಸರಕ್ಕೆ ಹೊಂದಾಣಿಕೆಯ ರೂಪದಲ್ಲಿ ಗೌಡಾಲು ಸಮುದಾಯದ ಸಮಾಜ ರೂಪುಗೊಂಡ ಬಗೆಯಾಗಿದೆ. ಆದಿಮಾನವನ ಸಮಾಜ ರಚನೆಗೊಂಡ ಬಗೆಯಾದ ಬೇಟೆ, ಪಶುಪಾಲನೆ, ಆಹಾರ ಸಂಗ್ರಹಿಸುವ ಕ್ರಮ ಕುಮ್ರಿಬೇಸಾಯ ಮತ್ತು ಕೃಷಿವರೆಗಿನ ಹಂತಗಳ ಸಾಮಾಜಿಕ ವ್ಯವಸ್ಥೆಯಲ್ಲಿಯೇ ಗೌಡಾಲು ಬುಡಕಟ್ಟು ಹಂತ ಹಂತವಾಗಿ ಸಮಾಜದ ರೂಪವನ್ನು ಕಂಡುಕೊಂಡಿದೆ.

ಗೌಡಾಲು ಬುಡಕಟ್ಟು ಬೇಟೆಯನ್ನು ಪ್ರಸ್ತುತ ಸಮಾಜದಲ್ಲಿಯೂ ಮೈಗೂಡಿಸಿಕೊಂಡು ಬಂದಿದೆ. ಆಹಾರ ಸಂಪಾದನೆಗಾಗಿ ಬೇಟೆಯಿಂದ ಮಾಂಸವನ್ನು ಸಂಗ್ರಹಿಸಿ ತಿನ್ನುವುದನ್ನು ರೂಢಿಸಿಕೊಂಡಿದ್ದ ಈ ಸಮುದಾಯ ಸಮಾಜದ  ಬದಲಾವಣೆಯ ಕಡೆ ಮುಖಮಾಡುತ್ತ ಕಾಡಿನಲ್ಲಿ ಸಿಗಬಹುದಾದ ಗೆಡ್ಡೆ, ಗೆಣಸು, ಬಿದಿರಕ್ಕಿ, ಕಾಡು ಹಣ್ಣುಗಳನ್ನು ಆಹಾರದ ಪರಿಕರಗಳನ್ನಾಗಿ ಮಾಡಿಕೊಂಡು ಬದುಕಿನ ಬಂಡಿಯನ್ನು ಸಾಗಿಸುತ್ತಿದ್ದಾರೆ. ಇನ್ನು ಪಶುಪಾಲನೆಯ ಹಂತಕ್ಕೆ ಬಂದರೆ ಮೂಲತಃ ಗೌಡಾಲುಗಳು ಗೋವುಪಾಲಕರಾಗಿರುವುದರಿಂದ ಗೋವುಗಳ ರಕ್ಷಣೆಯನ್ನು ಜೀವನದ ಉದ್ದಕ್ಕೂ ಮಾಡಿಕೊಂಡು ಬಂದವರಾಗಿದ್ದಾರೆ. ಇವರ ಸಾಮಾಜಿಕ ಸಂರಚನೆಯು ಗೋವುಗಳ ಸಾಕಾಣಿಕೆಯಿಂದಲೇ ಪ್ರಾರಂಭವಾಗಿದೆ.

ಮಾನವ ಸಮಾಜವು ಸಾಮಾಜಿಕ ಸಂಬಂಧದ ಬಲೆ ಎಂಬಂತೆ ಗೌಡಾಲು ಸಮುದಾಯವು ಕೂಡ ಸಾಮಾಜಿಕ ಸಂಬಂಧಗಳ ಬಲೆಯಾಗಿದೆ. ಗೌಡಾಲು ಸಮುದಾಯದ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯು ಲೋಕರೂಢಿಗಳು, ಸಂಪ್ರದಾಯಗಳು, ಪರಸ್ಪರ ಸಹಕಾರ, ವಿವಿಧ ನಿಯಮಗಳು, ವರ್ಗಗಳು, ಉಡಿಗೆ-ತೊಡುಗೆ, ಆಹಾರ, ವಸತಿ, ವೃತ್ತಿ, ಬೆಡಗುಗಳು, ವಿವಾಹ ಕುಟುಂಬ, ನ್ಯಾಯ ಪದ್ಧತಿ ಹಾಗೂ ಸಾಮಾಜಿಕ ನಿಯಂತ್ರಣವನ್ನೊಳಗೊಂಡ ಕ್ರಮಬದ್ಧವಾದ ವ್ಯವಸ್ಥೆಯಾಗಿದೆ.

ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಟಾಲ್ಕಾಟ್ ಪಾರ್ಸನ್ಸ್ ಅವರು ''ಸಾಮಾಜಿಕ ವ್ಯವಸ್ಥೆಯು ಸದಸ್ಯರ ಅಂತರ ಕ್ರಿಯೆಗಳನ್ನೊಳಗೊಂಡಿದೆ. ಈ ಅಂತರ ಕ್ರಿಯೆಯಲ್ಲಿ ಭಾಗವಹಿಸುವ ಸದಸ್ಯರು ಪರಸ್ಪರ ಹಂಚಿಕೊಳ್ಳಲ್ಪಡುವ ರಚನಾತ್ಮಕವಾದ ಚಿಹ್ನೆ ಹಾಗೂ ಪರಸ್ಪರ ಅಪೇಕ್ಷಣೀಯ ಮಾಧ್ಯಮಗಳ ಮೂಲಕ

ಸ್ಪಂದಿಸುತ್ತಾರೆ. ಸಾಮಾಜಿಕ ವ್ಯವಸ್ಥೆಯು ಒಂದು ನಿರ್ದಿಷ್ಟ ಭೌತಿಕ ಪರಿಸರದಲ್ಲಿ ಪರಸ್ಪರ ಅಂತರ್ ಕ್ರಿಯೆ ನಡೆಸುವ ಹಾಗೂ ಸಾಂಸ್ಕೃತಿಕ ಮಾಧ್ಯಮಗಳ ಮೂಲಕ ಸಂಪರ್ಕಿಸುವ ವ್ಯಕ್ತಿಗಳ ಸಮೂಹವನ್ನು ಹೊಂದಿರುತ್ತದೆ'' ಎಂದು ಹೇಳಿದ ಮಾತುಗಳನ್ನು ನಾವು ಗೌಡಾಲು ಸಮಾಜದ ಸಾಮಾಜಿಕ ಸಂರಚನೆಯಲ್ಲಿ ಚರ್ಚಿಸಲೇಬೇಕಾಗಿದೆ.

ಮಲೆನಾಡಿನ ಚಿಕ್ಕಮಗಳೂರಿನಲ್ಲಿ ನೆಲೆಸಿರುವ ಹಲವಾರು ಬುಡಕಟ್ಟು ಸಮುದಾಯಗಳಲ್ಲಿ ಗೌಡಾಲು ಬುಡಕಟ್ಟು ಸಮುದಾಯವೂ ಒಂದು. ಗುಡ್ಡಗಾಡು, ಬೆಟ್ಟಗುಡ್ಡ, ದಟ್ಟ ಅರಣ್ಯದಲ್ಲಿ, ಕಣಿವೆ ಅಥವಾ ಇಳಿಜಾರು ಪ್ರದೇಶದಲ್ಲಿ ನೆಲೆಸಿರುವ ಈ ಬುಡಕಟ್ಟು ಜನಾಂಗದವರು ಸರಳ ಜೀವನ ಹೊಂದಿದ್ದು, ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿದ್ದು, ಕೂಲಿ ಮತ್ತು ಇತರೆ ಕೆಲಸಗಳಲ್ಲಿ ತೊಡಗಿದ್ದಾರೆ. ಇವರು ಸಂಘ ಜೀವಿಗಳು. ಹೊಂದಾಣಿಕೆ, ಸಹಕಾರ ಮತ್ತು ಸ್ವಾಂಗೀಕರಣದ ಸಂಬಂಧವನ್ನು ಹೊಂದಿರುವ ಇವರು, ಶ್ರಮ ಜೀವಿಗಳಾಗಿದ್ದು, ಸಮಾಜದ ಮುಖ್ಯವಾಹಿನಿಯಿಂದ ಬಹಳ ವರುಷಗಳಷ್ಟು ಹಿಂದುಳಿದಿದ್ದಾರೆ. ಸಾಮಾನ್ಯವಾಗಿ ಗಿರಿಜನ ಎಂದು ಗುರುತಿಸಿಕೊಂಡಿರುವ ಇವರಲ್ಲಿ ಹೆಚ್ಚಿನವರು ಬಡವರು. ಇವರ ಜೀವನಕ್ಕೆ ಸಂಬಂಧಿಸಿದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ ಲಭ್ಯವಿರುವ ಮಾಹಿತಿಗಳನ್ನು ಸಂಗ್ರಹಿಸುವ ಪ್ರಯತ್ನಗಳು ನಡೆಯುತ್ತಿವೆ.

ಈ ಜಿಲ್ಲೆಯಲ್ಲಿ ಬರುವ ಒಟ್ಟು ೭ ತಾಲ್ಲೂಕುಗಳ ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಇವರು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ-ಹೀಗೆ ಎಲ್ಲ ಹಂತಗಳಲ್ಲಿ ಹಿಂದುಳಿದಿದ್ದು, ಇವರಲ್ಲಿ ಇತ್ತೀಚಿನ ದಿನಗಳಲ್ಲಿ ನಗರೀಕರಣ, ಕೈಗಾರೀಕರಣ, ಆಧುನೀಕರಣದ ಜೊತೆಗೆ ಭೂಸುಧಾರಣಾ ಮಸೂದೆಯ ಕಾಯ್ದೆಯಿಂದಾಗಿ ಕೆಲವೊಂದು ಬದಲಾವಣೆಗಳು ಆಗಿವೆ. ರಾಷ್ಟ್ರೀಯ ಉದ್ಯಾನವನ ನೀತಿಯಿಂದಾಗಿ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳು ಆಗಿರುವುದು ಕಂಡುಬರುತ್ತದೆ. ಒಳ್ಳೆಯ ಪರಿಣಾಮಗಳಿಗೆ ಹೋಲಿಸಿದರೆ, ಕೆಟ್ಟ ಪರಿಣಾಮವೇ ಹೆಚ್ಚು ಆಗಿರುವುದು ನಮಗೆ ಕಂಡುಬರುತ್ತದೆ.

ಗೌಡಾಲು ಕುಟುಂಬ ಪದ್ಧತಿಯು ಪಿತೃಪ್ರಧಾನವಾಗಿದ್ದು, ಮನೆಯ ಸಂಪೂರ್ಣ ಜವಾಬ್ದಾರಿಯು ಮನೆಯ ಯಜಮಾನ ಅಥವಾ ಕರ್ತನದ್ದಾಗಿದೆ. ಪುರುಷರಿಗೆ ಹೋಲಿಸಿದರೆ ಸ್ತ್ರೀಯರಿಗೆ ಸಮಾಜದಲ್ಲಿ ಸ್ಥಾನಮಾನ ಕಡಿಮೆ ಇರುವುದು ಕಂಡುಬರುತ್ತದೆ. ಸಾಮಾಜಿಕ ಬದುಕಿನ ನಿಯಂತ್ರಣ ಪುರುಷರಲ್ಲಿ ಕೇಂದ್ರೀಕೃತವಾಗಿದ್ದರೂ, ಕುಟುಂಬದ ಸದಸ್ಯರಲ್ಲಿ ಕೌಟುಂಬಿಕ ಪ್ರತಿಷ್ಠೆಗೆ, ವಂಶದ ಗೌರವಕ್ಕೆ, ಪಾವಿತ್ರ್ಯತೆಯ ರಕ್ಷಣೆಗೆ, ಶ್ರಮಿಸುವ ಪ್ರವೃತ್ತಿ ಇದೆ. ಇವರಲ್ಲಿ ಮನೆಯ ಆಸ್ತಿಯ ಜವಾಬ್ದಾರಿಯು ಮನೆಯ ಗಂಡಸರ ಮೇಲೆಯೇ ಇರುತ್ತದೆ. ಪುರುಷರು ಕುಟುಂಬದಲ್ಲಿ ಪ್ರಧಾನ ಪಾತ್ರವನ್ನು ಹೊಂದಿರುತ್ತಾರೆ.

ಈ ಬುಡಕಟ್ಟು ಸಮುದಾಯದಲ್ಲಿ ವಿಭಕ್ತ ಕುಟುಂಬಗಳ ಪ್ರಮಾಣವೇ ಹೆಚ್ಚು. ಇವರಲ್ಲಿ ಹೆಚ್ಚಿನವರು ಅವಿದ್ಯಾವಂತರಾದರೂ ಹೆಚ್ಚಾಗಿ ವಿಭಕ್ತ ಕುಟುಂಬ ಪದ್ಧತಿ ಹೊಂದಿದ್ದಾರೆ. ಇದಕ್ಕೆ ಕಾರಣವಾಗುವ ಅಂಶಗಳೆಂದರೆ, ಜಾಗತೀಕರಣ, ನಗರೀಕರಣ, ಔದ್ಯೋಗೀಕರಣ, ಪಾಶ್ಚಾತ್ಯೀಕರಣ, ಮಸೂದೆಗಳ ಪ್ರಭಾವ. ಇವರಲ್ಲಿ ಗಂಡು ಹೆಣ್ಣಿನ ಸಂಬಂಧವು ಶಾಶ್ವತವಾದದ್ದು. ತಮ್ಮ ಜೀವಿತದವರೆಗೆ ಆ ಮನೆಯ ಹುಟ್ಟು-ಸಾವುಗಳಿಂದ ಹಿಡಿದು ಸಕಲ-ಸಂಸ್ಕೃತಿ, ಸಂಸ್ಕಾರಗಳಲ್ಲಿ ಕಡ್ಡಾಯವಾಗಿ ಪಾಲ್ಗೊಳ್ಳಬೇಕಾದ ಅನಿವಾರ್ಯತೆ ಇವರಲ್ಲಿ ಇದೆ.

ಪ್ರಾರಂಭದ ದಿನಗಳಲ್ಲಿ ವಿದ್ಯೆಗೆ ಹೆಚ್ಚಿನ ಆದ್ಯತೆ ಕೊಡದಿದ್ದ ಈ ಸಮುದಾಯದವರು ಇತ್ತೀಚಿನ ದಿನಗಳಲ್ಲಿ ಅಲ್ಪಸ್ವಲ್ಪ ವಿದ್ಯಾಭ್ಯಾಸಕ್ಕೆ ಆದ್ಯತೆ ಕೊಡುತ್ತಿರುವುದನ್ನು ನಾವು ಕಾಣಬಹುದು. ೧೯೮೭ ರಾಷ್ಟ್ರೀಯ ಉದ್ಯಾನವನ ನೀತಿಯು ಕೆಲವರಿಗೆ ಅನುಕೂಲವಾದರೆ, ಹೆಚ್ಚಿನ ಜನರಿಗೆ ಇದರಿಂದ ತೊಂದರೆಗಳೇ ಹೆಚ್ಚು. ಎಲ್ಲ ಕಡೆಯಿಂದ ಇವರು ಸಮಸ್ಯೆಗಳನ್ನೇ ಎದುರಿಸುತ್ತಿದ್ದಾರೆ. ಈ ಬುಡಕಟ್ಟು ಜನರು ಸಾಮಾನ್ಯವಾಗಿ ದಕ್ಷಿಣ ಕನ್ನಡದ ಉಡುಪಿ ಜಿಲ್ಲೆಯಿಂದ ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ವಲಸೆ ಬಂದು ನೆಲೆಸಿದ್ದಾರೆ ಎಂದು ಕೆಲವು ತಿಳುವಳಿಕೆದಾರರು ತಮ್ಮ ನಿಲುವಿನಲ್ಲಿ ತಿಳಿಸಿದ್ದಾರೆ. ವಲಸೆ ಹೋದ ಉದ್ದೇಶ ಎಂದರೆ ವೃತ್ತಿಯನ್ನು ಹುಡುಕಿಕೊಂಡು ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವುದು. ಉಳಿದವರು ಇದ್ದಲ್ಲಿಯೇ ವ್ಯವಸಾಯ, ಕೂಲಿ ಕೆಲಸ, ಅರಣ್ಯದ ವಸ್ತುಗಳ ಸಂಗ್ರಹಣೆ, ಹೈನುಗಾರಿಕೆಯಲ್ಲಿ ತೊಡಗಿದ್ದರು. ಇವರು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ವ್ಯಾಪಾರ, ಹಬ್ಬ ಹರಿದಿನ, ಕ್ರೀಡೆ ಮುಂತಾದ ವಲಯಗಳಲ್ಲಿ ತಮ್ಮದೇ ಛಾಪನ್ನು ಮೂಡಿಸಿಕೊಂಡಿದ್ದಾರೆ. ಈ ಎಲ್ಲ ಅಂಶಗಳನ್ನು ಅವಲೋಕಿಸಿದಾಗ ಸಂಶೋಧನೆಗೆ ಒಳಪಡಿಸಿದ ಗೌಡಾಲು ಬುಡಕಟ್ಟು ಜನರ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳನ್ನು ತಿಳಿದುಕೊಳ್ಳುವ ಪ್ರಯತ್ನ ಮುಂದಿನ ಅಧ್ಯಾಯಗಳಲ್ಲಿ ಮಾಡಲಾಗಿದೆ.

ಈ ಅಧ್ಯಾಯದಲ್ಲಿ ಮುಖ್ಯವಾಗಿ ಗೌಡಾಲು ಬುಡಕಟ್ಟು ಸಮುದಾಯಗಳ ಪಂಗಡಗಳ ಹಂಚಿಕೆ, ವಯಸ್ಸಿನ ಲಿಂಗವಾರು ಹಂಚಿಕೆ, ಅವರು ಸೇರಿರುವ ಮನೆತನಗಳು, ಕುಲಸಾಮಗಳು, ಮಾತೃಭಾಷೆ, ಲಿಂಗವಾರು ವಿದ್ಯಾರ್ಹತೆ, ವೃತ್ತಿ, ವೈವಾಹಿಕ ಸ್ಥಾನಮಾನ, ಕುಟುಂಬ ಸದಸ್ಯರ ವಿವರ, ಮನೆಯ ಸ್ವರೂಪ, ಆದಾಯ ಮತ್ತು ಖರ್ಚು ಹಾಗೂ ಜಮೀನಿನ ವಿವರ ಮುಂತಾದ ಅಂಶಗಳನ್ನು ಅಂಕಿ-ಅಂಶಗಳ ಸಹಿತ ವಿವರಿಸಲಾಗಿದೆ.

**ತಿಳುವಳಿಕೆ ಪಂಗಡದವರ ಹಂಚಿಕೆ:** ಇವರು ಸಾಮಾನ್ಯವಾಗಿ ೫ ಪಂಗಡಗಳನ್ನು ಹೊಂದಿದ್ದಾರೆ. ೧. ತುಳುಗೌಡಾಲು ೨. ನಾಮಧಾರಿ ಗೌಡಾಲು ೩. ಮಲೆ ಗೌಡಾಲು ೪. ಕುಂಬ್ರಿ ಗೌಡಾಲು ಮತ್ತು ೫. ಕಬ್ಬಿನ ಮಲೆಯವರು. 'ನಾಮಧಾರಿ ಗೌಡಾಲು' ಪಂಗಡದವರನ್ನು ಉಳಿದ ನಾಲ್ಕು ಪಂಗಡಗಳಿಗಿಂತ ಶ್ರೇಷ್ಠರೆಂದು ಪರಿಗಣಿಸಲಾಗಿದೆ. ಹಣೆಯ ಮೇಲೆ ನಾಮವಿಟ್ಟು ವಿಷ್ಣುವನ್ನು ಆರಾಧಿಸುವವರಾಗಿರುವುದರಿಂದ ಇವರಿಗೆ ಈ ಹೆಸರು ಬಂದಿದೆ. 'ಮಲೆ ಗೌಡಾಲು' ಮಲೆಯ ಮೂಲದವರು. ಮಲೆ ಎಂದರೆ ಬೆಟ್ಟವೆಂದರ್ಥ. ಕುದುರೆಮುಖ ಪರಿಸರದ ಬೆಟ್ಟ(ಮಲೆ)ದವರಾಗಿರುವ ಇವರಿಗೆ 'ಗೌಡಾಲು' ಎಂದು ಕರೆಯಲಾಗುತ್ತದೆ. 'ಕುಂಬ್ರಿ' ಎಂದರೆ ಬೇಸಾಯ. ಈ ಪಂಗಡದವರು ಅರಣ್ಯವನ್ನು ಬೆಂಕಿಯಿಟ್ಟು ಶುಚಿಗೊಳಿಸಿ ಬೇಸಾಯ ಮಾಡುವವರಾಗಿದ್ದಾರೆ. ಕೊನೆಯದಾಗಿ 'ಕಬ್ಬಿನ' ಮಲೆಯವರು ಅಥವಾ 'ಗೌಡಾಲು' ಎಂದರೆ ಇವರು ಕಬ್ಬು ಬೆಳೆಗಾರರಾಗಿದ್ದವರು. ಕಬ್ಬಿನ ಗೌಡಾಲು ಮತ್ತು 'ಕುಂಬ್ರಿ' ಗೌಡಾಲು ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಬುಡಕಟ್ಟಿಗೆ ಸೇರಿದವರು ಎಂದು ಕೆಲವೊಂದು ತಿಳುವಳಿಕೆದಾರರ ಅಭಿಪ್ರಾಯವಾಗಿದೆ.

ಗೌಡಾಲು ಜನರನ್ನು ಗೌಡ (Gouda) ಗಂಡೋ (Gando) ಹಾಗೂ (Gowda) ಎಂತಲೂ ಕರೆಯುತ್ತಾರೆ. ಇವರಲ್ಲಿ ಎರಡು ವಿಧ ೧. ಊರಗೌಡ ಅಥವಾ ನಾಡಗೌಡ. ೨. ಕಾಡುಗೌಡ. ನಾಡ ಅಥವಾ ಊರ ಗೌಡಾಲುಗೆ

ಉಚ್ಚ ಸಾಮಾಜಿಕ ಸ್ಥಾನಮಾನ ಗೌಡಾಲರಿಗಿಲ್ಲ. ಇವರಲ್ಲಿ ಜಾತಿ ಪಂಚಾಯಿತಿ ಉಂಟು. ಇವರಲ್ಲಿ ತೋಳಾರ (ತೋಳ), ಬಾಳೆ(ಲೆ), ಮಗು, (ಶೆಟ್ಟಿ ಒಂದು ತರಪದ ಮೀನು), ಕಂಡಾಲ (Kandala) ಅಮೃತ, ಗಂಗರು ಇತ್ಯಾದಿ ಬಳಿಗಳಿವೆ. ಸಮ ಬಳಿಯವರಲ್ಲಿ ಸೋದರತ್ವದ ಮತ್ತು ಬೆಸ ಬಳಿಯವರಲ್ಲಿ ಬಂಧುತ್ವ ಭಾವನೆಯಿರುವುದರಿಂದ ಇವರ ಸಾಮಾಜಿಕ ಸಂಘಟನೆ ಬಿಗಿಯಾಗಿರುವುದು[೬].

ಈ ಗೌಡಾಲು ಸಮುದಾಯದವರಿಗೆ 'ಕೊಡುಗೆ ಗೌಡ' ಎಂದು ಕರೆಯುತ್ತಾರೆ. ಇದಕ್ಕೆ ಕಾರಣವೆಂದರೆ, ಇವರು ನೆಲೆಸಿರುವ ಪ್ರದೇಶ ಒಬ್ಬರಾಜ ಆಳುತ್ತಿದ್ದನಂತೆ. ಈ ರಾಜನ ಮೇಲೆ ಶತ್ರು ಸೈನ್ಯ ಯುದ್ಧಕ್ಕೆ ಬಂದಾಗ ಈ 'ಗೌಡಾಲು' ಜನರು ಶತ್ರುಗಳನ್ನು ಹಿಮ್ಮೆಟ್ಟಿಸುವಲ್ಲಿ ರಾಜನಿಗೆ ಸಹಾಯಕರಾದರಂತೆ. ಗೆದ್ದ ರಾಜನು ಗೌಡಾಲು ಜನರಿಗೆ ನನ್ನಿಂದ ಏನಾದರೂ ಕೇಳಿ ಎಂದು ಹೇಳಿದಾಗ, ಗೌಡಾಲು ಜನರು ಹಾಸಮುಂಡಾಸೆ, ಮುಂಡೆಬಸುರು, ಹಂಜರಿಕೆ ನೀರು, ಉತ್ತಾರ್ರ ಬೆಂಕಿ, ಇತ್ತಾರದ ದವಸೆ ಮತ್ತು ಬೈಗೆ ಹೆಂಡ ಕೇಳಿದಾಗ, ರಾಜನು ಈ ಆರು ಬೇಡಿಕೆಗಳನ್ನು 'ಕೊಡುಗೆ'ಯಾಗಿ ಕೊಟ್ಟನಂತೆ. ಇದರಿಂದ ಕ್ರಮೇಣವಾಗಿ ಇವರಿಗೆ 'ಕೊಡುಗೆ ಗೌಡ' ಎಂಬ ಹೆಸರು ಬಂದಿತು[೭].

ಗೌಡಾಲು ಬುಡಕಟ್ಟುಗಳಲ್ಲಿ ಪಿತ್ರಾರ್ಜಿತ ಆಸ್ತಿಯನ್ನು ಹೊಂದಿದ್ದು, ತಂದೆಯ ನಂತರ ಆಸ್ತಿಯು ಗಂಡುಮಕ್ಕಳಿಗೆ ಸೇರುತ್ತದೆ. ಇಷ್ಟ ಇದ್ದರೆ ಮಾತ್ರ ಹೆಣ್ಣುಮಕ್ಕಳಿಗೆ ಆಸ್ತಿಯನ್ನು ನೀಡಬಹುದು. ಇವರಲ್ಲಿ ಪಿತೃಪ್ರಧಾನ ಕುಟುಂಬ ಪದ್ಧತಿ ಇದೆ. ಮನೆಯ ಸಂಪೂರ್ಣ ಜವಾಬ್ದಾರಿಯನ್ನು ತಂದೆ ಅಥವಾ ಅಜ್ಜ ಅಥವಾ ಮನೆಯ ಹಿರಿಯ ಯಜಮಾನನಾದವನು ನಿರ್ವಹಿಸುತ್ತಾನೆ.

**ಗೌಡಾಲು ಮನೆತನದ ಹೆಸರುಗಳು**

ಗೌಡಾಲು ಬುಡಕಟ್ಟು ಜನಾಂಗದವರು ತಮ್ಮದೇ ಆದಂತಹ ಮನೆತನದ ಹೆಸರುಗಳನ್ನು ಹೊಂದಿದ್ದಾರೆ. ಈ ಮನೆತನದ ಹೆಸರುಗಳ ಆಧಾರದ ಮೇಲೆ ಅವರ ಜನಾಂಗವನ್ನು ಗುರುತಿಸುತ್ತೇವೆ. ಕೆಲವರಿಗೆ 'ಗೌಡ' ಎಂದು ಕರೆದರೆ ಇನ್ನು ಕೆಲವರನ್ನು 'ಗೌಡಾಲು' ಎಂದು ಕರೆಯುತ್ತಾರೆ. ಇದು ಇವರ ನಾಮವಾಗಿದ್ದು, ಇವುಗಳ ಆಧಾರದ ಮೇಲೆ ಅವರ ಮನೆತನವನ್ನು ಗುರುತಿಸುತ್ತಾರೆ.

**ಕೋಷ್ಟಕ ೩.೦೧**

**ತಿಳುವಳಿಕೆದಾರರ ಮನೆತನದ ಹೆಸರುಗಳು**

| ಕ್ರ.ಸಂ. | ಮನೆತನದ ಹೆಸರು | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಗೌಡಾಲು | ೭೯ | ೭೯.೦೦ |
| ೨. | ಗೌಡ | ೨೧ | ೨೧.೦೦ |
| | ಒಟ್ಟು | ೧೦೦ | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿ (ಶೇ. ೭೯) ತಿಳುವಳಿಕೆದಾರರು, 'ಗೌಡಾಲು' ಎಂಬ ಮನೆತನದ ಹೆಸರನ್ನು ಹೊಂದಿದ್ದು, ಹಾಗೆಯೇ (ಶೇ. ೨೧) ತಿಳುವಳಿಕೆದಾರರು, 'ಗೌಡ' ಎಂಬ ಮನೆತನದ ಅಥವಾ ನಾಮ ಸೂಚಕಗಳನ್ನು ಹೊಂದಿರುವುದನ್ನು ಕಂಡುಕೊಳ್ಳಬಹುದು.

ಈ ಕೋಷ್ಟಕವನ್ನು ಗಮನಿಸಿದಾಗ ಕಂಡುಬರುವ ಸಂಗತಿ ಎಂದರೆ ಶೇ. ೭೯ರಷ್ಟು ಗೌಡಾಲು ತಿಳುವಳಿಕೆದಾರರು, ಈ ಸಂಶೋಧನೆಯಲ್ಲಿ ಭಾಗಿಗಳಾಗಿದ್ದಾರೆ. ಇದಕ್ಕೆ ಮುಖ್ಯ ಕಾರಣ ಮಲೆನಾಡು ಪ್ರಾಂತ್ಯಗಳಲ್ಲಿ ಹೆಚ್ಚಾಗಿ ನೆಲೆಸಿರುವ ಇವರು 'ಗೌಡಾಲು' ಎಂಬ ನಾಮಸೂಚಕವನ್ನು ಹೊಂದಿದವರು. ಆದರೆ, ಶೇ. ೨೧ರಷ್ಟು ತಿಳುವಳಿಕೆದಾರರು ಗೌಡ ಎಂಬ ನಾಮಸೂಚಕವನ್ನು ಹೊಂದಿದ್ದಾರೆ. ಇದಕ್ಕೆ ಮಲೆನಾಡು ಪ್ರಾಂತ್ಯದಲ್ಲಿ ಇವರ ಸಂಖ್ಯೆ ಕಡಿಮೆಯಾಗಿರುವುದೇ ಮುಖ್ಯ ಕಾರಣವಾಗಿದೆ.

**ತಿಳುವಳಿಕೆದಾರರ ವಯಸ್ಸಿನ ಲಿಂಗವಾರು ಹಂಚಿಕೆ**

ವಯೋಗುಂಪುಗಳು ಯಾವುದೇ ಒಂದು ಸಂಗತಿಯನ್ನು ಅಥವಾ ಘಟನೆಯನ್ನು ಸಾಕ್ಷೀಕರಿಸುವಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತವೆ. ಬೇರೆ ಬೇರೆ ವಯೋಗುಂಪುಗಳು ಬೇರೆ ಬೇರೆ ಕಾಲಘಟ್ಟಗಳಲ್ಲಿನ ವಸ್ತುಸ್ಥಿತಿಯನ್ನು ಅರಿತವುಗಳಾದ್ದರಿಂದ ಈ ಅಧ್ಯಯನದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಸ್ಥಿತಿಗಳು ಹಾಗೂ ಅವುಗಳಲ್ಲಿನ ಬದಲಾವಣೆಗಳನ್ನು ಅರಿಯುವಲ್ಲಿ ಬಹಳ ಮಹತ್ವದ ಪಾತ್ರವನ್ನು ವಹಿಸುತ್ತವೆ. ಅದೇ ರೀತಿಯಲ್ಲಿ 'ಲಿಂಗ'ವು ಕೂಡ ಬಹಳ ಮುಖ್ಯವಾದದ್ದು. ಈ ಅಧ್ಯಯನದಲ್ಲಿ ಕೌಟುಂಬಿಕ ಪದ್ಧತಿ, ಸಂಸ್ಕೃತಿ, ಆಚಾರ-ವಿಚಾರ, ಸಾಮಾಜಿಕ ಬದಲಾವಣೆಗಳನ್ನು ಅರಿಯುವಲ್ಲಿ ಮಹಿಳೆಯರೂ ಮುಖ್ಯ ಪಾತ್ರ ವಹಿಸುತ್ತಾರೆ. ಅವರನ್ನು ಕೂಡ ಅಧ್ಯಯನ ಮಾಡಲಾಗಿದೆ. ತಿಳುವಳಿಕೆದಾರರ ವಯಸ್ಸಿನ ಲಿಂಗವಾರು ಹಂಚಿಕೆಯನ್ನು ಈ ಕೆಳಗಿನ ಕೋಷ್ಟಕದಿಂದ ಅವಲೋಕಿಸಬಹುದು.

**ಕೋಷ್ಟಕ-೩.೦೨**

**ತಿಳುವಳಿಕೆದಾರರ ವಯಸ್ಸಿನ ಲಿಂಗವಾರು ಹಂಚಿಕೆಯ ವಿವರ**

| ವಯೋಗುಂಪು | ಲಿಂಗವಾರು ತಿಳುವಳಿಕೆದಾರರ ಹಂಚಿಕೆ | | ಒಟ್ಟು ಸಂಖ್ಯೆ ಮತ್ತು ಶೇಕಡಾವಾರು |
|---|---|---|---|
| | ಪುರುಷ | ಮಹಿಳೆ | |
| ೨೦-೩೦ | ೧೯ | ೨ | ೨೧ (೨೧.೦೦) |
| ೩೧-೪೦ | ೨೨ | ೩ | ೨೫ (೨೫.೦೦) |
| ೪೧-೫೦ | ೩೦ | ೫ | ೩೫ (೩೫.೦೦) |
| ೫೧+ | ೧೭ | ೨ | ೧೯ (೧೯.೦೦) |
| ಒಟ್ಟು | ೮೮ | ೧೨ | ೧೦೦ (೧೦೦.೦೦) |

ಈ ಕೋಷ್ಟಕದಲ್ಲಿ ೨೦-೩೦ ವಯೋಗುಂಪಿನಲ್ಲಿ ಒಟ್ಟು (ಶೇ. ೨೧) ತಿಳುವಳಿಕೆದಾರರಿದ್ದು, ಅವರಲ್ಲಿ ೧೯ ಪುರುಷರು ಮತ್ತು ೨ ಮಹಿಳೆಯರು ಈ ಸಂಶೋಧನೆಯಲ್ಲಿ ಭಾಗಿಗಳಾಗಿರುವುದು ಕಂಡುಬರುತ್ತದೆ. ೩೧-೪೦ ವಯೋಗುಂಪಿನಲ್ಲಿ ಒಟ್ಟು ೨೫ (ಶೇ. ೨೫) ತಿಳುವಳಿಕೆದಾರರಿದ್ದು, ೨೨ ಪುರುಷರು ಮತ್ತು ೩ ಮಹಿಳೆಯರು ಭಾಗಿಗಳಾಗಿರುವುದು ಕಂಡುಬರುತ್ತದೆ. ೪೧-೫೦ರ ವಯೋಗುಂಪಿನಲ್ಲಿ ಒಟ್ಟು ೩೫ (ಶೇ.

೩೫) ತಿಳುವಳಿಕೆದಾರರಿದ್ದರು, ೩೦ ಪುರುಷರು ಮತ್ತು ೫ ಮಹಿಳೆಯರು ಈ ಸಂಶೋಧನೆಯಲ್ಲಿ ಭಾಗಿಗಳಾಗಿದ್ದಾರೆ. ಹಾಗೆಯೇ ೫೧ಕ್ಕಿಂತ ಹೆಚ್ಚಿನ ವಯೋಮಾನದವರಲ್ಲಿ ಒಟ್ಟು ೧೯ (ಶೇ. ೧೯) ತಿಳುವಳಿಕೆದಾರರಿದ್ದು, ಅವರಲ್ಲಿ ೧೭ ಪುರುಷರು ಮತ್ತು ೨ ಮಹಿಳೆಯರು ಭಾಗಿಗಳಾಗಿರುವುದು ಕಂಡುಬರುತ್ತದೆ.

ವಯಸ್ಸು ಮತ್ತು ಲಿಂಗವನ್ನು ಆಧರಿಸಿರುವ ಈ ಕೋಷ್ಟಕವನ್ನು ಅವಲೋಕಿಸಿದಾಗ ಬಹಳ ಮುಖ್ಯವಾಗಿ ಕಂಡುಬರುವ ಅಂಶವೆಂದರೆ ४१-೫೦ ವರ್ಷದ ಒಳಗಿನ ತಿಳುವಳಿಕೆದಾರರು ಶೇಕಡಾ ೩೫ರಷ್ಟು ಇದ್ದು, ಇವರು ಗೌಡಾಲು ಬುಡಕಟ್ಟು ಜನಾಂಗದ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನ ಮಾಡುವಾಗ ಪ್ರತಿಕ್ರಿಯೆಗಳನ್ನು ತಿಳಿಸಲು ಸಮರ್ಥರಾಗಿರುತ್ತಾರೆ. ಒಂದು ಸೀಮಿತ ಕಾಲಘಟ್ಟದಲ್ಲಿ ಗೌಡಾಲು ಬುಡಕಟ್ಟು ಜನಾಂಗದ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನ ಮಾಡುವಾಗ ಈ ವಯೋಮಾನದ ತಿಳುವಳಿಕೆದಾರರ ಅನುಭವದ ಮಾಹಿತಿಯು ಬಹಳ ಮಹತ್ವದ್ದಾಗಿರುತ್ತದೆ.

**ತಿಳುವಳಿಕೆದಾರರ ಮಾತೃಭಾಷೆಯ ಹಂಚಿಕೆ**

ಗೌಡಾಲು ಬುಡಕಟ್ಟು ಜನಾಂಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ 'ಕನ್ನಡ' ಭಾಷೆಯನ್ನು ಉಳಿದವರು 'ತುಳು' ಭಾಷೆಯನ್ನು ತಮ್ಮ ಮಾತೃಭಾಷೆಯನ್ನಾಗಿ ಹೊಂದಿದ್ದಾರೆ. ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಶೃಂಗೇರಿ, ಕೊಪ್ಪ, ನರಸಿಂಹರಾಜಪುರ(ಎನ್.ಆರ್.ಪುರ), ಮೂಡಿಗೆರೆ ಮತ್ತು ಚಿಕ್ಕಮಗಳೂರು ತಾಲ್ಲೂಕುಗಳಲ್ಲಿ ಮತ್ತು ಶಿವಮೊಗ್ಗ ವ್ಯಾಪ್ತಿಯಲ್ಲಿ ಬರುವ ತೀರ್ಥಹಳ್ಳಿ ಮತ್ತು ಹೊಸನಗರ ತಾಲ್ಲೂಕುಗಳಲ್ಲಿ ಹೆಚ್ಚಿನ ಜನ ಕನ್ನಡವನ್ನು ತಮ್ಮ ಮಾತೃಭಾಷೆಯಾಗಿ ಹೊಂದಿದ್ದರೆ, ಉಡುಪಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕಾರ್ಕಳ ತಾಲ್ಲೂಕಿನವರು ತುಳು ಭಾಷೆಯನ್ನು ತಮ್ಮ ಮಾತೃಭಾಷೆಯನ್ನಾಗಿ ಹೊಂದಿದ್ದಾರೆ.

**ಕೋಷ್ಟಕ-೩.೦೩**

**ತಿಳುವಳಿಕೆದಾರರ ಮಾತೃಭಾಷೆಯ ಹಂಚಿಕೆ**

| ಕ್ರ.ಸಂ. | ಮಾತೃಭಾಷೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಕನ್ನಡ | ೮೮ | ೮೮.೦೦ |
| ೨. | ತುಳು | ೧೨ | ೧೨.೦೦ |
| | ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಕನ್ನಡ ಭಾಷೆಯನ್ನು ಮಾತೃಭಾಷೆಯಾಗಿ ಮಾತನಾಡುವವರ ಸಂಖ್ಯೆ ಒಟ್ಟು ೮೮ (ಶೇ. ೮೮) ಇದೆ. ಹಾಗೆಯೇ ತುಳು ಭಾಷೆಯನ್ನು ತಮ್ಮ ಮಾತೃಭಾಷೆಯನ್ನಾಗಿ ಮಾತನಾಡುವ ತಿಳುವಳಿಕೆದಾರರ ಸಂಖ್ಯೆ ಒಟ್ಟು ೧೨ (ಶೇ. ೧೨) ಇರುವುದು ತಿಳಿದುಬರುತ್ತದೆ.

ಒಟ್ಟು ಸಮುದಾಯದಲ್ಲಿ ಕನ್ನಡ ಭಾಷೆಯಲ್ಲಿ ಹೆಚ್ಚು ಜನ ಮಾತಾಡುತ್ತಿದ್ದು, ಇವರು ಚಿಕ್ಕಮಗಳೂರು ಮತ್ತು ಶಿವಮೊಗ್ಗದ ವ್ಯಾಪ್ತಿಯಲ್ಲಿ ಬರುವವರಾಗಿದ್ದರೆ, ಕಡಿಮೆ ಜನ ತುಳು ಭಾಷೆಯನ್ನು ಮಾತೃಭಾಷೆಯನ್ನಾಗಿ

ಹೊಂದಿದ್ದಾರೆ. ಇದಕ್ಕೆ ಕಾರಣ, ಇವರು ಉಡುಪಿ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿದ್ದು, ದಕ್ಷಿಣ ಕನ್ನಡದ ಭಾಷೆಯು ತುಳು ಆಗಿದೆ.

**ತಿಳುವಳಿಕೆದಾರರ ಮನೆಯ ಸ್ವರೂಪ**

ಮಾನವನ ಮೂಲಭೂತ ಬೇಡಿಕೆಗಳಲ್ಲಿ ವಸತಿಯು ಒಂದು. ವಸತಿಯನ್ನು ತಮ್ಮ ಅಗತ್ಯ ಹಾಗೂ ಅವಶ್ಯಕತೆಗಳಿಗನುಗುಣವಾಗಿ ನಿರ್ಮಾಣ ಮಾಡಿಕೊಂಡಿರುತ್ತಾರೆ ಅಥವಾ ಬಾಡಿಗೆ, ಭೋಗ್ಯಕ್ಕೆ ಪಡೆದುಕೊಂಡಿರುತ್ತಾರೆ. ಅವರು ಹೊಂದಿರುವ ಮನೆಗಳಲ್ಲಿ ಗುಡಿಸಲು ಮನೆ, ತಗಡಿನ ಮನೆ, ಇಂದಿರಾ ಆವಾಸ್ ಮನೆ, ಹೆಂಚಿನ ಮನೆ, ಅರ್ಧ ಹೆಂಚು ಮತ್ತು ಅರ್ಧ ಆರ್.ಸಿ.ಸಿ. ಮನೆ, ಮಾಳಿಗೆ ಮನೆ, ಸಿಮೆಂಟಿನ ಶೀಟ್ ಮನೆಗಳಾಗಿವೆ. ಮಾನವನ ದೈಹಿಕ ಹಾಗೂ ಮಾನಸಿಕ ಆರೋಗ್ಯವನ್ನು ಕಾಪಾಡುವಂತಹ ವಸತಿಯನ್ನು ಹೊಂದಿರುವುದು ಅಥವಾ ವಸತಿ ಇಲ್ಲದಿದ್ದಲ್ಲಿ ಅದನ್ನು ಒದಗಿಸುವುದು ಸಂಬಂಧಪಟ್ಟವರ ಅಥವಾ ಸರಕಾರದ ಜವಾಬ್ದಾರಿಯೂ ಆಗಿದೆ.

**ಕೋಷ್ಟಕ-೩.೦೪**

**ತಿಳುವಳಿಕೆದಾರರ ಮನೆಯ ಸ್ವರೂಪ**

| ಕ್ರ.ಸಂ. | ಮನೆಯ ಸ್ವರೂಪ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಗುಡಿಸಲು ಮನೆ | ೧೩ | ೧೩.೦೦ |
| ೨. | ಇಂದಿರಾ ಆವಾಸ್‌ಮನೆ | ೩ | ೩.೦೦ |
| ೩. | ಹೆಂಚಿನ ಮನೆ | ೮೧ | ೮೧.೦೦ |
| ೪. | ಅರ್ಧ ಹಂಚು ಮತ್ತು ಅರ್ಧ ಆರ್.ಸಿ.ಸಿ | ೩ | ೩.೦೦ |
| | ಒಟ್ಟು | ೧೦೦ | ೧೦೦.೦೦ |

ಈ ಕೋಷ್ಟಕವನ್ನು ಗಮನಿಸಿದಾಗ ಗುಡಿಸಲು ಮನೆಗಳಲ್ಲಿ ವಾಸ ಮಾಡುವ ತಿಳುವಳಿಕೆದಾರರ ಪ್ರಮಾಣ ಶೇಕಡಾ ೧೩ರಷ್ಟು ಇದೆ. ಇಂದಿರಾ ಆವಾಸ್ ಮನೆಗಳಲ್ಲಿ ವಾಸವಾಗಿರುವ ತಿಳುವಳಿಕೆದಾರರ ಪ್ರಮಾಣ ಶೇಕಡಾ ೩ರಷ್ಟು ಇದೆ. ಹೆಂಚಿನ ಮನೆಗಳಲ್ಲಿ ವಾಸವಾಗಿರುವವರ ಪ್ರಮಾಣ ಶೇಕಡಾ ೮೧ರಷ್ಟು ಇದೆ. ಅರ್ಧ ಹೆಂಚು ಮತ್ತು ಅರ್ಧ ಆರ್.ಸಿ.ಸಿ. ಮನೆಗಳಲ್ಲಿ ವಾಸವಾಗಿರುವವರ ಪ್ರಮಾಣ ಶೇ. ೩ರಷ್ಟು ಇದೆ.

ಈ ಕೋಷ್ಟಕದಲ್ಲಿ ಮುಖ್ಯವಾಗಿ ಕಂಡು ಬರುವ ಅಂಶವೆಂದರೆ ಶೇಕಡಾ ೮೧ರಷ್ಟು ಹೆಂಚಿನ ಮನೆಗಳಲ್ಲಿ ವಾಸವಾಗಿರುವುದು. ಇದನ್ನು ಗಮನಿಸಿದಾಗ, ಅವರು ವಸತಿ ವ್ಯವಸ್ಥೆಯಲ್ಲಿ ಸುಧಾರಣೆ ಹೊಂದಿದ್ದಾರೆ ಎಂಬುದು ತಿಳಿದುಬರುತ್ತದೆ. ಆದರೆ, ಶೇಕಡ ೧೩ರಷ್ಟು ಗುಡಿಸಲುಗಳಲ್ಲಿ ವಾಸವಾಗಿದ್ದು, ಇವರು ವಸತಿಯ ಸಮಸ್ಯೆಗಳಿಂದ ಬಳಲುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ತಿಳುವಳಿಕೆಗಾರರ ಮನೆಯ ಮಾಲೀಕತ್ವದ ವಿವರ**

ಸಮುದಾಯವು ಹೊಂದಿರುವ ಮನೆಯ ಮಾಲೀಕತ್ವವು ಅವರ ಅಂತಸ್ತನ್ನು ಸೂಚಿಸುತ್ತದೆ. ಇವರು ಸ್ವಂತ ಮನೆಯಲ್ಲಿ ನೆಲೆಸಿದ್ದರೆ, ಸರಕಾರಿ ಸ್ವಾಮ್ಯದಲ್ಲಿ ನೆಲೆಸಿದ್ದರೆ ಅಥವಾ ಭೋಗ್ಯ ವಸತಿಯಲ್ಲಿ ವಾಸವಾಗಿದ್ದರೆ ಅದಕ್ಕೆ ತಕ್ಕಂತೆ ಇವರ ಅಂತಸ್ತು ನಿರ್ಧಾರವಾಗುತ್ತದೆ.

### ಕೋಷ್ಟಕ ೩.೦೫

### ತಿಳುವಳಿಕೆದಾರರ ಮನೆಯ ಮಾಲೀಕತ್ವದ ಹಂಚಿಕೆಯ ವಿವರ

| ಕ್ರ.ಸಂ. | ಮನೆಯ ಮಾಲೀಕತ್ವದ ಸ್ವರೂಪ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ೧. | ಸ್ವಂತ | ೯೬ | ೯೬.೦೦ |
| ೨. | ಸರಕಾರಿ ಸ್ವಾಮ್ಯ | ೨ | ೨.೦೦ |
| ೩. | ಭೋಗ್ಯ | ೨ | ೨.೦೦ |
| | ಒಟ್ಟು | ೧೦೦ | ೧೦೦.೦೦ |

ಕೋಷ್ಟಕ ೩.೦೫ನ್ನು ಗಮನಿಸಿದಾಗ ಸ್ವಂತ ಮನೆಗಳಲ್ಲಿ ವಾಸವಾಗಿರುವವರ ಪ್ರಮಾಣ ಶೇಕಡಾ ೯೬ರಷ್ಟು ಇದೆ. ಸರಕಾರಿ ಸ್ವಾಮ್ಯ ಅಥವಾ ಸರಕಾರಿ ಜಾಗದಲ್ಲಿ ತಮ್ಮ ಮನೆಗಳನ್ನು ಕಟ್ಟಿಕೊಂಡಿರುವವರ ಸಂಖ್ಯೆ ಶೇಕಡಾ ೨ರಷ್ಟು ಇದೆ ಮತ್ತು ಭೋಗ್ಯದ ಮನೆಗಳಲ್ಲಿ ವಾಸವಾಗಿರುವವರ ಪ್ರಮಾಣ ಶೇಕಡಾ ೨ರಷ್ಟು ಇರುವುದು ಕಂಡುಬರುತ್ತದೆ.

ಈ ಕೋಷ್ಟಕದಿಂದ ಸರಕಾರ ಮತ್ತು ಇತರೆ ಸಂಘ ಸಂಸ್ಥೆಗಳಿಂದ ವಸತಿ ಸೌಲಭ್ಯ ಪಡೆದವರ ಸಂಖ್ಯೆ ತೀರಾ ಕಡಿಮೆ ಎಂಬ ಅಂಶ ಕಂಡುಬರುತ್ತದೆ. ಸರಕಾರಿ ಸ್ವಾಮ್ಯ ಮತ್ತು ಭೋಗ್ಯ ಮನೆಗಳಲ್ಲಿ ವಾಸವಾಗಿರುವವರ ಸಂಖ್ಯೆ ಕಡಿಮೆ ಇದ್ದು, ಸ್ವಂತ ಮನೆಗಳಲ್ಲಿ ವಾಸವಾಗಿರುವವರ ಸಂಖ್ಯೆಯೇ ಹೆಚ್ಚಿರುವುದು ಇಲ್ಲಿ ಕಂಡುಬರುತ್ತದೆ.

### ಸಮುದಾಯದವರ ಮನೆಗಳಲ್ಲಿ ವಾಸವಾಗಿರುವ ಅವಧಿ (ವರ್ಷಗಳಲ್ಲಿ)

ಗೌಡಾಲು ತಮ್ಮ ಮನೆಗಳಲ್ಲಿ ಎಷ್ಟು ವರ್ಷಗಳಿಂದ ವಾಸವಾಗಿದ್ದಾರೆ, ಅತಿ ಕಡಿಮೆ ಎಂದರೆ ಎಷ್ಟು ವರ್ಷಗಳ ಇತ್ತೀಚಿನ ದಿನಗಳಿಂದ ವಾಸವಾಗಿದ್ದಾರೆ, ಅತಿ ಹೆಚ್ಚು ಎಂದರೆ ಎಷ್ಟು ವರ್ಷಗಳಷ್ಟು ಹಿಂದಿನಿಂದ ವಾಸವಾಗಿದ್ದಾರೆ ಎಂಬುದನ್ನು ಕುರಿತು ತಿಳಿಯಲಾಗಿದೆ.

### ಕೋಷ್ಟಕ ೩.೦೬

### ತಿಳುವಳಿಕೆದಾರರು ಮನೆಗಳಲ್ಲಿ ವಾಸವಾಗಿರುವ ಅವಧಿ ವರ್ಷಗಳಲ್ಲಿ

| ಕ್ರ.ಸಂ. | ವಾಸವಾಗಿರುವ ಅವಧಿ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ೧. | ೫-೧೦ | ೮ | ೮.೦೦ |
| ೨. | ೧೦-೧೫ | ೨ | ೨.೦೦ |
| ೩. | ೧೫-೨೦ | ೭ | ೭.೦೦ |
| ೪. | ೨೦-೩೦ | ೧೨ | ೧೨.೦೦ |
| ೫. | ೩೦-೪೦ | ೬ | ೬.೦೦ |
| ೬. | ೪೦-೫೦ | ೫ | ೫.೦೦ |
| ೭. | ೫೦+ | ೬೦ | ೬೦.೦೦ |
| | ಒಟ್ಟು | ೧೦೦ | ೧೦೦.೦೦ |

ಕೋಷ್ಟಕ ೩.೦೬ರನ್ನು ಗಮನಿಸಿದಾಗ ಶೇಕಡಾ ೮ರಷ್ಟು ತಿಳುವಳಿಕೆದಾರರು ೫-೧೦ವರ್ಷಗಳಿಂದ ವಾಸವಾಗಿದ್ದಾರೆ, ಶೇಕಡ ೨ರಷ್ಟು ತಿಳುವಳಿಕೆದಾರರು ೧೦-೧೫ ವರ್ಷಗಳಿಂದ ವಾಸವಾಗಿದ್ದಾರೆ. ಶೇಕಡಾ ೭ರಷ್ಟು ತಿಳುವಳಿಕೆದಾರರು ೧೫-೨೦ ವರ್ಷಗಳಿಂದ ವಾಸವಾಗಿದ್ದಾರೆ. ಶೇಕಡ ೧೨ರಷ್ಟು ೨೦-೩೦ ವರ್ಷಗಳಿಂದ ವಾಸವಾಗಿದ್ದಾರೆ. ಶೇಕಡಾ ೬ರಷ್ಟು ೩೦-೪೦ ವರ್ಷಗಳಿಂದ ವಾಸವಾಗಿದ್ದಾರೆ. ಶೇಕಡಾ ೫ ರಷ್ಟು ೪೦-೫೦ ವರ್ಷಗಳಿಂದ ವಾಸವಾಗಿದ್ದಾರೆ. ಹಾಗೆಯೇ ಶೇಕಡಾ ೬೦ರಷ್ಟು ೫೦ ವರ್ಷಕ್ಕಿಂತಲೂ ಹೆಚ್ಚು ವರುಷಗಳಿಂದ ನೆಲೆಸಿರುವುದು ಕಂಡಬರುತ್ತದೆ.

ಈ ಮೇಲಿನ ಕೋಷ್ಟಕದಿಂದ ೫೦ ವರ್ಷಗಳಿಗಿಂತಲೂ ಹೆಚ್ಚು ವರುಷಗಳಿಂದ ನೆಲೆಸಿರುವ ಶೇ.೬೦ಕ್ಕಿಂತಲೂ ಹೆಚ್ಚು ತಿಳುವಳಿಕೆದಾರರಲ್ಲಿ ಕೆಲವರು ದಕ್ಷಿಣ ಕನ್ನಡದಿಂದ ವಲಸೆ ಬಂದರೂ ಸಹ ಇವರಲ್ಲಿ ಕೆಲವರು ಹಲವಾರು ವರ್ಷಗಳಿಂದ ಇಲ್ಲಿಯೇ ನೆಲೆಸಿದ್ದು (ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ) ಇಲ್ಲಿಯ ಮೂಲನಿವಾಸಿಗಳಾಗಿದ್ದಾರೆ ಎಂಬುದು ಕಂಡುಬರುತ್ತದೆ.

**ತಿಳುವಳಿಕೆದಾರರ ವಿದ್ಯಾರ್ಹತೆ ಹಾಗೂ ಲಿಂಗವಾರು ಹಂಚಿಕೆ**

ಗೌಡಾಲು ಬುಡಕಟ್ಟು ಸಮುದಾಯದವರು ಗುಡ್ಡಗಾಡು ಪ್ರದೇಶದಲ್ಲಿ ನೆಲೆಸಿರುವ ಕಾರಣ ಶಿಕ್ಷಣಕ್ಕೆ ಹೆಚ್ಚಿನ ಒತ್ತು ನೀಡಲಿಲ್ಲ. ಶೈಕ್ಷಣಿಕ ಸೌಲಭ್ಯಗಳ ಕೊರತೆ, ದೂರದ ಊರುಗಳಿಗೆ ಹೋಗಿ ಶಿಕ್ಷಣ ಪಡೆಯಬೇಕಾಗಿದ್ದ ಸ್ಥಿತಿಯಲ್ಲಿ ಕೆಲವರಿಗೆ ಶಿಕ್ಷಣ ಹೊಂದಲು ಸಾಧ್ಯವಾಗಿಲ್ಲ. ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ಇರಲಿಲ್ಲ. ಮೂಲಭೂತ ಸೌಲಭ್ಯಗಳ ಕೊರತೆಯಿಂದಾಗಿ ಶಿಕ್ಷಣದಿಂದ ವಂಚಿತರಾಗಿದ್ದಾರೆ.

**ಕೋಷ್ಟಕ ೩.೦೭**

**ತಿಳುವಳಿಕೆದಾರರ ವಿದ್ಯಾರ್ಹತೆ ಹಾಗೂ ಲಿಂಗವಾರು ಹಂಚಿಕೆಯ ವಿವರ**

| ವಿದ್ಯಾರ್ಹತೆ | ಪುರುಷ | ಮಹಿಳೆ | ಒಟ್ಟು | ಶೇಕಡಾ |
|---|---|---|---|---|
| ಅನಕ್ಷರಸ್ಥರು | ೫೦ | ೧೧ | ೬೧ | ೬೧.೦೦ |
| ಅಕ್ಷರಸ್ಥರು (ಪ್ರಾಥಮಿಕ) | ೨೭ | ೭ | ೩೪ | ೩೪.೦೦ |
| ಅಕ್ಷರಸ್ಥರು (ಪ್ರೌಢ) | ೪ | ೧ | ೫ | ೫.೦೦ |
| **ಒಟ್ಟು** | ೮೧ | ೧೯ | ೧೦೦ | ೧೦೦.೦೦ |

ಮೇಲಿನ ಕೋಷ್ಟಕದಲ್ಲಿ ತಿಳುವಳಿಕೆದಾರರ ವಿದ್ಯಾರ್ಹತೆ ಹಾಗೂ ಲಿಂಗವಾರು ಹಂಚಿಕೆಯನ್ನು ಗಮನಿಸಿದಾಗ ೧೦೦ ತಿಳುವಳಿಕೆದಾರರಲ್ಲಿ ಶೇ.೫೦ರಷ್ಟು ಪುರುಷರು. ಶೇ.೧೧ರಷ್ಟು ಮಹಿಳೆಯರು, ಒಟ್ಟು ೬೧ ಶೇ (೬೧ರಷ್ಟು) ತಿಳುವಳಿಕೆದಾರರು ಅನಕ್ಷರಸ್ಥರಾಗಿದ್ದಾರೆ. ಅಕ್ಷರಸ್ಥ ತಿಳುವಳಿಕೆದಾರರಲ್ಲಿ ಶೇ. ೨೭ರಷ್ಟು ಪುರುಷರು ಮತ್ತು ಶೇ. ೯೭ರಷ್ಟು ಮಹಿಳೆಯರು ಒಟ್ಟು ೩೪ (ಶೇ. ೩೪ರಷ್ಟು) ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ್ದಾರೆ. ಶೇ.೪ರಷ್ಟು ಪುರುಷರು ಮತ್ತು ಶೇ. ೧ರಷ್ಟು ಮಹಿಳೆಯರು ಒಟ್ಟು ೫ (ಶೇ. ೦೫ರಷ್ಟು) ಪ್ರೌಢಶಿಕ್ಷಣವನ್ನು ಮುಗಿಸಿದ್ದಾರೆ.

ಈ ಕೋಷ್ಟಕವನ್ನು ಗಮನಿಸಿದಾಗ ಗೌಡಾಲು ಬುಡಕಟ್ಟು ಜನಾಂಗದಲ್ಲಿ ಹೆಚ್ಚು ಜನ ಅವಿದ್ಯಾವಂತರಾಗಿದ್ದಾರೆ ಎಂಬುದು ತಿಳಿದುಬರುತ್ತದೆ. ಕೇವಲ ಶೇ. ೩೯ರಷ್ಟು ಅಕ್ಷರಸ್ಥರಾಗಿದ್ದು, ಉಳಿದ ಶೇ. ೬೧ರಷ್ಟು ಅನಕ್ಷರಸ್ಥರಾಗಿರುವುದು ಕಂಡುಬರುತ್ತದೆ. ಅನಕ್ಷರಸ್ಥರು ಹೆಚ್ಚು ಇರಲು ಮುಖ್ಯ ಕಾರಣವೆಂದರೆ ಇವರು ಕಾಡು ಮೇಡು, ಕಣಿವೆ ಪ್ರದೇಶದಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಸಾರಿಗೆ ಸಂಪರ್ಕ, ಮೂಲಭೂತ ಅವಶ್ಯಕತೆಗಳಿಂದ ತೊಂದರೆಗಳನ್ನು ಎದುರಿಸುತ್ತಿರುವ ಇವರಿಗೆ ಶೈಕ್ಷಣಿಕ ಸಮಸ್ಯೆಗಳೂ ಇರುವುದು ಕಂಡುಬರುತ್ತದೆ.

### ತಿಳುವಳಿಕೆದಾರರ ವೈವಾಹಿಕ ಸ್ಥಾನಮಾನ

ವೈವಾಹಿಕ ಸ್ಥಾನಮಾನವೆಂಬುದು ಒಬ್ಬ ವ್ಯಕ್ತಿ ವಿವಾಹಿತನೇ, ಅವಿವಾಹಿತನೇ ಎಂಬುದನ್ನು ತಿಳಿಯುವುದಾಗಿದೆ. ಅವಿವಾಹಿತರನ್ನು ಇಂದಿಗೂ ಜವಾಬ್ದಾರಿ ಇಲ್ಲದವರು ಎಂಬುದಾಗಿ ಪರಿಗಣಿಸಿ, ಅವರಿಗೊಂದು ವಿವಾಹ ಮಾಡಿದರೆ ಎಲ್ಲ ಸರಿ ಹೋಗುತ್ತದೆ, ಜವಾಬ್ದಾರಿ ಬರುತ್ತದೆ ಎಂಬ ಮಾತುಗಳು ವಿವಾಹಿತರಲ್ಲಿ ಕೇಳಿಬರುತ್ತದೆ. ವಿವಾಹವು ವ್ಯಕ್ತಿಯನ್ನು ಕುಟುಂಬದ ಒಬ್ಬ ಜವಾಬ್ದಾರಿಯುತ ಸದಸ್ಯನನ್ನಾಗಿ ಮಾಡುತ್ತದೆ. ಕುಟುಂಬದ ಸುಖ-ಸಂತೋಷಗಳ, ದುಃಖ-ದುಮ್ಮಾನಗಳ ಅನುಭವಗಳನ್ನು ವ್ಯಕ್ತಿಗೆ ನೀಡುತ್ತದೆ. ಈ ಸಂಶೋಧನೆಯಲ್ಲಿ ತಿಳುವಳಿಕೆದಾರರ ವೈವಾಹಿಕ ಸ್ಥಾನಮಾನವನ್ನು ಅಧ್ಯಯನ ಮಾಡಲಾಗಿದೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯುವ ನಿಟ್ಟಿನಲ್ಲಿ ಇದು ಮುಖ್ಯ ಪಾತ್ರ ವಹಿಸುತ್ತದೆ.

**ಕೋಷ್ಟಕ-೩.೦೮**

**ತಿಳುವಳಿಕೆದಾರರ ವೈವಾಹಿಕ ಸ್ಥಾನಮಾನದ ವಿವರ**

| ವೈವಾಹಿಕ ಸ್ಥಾನಮಾನ | ತಿಳುವಳಿಕೆದಾರರ ಲಿಂಗಾವಾರು ವಿವರ | | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|---|
| | ಪುರುಷ | ಮಹಿಳೆ | | |
| ಅವಿವಾಹಿತ | ೨ | - | ೨ | ೨.೦೦ |
| ವಿವಾಹಿತ | ೬೯ | ೧೯ | ೮೮ | ೮೮.೦೦ |
| ವಿಚ್ಛೇದಿತೆ/ಪರಿತ್ಯಕ್ತೆ | - | ೨ | ೨ | ೨.೦೦ |
| ವಿಧವೆ/ವಿಧುರ | ೫ | ೩ | ೮ | ೮.೦೦ |
| ಒಟ್ಟು | ೭೬ | ೨೪ | ೧೦೦ | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿ ಒಟ್ಟು ೨ ಜನ (ಶೇ. ೦೨) ಪುರುಷರು ಅವಿವಾಹಿತರಾಗಿದ್ದಾರೆ. ಮಹಿಳೆಯರಲ್ಲಿ ಅವಿವಾಹಿತರು ಯಾರೂ ಇಲ್ಲ. ೬೯ ಪುರುಷರು ಮತ್ತು ೧೯ ಮಹಿಳೆಯರು ಒಟ್ಟು ೮೮ (ಶೇ. ೮೮) ಪರಿತ್ಯಕ್ತೆಗೆ ಒಳಗಾಗಿರುವುದು ಕಂಡುಬರುತ್ತದೆ. ಹಾಗೆಯೇ ೫ ಪುರುಷರು ಮತ್ತು ೩ ಮಹಿಳೆಯರು ಒಟ್ಟು ೮ ಜನ (ಶೇ.೦೮.ರಷ್ಟು) ವಿಧವೆ/ವಿಧುರರಾಗಿರುವುದು ಕಂಡುಬರುತ್ತದೆ.

ಈ ಕೋಷ್ಟಕದಿಂದ ಕಂಡುಬರುವ ಅಂಶವೆಂದರೆ ಅವಿವಾಹಿತ ತಿಳುವಳಿಕೆದಾರರಿಗಿಂತ ವಿವಾಹಿತ ತಿಳುವಳಿಕೆದಾರರ ಸಂಖ್ಯೆಯು ಹೆಚ್ಚಾಗಿರುವುದು. ಅಂದರೆ ವಿವಾಹಿತರು ಕುಟುಂಬದ ಯಜಮಾನರಾಗಿದ್ದು,

ಕುಟುಂಬದ ಸಂಪೂರ್ಣ ಜವಾಬ್ದಾರಿಯನ್ನು ಇವರು ಹೊಂದಿರುತ್ತಾರೆ. ಹಾಗಾಗಿ ಈ ಸಮೀಕ್ಷೆಯಲ್ಲಿ ಹೆಚ್ಚಿನವರು ವಿವಾಹಿತರೇ ಆಗಿರುವುದು ಕಂಡುಬರುತ್ತದೆ.

**ಕುಟುಂಬದ ಸದಸ್ಯರ ವೈವಾಹಿಕ ಸ್ಥಾನಮಾನದ ಹಂಚಿಕೆ**

ವಿವಾಹವೆಂಬುವುದು ಸಮಾಜದ ಒಂದು ಮುಖ್ಯಘಟ್ಟವಾಗಿದೆ. ಇದು ಸಾರ್ವತ್ರಿಕವಾಗಿದೆ ಮತ್ತು ಸಮಾಜದಿಂದ ಒಪ್ಪಿಗೆಯನ್ನು ಪಡೆದಂತಹ ಒಂದು ಸಾಮಾಜಿಕ ಸಂಬಂಧವಾಗಿದೆ. ಗೌಡಾಲು ಬುಡಕಟ್ಟು ಕುಟುಂಬದ ಸದಸ್ಯರಲ್ಲಿ ಇದರ ಪ್ರಮಾಣವು ಯಾವ ರೀತಿಯಲ್ಲಿ ಇದೆ ಎಂಬುದನ್ನು ಈ ಕೆಳಗಿನ ಕೋಷ್ಟಕದ ಮೂಲಕ ನಾವು ತಿಳಿದುಕೊಳ್ಳಬಹುದು.

**ಕೋಷ್ಟಕ - ೩.೦೯**

**ಕುಟುಂಬದ ಸದಸ್ಯರ ವೈವಾಹಿಕ ಸ್ಥಾನಮಾನದ ಹಂಚಿಕೆ**

| ವೈವಾಹಿಕ ಸ್ಥಾನಮಾನ | ಲಿಂಗವಾರು ಹಂಚಿಕೆ | | ಒಟ್ಟು |
|---|---|---|---|
| | ಪುರುಷ | ಮಹಿಳೆ | |
| ಅವಿವಾಹಿತರು | ೧೩೦ | ೧೨೬ | ೨೫೬ |
| ವಿವಾಹಿತರು | ೧೧೫ | ೭೬ | ೧೮೬ |
| ವಿಚ್ಛೇದಿತೆ/ಪರಿತ್ಯಕ್ತೆ | - | ೧ | ೧ |
| ವಿಧವೆ/ವಿಧುರ | ೬ | ೮ | ೧೪ |

ಈ ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಒಟ್ಟು ಕುಟುಂಬಗಳಲ್ಲಿ ವಾಸವಾಗಿರುವ ಒಟ್ಟು ಸದಸ್ಯರಲ್ಲಿ ವಿವಾಹಿತರ ಸಂಖ್ಯೆ ೨೫೬ರಷ್ಟಿದ್ದು, ಇದರಲ್ಲಿ ೧೩೦ ಪುರುಷರ ಸದಸ್ಯರು ಅವಿವಾಹಿತರಾಗಿದ್ದಾರೆ. ಹಾಗೆಯೇ ೧೨೬ರಷ್ಟು ಮಹಿಳಾ ಸದಸ್ಯರು ಅವಿವಾಹಿತರಾಗಿದ್ದಾರೆ. ವಿವಾಹಿತ ಕುಟುಂಬದ ಸದಸ್ಯರು ಒಟ್ಟು ೧೮೬ರಷ್ಟು ಇದ್ದು, ಇವರಲ್ಲಿ ೧೧೫ ಪುರುಷರು ಮತ್ತು ೭೬ ಮಹಿಳಾ ಕುಟುಂಬ ಸದಸ್ಯರು ವಿವಾಹಿತರಾಗಿರುವುದು ಕಂಡುಬರುತ್ತದೆ. ವಿಚ್ಛೇದಿತರಲ್ಲಿ ಒಬ್ಬಳು ಮಹಿಳೆ ಮಾತ್ರ ಇರುವುದು ಕಂಡುಬರುತ್ತದೆ. ವಿಧವೆ, ವಿಧುರರನ್ನು ಕುರಿತು ನೋಡುವುದಾದರೆ ಇವರು ಒಟ್ಟು ೧೪ ಜನರಿದ್ದು, ಇವರಲ್ಲಿ ೬ಜನ ಕುಟುಂಬದ ಪುರುಷ ಸದಸ್ಯರು ವಿಧುರರಾಗಿದ್ದು, ೮ ಜನ ಕುಟುಂಬದ ಮಹಿಳಾ ಮಹಿಳಾ ಸದಸ್ಯರು ವಿಧವೆಯರಾಗಿರುವುದನ್ನು ಕಂಡುಕೊಳ್ಳಬಹುದು.

ಇಲ್ಲಿ ನಮಗೆ ತಿಳಿದುಬರುವ ಸಂಗತಿಯೆಂದರೆ ಕುಟುಂಬದ ಸದಸ್ಯರಲ್ಲಿ ವಿವಾಹಿತರಿಗಿಂತ ಅವಿವಾಹಿತರ ಸಂಖ್ಯೆಯೇ ಹೆಚ್ಚಾಗಿದೆ. ಅಂದರೆ ವಿವಾಹವಾಗುವವರ ಸಂಖ್ಯೆಯೂ ಅಧಿಕವಾಗಿದೆ. ವಿಚ್ಛೇದಿತೆ ಪರಿತ್ಯಕ್ತೆಯರಿಗಿಂತ, ವಿಧವೆ-ವಿಧುರ ಇವರ ಸಂಖ್ಯೆಯೇ ಅಧಿಕ ಇದೆ. ವಯಸ್ಸಾದ ಪುರುಷ ಮತ್ತು ಮಹಿಳಾ ಸದಸ್ಯರುಗಳ ಇರುವುದು ಕಂಡುಬರುತ್ತದೆ.

### ತಿಳುವಳಿಕೆದಾರರ ಕುಟುಂಬದ ಗಾತ್ರ

ಕುಟುಂಬವು ಸಮಾಜದ ಒಂದು ಘಟಕವಾಗಿದ್ದು, ಇದು ಸಾರ್ವತ್ರಿಕವಾಗಿದೆ. ಇದೊಂದು ಚಿಕ್ಕಗಾತ್ರದ ಸಮಾಜವಾಗಿದೆ. ಕುಟುಂಬವು ಮಾನವನ ಜೀವನದ ತಳಹದಿಯಾಗಿದೆ. ಅಲ್ಲದೆ ಇದು ಎಲ್ಲ ಚಟುವಟಿಕೆಗಳಿಗೆ ಕೇಂದ್ರವಾಗಿದೆ. ಅವಿಭಕ್ತ ಕುಟುಂಬಗಳು ಇತ್ತೀಚಿನ ದಿನಗಳಲ್ಲಿ ವಿಭಕ್ತ ಕುಟುಂಬಗಳಾಗುತ್ತಿರುವುದು ಕಂಡುಬರುತ್ತದೆ. ಈ ಕುಟುಂಬಗಳು ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವನ್ನು ಹೊಂದಿದೆ.

**ಕೋಷ್ಟಕ - ೩.೧೦**

**ತಿಳುವಳಿಕೆದಾರರ ಕುಟುಂಬದ ಗಾತ್ರದ ವಿವರ**

| ಕುಟುಂಬದ ಗಾತ್ರ | ಕುಟುಂಬಗಳ ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ೧-೪ | ೫೮ | ೫೮.೦೦ |
| ೫-೮ | ೨೨ | ೨೨.೦೦ |
| ೯-೧೨ | ೧೨ | ೧೨.೦೦ |
| ೧೩- ೧೬ | ೮ | ೮.೦೦ |
| ೧೭+ | ೦೦ | ೦೦.೦೦ |
| ಒಟ್ಟು | ೧೦೦ | ೧೦೦.೦೦ |

ಈ ಕೋಷ್ಟಕದಲ್ಲಿ ಒಟ್ಟು ೫೮ (ಶೇ.೫೮) ಕುಟುಂಬಗಳು ೧-೪ ಸದಸ್ಯರನ್ನು ಹೊಂದಿವೆ. ಒಟ್ಟು ೨೨ (ಶೇ.೨೨)ರಷ್ಟು ಕುಟುಂಬಗಳಲ್ಲಿ ೫-೮ ಸದಸ್ಯರು ಇದ್ದಾರೆ. ಹಾಗೆಯೇ ಒಟ್ಟು ೧೨ (ಶೇ.೧೨) ಕುಟುಂಬಗಳು ೯-೧೨ ಸದಸ್ಯರನ್ನು ಹೊಂದಿವೆ. ಒಟ್ಟು ೦೮ (ಶೇ.೦೮)ರಷ್ಟು ಕುಟುಂಬಗಳಲ್ಲಿ ೧೩-೧೬ ಸದಸ್ಯರು ಇದ್ದಾರೆ. ೧೭ ಸದಸ್ಯರಿಗಿಂತಲೂ ಹೆಚ್ಚು ಜನರಿರುವ ಕುಟುಂಬಗಳು ನಮ್ಮ ಸಂಶೋಧನೆಯಲ್ಲಿ ಕಂಡುಬಂದಿರುವುದಿಲ್ಲ.

ಈ ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಕಂಡುಬರುವ ಅಂಶವೇನೆಂದರೆ ಕಡಿಮೆ ಗಾತ್ರದ ಸದಸ್ಯರನ್ನು ಹೊಂದಿರುವ ಕುಟುಂಬಗಳೇ ಹೆಚ್ಚು. ಶಿಕ್ಷಣ ಕಡಿಮೆ ಇದ್ದರೂ ಸಹಿತ ಬದುಕಿನ ಬಗ್ಗೆ ಖರ್ಚು- ವೆಚ್ಚಗಳ ಸಾಮಾನ್ಯ ತಿಳುವಳಿಕೆಗಳು ಹಾಗೂ ಭವಿಷ್ಯತ್ತಿನ ಬಗ್ಗೆ ಅರಿವು ಇರುವುದು ಕಂಡುಬರುತ್ತದೆ. ಹಾಗೆಯೇ ಅವಿಭಕ್ತ ಕುಟುಂಬಗಳ ಬದಲಾಗಿ ವಿಭಕ್ತ ಕುಟುಂಬಗಳು ಇವರಲ್ಲಿ ಹೆಚ್ಚಾಗಿ ಇರುವುದು ಕಾಣಿಸುತ್ತದೆ.

### ಕುಟುಂಬದ ಇತರೇ ಸದಸ್ಯರ ವಯೋಗುಂಪು ಹಾಗೂ ಲಿಂಗವಾರು ಹಂಚಿಕೆಯ ವಿವರ

ಈಗಾಗಲೇ ತಿಳುವಳಿಕೆದಾರರ ವಯೋಗುಂಪು ಮತ್ತು ಲಿಂಗವಾರು ಹಂಚಿಕೆಯನ್ನು ಗಮನಿಸಿದ್ದೇವೆ. ಇಲ್ಲಿ ತಿಳುವಳಿಕೆದಾರರನ್ನು ಹೊರತುಪಡಿಸಿ ಅವರ ಕುಟುಂಬದ ಸದಸ್ಯರ ವಯೋಗುಂಪು ಮತ್ತು ಲಿಂಗವಾರು ಹಂಚಿಕೆಯನ್ನು ಗಮನಿಸಲಾಗಿದೆ. ಒಂದು ಕುಟುಂಬದ ಸದಸ್ಯರ ವಯೋಮಾನಕ್ಕೂ ಹಾಗೂ ಲಿಂಗವಾರು ಹಂಚಿಕೆಯ ವಿವರಕ್ಕೂ ಬಹಳ ನಿಕಟವಾದ ಸಂಬಂಧವಿದೆ.

**ಕೋಷ್ಟಕ ೩.೧೧**

**ಕುಟುಂಬದ ಇತರೆ ಸದಸ್ಯರ ವಯೋಗುಂಪು ಹಾಗೂ ಲಿಂಗವಾರು ಹಂಚಿಕೆಯ ವಿವರ**

**(ತಿಳುವಳಿಕೆದಾರರನ್ನು ಹೊರತುಪಡಿಸಿ)**

| ವಯೋ ಗುಂಪು | ಸದಸ್ಯರ ಲಿಂಗವಾರು | | ವಿವರ |
|---|---|---|---|
| | ಪುರುಷ | ಮಹಿಳೆ | ಒಟ್ಟು ಗಾತ್ರ |
| ೦-೫ | ೫ | ೬ | ೧೧ |
| ೬-೧೦ | ೨೫ | ೧೮ | ೪೩ |
| ೧೧-೧೫ | ೨೧ | ೨೪ | ೪೫ |
| ೧೬-೨೦ | ೫೪ | ೫೧ | ೧೦೫ |
| ೨೧-೨೫ | ೫೪ | ೫೩ | ೧೦೭ |
| ೨೬-೩೦ | ೨೬ | ೧೬ | ೪೨ |
| ೩೧-೩೫ | ೨೦ | ೧೨ | ೩೨ |
| ೩೬-೪೦ | ೯ | ೬ | ೧೫ |
| ೪೧-೪೫ | ೮ | ೫ | ೧೩ |
| ೪೬-೫೦ | ೭ | ೪ | ೧೧ |
| ೫೧-೫೫ | ೬ | ೩ | ೯ |
| ೫೬-೬೦ | ೫ | ೩ | ೮ |
| ೬೧-೬೫ | ೪ | ೨ | ೬ |
| ೬೬+ | ೫ | ೪ | ೯ |

ಈ ಕೋಷ್ಟಕವನ್ನು ಅವಲೋಕಿಸಿದಾಗ ವಯೋಗುಂಪನ್ನು ಇಲ್ಲಿ ಒಟ್ಟು ೧೪ ವಿಭಾಗಗಳಾಗಿ ವಿಂಗಡಿಸಲಾಗಿದೆ. ಈ ವಯೋಗುಂಪಿನಲ್ಲಿ ಅವಲಂಬಿತರು, ಅವಲಂಬಿತರಲ್ಲದವರು, ಶಿಕ್ಷಣ ಪಡೆಯುತ್ತಿರುವವರು ಮತ್ತು ದುಡಿಯುವವರು ಇದ್ದಾರೆ. ೨೧-೨೫ರ ವಯೋಗುಂಪಿನಲ್ಲಿ ಇರುವವರ ಸಂಖ್ಯೆಯು ಅತಿ ಹೆಚ್ಚು ಇದೆ. ಅಂದರೆ ಒಟ್ಟು ೧೦೭ ಸದಸ್ಯರಿದ್ದು ಅದರಲ್ಲಿ ೫೪ ಪುರುಷರು ಮತ್ತು ೫೩ ಮಹಿಳೆಯರು ಇದ್ದಾರೆ. ಅತಿ ಕಡಿಮೆ ಸದಸ್ಯರು ಅಂದರೆ ೬೧-೬೫ರ ವಯೋಗುಂಪಿನವರಾಗಿದ್ದು, ಇವರಲ್ಲಿ ೪ ಪುರುಷರು ಮತ್ತು ೨ ಮಹಿಳೆಯರು ಇರುವುದು ಕಂಡುಬರುತ್ತದೆ. ಹಾಗೆಯೇ ೦-೫ ವರ್ಷದ ಸಣ್ಣ ಮಕ್ಕಳು, ೬-೧೦ ವಯೋಗುಂಪಿನ ಶಾಲೆಗೆ ಹೋಗುವ ವಯಸ್ಸಿನ ಮಕ್ಕಳಿಂದ ಹಿಡಿದು ೬೬ ವರ್ಷಕ್ಕಿಂತ ಮೇಲ್ಪಟ್ಟವರು ಈ ವಯೋಗುಂಪಿನಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಹಂಚಿಕೆಯಾಗಿರುವುದು ಕಂಡುಬರುತ್ತದೆ.

ಈ ಮೇಲಿನ ಕೋಷ್ಟಕದಲ್ಲಿ ಬಹಳ ಮುಖ್ಯವಾಗಿ ಕಂಡುಬರುವ ಅಂಶವೆಂದರೆ ೬-೧೦ ವಯೋಗುಂಪಿನಿಂದ ೩೧-೩೫ರ ವಯೋಗುಂಪಿನವರಿಗೆ ಅತ್ಯಂತ ಹೆಚ್ಚು ಸದಸ್ಯರು ಇದ್ದಾರೆ. ಇದರಲ್ಲಿಯೂ ಪುರುಷರ ಸಂಖ್ಯೆಯು ಮಹಿಳೆಯರ ಸಂಖ್ಯೆಗಿಂತ ಹೆಚ್ಚು ಇರುವುದು ಕಂಡುಬರುತ್ತದೆ.

**ಕುಟುಂಬದ ಸದಸ್ಯರ ವಿದ್ಯಾರ್ಹತೆ ಹಾಗೂ ಲಿಂಗವಾರು ಹಂಚಿಕೆ**

ವಿದ್ಯೆಯು ಒಂದು ಕುಟುಂಬದ ಸ್ಥಾನಮಾನವನ್ನು ಎತ್ತಿ ಹಿಡಿಯುತ್ತದೆ. ವಿದ್ಯಾರ್ಹತೆಯ ಆಧಾರದ ಮೇಲೆ ಆ ಕುಟುಂಬದ ಅಂತಸ್ತನ್ನು ಗುರುತಿಸಬಹುದು. ತಿಳುವಳಿಕೆದಾರರ ಕುಟುಂಬದ ಸದಸ್ಯರು ಯಾವ ಮಟ್ಟದಲ್ಲಿ ವಿದ್ಯಾರ್ಹತೆ ಹೊಂದಿದ್ದಾರೆ, ಸ್ತ್ರೀಯರು ಯಾವ ಮಟ್ಟದ ವಿದ್ಯಾರ್ಹತೆಯನ್ನು ಪಡೆದಿದ್ದಾರೆ ಎಂಬುವುದನ್ನು ಕುರಿತು ಈ ಕೆಳಗಿನ ಕೋಷ್ಟಕದ ಮೂಲಕ ಪರಿಚಯಿಸಲಾಗಿದೆ.

**ಕೋಷ್ಟಕ ೩.೧೨** 

**ಕುಟುಂಬದ ಸದಸ್ಯರ ವಿದ್ಯಾರ್ಹತೆ ಹಾಗೂ ಲಿಂಗವಾರು ವಿವರ**

| ವಯೋಗುಂಪು | ಸದಸ್ಯರ ಲಿಂಗವಾರು | | ವಿವರ |
|---|---|---|---|
| | ಪುರುಷ | ಮಹಿಳೆ | ಒಟ್ಟು ಗಾತ್ರ |
| ೫ ವರ್ಷಕ್ಕಿಂತ ಕಡಿಮೆ | ೧೯ | ೧೫ | ೩೪ |
| ಅನಕ್ಷರಸ್ಥರು | ೩೫ | ೨೭ | ೬೨ |
| ಅಕ್ಷರಸ್ಥರು | ೩೧ | ೨೦ | ೫೧ |
| ಪ್ರಾಥಮಿಕ ಶಿಕ್ಷಣ | ೬೨ | ೫೦ | ೧೧೨ |
| ಪ್ರೌಢ ಶಿಕ್ಷಣ | ೨೭ | ೧೮ | ೪೫ |
| ಪದವಿಪೂರ್ವ ಶಿಕ್ಷಣ | ೧೯ | ೧೦ | ೨೯ |
| ಪದವಿ ಶಿಕ್ಷಣ | ೧೧ | ೦೬ | ೧೭ |
| ಇಂಜಿನಿಯರಿಂಗ್ | ೦೨ | ೦೦ | ೦೨ |
| ವೃತ್ತಿ ಶಿಕ್ಷಣ | ೦೮ | ೦೩ | ೧೧ |
| ವೈದ್ಯಕೀಯ ಶಿಕ್ಷಣ | - | - | - |
| ಉನ್ನತ ಶಿಕ್ಷಣ | ೦೪ | ೦೧ | ೦೫ |

ಈ ಮೇಲಿನ ಕೋಷ್ಟಕದಿಂದ ತಿಳಿದುಬರುವ ಮಾಹಿತಿ ಏನೆಂದರೆ ಅಕ್ಷರಸ್ಥರ ಪ್ರಮಾಣವು ಮಹಿಳೆಯರಿಗಿಂತಲೂ ಪುರುಷರಲ್ಲಿಯೇ ಹೆಚ್ಚಾಗಿರುವುದು ಕಂಡುಬರುತ್ತದೆ. ಒಟ್ಟು ೫೧ ಅಕ್ಷರಸ್ಥರಲ್ಲಿ ೩೧ ಪುರುಷರು ಮತ್ತು ೨೦ ಮಹಿಳೆಯರು ಇದ್ದಾರೆ. ಒಟ್ಟು ೬೨ ತಿಳುವಳಿಕೆದಾರರಲ್ಲಿ ೩೫ ಪುರುಷರು ಮತ್ತು ೨೭ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಹಾಗೆಯೇ ಒಟ್ಟು ೧೧೨ ಪ್ರಾಥಮಿಕ ಶಿಕ್ಷಣ ಪಡೆದವರಲ್ಲಿ ೬೨ ಪುರುಷರು ಮತ್ತು ೫೦ ಮಹಿಳೆಯರಿದ್ದಾರೆ. ಪ್ರೌಢ ಶಿಕ್ಷಣ ಪಡೆದವರಲ್ಲಿ ಒಟ್ಟು ೪೫ ಕುಟುಂಬದ ಸದಸ್ಯರು ಇದ್ದು, ಅವರಲ್ಲಿ ೨೭ ಪುರುಷರು ಮತ್ತು ೧೮ ಮಹಿಳೆಯರು ಇದ್ದಾರೆ. ಒಟ್ಟು ೨೯ ತಿಳುವಳಿಕೆದಾರರಲ್ಲಿ, ೧೯ ಪುರುಷರು ಮತ್ತು ೧೦ ಮಹಿಳೆಯರು ಪದವಿ ಪೂರ್ವ ಶಿಕ್ಷಣ ಪಡೆದಿದ್ದಾರೆ. ಪದವಿ ಶಿಕ್ಷಣದಲ್ಲಿ ಒಟ್ಟು ೧೭ ಕುಟುಂಬದ ಸದಸ್ಯರಲ್ಲಿ ೧೧ ಪುರುಷರು ಮತ್ತು ೦೬ ಮಹಿಳೆಯರು ಪದವಿ ಶಿಕ್ಷಣವನ್ನು ಪಡೆದಿದ್ದಾರೆ, ಇಂಜಿನಿಯರಿಂಗ್‌ನಲ್ಲಿ ಒಟ್ಟು ೦೨ ಕುಟುಂಬದ ಸದಸ್ಯರಿದ್ದು, ಅವರು ಪುರುಷರೇ ಆಗಿದ್ದಾರೆ. ವೃತ್ತಿ ಶಿಕ್ಷಣದಲ್ಲಿ ಒಟ್ಟು ೧೧ ಜನರಿದ್ದು ಅವರಲ್ಲಿ ೦೮ ಪುರುಷರು ಮತ್ತು ೦೩ ಮಹಿಳೆಯರು. ಒಟ್ಟು ೦೫ ಸದಸ್ಯರಲ್ಲಿ ೦೪

ಪುರುಷರು ಮತ್ತು ೧೧ ಮಹಿಳೆ ಉನ್ನತ ಶಿಕ್ಷಣ ಪಡೆದವರಾಗಿದ್ದಾರೆ. ಕೊನೆಯದಾಗಿ ವೈದ್ಯಕೀಯ ಶಿಕ್ಷಣವನ್ನು ಪಡೆದವರು ಯಾರು ಇಲ್ಲದೇ ಇರುವುದು ಕಂಡುಬರುತ್ತದೆ.

ಈ ಕೋಷ್ಟಕದಿಂದ ಕಂಡುಬರುವ ಮುಖ್ಯ ಅಂಶವೆಂದರೆ ಗೌಡಾಲು ಬುಡಕಟ್ಟು ಜನಾಂಗದಲ್ಲಿ ಅಕ್ಷರಸ್ಥರ ಸಂಖ್ಯೆಗಿಂತಲೂ ಅನಕ್ಷರಸ್ಥರ ಸಂಖ್ಯೆಯೇ ಹೆಚ್ಚಿದ್ದು ಅಕ್ಷರಸ್ಥರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದವರ ಸಂಖ್ಯೆಯೇ ಅಧಿಕವಾಗಿದೆ. ನಂತರ ಪ್ರೌಢ ಶಿಕ್ಷಣ, ಪದವಿಪೂರ್ವ ಶಿಕ್ಷಣ, ಪದವಿ ಶಿಕ್ಷಣ, ವೃತ್ತಿ ಶಿಕ್ಷಣ ಉನ್ನತ ಶಿಕ್ಷಣವಾಗಿದೆ. ಹೀಗಾಗಿ ಕಡಿಮೆ ಸದಸ್ಯರು ಇಂಜಿನಿಯರಿಂಗ್ ಶಿಕ್ಷಣವನ್ನು ಪಡೆದವರಾಗಿದ್ದಾರೆ ಎಂಬುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ಕುಟುಂಬದ ಸದಸ್ಯರ ವೃತ್ತಿಯ ವಿವರ**

ವೃತ್ತಿಯು ಒಂದು ಸಮುದಾಯದ ಆರ್ಥಿಕತೆಯನ್ನು ನಿರ್ಧರಿಸುವಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತದೆ. ಆರ್ಥಿಕ ಅಂಶಗಳ ಆಧಾರದ ಮೇಲೆಯೇ ಕುಟುಂಬದ ಸ್ಥಿತಿಯು ಕಂಡುಬರುತ್ತದೆ.

**ಕೋಷ್ಟಕ-೩.೧೩**

**ತಿಳುವಳಿಕೆದಾರರ ಕುಟುಂಬದ ಸದಸ್ಯರ ವೃತ್ತಿಯ ಹಂಚಿಕೆಯ ವಿವರ**

| ವೃತ್ತಿ | ವೃತ್ತಿಯಲ್ಲಿ ನಿರತರು | | ಒಟ್ಟು ಸಂಖ್ಯೆ |
|---|---|---|---|
| | ಪುರುಷರು | ಮಹಿಳೆಯರು | |
| ೫ ವರ್ಷಕ್ಕಿಂತ ಕಡಿಮೆ | ೫ | ೪ | ೧೦ |
| ಗೃಹಿಣಿ/ಗಹಸ್ಥ | ೨೮ | ೩೪ | ೬೨ |
| ವಿದ್ಯಾರ್ಥಿ | ೬೮ | ೫೦ | ೧೧೮ |
| ನಿರುದ್ಯೋಗಿ | ೧೨ | ೭ | ೧೯ |
| ಕೃಷಿಕ | ೭೫ | ೩೫ | ೧೧೦ |
| ಕೃಷಿ ಕಾರ್ಮಿಕ | ೬೮ | ೬೫ | ೧೩೩ |
| ವ್ಯಾಪಾರ | ೧೨ | ೫ | ೧೭ |
| ಸರ್ಕಾರಿ ನೌಕರ | ೬ | ೪ | ೧೦ |
| ಅರೇ ಸರ್ಕಾರಿ ನೌಕರ | ೧೯ | ೫ | ೨೪ |
| ಖಾಸಗಿ ಸಂಸ್ಥೆ ನೌಕರ | ೮ | ೬ | ೧೪ |
| ಕೂಲಿ ಕಾರ್ಮಿಕ | ೧೧೦ | ೯೧ | ೨೦೧ |
| ವೈದ್ಯ | - | - | ೨೦೧ |
| ಇಂಜಿನಿಯರ್ | ೨ | - | ೨ |
| ವಕೀಲ | ೧ | - | ೧ |
| ಪ್ಲಾಂಟರ್ಸ್ | ೧ | - | ೧ |
| ಟೈಲರ್ | ೨ | ೧ | ೩ |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಸಮುದಾಯದ ಕುಟುಂಬದ ಸದಸ್ಯರು ಹಲವಾರು ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಒಟ್ಟು ಸದಸ್ಯರಲ್ಲಿ ಸುಮಾರು ಅರ್ಧಕ್ಕಿಂತಲೂ ಹೆಚ್ಚು ೨೦೧ ಸದಸ್ಯರು ಕೂಲಿಕಾರ್ಮಿಕರಾಗಿ ಹಾಗೂ ೧೩೩ ಸದಸ್ಯರು ಕೃಷಿ ಕಾರ್ಮಿಕರಾಗಿ ತಮ್ಮನ್ನು ಕಾಯಕದಲ್ಲಿ ತೊಡಗಿಸಿಕೊಂಡಿದ್ದಾರೆ. ಹಾಗೆಯೇ ೧೧೮ ಸದಸ್ಯರು ವಿದ್ಯಾರ್ಥಿಗಳಾಗಿದ್ದಾರೆ. ೧೧೦ ಸದಸ್ಯರು ಕೃಷಿಕರಾಗಿದ್ದಾರೆ, ೬೨ ಸದಸ್ಯರು ಗೃಹಿಣಿ/ಗೃಹಸ್ಥರಾಗಿದ್ದಾರೆ. ಹಾಗೆಯೇ ೧೯ ಸದಸ್ಯರು ನಿರುದ್ಯೋಗಿಗಳು, ೧೭ ಸದಸ್ಯರು ವ್ಯಾಪಾರಗಾರರಾಗಿಯೂ, ೧೯ ಸದಸ್ಯರು ಸರಕಾರಿ ನೌಕರಿಯಲ್ಲಿಯೂ, ೨೪ ಸದಸ್ಯರು ಅರೆ ಸರ್ಕಾರಿ ನೌಕರಿಯಲ್ಲಿಯೂ, ೧೪ ಸದಸ್ಯರು ಖಾಸಗಿ ಸಂಸ್ಥೆಗಳಲ್ಲಿಯೂ, ಹಾಗೆಯೇ ಇಂಜಿನಿಯರಿಂಗ್, ವಕೀಲ ವೃತ್ತಿ, ಪ್ಲಾಂಟರ್ಸ್, ಟೈಲರಿಂಗ್ ಹೀಗೆ ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿರುವುದು ಕಂಡುಬರುತ್ತದೆ. ಇಲ್ಲಿ ಅತಿ ಹೆಚ್ಚು ೨೦೧ ಸದಸ್ಯರು ಕೂಲಿ ಕಾರ್ಮಿಕರಾಗಿ ಬೇರೆಯವರ ಹೊಲ, ಗದ್ದೆಗಳಲ್ಲಿ ಕೂಲಿ ಕೆಲಸ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಕೆಲವು ಸದಸ್ಯರು ಒಂದಕ್ಕಿಂತ ಹೆಚ್ಚಿನ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಯಾವುದೇ ಒಂದು ವೃತ್ತಿಗೆ ಅಂಟಿಕೊಳ್ಳದೆ ವೈವಿಧ್ಯಮಯವಾದ ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವುದು ಅವರ ವಿಶೇಷತೆಯಾಗಿದೆ. ಮುಖ್ಯವಾಗಿ ಗಮನಿಸಲೇಬೇಕಾಗಿರುವುದು ಎಂದರೆ:

ಒಟ್ಟು ಕುಟುಂಬದ ಗಾತ್ರ ಹೆಚ್ಚಾಗಿದೆ. ಕಾರಣ ಕೆಲವು ಸದಸ್ಯರು ಒಂದಕ್ಕಿಂತ ಹೆಚ್ಚು ವೃತ್ತಿಗಳಲ್ಲಿ ನಿರತರಾಗಿರುವುದು ಕಂಡುಬರುತ್ತದೆ.

### ಕುಟುಂಬದ ಮಾಸಿಕ ಆದಾಯದ ವಿವರ

ಒಂದು ಕುಟುಂಬದ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳು ಆ ಕುಟುಂಬವು ಹೊಂದಿರುವ ಆದಾಯವನ್ನು ಅವಲಂಬಿಸಿರುತ್ತದೆ. ಅದು ಬೇರೆ ಬೇರೆ ವೃತ್ತಿಗಳಿಂದ ಬರುವಂತಹ ಆದಾಯವಾಗಿರಬಹುದು ಅಥವಾ ಕೃಷಿಯಿಂದ, ಕೂಲಿಯಿಂದ, ವ್ಯಾಪಾರದಿಂದ, ಕುಲಕಸುಬುಗಳಿಂದ ಸಿಗುವ ಆದಾಯವಾಗಿರಲೂಬಹುದು. ಗೌಡಾಲು ಬುಡಕಟ್ಟು ಜನರು ಹೆಚ್ಚಾಗಿ ಕೂಲಿ ಕಾರ್ಮಿಕರು, ಕೃಷಿಕರು, ಕೃಷಿಕಾರ್ಮಿಕರು ಆಗಿರುವ ಕಾರಣದಿಂದ ಇವರಲ್ಲಿ ಕಂಡುಬರುವಂತಹ ಆದಾಯದ ಕೃಷಿಕರು, ಕೃಷಿಕಾರ್ಮಿಕರು ಆಗಿರುವ ಕಾರಣದಿಂದ ಇವರಲ್ಲಿ ಕಂಡುಬರುವಂತಹ ಆದಾಯದ ಪ್ರಮಾಣವು ತುಂಬ ಕಡಿಮೆಯಾಗಿದೆ. ಏಕೆಂದರೆ ಕೃಷಿ ಪುರುಷ ಅಥವಾ ಕೃಷಿ ಕಾರ್ಮಿಕ ಅಥವಾ ಕೂಲಿಕಾರ್ಮಿಕರಿಗೆ ಬರುವ ಆದಾಯವು ಕಡಿಮೆಯಾಗಿದೆ.

**ಕೋಷ್ಟಕ-೩.೧೪**

**ಕುಟುಂಬದ ಒಟ್ಟು ಮಾಸಿಕ ಆದಾಯದ ವಿವರ**

| ಮಾಸಿಕ ಆದಾಯ ರೂ.ಗಳಲ್ಲಿ | ಕುಟುಂಬದ ಸಂಖ್ಯೆ | ಶೇಕಡಾವಾರು |
|---|---|---|
| ೫೦೦ಕ್ಕಿಂತ ಕಡಿಮೆ | ೬ | ೬.೦೦ |
| ೫೦೧-೧೦೦೦ | ೧೧ | ೧೧.೦೦ |
| ೧೦೦೧-೧೫೦೦ | ೧೪ | ೧೪.೦೦ |
| ೧೫೦೧-೨೦೦೦ | ೧೮ | ೧೮.೦೦ |

| ೨೦೦೧-೨೫೦೦ | ೧೨ | ೧೨.೦೦ |
|---|---|---|
| ೨೫೦೧-೩೦೦೦ | ೧೦ | ೧೦.೦೦ |
| ೩೦೦೧-೩೫೦೦ | ೮ | ೮.೦೦ |
| ೩೫೦೧-೪೦೦೦ | ೭ | ೭.೦೦ |
| ೪೦೦೧-೪೫೦೦ | ೫ | ೫.೦೦ |
| ೪೫೦೧-೫೦೦೦ | ೪ | ೪.೦೦ |
| ೫೦೦೧-೫೫೦೦ | ೩ | ೩.೦೦ |
| ೫೫೦೧+ | ೨ | ೨.೦೦ |
| **ಒಟ್ಟು** | ೧೦೦ | ೧೦೦.೦೦ |

ಕುಟುಂಬದಲ್ಲಿ ಇರುವ ತಿಳುವಳಿಕೆದಾರರ ಒಟ್ಟು ಮಾಸಿಕ ಆದಾಯದ ಕೋಷ್ಟಕವನ್ನು ಗಮನಿಸಿದಾಗ ಒಟ್ಟು ೧೦೦ ಜನರಲ್ಲಿ ಶೇ. ೬ರಷ್ಟು ೫೦೦ ರೂ.ಗಳಿಗಿಂತ ಕಡಿಮೆ ಮಾಸಿಕ ಆದಾಯ ಹೊಂದಿದ್ದಾರೆ. ಶೇ. ೧೧ರಷ್ಟು ತಿಳುವಳಿಕೆದಾರರು ೨೦೧-೧೦೦೦ ರೂ.ಗಳವರೆಗೆ ಆದಾಯ ಹೊಂದಿದ್ದಾರೆ. ಶೇ.೧೪ರಷ್ಟು ೧೦೦೧-೧೫೦೦ ರೂ.ಗಳವರೆಗೆ ಮಾಸಿಕ ಆದಾಯ ಹೊಂದಿದ್ದಾರೆ. ಶೇ. ೧೮ರಷ್ಟು ೧೫೦೧-೨೦೦೦ ರೂ.ಗಳವರೆಗೆ ಮಾಸಿಕ ಆದಾಯ ಹೊಂದಿದ್ದಾರೆ. ಶೇ. ೧೨ರಷ್ಟು ೨೦೦೧-೨೫೦೦ ರೂ.ಗಳವರೆಗೆ, ಶೇ. ೧೦ರಷ್ಟು ೨೫೦೧-೩೦೦೦ ರೂ.ಗಳವರೆಗೆ, ಶೇ. ೦೮ರಷ್ಟು ೩೦೦೧-೩೫೦೦ ರೂ.ಗಳವರೆಗೆ ಮಾಸಿಕ ಆದಾಯ ಹೊಂದಿದ್ದಾರೆ. ಶೇ. ೦೭ರಷ್ಟು ೩೫೦೧-೪೦೦೦ ರೂ.ಗಳವರೆಗೆ ಮಾಸಿಕ ಆದಾಯ ಹೊಂದಿದ್ದಾರೆ. ಶೇ. ೦೫ರಷ್ಟು ೪೦೦೧-೪೫೦೦ರೂ, ರಷ್ಟು, ಶೇ. ೦೪ರಷ್ಟು ೪೫೦೧-೫೦೦೦ ರಷ್ಟು, ಶೇ. ೦೩ರಷ್ಟು ೫೦೦೧-೫೫೦೦ರೂ. ರಷ್ಟು ಮತ್ತು ಶೇ. ೦೨ರಷ್ಟು ೫೫೦೧ಕ್ಕಿಂತ ಹೆಚ್ಚು ಆದಾಯವನ್ನು ಹೊಂದಿರುವುದು ಕಂಡುಬರುತ್ತದೆ.

ಈ ಕೋಷ್ಟಕದಿಂದ ತಿಳಿದುಬರುವ ಅಂಶವೇನೆಂದರೆ ಶೇ. ೦೬ರಷ್ಟು ೫೦೦ರೂ. ಮಾಸಿಕ ಆದಾಯ ಹೊಂದಿದ್ದರೆ, ಶೇ. ೦೨ರಷ್ಟು ಮಾಸಿಕ ೫೫೦೧ರೂ. ರಷ್ಟು ಆದಾಯ ಹೊಂದಿದ್ದಾರೆ. ಅತಿ ಹೆಚ್ಚು ಅಂದರೆ ಶೇ. ೧೮ರಷ್ಟು ರೂ.೧೫೦೧ರಿಂದ ೨೦೦೦ಗಳಷ್ಟು ಆದಾಯ ಹೊಂದಿರುವುದನ್ನು ಕಂಡುಕೊಳ್ಳಬಹುದು. ಅಂದರೆ ಈ ಬುಡಕಟ್ಟು ಜನಾಂಗದಲ್ಲಿ ಬಡವರ ಸಂಖ್ಯೆಯೇ ಹೆಚ್ಚಾಗಿದ್ದು ಇವರ ಮುಖ್ಯ ಕಸುಬು ಕೂಲಿ, ಕೃಷಿ, ಹೈನುಗಾರಿಕೆ ಆಗಿರುವ ಕಾರಣ ಇವರ ಮಾಸಿಕ ಆದಾಯವು ೧೫೦೧-೨೦೦೦ ರೂ.ಗಳವರೆಗೆ ಇರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

### ಆದಾಯದ ಮೂಲಗಳ ವಿವರ

ವ್ಯಕ್ತಿಯ ಜೀವನವು ಅವನು ಹೊಂದಿರುವ ಆರ್ಥಿಕ ಸ್ಥಿತಿಯ ಆದಾಯದ ಮೂಲದ ಮೇಲೆ ನಿಂತಿರುತ್ತದೆ. ಆದಾಯದ ಮೂಲವು ಕೃಷಿ, ವ್ಯಾಪಾರ, ನೌಕರಿ ಇನ್ನೂ ಹಲವಾರು ಕಸುಬುಗಳು ಆಗಿರಬಹುದು.

ಕೋಷ್ಟಕ-೩.೧೫

ತಿಳುವಳಿಕೆದಾರರ ಕುಟುಂಬದ ಆದಾಯದ ಮೂಲಗಳ ವಿವರ

| ಆದಾಯದ ಮೂಲಗಳು | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಕೃಷಿ | ೪೯ | ೪೯.೦೦ |
| ಅರಣ್ಯ ಉತ್ಪಾದನೆಗಳಿಂದ | ೦೨ | ೦೨.೦೦ |
| ಹೈನುಗಾರಿಕೆ | ೦೩ | ೦೩.೦೦ |
| ಉಪಕಸುಬುಗಳು | ೦೫ | ೦೫.೦೦ |
| ವ್ಯಾಪಾರ | ೦೨ | ೦೨.೦೦ |
| ಕೂಲಿ ಕೆಲಸ | ೩೧ | ೩೧.೦೦ |
| ಸರ್ಕಾರಿ ಕೆಲಸ | ೦೨ | ೦೨.೦೦ |
| ಖಾಸಗಿ | ೦೪ | ೦೪.೦೦ |
| ಇತರೆ | ೦೨ | ೦೨.೦೦ |
| ಒಟ್ಟು | ೧೦೦ | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿ ತಿಳುವಳಿಕೆದಾರರು ಹೊಂದಿರುವ ಮೂಲಗಳನ್ನು ಸೂಚಿಸಲಾಗಿದೆ. ಶೇ. ೪೯ರಷ್ಟು ಆದಾಯವು ಕೃಷಿಯಿಂದ ಬರುತ್ತದೆ. ಶೇ. ೦೨ರಷ್ಟು ಆದಾಯವು ಅರಣ್ಯ ಉತ್ಪನ್ನಗಳ ಸಂಗ್ರಹಣೆಯಿಂದ ಬರುತ್ತದೆ. ಶೇ. ೦೩ರಷ್ಟು ಆದಾಯವು ಹೈನುಗಾರಿಕೆಯಿಂದ ಬರುತ್ತದೆ. ಶೇ. ೦೫ರಷ್ಟು ಆದಾಯವು ಉಪಕಸುಬುಗಳಿಂದ ಬರುತ್ತದೆ. ಶೇ. ೦೩ರಷ್ಟು ಆದಾಯವು ವ್ಯಾಪಾರದಿಂದ ಬರುತ್ತದೆ. ಶೇ. ೩೧ರಷ್ಟು ಆದಾಯವು ಕೂಲಿಕೆಲಸದಿಂದ ಬರುತ್ತದೆ. ಶೇ. ೦೨ರಷ್ಟು ಆದಾಯವು ಸರ್ಕಾರಿ ನೌಕರಿಯಿಂದ ಬರುತ್ತದೆ. ಶೇ. ೦೪ರಷ್ಟು ಆದಾಯವು ಖಾಸಗಿ ಸಂಸ್ಥೆಗಳಿಂದ ಹಾಗೂ ಶೇ. ೦೨ರಷ್ಟು ಆದಾಯವು ಇತರೆ ಕೆಲಸಗಳಿಂದ ಬರುತ್ತದೆ ಎಂಬುದು ಕಂಡುಬರುತ್ತದೆ.

ಈ ಕೋಷ್ಟಕದಲ್ಲಿ ಕಂಡುಬರುವ ಮುಖ್ಯ ಸಂಗತಿ ಎಂದರೆ ಅತಿ ಹೆಚ್ಚು ಜನರು ಕೃಷಿಯಿಂದ ಆದಾಯವನ್ನು ಪಡೆಯುತ್ತಿದ್ದಾರೆ ಎಂಬುದಾಗಿದೆ. ಕೃಷಿಯನ್ನು ಹೊರತುಪಡಿಸಿದರೆ ಆದಾಯ ಬರುವ ಎರಡನೆಯ ಕ್ಷೇತ್ರ ಎಂದರೆ ಕೂಲಿ ಕೆಲಸದಿಂದ. ಅತಿ ಕಡಿಮೆ ಆದಾಯ ಬರುವ ಕ್ಷೇತ್ರಗಳೆಂದರೆ ಅರಣ್ಯ ಉತ್ಪನ್ನಗಳಿಂದ ಮತ್ತು ವ್ಯಾಪಾರದಿಂದ ಎಂಬುದನ್ನು ಕಂಡುಕೊಳ್ಳಬಹುದು.

**ತಿಳುವಳಿಕೆದಾರರ ಕುಟುಂಬದ ಮಾಸಿಕ ಅಂದಾಜು ವೆಚ್ಚದ ವಿವರ:**

ಮನುಷ್ಯನ ದೈನಂದಿನ ಜೀವನ ನಿರ್ವಹಣೆಗೆ ಅನೇಕ ವಸ್ತುಗಳ ಅಗತ್ಯತೆ ಇದೆ. ಅದೆಲ್ಲವನ್ನೂ ತಾನೇ ಸ್ವಂತ ಖರ್ಚಿನಲ್ಲಿ ನೆರವೇರಿಸಲು ಸಾಧ್ಯವಿಲ್ಲದ ಕಾರಣದಿಂದಾಗಿ, ತನ್ನ ದುಡಿಮೆಯ ಆದಾಯವನ್ನು ಆತ

ಖರ್ಚು ಮಾಡಬೇಕಾಗುತ್ತದೆ. ಆದರೆ, ಈ ಖರ್ಚು ಸಮರ್ಪಕವಾದ ರೀತಿಯಲ್ಲಿ ಮಾಡಬೇಕು. ಇಂದಿನ ಆದಾಯದ ಮಟ್ಟ, ಬೆಲೆ ಏರಿಕೆ, ಶೈಕ್ಷಣಿಕ ವೆಚ್ಚಗಳ ಕಾರಣದಿಂದಾಗಿ ಸಾಮಾನ್ಯ ಆದಾಯ ಹೊಂದಿರುವವರಿಗೆ ಜೀವನ ನಿರ್ವಹಣೆ ತುಂಬ ಕಷ್ಟಕರವಾಗಿರುತ್ತದೆ.

**ಕೋಷ್ಟಕ-೩.೧೬**

**ತಿಳುವಳಿಕೆದಾರರ ಕುಟುಂಬದ ಮಾಸಿಕ ಅಂದಾಜು ವೆಚ್ಚದ ವಿವರ**

| ವೆಚ್ಚ ರೂ.ಗಳಲ್ಲಿ | ದವಸ ಧಾನ್ಯ ವೆಚ್ಚ | ತರಕಾರಿ, ಹಾಲು ಹಣ್ಣುಗಳ ವೆಚ್ಚ | ಮಾಂಸ, ಮೀನು,ಮೊಟ್ಟೆ | ಸೊಪ್ಪು ಪೇಸ್ಟು ವೆಚ್ಚ | ಮಕ್ಕಳ ವಿದ್ಯಾಭ್ಯಾಸದ ವೆಚ್ಚ | ಇತರೆ |
|---|---|---|---|---|---|---|
| ೫೦೦ಕ್ಕಿಂತ ಕಡಿಮೆ | ೪೩ | ೫೭ | ೭೦ | ೯೫ | ೬೬ | ೬೨ |
| ೫೦೧-೧೦೦೦ | ೨೦ | ೩೬ | ೨೫ | ೫ | ೫ | ೧೬ |
| ೧೦೦೧-೧೫೦೦ | ೮ | - | ೨ | - | - | ೫ |
| ೧೫೦೧-೨೦೦೦ | ೧೬ | ೪ | ೧ | - | - | ೨ |
| ೨೦೦೧-೧೫೦೦ | ೨ | ೧ | - | - | - | - |
| ೨೫೦೧-೩೦೦೦ | ೭ | - | ೨ | - | - | ೨ |
| ೩೦೦೧-೩೫೦೦ | ೧ | - | - | - | - | ೧ |
| ೩೫೦೧-೪೦೦೦ | ೪ | ೧ | - | - | - | ೧ |
| ೪೦೦೧-೪೫೦೦ | ೧ | - | - | - | - | - |
| ೪೫೦೧-೫೦೦೦ | - | ೧ | - | - | - | - |
| ೫೦೦೧+ | ೧ | ೧ | - | - | - | ೨ |
| ಖರ್ಚು ಇಲ್ಲ | ೧ | - | - | - | ೨೯ | ೯ |

ಮೇಲಿನ ಕೋಷ್ಟಕದಲ್ಲಿ ತಿಳುವಳಿಕೆದಾರರು ತಮ್ಮ ಕುಟುಂಬದ ಮಾಸಿಕ ಅಂದಾಜು ವೆಚ್ಚಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡಿದ್ದು, ಅಗತ್ಯವಾದ ಆಹಾರ ಪದಾರ್ಥಗಳಾದ ದವಸ-ಧಾನ್ಯ, ತರಕಾರಿ, ಹಾಲು, ಮಾಂಸ, ಸೊಪ್ಪು ಮಕ್ಕಳ ವಿದ್ಯಾಭ್ಯಾಸ, ಹಾಗೂ ಇತರೆ ದಿನನಿತ್ಯದ ಖರ್ಚುಗಳಿಗೆ ಒಂದು ತಿಂಗಳಿಗೆ ತಗಲುವ ಅಂದಾಜು ವೆಚ್ಚಗಳನ್ನು ತಿಳಿಸಲಾಗಿದೆ. ವೆಚ್ಚವನ್ನು ೫೦೦ ರೂ.ಗಳ ಅಂತರದ ಬೇರೆ ಬೇರೆ ಹಂತಗಳ ಮೂಲಕ ವಿವರಿಸಲಾಗಿದೆ. ಹೆಚ್ಚಿನ ಸಮುದಾಯಗಳು ಒಂದೊಂದು ವಸ್ತುಗಳಿಗೆ ೫೦೦ಕ್ಕಿಂತ ಕಡಿಮೆ ಖರ್ಚು ಮಾಡುವ ಗುಂಪುಗಳಲ್ಲಿ ಕಂಡುಬರುತ್ತಾರೆ. ಹೆಚ್ಚಿನ ತಿಳುವಳಿಕೆದಾರರು ದವಸ-ಧಾನ್ಯಕ್ಕೆ ೪೩, ತರಕಾರಿ, ಹಾಲು ಹಣ್ಣುಗಳಿಗೆ ೫೭, ಮಾಂಸ, ಮೀನು ಮತ್ತು ಮೊಟ್ಟೆಗಳಿಗಾಗಿ ೭೦, ಸೋಪು, ಪೇಸ್ಟುಗಳಿಗಾಗಿ ೯೫, ಮಕ್ಕಳ ವಿದ್ಯಾಭ್ಯಾಸಕ್ಕಾಗಿ ೬೬ ಮತ್ತು ಇತರ ವೆಚ್ಚಗಳಿಗೆ ಸಂಬಂಧಿಸಿದಂತೆ ೬೨ ರೂ. ೫೦೦ಕ್ಕಿಂತ ಕಡಿಮೆ ಖರ್ಚು ಮಾಡುತ್ತಿರುವುದು ಈ ಸಂಶೋಧನೆಯಲ್ಲಿ ಕಂಡುಬರುತ್ತದೆ. ೫೦೦೧ಕ್ಕಿಂತ ಹೆಚ್ಚು ಖರ್ಚು ಮಾಡುವವರಲ್ಲಿ ಕೇವಲ ೦೧

ತಿಳುವಳಿಕೆದಾರರು ದವಸ-ಧಾನ್ಯಕ್ಕೆ ಮತ್ತು ೧ ತಿಳುವಳಿಕೆದಾರರು ತರಕಾರಿ, ಹಾಲು ಮತ್ತು ಹಣ್ಣುಗಳಿಗೆ ವೆಚ್ಚ ಮಾಡುತ್ತಿರುವುದು ಕಂಡುಬರುತ್ತದೆ.

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಒಬ್ಬ ತಿಳುವಳಿಕೆದಾರರು ದವಸ ಧಾನ್ಯಕ್ಕೆ ಖರ್ಚು ಇಲ್ಲ ಎಂದಿದ್ದಾರೆ. ಅಂದರೆ, ಬೇಕಾದ ದವಸ ಧಾನ್ಯಗಳನ್ನೆಲ್ಲಾ ಅವರೇ ಬೆಳೆದುಕೊಳ್ಳುತ್ತಾರೆ ಎಂಬುದು ಕಂಡುಬರುತ್ತದೆ. ತಿಳುವಳಿಕೆದಾರರು ಆದಾಯದ ಮಿತಿಯಲ್ಲಿ ದಿನನಿತ್ಯದ ಬಳಕೆಗೆ ಸಾಮರ್ಥ್ಯಕ್ಕೆ ಅನುಗುಣವಾಗಿ ವೆಚ್ಚ ಮಾಡುತ್ತಿರುವುದು ಕಂಡುಬಂದಿದೆ. ೧೦೦ ತಿಳುವಳಿಕೆದಾರರಲ್ಲಿ ಬಹುತೇಕ ಶೇ.೫೦ಕ್ಕಿಂತ ಹೆಚ್ಚಿನ ತಿಳುವಳಿಕೆದಾರರು ಮಾಸಿಕ ರೂ.೫೦೦ಕ್ಕಿಂತಲೂ ಕಡಿಮೆ ಹಣವನ್ನು ಒಂದೊಂದು ವಸ್ತುಗಳಿಗೆ ವೆಚ್ಚ ಮಾಡುತ್ತಿರುವುದು ಈ ಸಂಶೋಧನೆಯಲ್ಲಿ ಕಂಡುಬರುತ್ತದೆ. ಇದನ್ನು ನೋಡಿದಾಗ ಈ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಬಡವರ ಸಂಖ್ಯೆಯೇ ಅಧಿಕವಾಗಿರುವುದನ್ನು ಕಂಡುಕೊಳ್ಳಬಹುದು.

**ತಿಳುವಳಿಕೆದಾರರ ಜಮೀನಿನ ವಿವರ**

ಕೃಷಿ ಕ್ಷೇತ್ರದಲ್ಲಿ ಪ್ರಾಧಾನ್ಯತೆಯನ್ನು ಹೊಂದಿರುವ ಗೌಡಾಲು ಬುಡಕಟ್ಟು ಸಮುದಾಯದವರು ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಹಾಗೆಯೇ ಕೃಷಿ ಭೂಮಿಯನ್ನು ಹೊಂದಿದ್ದರೂ ಕೂಡ ಅದರಿಂದ ಬರುವಂತಹ ಆದಾಯವು ಕಡಿಮೆ ಇದೆ.

**ಕೋಷ್ಟಕ-೩.೧೭**

**ತಿಳುವಳಿಕೆದಾರರ ಜಮೀನಿನ ವಿವರ**

| ಜಮೀನಿನ ಸ್ವರೂಪ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಸ್ವಂತ ಜಮೀನು | ೭೮ | ೭೮.೦೦ |
| ಗೇಣಿ ಜಮೀನು | ೫ | ೫.೦೦ |
| ಫಾರೆಸ್ಟ್ ಲ್ಯಾಂಡ್ | ೧೦ | ೧೦.೦೦ |
| ಜಮೀನು ಇಲ್ಲದವರು | ೭ | ೭.೦೦ |
| ಒಟ್ಟು | ೧೦೦ | ೧೦೦.೦೦ |

ಈ ಕೋಷ್ಟಕದಲ್ಲಿ ತಿಳುವಳಿಕೆದಾರರು ಹೊಂದಿರುವ ಜಮೀನಿನ ಸ್ವರೂಪವನ್ನು ವಿವರಿಸಲಾಗಿದೆ. ಶೇ.೭೮ರಷ್ಟು ಗೌಡಾಲು ಬುಡಕಟ್ಟು ಸಮುದಾಯದವರು ಸ್ವಂತ ಜಮೀನನ್ನು ಹೊಂದಿರುತ್ತಾರೆ. ಶೇ.೦೫ರಷ್ಟು ಜನರು ಗೇಣಿ ಜಮೀನು ಅಂದರೆ ಬೇರೆಯವರ ಜಮೀನನ್ನು ಗೇಣಿಯಾಗಿ ಪಡೆದು ಅದರಲ್ಲಿ ಕೃಷ್ಟಿಯನ್ನು ಮಾಡುತ್ತಿದ್ದಾರೆ. ಶೇ.೧೦ರಷ್ಟು ಜನರು ಫಾರೆಸ್ಟ್ ಲ್ಯಾಂಡ್ ಹೊಂದಿರುತ್ತಾರೆ. ಅಂದರೆ ಸರಕಾರದ ಜಾಗದಲ್ಲಿ ಕೃಷಿಯನ್ನು ಮಾಡಿಕೊಂಡು ಜೀವನವನ್ನು ನಡೆಸುತ್ತಿದ್ದಾರೆ. ಶೇ.೭ರಷ್ಟು ಗೌಡಾಲು ಬುಡಕಟ್ಟು ಜನರಿಗೆ ಯಾವುದೇ ರೀತಿಯ ಭೂಮಿ ಇಲ್ಲದೇ ಇರುವುದು ಕಂಡುಬರುತ್ತದೆ.

ತಿಳುವಳಿಕೆದಾರರಲ್ಲಿ ಎಷ್ಟು ಜನ ಜಮೀನು ಮತ್ತು ನಿವೇಶನಗಳನ್ನು ಯಾವ ಪ್ರಮಾಣದಲ್ಲಿ ಹೊಂದಿದ್ದಾರೆ ಎಂಬುದನ್ನು ಈ ಮೇಲಿನ ಕೋಷ್ಟಕವು ತಿಳಿಸುತ್ತದೆ. ಒಟ್ಟು ೧೦೦ ತಿಳುವಳಿಕೆದಾರರು ಹೊಂದಿರುವ ಜಮೀನು ಮತ್ತು ನಿವೇಶನದ ವಿವರವನ್ನು ಒಣಭೂಮಿ, ನೀರಾವರಿ ಭೂಮಿ, ತೋಟ ಹಾಗೂ ನಿವೇಶನಗಳೆಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ. ೦-೧ ಎಕರೆ ಜಮೀನು ಹೊಂದಿರುವ ಕುಟುಂಬಗಳಲ್ಲಿ ೫೪ ಜನ ನೀರಾವರಿ, ೧೦ ಜನ ಒಣಭೂಮಿ, ೨೧ ಜನ ತೋಟ, ೧೨ ಜನ ನಿವೇಶಗಳನ್ನು ಹೊಂದಿರುವುದು ತಿಳಿದುಬರುತ್ತದೆ ೧-೨ ಎಕರೆ ಜಮೀನುವುಳ್ಳವರಲ್ಲಿ ೨೨ ಜನ ನೀರಾವರಿ, ೫ ಜನ ಒಣಭೂಮಿ, ೦೪ ಜನ ತೋಟ ಹೊಂದಿರುವುದು ಕಂಡುಬರುತ್ತದೆ. ೨-೪ ಎಕರೆ ಭೂಮಿ ಹೊಂದಿದವರಲ್ಲಿ ೦೪ ಜನ ನೀರಾವರಿ, ೧ ಜನ ಒಣಭೂಮಿ, ೨ ಜನ ತೋಟ ಹೊಂದಿದ್ದಾರೆ. ೪-೬ ಭೂಮಿ ಹೊಂದಿದವರಲ್ಲಿ ೦೨ ಜನ ನೀರಾವರಿ, ೧ ಜನ ಒಣಭೂಮಿ, ೧ ಜನ ತೋಟವನ್ನು ಹೊಂದಿದ್ದಾರೆ. ೬ ಎಕರೆಗಿಂತ ಹೆಚ್ಚು ಭೂಮಿಯನ್ನು ಹೊಂದಿರುವವರಲ್ಲಿ ೦೧ ಮಾತ್ರ ನೀರಾವರಿ ಭೂಮಿಯನ್ನು ಹೊಂದಿದ್ದಾರೆ.

ಈ ಕೋಷ್ಟಕದಲ್ಲಿ ಕಂಡುಬರುವ ಮುಖ್ಯ ಅಂಶವೇನೆಂದರೆ ಅತಿ ಹೆಚ್ಚು ಗೌಡಾಲು ಬುಡಕಟ್ಟು ಸಮುದಾಯದವರು ೦-೧ ಎಕರೆಯಷ್ಟು ಭೂಮಿಯನ್ನು ಹೊಂದಿದ್ದಾರೆ. ೧-೨, ೨-೪, ೪-೬ ಮತ್ತು ೦೬ಕ್ಕಿಂತ ಹೆಚ್ಚು ಭೂಮಿ ಹೊಂದಿದವರ ಸಂಖ್ಯೆ ಕ್ರಮೇಣವಾಗಿ ಕಡಿಮೆಯಾಗುತ್ತಾ ಬಂದಿದೆ. ಇವರಲ್ಲಿ ಶ್ರೀಮಂತರು ಇಲ್ಲ. ಭೂಮಿಯಿಂದ ಬರುವಂತಹ ಉತ್ಪಾದನೆಯು ಕಡಿಮೆ ಇದೆ. ಹಾಗಾಗಿ ಇವರಲ್ಲಿ ಬಡವರ ಸಂಖ್ಯೆಯೇ ಹೆಚ್ಚಿರುವುದು ಕಂಡುಬರುತ್ತದೆ.

ತಿಳುವಳಿಕೆದಾರರು ನೀಡುವಂತಹ ಮಾಹಿತಿಯ ಆಧಾರದ ಮೇಲೆ ಈ ಅಧ್ಯಯನದಲ್ಲಿ ಗೌಡಾಲು ಬುಡಕಟ್ಟು ಜನಾಂಗದ ಸಮಗ್ರ ಮಾಹಿತಿಯನ್ನು ಕಲೆಹಾಕಿ ಅದನ್ನು ಅವರ ಮೂಲಭಾವನೆಗಳಿಗೆ ಧಕ್ಕೆ ಬಾರದಂತೆ ವಿವರಿಸಲಾಗಿದೆ. ಗೌಡಾಲು ಜನರ ಮನೆತನಗಳನ್ನು ಹೆಸರಿಸುವಾಗ 'ಗೌಡ', 'ಗೌಡಾಲು' ಎಂಬುದಾಗಿ ವಿಂಗಡಿಸಲಾಗಿದೆ. 'ಗೌಡ' ಎಂಬುದು ಒಂದು ಗೌರವಸೂಚಕ ಚಿಹ್ನೆಯಾಗಿರುವುದು ಕಂಡುಬರುತ್ತದೆ. ತಿಳುವಳಿಕೆದಾರರ ವಯೋಗುಂಪುಗಳನ್ನು ಕುರಿತು ನೋಡಿದಾಗ ೫೦ ವರ್ಷಗಳಿಗಿಂತ ಮೇಲ್ಪಟ್ಟವರ ಸಂಖ್ಯೆಯೇ ಶೇ.೬೨ರಷ್ಟು ಇರುವುದನ್ನು ಕಂಡುಕೊಳ್ಳಲಾಗಿದೆ. ಈ ವಯೋಗುಂಪಿನ ಸದಸ್ಯರು ಮನೆತನಗಳನ್ನು ಗಮನಿಸಿದಾಗ ಸಂಪ್ರದಾಯಬದ್ಧ ಮನೆತನಗಳೇ ಹೆಚ್ಚು ಕಂಡುಬರುತ್ತವೆ. ಅವರ ಆಚಾರ-ವಿಚಾರ, ನಡೆ-ನುಡಿ, ಉಡುಗೆ-ತೊಡುಗೆ, ಸಂಸ್ಕೃತಿ ತುಂಬಾ ವಿಶಿಷ್ಟವಾಗಿದ್ದು, ಸರಳ ಜೀವನವನ್ನು ನಡೆಸುತ್ತಿದ್ದಾರೆ. ಗೌಡಾಲು ಸಮುದಾಯದವರ ಶೈಕ್ಷಣಿಕ ಮಟ್ಟವನ್ನು ಗಮನಿಸಿದಾಗ ಶಿಕ್ಷಣ ಪಡೆದವರ ಸಂಖ್ಯೆಯು ಕಡಿಮೆ ಇದೆ. ಕಾರಣವೇನೆಂದರೆ, ಇವರಿಗೆ ಶಿಕ್ಷಣದ ತಿಳುವಳಿಕೆ ಇಲ್ಲ. ಸಾರಿಗೆ ಸಂಪರ್ಕದ ಕೊರತೆ, ಶಾಲೆಗಳ, ಶಿಕ್ಷಕರ ಸಂಪರ್ಕ ಇಲ್ಲದೇ ಇರುವುದು ಕಂಡುಬರುತ್ತದೆ. ಪುರುಷರಿಗೆ ಹೋಲಿಸಿದರೆ ಮಹಿಳೆಯರಲ್ಲಿ ಶಿಕ್ಷಣದ ಪ್ರಮಾಣ ಇನ್ನೂ ಕಡಿಮೆ ಇರುವುದು ಕಂಡುಬರುತ್ತದೆ. ಕಾಡು ಪ್ರದೇಶ, ಗುಡ್ಡಗಾಡು ಪ್ರದೇಶದಲ್ಲಿ ನೆಲೆಸಿರುವ ಇವರುಗಳ ಸಮಾಜದ ಮುಖ್ಯವಾಹಿನಿಯಿಂದ ನೂರಾರು ವರುಷಗಳಷ್ಟು ಹಿಂದೆ ಉಳಿದಿದ್ದಾರೆ ಎಂಬುದು ಕಂಡುಬರುತ್ತದೆ.

ಈ ಸಂಶೋಧನೆಯಲ್ಲಿ ಪಾಲ್ಗೊಂಡಂತಹ ಹೆಚ್ಚಿನ ತಿಳುವಳಿಕೆದಾರರು ವಿವಾಹಿತರಾಗಿದ್ದು, ಅವರ ಜೀವನ ಶೈಲಿ, ಕೌಟುಂಬಿಕ ಸಂಬಂಧ, ಕುಟುಂಬ ಪದ್ಧತಿ, ಆಚರಣೆಯ ಕ್ರಮಗಳು, ಹಬ್ಬ ಹರಿದಿನಗಳು, ಸಂಪ್ರದಾಯಗಳು, ಮನೆಯ ಮಾಲೀಕತ್ವ, ಅವರ ವೃತ್ತಿ ಹಾಗೂ ಜೀವನ ವಿಧಾನಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಪೂರ್ಣವಾಗಿ ನೀಡುವಲ್ಲಿ ಸಹಕಾರಿಯಾಗಿದ್ದಾರೆ.

ಗೌಡಾಲು ಬುಡಕಟ್ಟು ಜನರು ನೆಲೆಸಿರುವ ಮನೆಗಳಲ್ಲಿ ಹೆಚ್ಚಾಗಿ ಹೆಂಚಿನ ಮನೆಗಳು ಕಂಡುಬರುತ್ತವೆ. ಕೆಲವರು ಗುಡಿಸಲುಗಳಲ್ಲಿ ನೆಲೆಸಿದ್ದಾರೆ. ಅದನ್ನು ಹೊರತುಪಡಿಸಿದರೆ ತಗಡಿನ ಮನೆಗಳಲ್ಲಿ, ಆರ್.ಸಿ.ಸಿ. ಮನೆಗಳಲ್ಲಿ ಮತ್ತು ಸಿಮೆಂಟ್ ಶೀಟಿನ ಮನೆಗಳಲ್ಲಿ ಯಾರೂ ವಾಸವಾಗಿಲ್ಲ. ಇವರಲ್ಲಿ ಮಾಸಿಕ ರೂ.೧೫೦೧-೨೦೦೦ ಆದಾಯವನ್ನು ಹೆಚ್ಚಿನ ಜನರು ಪಡೆಯುತ್ತಿದ್ದಾರೆ. ಇದಕ್ಕೆ ಆದಾಯದ ಮೂಲಗಳೆಂದರೆ ಕೃಷಿ, ಅರಣ್ಯ ಉತ್ಪಾದನೆಗಳು, ಹೈನುಗಾರಿಕೆ, ಉಪಕಸುಬು, ಕೂಲಿಕೆಲಸ, ಸಣ್ಣಪುಟ್ಟ ವ್ಯಾಪಾರವೇ ಆಗಿದೆ ಎಂಬುದು ಕಂಡುಬರುತ್ತದೆ. ಮಾಸಿಕ ಖರ್ಚು ೫೦೦-೧೫೦೦ರವರೆಗೆ ಮಾಡುವ ಕಾರಣದಿಂದಾಗಿ ಆದಾಯಕ್ಕೆ ತಕ್ಕಂತೆ ಖರ್ಚು ಮಾಡುತ್ತಾರೆ.

ಈ ಅಂಶಗಳಿಂದ ನಮಗೆ ತಿಳುವಳಿಕೆದಾರರಲ್ಲಿ ಬಡತನದ ರೇಖೆಗಿಂತ ಕೆಳಗೆ ಜೀವಿಸುತ್ತಿರುವವರ ಸಂಖ್ಯೆಯೇ ಅಧಿಕವಾಗಿರುವುದು ಕಂಡುಬರುತ್ತದೆ. ಈ ಬುಡಕಟ್ಟು ಜನರಲ್ಲಿ ಸರಾಸರಿ ೦-೧ ಎಕರೆ ಜಮೀನು ಹೊಂದಿರುವವರ ಸಂಖ್ಯೆ ಅಧಿಕವಾಗಿದೆ. ಇಷ್ಟು ಪ್ರಮಾಣದ ಭೂಮಿಯಿಂದ ಅವರ ಜೀವನ ಮಟ್ಟವನ್ನು ಸುಧಾರಿಸಲು ಸಾಧ್ಯವಿಲ್ಲವೆಂಬುದು ನಮಗೆ ಗೋಚರವಾಗುತ್ತದೆ. ಹೀಗೆ ಈ ಅಧ್ಯಾಯದಲ್ಲಿ ಮೇಲಿನ ಅನೇಕ ಅಂಶಗಳನ್ನು ಕೋಷ್ಟಕಗಳ ಮೂಲಕ ವ್ಯಕ್ತಪಡಿಸಿದ್ದು, ಸಂದರ್ಭಕ್ಕೆ ಅನುಗುಣವಾಗಿ ಹಾಗೂ ಪ್ರತಿಯೊಂದು ವಿಷಯಕ್ಕೆ ಸಂಬಂಧಪಟ್ಟಂತೆ ವಿವರಣೆಗಳನ್ನು ಹಾಗೂ ಸೂಕ್ತವಾದ ಕಾರಣಗಳನ್ನು ನೀಡುವುದರ ಮೂಲಕ ಮುಂದಿನ ಅಧ್ಯಾಯಗಳಲ್ಲಿ ಇನ್ನೂ ವಿವರವಾಗಿ ಎಲ್ಲ ವಿಷಯಗಳನ್ನು ಚರ್ಚಿಸಲಾಗುವುದು.

ಗೌಡಾಲು ಬುಡಕಟ್ಟು ಸಮುದಾಯವು ತಮ್ಮದೇ ಆದ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವ ಬುಡಕಟ್ಟು ಸಮುದಾಯವಾಗಿದೆ. ಇವರು ಸಾಮಾಜಿಕ ಜೀವನದ ಹೋಲಿಕೆ, ಸಮಾನ ಸಂಪ್ರದಾಯಗಳು, ಸಮಾನ ಮನಸ್ಥಿತಿ, ಸಾಮಾಜಿಕ ಚಿಂತನೆ ಮತ್ತು ಸಾಮಾಜಿಕ ಭಾವನೆಯನ್ನು ಹೊಂದಿರುತ್ತಾರೆ. ಈ ಕಾರಣದಿಂದಾಗಿ ನಾವು ಬುಡಕಟ್ಟು ಜನರ ಬಗ್ಗೆ ಸಂಶೋಧನೆಯನ್ನು ನಡೆಸಿದಾಗ ಇವರು ತಮ್ಮದೇ ಆದ ಕೌಟುಂಬಿಕ ಜೀವನ, ವೈವಾಹಿಕ ಸ್ಥಾನಮಾನ, ಶೈಕ್ಷಣಿಕ ಸ್ಥಿತಿಗತಿ, ಸ್ತ್ರೀಯರು ಮತ್ತು ಪುರುಷರು ಸಮಾಜದಲ್ಲಿ ವಿಶೇಷ ಸ್ಥಾನಮಾನಗಳನ್ನು ಹೊಂದಿರುವುದು ಕಂಡುಬರುತ್ತದೆ. ಗೌಡಾಲು ಬುಡಕಟ್ಟು ಜನರು ಬಹಳ ವೈಶಿಷ್ಟ್ಯಪೂರ್ಣವಾದ ಹಾಗೂ ಇತರ ಸಮುದಾಯಗಳಿಗಿಂತ ಭಿನ್ನವಾದ ಜೀವನ ಸ್ಥಿತಿಯನ್ನು ಹೊಂದಿರುವುದು ಕಾಣಸಿಗುತ್ತದೆ. ಇವರಲ್ಲಿ ಪುರುಷರಿಗೆ ಹೋಲಿಸಿದರೆ ಮಹಿಳೆಯರಿಗೆ ಕಡಿಮೆ ಸ್ಥಾನಮಾನ ಕೊಟ್ಟಿರುವುದು ತಿಳಿದುಬರುತ್ತದೆ. ಇವರು 'ಮಕ್ಕಳ-ಕಟ್ಟು' ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿದ್ದಾರೆ. ಪಿತೃಪ್ರಧಾನ ಕುಟುಂಬಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿರುವುದು ಕಂಡುಬರುತ್ತದೆ. ಬಂಧುತ್ವ ವ್ಯವಸ್ಥೆಯಲ್ಲೂ ಮುಖ್ಯವಾಗಿ ತಮ್ಮ

ಸ್ವಂತ ಮಕ್ಕಳಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿರುವುದನ್ನು ನಾವು ಕಾಣಬಹುದಾಗಿದೆ. ಇದರೊಂದಿಗೆ ಅವರ ಸಾಂಪ್ರದಾಯಿಕ ವೈವಾಹಿಕ ವ್ಯವಸ್ಥೆಯೂ ಬಹಳಷ್ಟು ಭಿನ್ನವಾಗಿದ್ದು, ವಿಶಿಷ್ಟವಾದ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ವಿವಾಹದ ಸಮಯದಲ್ಲಿ ತಮ್ಮ ಜಾತಿಯ ಗುರಿಕಾರರ (ಮುಖ್ಯಸ್ಥ) ಪಾತ್ರ ಪ್ರಮುಖವಾಗಿರುತ್ತದೆ. ಹಾಗೆಯೇ ಸೋದರಮಾವನ ಪಾತ್ರವೂ ಮುಖ್ಯವಾಗಿರುತ್ತದೆ. ಹಿಂದಿನಿಂದಲೂ ಬೆಳೆದು ಬಂದಂತಹ ಪದ್ಧತಿ ಎಂದರೆ ಸೋದರಮಾವನು ಹೆಣ್ಣುಮಕ್ಕಳಿಗೆ ಧಾರೆ ಎರೆದು ಕೊಡುವುದು. ಇತ್ತೀಚಿನ ದಿನಗಳಲ್ಲಿ ಪುರೋಹಿತರ ಪಾತ್ರವೂ ಪ್ರಮುಖವಾಗಿದೆ. ವಿವಾಹದ ಸಮಯದಲ್ಲಿ ಜಾತಕವನ್ನು ನೋಡುವುದು, ಸಾಲಾವಳಿ ಕೇಳಿಸುವ ಪದ್ಧತಿ ಕಂಡುಬರುತ್ತದೆ. ಉಡುಪಿ ಜಿಲ್ಲೆಯಲ್ಲಿ ನೆಲೆಸಿರುವ ಗೌಡಾಲು ಬುಡಕಟ್ಟಿನ ಕೆಲವರಲ್ಲಿ ಅಳಿಯಕಟ್ಟು ಪದ್ಧತಿಯನ್ನು ಕಾಣಬಹುದು. ಇವರು ಮಾತೃಪ್ರಧಾನ ಕುಟುಂಬಸ್ಥರಾಗಿದ್ದಾರೆ. ಬಂಧುತ್ವ ವ್ಯವಸ್ಥೆಯಲ್ಲೂ ಮುಖ್ಯವಾಗಿ ತಮ್ಮ ಸ್ವಂತ ಮಕ್ಕಳಿಗಿಂತ ಸೋದರಳಿಯನಿಗೆ ಹಾಗೂ ಸೋದರಮಾವನಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿರುವುದು ಕಂಡುಬರುತ್ತದೆ. ಇದರೊಂದಿಗೆ ಅವರ ಸಾಂಪ್ರದಾಯಿಕ ವೈವಾಹಿಕ ವ್ಯವಸ್ಥೆಯೂ ಬಹಳಷ್ಟು ಭಿನ್ನವಾಗಿದ್ದು, ತಮ್ಮದೇ ಆದ ಜೀವನ ಪದ್ಧತಿಯನ್ನು ಅನುಸರಿಸುತ್ತಾರೆ. ಹಿಂದೆ ಇವರು ವಿವಾಹ ಸಂದರ್ಭದಲ್ಲಿ ವರದಕ್ಷಿಣೆಯನ್ನು ನೀಡುತ್ತಿರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ವಿದ್ಯಾವಂತರಲ್ಲಿ ವರದಕ್ಷಿಣೆಯು ಇರುವುದು ಕಂಡುಬರುತ್ತದೆ. ಈ ಬುಡಕಟ್ಟು ಸಮುದಾಯದವರಲ್ಲಿ ವಧುದಕ್ಷಿಣೆಯನ್ನು ಕಾಣಬಹುದು. ಇದು ಹಿಂದಿನಿಂದಲೂ ನಡೆದು ಬಂದಂತಹ ಒಂದು ಪದ್ಧತಿಯಾಗಿದ್ದು, ಇದು ಹಣದ ರೂಪದಲ್ಲಿ, ಪ್ರಾಣಿಗಳ ರೂಪದಲ್ಲಿ ಅಥವಾ ದವಸಧಾನ್ಯಗಳ ರೂಪದಲ್ಲಿ ಇರುವುದು ಕಂಡುಬರುತ್ತದೆ. ಹಣದ ರೂಪದಲ್ಲಿ ಇರುವ ವಧುದಕ್ಷಿಣೆಯು ರೂ.೧೦-೦೦ರಿಂದ ಹಿಡಿದು ರೂ.೧೦,೦೦೦-೦೦ಗಳವರೆಗೆ ಇರುವುದು ಕಂಡುಬರುತ್ತದೆ. ಪುರುಷರಲ್ಲಿ ಕಂಡುಬರುವ ವರದಕ್ಷಿಣೆಯು ಅವರು ಹೊಂದಿರುವ ಶಿಕ್ಷಣವನ್ನು ಆಧರಿಸಿರುತ್ತದೆ. ಹಾಗೆಯೇ ಹುಡುಗಿಯ ಸೌಂದರ್ಯ, ಆರ್ಥಿಕ ಸ್ಥಾನಮಾನ, ಅವಳ ವಿದ್ಯಾರ್ಹತೆಯನ್ನು ಆಧರಿಸಿರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯದವರ ಕೌಟುಂಬಿಕ ಪದ್ಧತಿಯು ಅವಿಭಕ್ತ ಮತ್ತು ವಿಭಕ್ತ ರೂಪಗಳಲ್ಲಿದ್ದು, ಹೆಚ್ಚಿನವರು ವಿಭಕ್ತ ಕುಟುಂಬ ಪದ್ಧತಿಯನ್ನು ಹೊಂದಿದ್ದು, ಇವರಲ್ಲಿ ಹೆಚ್ಚಿನವರು ಸಣ್ಣ ಕುಟುಂಬವನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಕುಟುಂಬದ ಜವಾಬ್ದಾರಿಯನ್ನು ಹೊರುವಲ್ಲಿ ಮಾತೃಪ್ರಧಾನ ಹಾಗೂ ಪಿತೃಪ್ರಧಾನ ಕುಟುಂಬ ಪದ್ಧತಿಯನ್ನು ಹೊಂದಿರುವುದು ಕಂಡುಬರುತ್ತದೆ. ಪಿತೃಪ್ರಧಾನ ಕುಟುಂಬ ಪದ್ಧತಿಯನ್ನು ಹೊಂದಿರುವವರ ಸಂಖ್ಯೆಯೇ ಹೆಚ್ಚು. ಇಲ್ಲಿ ಮನೆಯ ಸಂಪೂರ್ಣ ಜವಾಬ್ದಾರಿಯು ಯಜಮಾನ ಅಥವಾ ಕರ್ತ ಹೊಂದಿರುತ್ತಾನೆ. ಮಾತೃಪ್ರಧಾನ ಕುಟುಂಬದಲ್ಲಿ ಮನೆಯ ಸಂಪೂರ್ಣ ಜವಾಬ್ದಾರಿಯು ತಾಯಿಯದ್ದಾಗಿರುತ್ತದೆ. ಗೌಡಾಲು ಬುಡಕಟ್ಟುಗಳ ಮನೆಯಲ್ಲಿ ತೀರ್ಮಾನ ತೆಗೆದುಕೊಳ್ಳುವಾಗ ಗಂಡಸರ ಜವಾಬ್ದಾರಿ ಹೆಚ್ಚು ಇರುತ್ತದೆ. ಕೆಲವೊಂದು ಸಮಯದಲ್ಲಿ ಮನೆಯ ಹೆಂಗಸರ ಸಲಹೆಯನ್ನು ಪಡೆಯುವುದು ಕಂಡುಬರುತ್ತದೆ. ಕೆಲವರು ಹಿಂದಿನಿಂದಲೂ ಇವರ ಸಲಹೆಯನ್ನು ಪಡೆದರೆ, ಇನ್ನು ಕೆಲವರು ಇತ್ತೀಚಿನ

ದಿನಗಳಿಂದ ಕುಟುಂಬದ ಮಹಿಳೆಯ ಸಲಹೆಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಇವರಲ್ಲಿ ಸರಳ ವಿವಾಹವಿದ್ದು, ಪ್ರೇಮವಿವಾಹಕ್ಕೂ ಸಾಧ್ಯತೆ ಇದೆ. ಅಂತರ್‌ಜಾತಿ ಮತ್ತು ನೋಂದಣಿಯ ವಿವಾಹದ ಪ್ರಮಾಣವು ಕಡಿಮೆ ಇದೆ. ಹೆಚ್ಚಿನವರಲ್ಲಿ ಹಿರಿಯರು ಗೊತ್ತುಪಡಿಸಿದ ವಿವಾಹ ಅಥವಾ ಹಿರಿಯರ ಸಮ್ಮುಖದಲ್ಲಿ ನಡೆಯುವ ವಿವಾಹಕ್ಕೆ ಹೆಚ್ಚಿನ ಆದ್ಯತೆ ನೀಡುತ್ತಿರುವುದು ಕಂಡುಬರುತ್ತದೆ. ವಿವಾಹವನ್ನು ಮಾಡುವಾಗ ಶಾಸ್ತ್ರೋಕ್ತವಾಗಿ ಮತ್ತು ಗೌಡಾಲು ಸಂಪ್ರದಾಯದಂತೆ ಮಾಡುತ್ತಾರೆ. ಸಂಪ್ರದಾಯವನ್ನು ಬಿಟ್ಟು ವಿವಾಹವನ್ನು ಮಾಡುವುದಿಲ್ಲ. ವಿವಾಹದ ಸಮಯದಲ್ಲಿ ಬಳಿ, ಜಾತಕ, ಸಾಲಾವಳಿ ನೋಡುವುದು ಅಥವಾ ಪ್ರಸಾದವನ್ನು ಪಡೆದುಕೊಂಡು ವಿವಾಹವನ್ನು ಮಾಡುವುದು ಕಂಡುಬರುತ್ತದೆ.

ಇವರು ಇತ್ತೀಚಿನ ದಿನಗಳಲ್ಲಿ ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡುತ್ತಿರುವುದನ್ನು ಕಾಣಬಹುದಾಗಿದೆ. ಆದರೆ ಹಿಂದೆ ಶಿಕ್ಷಣಕ್ಕೆ ಅಷ್ಟೊಂದು ಪ್ರಾಮುಖ್ಯತೆ ನೀಡುತ್ತಿರಲಿಲ್ಲ. ಹೆಣ್ಣುಮಕ್ಕಳಿಗೆ ಹೋಲಿಸಿದರೆ ಗಂಡುಮಕ್ಕಳಿಗೆ ಶಿಕ್ಷಣದಲ್ಲಿ ಮೊದಲ ಆದ್ಯತೆ ನೀಡುತ್ತಿರುವುದನ್ನು ನೋಡಬಹುದಾಗಿದೆ. ಇವರಲ್ಲಿ ಶಿಕ್ಷಣ ಪಡೆದವರ ಸಂಖ್ಯೆಯೂ ಕಡಿಮೆ ಇದೆ. ಇತ್ತೀಚಿನ ದಿನಗಳಲ್ಲಿ ಕೆಲವರು ಕಾಲೇಜು ಶಿಕ್ಷಣವನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಶಿಕ್ಷಣವನ್ನು ಪಡೆಯುತ್ತಿರುವಾಗ ಸರಕಾರದ ಸವಲತ್ತುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಪಡೆಯುತ್ತಿರುವುದು ಕಾಣಸಿಗುತ್ತದೆ. ಉದಾಹರಣೆಗೆ ವಿದ್ಯಾರ್ಥಿ ವೇತನ, ವಿದ್ಯಾರ್ಥಿ ವಸತಿನಿಲಯಗಳು, ಕಲಿಕಾ ಸಾಮಗ್ರಿಗಳು, ಶೈಕ್ಷಣಿಕ ಮೀಸಲಾತಿ ಸೌಲಭ್ಯಗಳು ಇನ್ನು ಮುಂತಾದ ಅಂಶಗಳನ್ನು ಇವರು ಹೊಂದಿರುವುದು ಕಂಡುಬರುತ್ತದೆ. ಇವರಲ್ಲಿ ಆಸ್ತಿಯ ಹಕ್ಕು ಪುರುಷರಿಗೆ ಇದೆ. ಅಲ್ಪ ಪ್ರಮಾಣದಲ್ಲಿ ಈ ಹಕ್ಕು ಹೆಣ್ಣು ಮಕ್ಕಳಿಗೆ ನೀಡುತ್ತಿರುವುದು ತಿಳಿದುಬರುತ್ತದೆ. ಸರಕಾರದ ಒಂದೇ ಮಗು ನೀತಿಯ ಬಗ್ಗೆ ಹೆಚ್ಚಿನವರ ಒಲವು ಸಕಾರಾತ್ಮಕವಾಗಿದ್ದರೆ, ಕೆಲವರಲ್ಲಿ ಈ ನೀತಿಯ ಬಗ್ಗೆ ವಿರೋಧ ವ್ಯಕ್ತವಾಗಿರುವುದು ಈ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

**ಅ. ಕುಟುಂಬ ಪದ್ಧತಿ**

''ಭಾರತದ ಸಾಮಾಜಿಕ ವ್ಯವಸ್ಥೆಯು ಯಾವ ರೀತಿಯಲ್ಲಿ ಪಾಶ್ಚಿಮಾತ್ಯ ಸಾಮಾಜಿಕ ವ್ಯವಸ್ಥೆಗಿಂತ ಸಂಪ್ರದಾಯ ಬದ್ಧವಾಗಿದೆಯೋ ಅದೇ ರೀತಿಯಲ್ಲಿ ಬುಡಕಟ್ಟು ಸಮುದಾಯಗಳ ಸಾಮಾಜಿಕ ವ್ಯವಸ್ಥೆಯು ವಿಶೇಷತೆಯಿಂದ ಕೂಡಿದೆ. ಅದರಂತೆ ಇತರ ಸಮುದಾಯಗಳ ಕುಟುಂಬ ವ್ಯವಸ್ಥೆಗಿಂತ ಬುಡಕಟ್ಟುಗಳ ಕೌಟುಂಬಿಕ ಸಂರಚನೆಯು ಭಿನ್ನವಾಗಿ ರೂಪಗೊಂಡಿರುತ್ತದೆ.''' ಇಲ್ಲಿ ಕುಟುಂಬದ ಸಾಮಾಜಿಕ ಸಂಬಂಧಗಳು ಮುಖಾಮುಖಿ ಯಾಗಿರುವುದಲ್ಲದೆ, ಜವಾಬ್ದಾರಿ ಮನೋಭಾವದ ಮನಸಿನವರು ಪ್ರಾಥಮಿಕ ಸಂಬಂಧಗಳ ಬಲೆಯೊಳಗೆ ಜೀವಿಸುವವರಾಗಿದ್ದಾರೆ. ಮೂಲತಃ ಅರಣ್ಯವಾಸಿಯಾದ ಗೌಡಾಲು ಸಮುದಾಯ ಪರಸ್ಪರ ಸಹಕಾರದ ಮನೋಭಾವನೆಯಲ್ಲಿ ಬದುಕನ್ನು ಕಟ್ಟಿಕೊಂಡು ಕುಟುಂಬದ ನಿರ್ವಹಣೆಯನ್ನು ಮಾಡುತ್ತಿದೆ.

ಗೌಡಾಲು ಸಮುದಾಯವು ಮೂಲ ಬುಡಕಟ್ಟಾಗಿರುವುದರಿಂದ ಹಾಗೂ ಕಾಡಿನಲ್ಲಿ ವಾಸ ಮಾಡುವಂತಹ ಸಮುದಾಯವಾಗಿರುವುದರಿಂದ ಪ್ರಾರಂಭದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಬದುಕನ್ನು ಸಾಗಿಸಿಕೊಂಡು

ಬಂದಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಆದ್ದರಿಂದ ಇವರ ಕುಟುಂಬ ಜೀವನವು ಸರಳವಾಗಿದೆ. ಇಲ್ಲಿ ಹೆಚ್ಚಿನ ಆತ್ಮೀಯತೆ, ಭಾವನಾತ್ಮಕತೆ ಹಾಗೂ ಸಹಜತೆಗಳಿವೆ. ಇವರಲ್ಲಿ ಶೃಂಗೇರಿಯ ಕೆಲವು ಸ್ಥಳಗಳಲ್ಲಿ ವಾಸಿಸುವ ಗೌಡಾಲುಗಳಲ್ಲಿ ಅಳಿಯಕಟ್ಟು ಕುಟುಂಬ ವ್ಯವಸ್ಥೆ ಅಂದರೆ ಮಾತೃಪ್ರಧಾನ ವ್ಯವಸ್ಥೆ ಇದ್ದರೆ ಮೂಡಿಗೆರೆಯ ಸುತ್ತಮುತ್ತ ಇರುವ ಕಳಸ ಮತ್ತು ಇತರೆ ಭಾಗಗಳಲ್ಲಿರುವ ಗೌಡಾಲುಗಳಲ್ಲಿ ಪಿತೃಪ್ರಧಾನ ವ್ಯವಸ್ಥೆಯು ಇರುವುದು ಕಂಡುಬರುತ್ತದೆ.

ಇವರಲ್ಲಿ ಮಾತೃದೇವತೆಗೆ ಹೆಚ್ಚಿನ ಸ್ಥಾನಮಾನವಿರುವುದನ್ನು ಗಮನಿಸಿದರೆ ಹಾಗೂ ಆಕೆಯ ಹೆಸರಿನಲ್ಲಿ ಎಲ್ಲ ವ್ಯವಹಾರಗಳೂ ನಡೆಯುವುದನ್ನು ಗಮನಿಸಿದರೆ ಇವರಲ್ಲಿ ತಂದೆ ಮತ್ತು ತಾಯಿ ಸಮಾನವಾದ ಸ್ಥಾನವನ್ನು ಹೊಂದಿದವರಾಗಿರುತ್ತಾರೆ. ಗೌಡಾಲು ಸಮುದಾಯವು ಪಶ್ಚಿಮಘಟ್ಟದ ಮೂಲ ನಿವಾಸಿ ಬುಡಕಟ್ಟಾಗಿರುವುದರಿಂದ ಈ ಪರಿಸರಕ್ಕೆ ಅನುಗುಣವಾಗಿ ಚದುರಿದ ಕುಟುಂಬ ವ್ಯವಸ್ಥೆಯಿಂದ ಬದುಕಿನ ದಾರಿಯನ್ನು ಕಂಡುಕೊಂಡು ಕೂಡಿಬಾಳುವ ಬದುಕಿಗೆ ನೆಲೆ ನಿಂತ ಹಂತದಿಂದ ಸ್ತ್ರೀ ಮತ್ತು ಪುರುಷರು ಎನ್ನುವ ಭಿನ್ನಭೇದವಿಲ್ಲದೆ ಇವರ ಕುಟುಂಬ ಬೆಳವಣಿಗೆಯಾಗಿದೆ. ಇವರಲ್ಲಿ ಯಾರು ದೊಡ್ಡವರಲ್ಲ ಎಲ್ಲರೂ ಸೇರಿ ದುಡಿಯುತ್ತಾರೆ. ಎಲ್ಲರೂ ಸೇರಿ ಹಂಚಿಕೊಂಡು ತಿನ್ನುತ್ತಾರೆ. ಆದರೆ ಕೆಲವೊಂದು ವಿಶೇಷವಾದ ನಿರ್ಧಾರ ತೆಗೆದುಕೊಳ್ಳುವಾಗ ಮತ್ತು ಸಮುದಾಯದ ನ್ಯಾಯ ತೀರ್ಮಾನದಲ್ಲಿ ಪುರುಷರದೇ ಪ್ರಧಾನ ಪಾತ್ರವಿರುತ್ತದೆ. ಇಲ್ಲಿ ಪ್ರತಿಯೊಬ್ಬರೂ ತಮ್ಮ ಸಮುದಾಯದ ಹಿರಿಯರಿಗೆ ಗೌರವ ಕೊಡುತ್ತಾ ಬಂದಿರುವುದನ್ನು ಕಾಣಲಾಗುವುದು.

ಗೌಡಾಲುಗಳಲ್ಲಿ ಏಕಪತ್ನಿತ್ವ ಕುಟುಂಬ ಪದ್ಧತಿಯೇ ಹೆಚ್ಚಾಗಿ ಕಂಡುಬರುತ್ತಿದ್ದರೂ, ಗೋಚರಿಸದೇ ಇರುವ ಬಹುಪತ್ನಿತ್ವ ಕುಟುಂಬ ಪದ್ಧತಿಯು ಅಲ್ಪ ಪ್ರಮಾಣದಲ್ಲಿ ಇರುವುದು ಕಂಡುಬರುತ್ತದೆ. ಇಲ್ಲಿ ಯಾವಾಗ ಬಹುಪತ್ನಿತ್ವ ಕಂಡುಬರುತ್ತದೆ ಎಂದರೆ, ಹೆಂಡತಿ ಬಂಜೆಯೆಂದು ಕಂಡುಬಂದಲ್ಲಿ ಅಥವಾ ಗಂಡು ಸಂತಾನವಿಲ್ಲದಿದ್ದಲ್ಲಿ ಪುನಃ ಅವನು ಒಂದಕ್ಕಿಂತ ಹೆಚ್ಚು ಸ್ತ್ರೀಯರನ್ನು ಮದುವೆಯಾದುದು ಇದೆ.

ಗಂಡು ಮಕ್ಕಳು ಸಾಮಾನ್ಯವಾಗಿ ಮದುವೆಯಾಗಿ ಮಕ್ಕಳಾಗುವವರೆಗೆ ಅಂದರೆ ಎಲ್ಲಿಯತನಕ ಹೊಂದಾಣಿಕೆಯ ಬಾಳುವೆ ಇರುತ್ತದೋ ಅಲ್ಲಿಯವರೆಗೆ ಪರಸ್ಪರರು ಸಾಮರಸ್ಯ ಕಂಡುಕೊಂಡು ಇರುತ್ತಾರೆ. ಆದ್ದರಿಂದ ಅಲ್ಲಲ್ಲಿ ಅವಿಭಕ್ತ ಕುಟುಂಬ ಪದ್ಧತಿಯಿದೆ. ಆದರೆ ಹೆಚ್ಚಾಗಿ ವಿಭಕ್ತ ಕುಟುಂಬವಿರುವುದು ಗಮನಾರ್ಹವಾದುದಾಗಿದೆ. ಇಲ್ಲಿ ಗೌಡಾಲುಗಳಲ್ಲಿ ಒಂದೇ ಕಡೆ ನೆಲೆ ನಿಂತು ಜೀವನವನ್ನು ಮಾಡುತ್ತಿರುವುದರಿಂದ ಕುಟುಂಬಗಳು ಬೇಗ ವಿಭಾಗವಾಗದೆ ನಿಧಾನವಾಗಿ ಯಾವುದೇ ಜಗಳವಿಲ್ಲದೆ ವಿಭಾಗವಾಗುತ್ತ ಬಂದಿವೆ. ಇವರಲ್ಲಿ ಪುರುಷರು ಗದ್ದೆ, ತೋಟಗಳಲ್ಲಿ ಕೂಲಿ ಕೆಲಸ ಮಾಡುತ್ತಿದ್ದಾರೆ. ಸ್ತ್ರೀಯರು ಕಾಡಿನ ಉತ್ಪನ್ನ ಸಂಗ್ರಹದ ಜೊತೆಗೆ ಇಡೀ ಹಾಡಿಯವರು ಸೇರಿಕೊಂಡು ಪರಸ್ಪರರು ಸಹಕಾರದ ಮನೋಭಾವನೆಯಲ್ಲಿ ಒಬ್ಬರ ಗದ್ದೆಯಲ್ಲಿ ಎಲ್ಲರೂ ಸೇರಿ ದುಡಿಯುವುದಲ್ಲದೆ ಮುಯ್ಯಾಳು ರೂಪದಲ್ಲಿ ತಮ್ಮ ಕೆಲಸ ಮಾಡಿಕೊಳ್ಳುವ ಪರಿಪಾಟವಿದೆ. ಇದನ್ನು ಗಮನಿಸಿದರೆ ಗೌಡಾಲು ಸಮುದಾಯ ಕೌಟುಂಬಿಕವಾಗಿ ಶ್ರೀಮಂತವಾಗಿದೆ.

ಗೌಡಾಲು ಸಮುದಾಯದ ಕುಟುಂಬದಲ್ಲಿ ಗಂಡುಮಕ್ಕಳು ಸಾಮಾನ್ಯವಾಗಿ ಮದುವೆಯಾಗುವುದಕ್ಕಿಂತ ಮೊದಲು ದುಡಿಮೆ ಮಾಡುವುದನ್ನು ಮತ್ತು ದುಡಿದು ಬದುಕುವ ಕಲೆಯನ್ನು ತಂದೆ ತಾಯಿಗಳಿಂದ ಕಲಿಯುತ್ತಾರೆ.

ಅಲ್ಲದೆ ತಮ್ಮ ಸ್ವಂತ ಕೈಗಳ ಬಲದಿಂದ ಬದುಕುತ್ತಾರೆ. ಇಲ್ಲಿ ಮಕ್ಕಳಿಗೆ ದುಡಿಯುವ ಮಾನಸಿಕ ಶಕ್ತಿಯನ್ನು ಕುಟುಂಬದಿಂದಲೇ ಕಲಿಸುವ ವ್ಯವಸ್ಥೆಯು ಇದೆ. ಸಮುದಾಯದ ಪ್ರತಿಯೊಂದು ನಿಯಮಗಳನ್ನು ಪಾಲಿಸಿಕೊಂಡು ಹೋಗುವಂತೆ ಹೇಳುವುದಲ್ಲದೆ ಕೆಲವು ನಿರ್ಬಂಧಗಳನ್ನು ಮಗು ಕುಟುಂಬದಿಂದಲೇ ತನ್ನ ಜೀವನದಲ್ಲಿ ರೂಢಿಸಿಕೊಳ್ಳುತ್ತದೆ.

ಗೌಡಾಲುಗಳಲ್ಲಿ ಮನೆಯ ಯಜಮಾನನು ಇಡೀ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸುತ್ತಾನೆ. ಇವನು ಹೇಳಿದ ರೀತಿ ನೀತಿಗಳಲ್ಲಿಯೇ ಕುಟುಂಬವು ಮುಂದುವರೆಯುತ್ತದೆ. ಇದರಂತೆ ಕುಟುಂಬಕ್ಕೆ ಯಜಮಾನನು ಇರುವಂತೆ ಇಡೀ ಸಮುದಾಯಕ್ಕೆ ಮುಖಂಡ ಅಥವಾ ಯಜಮಾನನಿರುತ್ತಾನೆ. ಇಲ್ಲಿ ಕುಟುಂಬದ ಪಾತ್ರ ಮುಖ್ಯವಾಗಿರುತ್ತದೆ. ಏಕೆಂದರೆ ಸಮುದಾಯದ ಅಭಿವೃದ್ಧಿಯು ಕುಟುಂಬದ ಮೂಲಕವೇ ನಿರ್ಧಾರವಾಗುವುದರಿಂದ ಪ್ರತಿಯೊಬ್ಬ ವ್ಯಕ್ತಿಯ ಬೆಳವಣಿಗೆ ಅಗತ್ಯವಾಗಿ ಆಗಬೇಕು ಎನ್ನುತ್ತಾರೆ. ಮೊದಮೊದಲು ಗೌಡಾಲುಗಳು ತಮಗೆ ತಿಳಿದಂತೆ ನಿಯಮಗಳನ್ನು ಮಾಡಿಕೊಂಡು ಬದುಕುತ್ತಿದ್ದರಂತೆ, ಆದರೆ ಇತ್ತೀಚೆಗೆ ಅವರದೇ ಆದ ನೀತಿ ನಿಯಮಗಳನ್ನು ಮಾಡಿಕೊಂಡು ಬದುಕುವ ಕಲೆಯನ್ನು ಹೊಂದಿದ್ದಾರೆ. ಗೌಡಾಲುಗಳು ಮನೆಯನ್ನು ಸರಳವಾಗಿ ನಿರ್ಮಾಣ ಮಾಡಿಕೊಂಡಿರುತ್ತಾರೆ. ಗುಡಿಸಲಾದರೆ ಒಳಗೆ ಅಡುಗೆ ಕೋಣೆ ಮತ್ತು ಹಜಾರ, ಮಲಗುವ ಕೋಣೆ, ದೇವರ ಕೋಣೆ ಎಲ್ಲ ಒಂದೇ ಆಗಿರುತ್ತದೆ. ಇಂಥ ಗುಡಿಸಲುಗಳಲ್ಲಿ ಐದರಿಂದ ಹತ್ತು ಜನ ಮಲಗಲು ಅನುಕೂಲವಿರುತ್ತದೆ. ಗುಡಿಸಲು ಹೊರಗೆ ಒಂದು ಚಿಕ್ಕ 'ಮಾಡು' ಇದ್ದು ಅದನ್ನು ಬಚ್ಚಲು ಮನೆಯನ್ನಾಗಿ ಬಳಸುತ್ತಾರೆ.

ಇತರೆ ಸಮುದಾಯಗಳಿಗೂ ಮತ್ತು ಗೌಡಾಲು ಸಮುದಾಯಕ್ಕೂ ಕುಟುಂಬದ ವ್ಯವಸ್ಥೆಯಲ್ಲಿ ಸಾಕಷ್ಟು ಭಿನ್ನತೆಯನ್ನು ಕಾಣುತ್ತೇವೆ. ಇಲ್ಲಿ ಮಗು ಹುಟ್ಟಿನಿಂದ ಸಾವಿನವರೆಗೆ ನಡೆಯುವ ಅನೇಕ ಆಚರಣೆಗಳು ಮೂಲ ಕುಟುಂಬದಲ್ಲಿಯೇ ನೆರವೇರುತ್ತವೆ. ಅಲ್ಲದೆ ಕುಟುಂಬದ ಒಡೆಯ ಮತ್ತು ಒಡತಿಯು ಒಪ್ಪಿಕೊಂಡು ಮಾಡಿದ ಯಾವುದೇ ತೀರ್ಮಾನಕ್ಕೆ ತಡಮಾಡದೆ ಒಪ್ಪಿಕೊಳ್ಳುತ್ತಾರೆ. ''ಇಲ್ಲಿ ಪ್ರತಿಯೊಂದು ಕೆಲಸಕ್ಕೆ ಒಂದೊಂದು ರೀತಿಯ ನಿಯಮಗಳಿರುತ್ತವೆ. ಅಲ್ಲದೆ ಕುಟುಂಬವು ಸಮುದಾಯದ ಮೂಲ ಘಟಕವಾಗಿರುತ್ತದೆ. ಇಲ್ಲಿ ಮಿತವಾದ ಮಕ್ಕಳ ಸಂಖ್ಯೆ ಇದೆ. ಅಲ್ಲದೆ ಅನೌಪಚಾರಿಕ ಶಿಕ್ಷಣಕ್ಕಿಂತ ಔಪಚಾರಿಕ ಶಿಕ್ಷಣವು ತನ್ನ ಸ್ಥಾನವನ್ನು ಕೇಂದ್ರೀಕರಿಸಿಕೊಂಡಿದೆ.''[೧೦] ಆದ್ದರಿಂದ ಕುಟುಂಬವು ಗಂಡ, ಹೆಂಡತಿ, ಮಕ್ಕಳು ಮೊಮ್ಮಕ್ಕಳ ಕೇಂದ್ರೀಯ ಬಿಂದುವೂ ಹೌದು. ಗೌಡಾಲುಗಳು ಕುಟುಂಬದವರು ಅನೇಕ ಜಾನಪದ ಗೀತೆಗಳನ್ನು ಹಾಡುತ್ತಾರೆ. ಮದುವೆ ಮತ್ತು ಇತರ ಸಂದರ್ಭದಲ್ಲಿ ಅನೇಕ ಸೋಬಾನೆ ಪದಗಳನ್ನು ಹಾಡುವುದು ಕೂಡ ಗಮನಾರ್ಹವಾದ ಸಂಗತಿಯಾಗಿದೆ. ಆದ್ದರಿಂದ ಗೌಡಾಲುಗಳಲ್ಲಿ ಕುಟುಂಬ ವ್ಯವಸ್ಥೆಯು ತನ್ನದೇ ಆದ ಸ್ಥಾನವನ್ನು ಪಡೆದಿದೆ.

ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಅವಿಭಕ್ತ ಕುಟುಂಬ ಪದ್ಧತಿಯು ಹೆಚ್ಚಾಗಿ ಅಸ್ತಿತ್ವದಲ್ಲಿತ್ತು. ಕ್ರಮೇಣ ಅನೇಕ ಕಾರಣಗಳಿಂದಾಗಿ ಇದು ಬದಲಾಗುತ್ತಾ ಅವಿಭಕ್ತ ಕುಟುಂಬಗಳ ಜಾಗದಲ್ಲಿ ವಿಭಕ್ತ ಕುಟುಂಬಗಳು ಸ್ಥಾನವನ್ನು ಪಡೆಯುತ್ತಿರುವುದು ಕಂಡುಬರುತ್ತಿದೆ. ಈ ಗೌಡಾಲು ಬುಡಕಟ್ಟು ಜನರಲ್ಲಿ ವಿಭಕ್ತ ಅಥವಾ ಅಣು ಕುಟುಂಬಗಳ ಸಂಖ್ಯೆಯೇ ಹೆಚ್ಚಾಗಿದೆ. ಈ ಕುಟುಂಬಗಳು ಹೆಚ್ಚಾಗಿ ಕಂಡುಬರುವುದಕ್ಕೆ ಮುಖ್ಯಕಾರಣ ಎಂದರೆ ಇವರಿಗೆ ಇರುವಂತಹ ಸಾಮಾನ್ಯ ಜ್ಞಾನ, ಶಿಕ್ಷಣದ ಪ್ರಭಾವ, ವೈಜ್ಞಾನಿಕ ಮನೋಭಾವನೆ,

ಭೂ ಸುಧಾರಣೆ, ಅವಿಭಕ್ತ ಕುಟುಂಬದಲ್ಲಿಯೇ ಆಗುತ್ತಿರುವ ಪ್ರಭಾವವಾಗಿದೆ. ಈ ಬಗ್ಗೆ ತಿಳುವಳಿಕೆದಾರರು ಯಾವ ವಿಧದ ಕುಟುಂಬದಲ್ಲಿ ವಾಸಿಸುತ್ತಿದ್ದಾರೆ ಎಂಬ ಮಾಹಿತಿಯನ್ನು ಸಂಗ್ರಹಿಸಿದ್ದು, ಅದನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ ೪.೦೧**

**ಕುಟುಂಬದ ಇತರೆ ಸದಸ್ಯರ ವಯೋಗುಂಪು ಹಾಗೂ ಲಿಂಗವಾರು ಹಂಚಿಕೆಯ ವಿವರ**

**(ತಿಳುವಳಿಕೆದಾರರನ್ನು ಹೊರತುಪಡಿಸಿ)**

| ಕ್ರ ಸಂ | ಕುಟುಂಬ ಪದ್ಧತಿ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಅವಿಭಕ್ತ ಕುಟುಂಬ | ೩೦ | ೩೦.೦೦ |
| ೨ | ವಿಭಕ್ತ ಕುಟುಂಬ | ೭೦ | ೭೦.೦೦ |
| | ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕದಲ್ಲಿ ಒಟ್ಟು ೧೦೦ ಕುಟುಂಬಗಳಲ್ಲಿ ೩೦ (ಶೇ.೩೦)ರಷ್ಟು ತಿಳುವಳಿಕೆದಾರರು ಅವಿಭಕ್ತ ಕುಟುಂಬ ಪದ್ಧತಿಯನ್ನು ಹೊಂದಿದ್ದರೆ, ಉಳಿದ ೭೦ (ಶೇ.೭೦)ಜನ ತಿಳುವಳಿಕೆದಾರರು ವಿಭಕ್ತ ಕುಟುಂಬ ಪದ್ಧತಿಯನ್ನು ಅನುಸರಿಸುತ್ತಿರುವುದಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಿರುವುದು ಕಂಡುಬರುತ್ತದೆ. ಇವರ ಕುಟುಂಬದಲ್ಲಿ ಪುರುಷರ ಜವಾಬ್ದಾರಿಯೇ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಒಟ್ಟಾರೆ ನೋಡುವುದಾದರೆ ಗೌಡಾಲು ಬುಡಕಟ್ಟು ಜನರಲ್ಲಿ ವಿಭಕ್ತ ಕುಟುಂಬದವರು ಹೆಚ್ಚಾಗಿ ಇರುವುದು ನಮಗೆ ತಿಳಿದುಬರುತ್ತದೆ.

**ಮಾತೃಪ್ರಧಾನ ಮತ್ತು ಪಿತೃಪ್ರಧಾನ ಕುಟುಂಬದ ವಿವರ**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಪಿತೃಪ್ರಧಾನತೆಯೇ ಹೆಚ್ಚಾಗಿ ಇರುವುದು ಕಾಣಸಿಗುತ್ತದೆ. ಮನೆಯ ಸಂಪೂರ್ಣ ಜವಾಬ್ದಾರಿಯು ತಂದೆ ಅಥವಾ ಕರ್ತ ಹೊಂದಿರುವುದು ಕಂಡುಬರುತ್ತದೆ. ಮಾತೃಪ್ರಧಾನ ಕುಟುಂಬಗಳ ಸಂಖ್ಯೆ ಕಡಿಮೆ ಇದೆ. ಮಾತೃಪ್ರಧಾನ ಕುಟುಂಬಗಳು ಉಡುಪಿ ಜಿಲ್ಲೆಯಲ್ಲಿವೆ.

**ಕೋಷ್ಟಕ ೪.೦೨**

**ಮಾತೃಪ್ರಧಾನ ಮತ್ತು ಪಿತೃಪ್ರಧಾನ ಕುಟುಂಬ**

| ಕ್ರ ಸಂ | ಕುಟುಂಬ ಪದ್ಧತಿ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಪಿತೃಪ್ರಧಾನ ಕುಟುಂಬ | ೯೩ | ೯೩.೦೦ |
| ೨ | ಮಾತೃಪ್ರಧಾನ ಕುಟುಂಬ | ೭ | ೭.೦೦ |
| | ಒಟ್ಟು | ೧೦೦ | ೧೦೦.೦೦ |

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಪಿತೃಪ್ರಧಾನ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಇವೆ. ಒಟ್ಟು ೧೦೦ ಕುಟುಂಬಗಳಲ್ಲಿ ೯೩ (ಶೇ.೯೩)ರಷ್ಟು ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿದ್ದು, ಹಾಗೆಯೇ ೦೭ (ಶೇ.೦೭)ರಷ್ಟು ಕುಟುಂಬಗಳು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದು, ಈ ಮಾತೃಪ್ರಧಾನ ಕುಟುಂಬಗಳು ಉಡುಪಿ ಜಿಲ್ಲೆಯಲ್ಲಿ ಇರುವ ಗೌಡಾಲು ಬುಡಕಟ್ಟು ಸಮುದಾಯದವರಲ್ಲಿ ಕಂಡುಬರುತ್ತಾರೆ.

### ತೀರ್ಮಾನ ತೆಗೆದುಕೊಳ್ಳುವಲ್ಲಿ ಮಹಿಳೆಯರ ಪಾತ್ರ

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಸ್ತ್ರೀಯರಿಗೆ ಉತ್ತಮವಾದ ಸ್ಥಾನಮಾನಗಳನ್ನು ಇತ್ತೀಚಿನ ದಿನಗಳಲ್ಲಿ ನೀಡುತ್ತಿದ್ದು, ಹಿಂದೆ ಮಹಿಳೆಯರಿಗೆ ಯಾವುದೇ ರೀತಿಯ ಸ್ಥಾನಮಾನ ಇರಲಿಲ್ಲ. ಈಗ ಇವರಲ್ಲಿ ಹಲವಾರು ಬದಲಾವಣೆಗಳು ಆಗಿವೆ. ಇದರ ಬಗ್ಗೆ ಮಾಹಿತಿಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ-೪.೦೩**

**ತಿಳುವಳಿಕೆದಾರರ ಮಹತ್ವದ ತೀರ್ಮಾನ ತೆಗೆದುಕೊಳ್ಳುವಾಗ ಮಹಿಳೆಯರ ಸಲಹೆಗೆ ನೀಡುವ ಮಹತ್ವ**

| ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಸಲಹೆ ಪಡೆಯುವವರು | ೭೧ | ೭೨.೦೦ |
| ಸಲಹೆ ಪಡೆಯದೇ ಇರುವವರು | ೨೮ | ೨೮.೦೦ |
| ಒಟ್ಟು | ೧೦೦ | ೧೦೦.೦೦ |
| ಸಲಹೆ ಪಡೆಯುವ ಸಂದರ್ಭಗಳು | | |
| ಎಲ್ಲ ಸಂದರ್ಭಗಳಲ್ಲಿ | ೧೮ | ೨೫.೦೦ |
| ಕೆಲವು ಸಂದರ್ಭಗಳಲ್ಲಿ | ೧೯ | ೨೬.೩೮ |
| ವಿಶೇಷ ಸಂದರ್ಭಗಳಲ್ಲಿ | ೩೫ | ೪೮.೬೧ |
| ಒಟ್ಟು | ೭೨ | ೧೦೦.೦೦ |

ಗೌಡಾಲು ಬುಡಕಟ್ಟು ಸಮುದಾಯದ ಕುಟುಂಬದಲ್ಲಿ ಮಹತ್ವದ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಮನೆಯಲ್ಲಿ ಸ್ತ್ರೀಯರ ಸಲಹೆಗಳನ್ನು ಪಡೆಯುವ ವಿಷಯದ ಕುರಿತು ವಿವರಗಳನ್ನು ಸಂಗ್ರಹಿಸಿದಾಗ, ಒಟ್ಟು ೧೦೦ ಜನ ತಿಳುವಳಿಕೆದಾರರಲ್ಲಿ ೭೨ (ಶೇ.೭೨) ಜನರು ತೀರ್ಮಾನ ತೆಗೆದುಕೊಳ್ಳುವಾಗ ಸಲಹೆ ಕೇಳುತ್ತೇವೆ ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ. ಗೌಡಾಲು ಬುಡಕಟ್ಟು ಸಮುದಾಯದಲ್ಲಿ ತೀರ್ಮಾನವನ್ನು ತೆಗೆದುಕೊಳ್ಳುವಾಗ ಮನೆಯಲ್ಲಿರುವ ಸ್ತ್ರೀಯರಿಗೆ ಮತ್ತು ಉಳಿದ ಸದಸ್ಯರಿಗೆ ಮಹತ್ವವನ್ನು ನೀಡುತ್ತಾರೆ ಎಂಬುದನ್ನು ಗಮನಿಸಬಹುದು. ಇದು ಇವರಲ್ಲಿ ಕಂಡುಬರುವ ಒಂದು ಉತ್ತಮ ಬೆಳವಣಿಗೆ ಎಂಬುದು ಈ ಮೂಲಕ ನಮ್ಮ ಗಮನಕ್ಕೆ ಬರುತ್ತದೆ. ಹಾಗೆಯೇ ಸ್ತ್ರೀಯರಲ್ಲಿ ಅಭಿಪ್ರಾಯ ಪಡೆಯದೇ ಇರುವವರು ೨೮ (ಶೇ.೨೮) ಎಂಬುದು ಕಂಡುಬರುತ್ತದೆ. ಇಲ್ಲಿ ಅಭಿಪ್ರಾಯ ಪಡೆಯದೇ ಇರಲು ಇವರಲ್ಲಿ ಇರುವ ಸಂಕುಚಿತ ಮನೋಭಾವನೆಯೇ ಮೂಲ ಕಾರಣವಾಗಿದೆ ಎಂಬುದು ತಿಳಿದುಬರುತ್ತದೆ.

ಸಲಹೆಯನ್ನು ಪಡೆಯುವವರಲ್ಲಿ ಒಟ್ಟು ೭೧ ಜನರಿದ್ದು, ೧೮ (ಶೇ.೨೫) ಜನರು ಎಲ್ಲ ಸಂದರ್ಭಗಳಲ್ಲಿ ಸಲಹೆ ಪಡೆದರೆ, ೧೯ (ಶೇ.೨೬.೩೮) ಜನರು ಕೆಲವು ಸಂದರ್ಭಗಳಲ್ಲಿ ಸಲಹೆ ಪಡೆಯುತ್ತಿದ್ದು ಹಾಗೂ ೩೫ (ಶೇ.೪೯)ರಷ್ಟು ಜನರು ವಿಶೇಷ ಸಮಯದಲ್ಲಿ ಇವರ ಸಲಹೆಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ.

ಮೇಲಿನ ಸಂಗತಿಯನ್ನು ಗಮನಿಸಿದಾಗ ಕುಟುಂಬದಲ್ಲಿ ಸಂದರ್ಭ ಹಾಗೂ ಕಾಲಕ್ಕೆ ಅನುಗುಣವಾಗಿ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಕುಟುಂಬದ ಸ್ತ್ರೀಯರ ಹಾಗೂ ಇತರ ಸದಸ್ಯರ ಸಲಹೆಗಳನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಇವರು ಗುಡ್ಡಗಾಡು ಪ್ರದೇಶಗಳಲ್ಲಿ ನೆಲೆಸಿದ್ದರೂ ಸಹ ಮಹಿಳೆಯರಿಗೆ ಮತ್ತು ಮನೆಯ ಹಿರಿಯರಿಗೆ ಪ್ರಾಮುಖ್ಯತೆಯನ್ನು ನೀಡುತ್ತಿರುವುದು ಕಂಡುಬರುತ್ತದೆ.

### ಅಳಿಯಕಟ್ಟು ಮತ್ತು ಮಕ್ಕಳಕಟ್ಟು ಪದ್ಧತಿಗಳು

ಗೌಡಾಲು ಬುಡಕಟ್ಟು ಸಮುದಾಯದವರು ತಮ್ಮದೇ ಆದ ಕೌಟುಂಬಿಕ ಪದ್ಧತಿಯನ್ನು ಹೊಂದಿದ್ದು, ಕೆಲವರು ಅಳಿಯಕಟ್ಟು ಪದ್ಧತಿ ಹೊಂದಿದ್ದಾರೆ. ಇನ್ನು ಕೆಲವರು ಮಕ್ಕಳಕಟ್ಟು ಪದ್ಧತಿಯನ್ನು ಹೊಂದಿದ್ದಾರೆ. ಅಳಿಯಕಟ್ಟು ಎಂದರೆ ಹೆಣ್ಣು ಮಕ್ಕಳನ್ನು ವಿವಾಹವಾದ ನಂತರ ಗಂಡನ ಮನೆಗೆ ಕಳುಹಿಸದೇ ತವರು ಮನೆಯಲ್ಲಿಯೇ ಇರಿಸಿಕೊಳ್ಳುವುದು. ಅಂದರೆ ಅಳಿಯ ಮತ್ತು ಮಗಳನ್ನು ಹೆಣ್ಣಿನ ತವರು ಮನೆಯಲ್ಲಿಯೇ ಇಟ್ಟುಕೊಳ್ಳುವುದು. ಮುಂದೆ ಮಗಳು ತಂದೆಯ ಆಸ್ತಿಗೆ ವಾರಸುದಾರಳಾಗುತ್ತಾಳೆ. ಹೆಂಡತಿಯ ಮುಖಾಂತರ ಗಂಡನು ಆಸ್ತಿಯ ಯಜಮಾನಿಕೆ ಮಾಡುತ್ತಾನೆ. ಈ ಪದ್ಧತಿಯನ್ನು ಅಳಿಯಕಟ್ಟು ಕಟುಂಬ ಪದ್ಧತಿ ಎಂದು ಕರೆಯುತ್ತಾರೆ. ಹಾಗೆಯೇ ಮಕ್ಕಳಕಟ್ಟು ಎಂದರೆ ಗಂಡುಮಕ್ಕಳಿಂದ ಕುಟುಂಬ ಮುಂದುವರೆಯುತ್ತದೆ. ತಂದೆಯ ಆಸ್ತಿಗೆ ಗಂಡುಮಕ್ಕಳು ವಾರಸುದಾರರಾಗಿರುತ್ತಾರೆ. ಗೌಡಾಲು ಬುಡಕಟ್ಟು ಸಮುದಾಯದವರಲ್ಲಿ ಕಂಡುಬರುವ ಅಳಿಯಕಟ್ಟು ಮತ್ತು ಮಕ್ಕಳಕಟ್ಟು ಕೌಂಟುಂಬಿಕ ಪದ್ಧತಿಗಳನ್ನು ಈ ಕೆಳಗಿನ ಕೋಷ್ಟಕದ ಮೂಲಕ ತಿಳಿದುಕೊಳ್ಳಬಹುದು.

**ಕೋಷ್ಟಕ-೪.೦೪**

**ಅಳಿಯಕಟ್ಟು ಮತ್ತು ಮಕ್ಕಳಕಟ್ಟು ಕೌಟುಂಬಿಕ ಪದ್ಧತಿಗಳು**

| ವಿವರ | ಒಟ್ಟು ಜನರು | ಶೇಕಡಾವಾರು |
|---|---|---|
| ಮಕ್ಕಳಕಟ್ಟು | ೯೨ | ೯೨.೦೦ |
| ಅಳಿಯಕಟ್ಟು | ೦೮ | ೦೮.೦೦ |
| ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಕಂಡುಬರುವ ವಿಷಯವೇನೆಂದರೆ, ಒಟ್ಟು ೧೦೦ ಕುಟುಂಬಗಳಲ್ಲಿ ೯೨ (ಶೇ.೯೨) ಕುಟುಂಬಗಳು ಮಕ್ಕಳಕಟ್ಟು ಕೌಟುಂಬಿಕ ಪದ್ಧತಿಯನ್ನು ಹೊಂದಿದ್ದಾರೆ. ಹಾಗೆಯೇ ೮ (ಶೇ.೦೮) ಕುಟುಂಬಗಳು ಅಳಿಯಕಟ್ಟು ಕೌಟುಂಬಿಕ ಪದ್ಧತಿಯನ್ನು ಹೊಂದಿರುವುದನ್ನು ಕಂಡುಕೊಳ್ಳಬಹುದು.

ಅಳಿಯಕಟ್ಟು ಪದ್ಧತಿಯ ಬಗ್ಗೆ ಪ್ರಾಚೀನ ಜನರ ನಂಬಿಕೆಯು ಈ ಮುಂದಿನಂತಿದೆ. ಕ್ರಿ.ಶ.೧ನೇ ಶತಮಾನದಲ್ಲಿ ಬಾರಕೂರು ರಾಜ್ಯವನ್ನು ಆಳುತ್ತಿದ್ದ ಭೂತಾಳ ಪಾಂಡ್ಯ ಅರಸನು ಅಳಿಯ ಸಂತಾನ ಕಟ್ಟು ಕಟ್ಟಲೆಗಳನ್ನು ಕ್ರಿ.ಶ.೭೭ರಲ್ಲಿ ಮಕ್ಕಳಕಟ್ಟಿನ ಬದಲಿಗೆ ಜಾರಿಗೆ ತಂದ ಎಂದು ನಂಬಿದ್ದಾರೆ. ಅಳಿಯಕಟ್ಟು ಕೌಟುಂಬಿಕ ಪದ್ಧತಿಯು

ಇವರಲ್ಲಿ ಇರಲು ಪ್ರಮುಖ ಕಾರಣವೆಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಂಟರ ಸಮುದಾಯಗಳಲ್ಲಿ ಅಳಿಯಕಟ್ಟು ಕೌಟುಂಬಿಕ ಪದ್ಧತಿ ಇದ್ದು, ಗೌಡಾಲು ಸಮುದಾಯದ ಮೇಲೆಯೂ ಬಂಟರ ಈ ಸಂಪ್ರದಾಯ ಪ್ರಭಾವ ಬೀರಿದೆ ಎಂಬ ಅಂಶವು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ಕುಟುಂಬ ಹಾಗೂ ಕೃಷಿ ಜವಾಬ್ದಾರಿ ಹೊಂದಿರುವವರು**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಕೌಟುಂಬಿಕ ಮತ್ತು ಕೃಷಿಯ ಜವಾಬ್ದಾರಿಯನ್ನು ಪುರುಷರು ಮತ್ತು ಮಹಿಳೆಯರು ಹೊಂದಿದ್ದು, ಸ್ತ್ರೀಯರಿಗೆ ಹೋಲಿಸಿದರೆ ಪುರುಷರು ಈ ಜವಾಬ್ದಾರಿಯನ್ನು ಹೆಚ್ಚು ಹೊಂದಿರುವುದು ತಿಳಿದುಬರುತ್ತದೆ. ಕುಟುಂಬದ ಜವಾಬ್ದಾರಿ, ದೈವ, ದೇವರ ಕೆಲಸಗಳ ಜವಾಬ್ದಾರಿ, ಕೃಷಿಯ ಜವಾಬ್ದಾರಿ, ಮುಂತಾದ ಜವಾಬ್ದಾರಿಗಳನ್ನು ಸಮರ್ಪಕವಾಗಿ ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಹಾಗೆಯೇ ಇವರು ಪಿತೃವಂಶೀಯ ಕುಟುಂಬ ಪದ್ಧತಿಯನ್ನು ಅನುಸರಿಸುವ ಮೂಲಕ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಿಕೊಂಡು ಬಂದಿರುವವರಾಗಿದ್ದಾರೆ. ಗೌಡಾಲು ಬುಡಕಟ್ಟು ಜನರು ತಮ್ಮ ಕುಟುಂಬದಲ್ಲಿ ಕೃಷಿ ಮತ್ತು ಕುಟುಂಬದ ಜವಾಬ್ದಾರಿಗಳನ್ನು ಹೇಗೆ ಹಂಚಿಕೊಂಡು ನಿರ್ವಹಿಸುತ್ತಾ ಹೋಗುತ್ತಾರೆ ಎಂಬುದನ್ನು ಅಧ್ಯಯನ ಮಾಡಲಾಗಿದ್ದು, ಅದರ ಫಲಿತಾಂಶವನ್ನು ಈ ಮುಂದಿನ ಕೋಷ್ಟಕದ ಮೂಲಕ ತಿಳಿದುಕೊಳ್ಳಬಹುದು.

**ಕೋಷ್ಟಕ ೪.೦೫**

**ಕುಟುಂಬ ಹಾಗೂ ಕೃಷಿ ಜವಾಬ್ದಾರಿ ಹೊಂದಿರುವವರ ವಿವರ**

| ಕ್ಷೇತ್ರಗಳು | ಜವಾಬ್ದಾರಿ ಹೊಂದಿರುವವರು | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ಕುಟುಂಬ | ಪುರುಷರು | ೯೬ | ೯೬.೦೦ |
| | ಸ್ತ್ರೀಯರು | ೪ | ೪.೦೦ |
| | ಒಟ್ಟು | ೧೦೦ | ೧೦೦.೦೦ |
| ಕೃಷಿ | ಪುರುಷರು | ೯೭ | ೯೭.೦೦ |
| | ಸ್ತ್ರೀಯರು | ೩ | ೩.೦೦ |
| | ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕದಲ್ಲಿ ಕಂಡುಬರುವ ಮುಖ್ಯ ಅಂಶವೇನೆಂದರೆ ಒಟ್ಟು ೧೦೦ ತಿಳುವಳಿಕೆದಾರರಲ್ಲಿ ೯೬ (ಶೇ.೯೬) ಪುರುಷ ತಿಳುವಳಿಕೆದಾರರು ಕುಟುಂಬದ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಹಾಗೆಯೇ (ಶೇ.೦೪)ರಷ್ಟು ಸ್ತ್ರೀ ತಿಳುವಳಿಕೆದಾರರು ತಮ್ಮ ಕುಟುಂಬದ ಜವಾಬ್ದಾರಿಯನ್ನು ಹೊಂದಿರುವುದು ಕಂಡುಬರುತ್ತದೆ. ಇಲ್ಲಿ ಕಂಡುಬರುವ ಮುಖ್ಯ ಸಂಗತಿ ಎಂದರೆ ಕುಟುಂಬದ ಜವಾಬ್ದಾರಿಯನ್ನು ಹೊರುವಲ್ಲಿ ಸ್ತ್ರೀಯರಿಗಿಂತ ಪುರುಷರ ಸಂಖ್ಯೆಯೇ ಹೆಚ್ಚಾಗಿದ್ದು, ಪುರುಷಪ್ರಧಾನ ಸಮಾಜವು ಇವರಲ್ಲಿ ಇರುವುದು ತಿಳಿದುಬರುತ್ತದೆ. ಕೃಷಿಯ ಜವಾಬ್ದಾರಿಯಲ್ಲಿ ಒಟ್ಟು ೧೦೦ ಜನ ತಿಳುವಳಿಕೆದಾರರಲ್ಲಿ ೯೭ (ಶೇ.೯೭) ಪುರುಷ ತಿಳುವಳಿಕೆದಾರರು ಕೃಷಿಯ ಜವಾಬ್ದಾರಿಯನ್ನು ಹೊಂದಿದ್ದರೆ, ಕೇವಲ ೦೩(ಶೇ.೦೩) ರಷ್ಟು ಸ್ತ್ರೀ ತಿಳುವಳಿಕೆದಾರರು ಕೃಷಿಯ

ಜವಾಬ್ದಾರಿಯನ್ನು ಹೊಂದಿರುವುದು ಕಾಣಬಹುದಾಗಿದೆ. ಇಲ್ಲಿ ಕೃಷಿಯಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ಹೊಂದಿರುವ ಪುರುಷರು ಕೃಷಿ ಕ್ಷೇತ್ರದಲ್ಲಿ ಸಂಪೂರ್ಣ ಸಹಭಾಗಿತ್ವ ಹೊಂದಿರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ.

### ಗೌಡಾಲು ಬುಡಕಟ್ಟು ಸಮುದಾಯದಲ್ಲಿ ವೈವಾಹಿಕ ಪದ್ಧತಿಗಳು

ವಿವಾಹವು ಸಾಮಾಜಿಕ ಸಂಸ್ಥೆಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಧರ್ಮ, ಸಂಪ್ರದಾಯ, ಸಂತಾನೋತ್ಪತ್ತಿ ಮತ್ತು ಕಾಮ ತೃಪ್ತಿಯ ಧಾರ್ಮಿಕ, ಸಾಮಾಜಿಕ ಮತ್ತು ಶಾರೀರಿಕ ಉದ್ದೇಶಗಳಿಗಾಗಿ ಪುರುಷರು ಮತ್ತು ಸ್ತ್ರೀಯರು ಶಾಶ್ವತವಾದ ಸಂಬಂಧವನ್ನು ಹೊಂದುವ ಧಾರ್ಮಿಕ ಸಂಸ್ಕಾರವನ್ನು ಹಿಂದೂಗಳಲ್ಲಿ ವಿವಾಹವೆಂದು ಕರೆಯಲಾಗಿದೆ. ಇನ್ನು ಕೆಲವೊಂದು ಚಿಂತಕರ ಪ್ರಕಾರ ವಿವಾಹವೆಂದರೆ ಸಮಾಜ ಒಪ್ಪಿತವಾದ ರೀತಿಯಲ್ಲಿ ಗಂಡು ಮತ್ತು ಹೆಣ್ಣಿನ ನಡುವೆ ಬೆಳೆಯುವ ಶಾಶ್ವತ ಸಂಬಂಧವಾಗಿದೆ.

ಮಾನವನ ಸಮುದಾಯದ ಕಲ್ಪನೆ ಮುಂದುವರೆಸಲು ಕುಟುಂಬದ ಅಗತ್ಯತೆಗಳನ್ನು ಅರಿತುಕೊಂಡು ಈ ಕುಟುಂಬದ ದೃಢತೆಗಾಗಿ ವಿವಾಹವನ್ನು ಅನಿವಾರ್ಯ ಅಂಶವನ್ನಾಗಿಸಿಕೊಂಡು ಬಂದಿದ್ದಾರೆ. ವಿವಾಹವು ಸಾರ್ವತ್ರಿಕವಾಗಿದ್ದು, ಪ್ರತಿಯೊಂದು ಸಮಾಜದಲ್ಲಿಯೂ ನಡೆಯುವಂತಹ ಒಂದು ಸಾಮಾಜಿಕ ಕ್ರಿಯೆಯಾಗಿದೆ. ಆದರೆ ವಿವಾಹ ವಿಧಾನವು ಒಂದೇ ರೀತಿಯದ್ದಾಗಿಲ್ಲ. ಭಾರತದಲ್ಲಿನ ವೈವಿಧ್ಯಮಯ ಸಮುದಾಯಗಳು, ಬುಡಕಟ್ಟುಗಳು, ಪಂಗಡಗಳು, ಜಾತಿಗಳು, ವರ್ಗಗಳು, ವಿವಿಧ ಧರ್ಮೀಯರು ತಮ್ಮದೇ ಆದಂತಹ ವಿಧಿವಿಧಾನಗಳ ಮೂಲಕ ವಿವಾಹವನ್ನು ನೆರವೇರಿಸುತ್ತಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಶಿಕ್ಷಣ, ಕೈಗಾರಿಕೀಕರಣ, ನಗರೀಕರಣ, ಸಂಸ್ಕೃತೀಕರಣದ ಫಲವಾಗಿ ರೂಪಿತವಾದಂತಹ ರೀತಿ ನೀತಿಗಳಲ್ಲಿ ರೂಢಿ, ಸಂಪ್ರದಾಯಗಳಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ.

ಅದೇ ರೀತಿಯಲ್ಲಿ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಅವರದೇ ಆದಂತಹ ರೀತಿಗಳಿಗೆ ಅನುಸಾರವಾಗಿ ವಿವಾಹ ಎಂಬ ಸಾಮಾಜಿಕ ಕ್ರಿಯೆಯು ಜರುಗುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಹಲವಾರು ಬದಲಾವಣೆಗಳು ಕಂಡುಬಂದರೂ ಇವರು ಹಳೆಯ ವಿವಾಹ ಪದ್ಧತಿಯನ್ನೇ ಇಂದಿಗೂ ಅನುಸರಿಸುತ್ತಿರುವುದನ್ನು ಕಾಣಬುದಾಗಿದೆ.

ಸಮಾಜವು ಬದಲಾವಣೆಯಾಗುತ್ತಿರುವ ಹಾಗೆಯೇ ವಿವಾಹವೆಂಬ ಸಂಸ್ಥೆಯಲ್ಲಿಯೂ ಬದಲಾವಣೆಗಳು ಆಗುತ್ತಿರುವುದು ಕಂಡುಬರುತ್ತಿದೆ. ಈ ಬುಡಕಟ್ಟು ಸಮುದಾಯದ ವಿವಾಹ ಪದ್ಧತಿಯಲ್ಲಿ ಇತ್ತೀಚಿನ ದಿನಗಳಲ್ಲಿ ಸಂಸ್ಕೃತೀಕರಣದ ಪ್ರಭಾವದಿಂದಾಗಿ ಬದಲಾವಣೆಗಳು ಆಗುತ್ತಿರುವುದನ್ನು ನಾವು ಕಾಣಬಹುದು.

### ವಿವಾಹದ ಸಂದರ್ಭದಲ್ಲಿ ಅನುಸರಿಸುವ ವಿಧಾನಗಳ ವಿವರ

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಶಾಸ್ತ್ರೋಕ್ತವಾಗಿ ಗೌಡಾಲು ಸಂಪ್ರದಾಯದಂತೆ ವಿವಾಹವು ನೆರವೇರುತ್ತಿರುವುದು ಕಂಡುಬರುತ್ತಿದೆ. ಕೆಲವರು ಶಾಸ್ತ್ರೋಕ್ತವಾಗಿ ವಿವಾಹವಾದರೆ, ಇನ್ನು ಕೆಲವರು ಗೌಡಾಲು

ಸಂಪ್ರದಾಯದಂತೆ (ಏಳನೇ ಅಧ್ಯಾಯದಲ್ಲಿ ವಿವರಣೆ ನೀಡಲಾಗಿದೆ). ವಿವಾಹವನ್ನು ನೆರವೇರಿಸುತ್ತಿರುವುದು ಕಂಡುಬರುತ್ತಿದೆ.

**ಕೋಷ್ಟಕ-೪.೦೬**

**ತಿಳುವಳಿಕೆದಾರರ ವಿವಾಹ ವಿಧಾನಗಳ ವಿವರ**

| ವಿವಾಹ ವಿಧಾನಗಳು | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಶಾಸ್ತ್ರೋಕ್ತವಾಗಿ ಅಥವಾ ಹಿಂದೂ ಸಂಪ್ರದಾಯದಂತೆ | ೭೩ | ೬೩.೪೭ |
| ಗೌಡಾಲು ಸಂಪ್ರದಾಯದಂತೆ | ೪೨ | ೩೬.೫೨ |
| ಒಟ್ಟು | ೧೧೫ | ೧೦೦.೦೦ |

ಗೌಡಾಲು ಬುಡಕಟ್ಟು ಸಮುದಾಯದವರು ಸಾಂಪ್ರದಾಯಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದ್ದು, ಒಟ್ಟು ೧೦೦ ತಿಳುವಳಿಕೆದಾರರಲ್ಲಿ ೭೩ (ಶೇ.೬೩.೪೭)ರಷ್ಟು ತಿಳುವಳಿಕೆದಾರರು ವಿವಾಹವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿದರೆ, ೪೨(ಶೇ.೩೬.೫೨)ರಷ್ಟು ತಿಳುವಳಿಕೆದಾರರು ಗೌಡಾಲು ಸಂಪ್ರದಾಯದಂತೆ ವಿವಾಹವನ್ನು ನೆರವೇರಿಸುತ್ತಿರುವುದು ಕಾಣಸಿಗುತ್ತದೆ. ಇಲ್ಲಿ ಕೆಲವು ತಿಳುವಳಿಕೆದಾರರು ಒಂದಕ್ಕಿಂತ ಹೆಚ್ಚಿನ ವಿವಾಹದ ವಿಧಾನಗಳನ್ನು ಹೊಂದಿರುವುದರಿಂದ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ. ಉದಾ: ಶಾಸ್ತ್ರೋಕ್ತವಾಗಿ ವಿವಾಹ ಮಾಡುವವರು, ಗೌಡಾಲು ಸಂಪ್ರದಾಯದಂತೆಯೂ ವಿವಾಹವನ್ನು ಮಾಡುತ್ತಾರೆ. ಹಾಗೆಯೇ ಗೌಡಾಲು ಸಂಪ್ರದಾಯದಂತೆ ವಿವಾಹ ಮಾಡುವವರು ಶಾಸ್ತ್ರೋಕ್ತವಾಗಿಯೂ ವಿವಾಹವನ್ನು ಮಾಡುತ್ತಿರುವುದು ಕಂಡುಬರುತ್ತಿದೆ. ಹೀಗಾಗಿ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ.

**ಮಕ್ಕಳ ವಿವಾಹವನ್ನು ಕುರಿತಾದ ತಿಳುವಳಿಕೆದಾರರ ಅಭಿಪ್ರಾಯದ ವಿವರ**

ತಮ್ಮ ಮಕ್ಕಳ ವಿವಾಹವನ್ನು ಹೇಗೆ ನೆರವೇರಿಸುತ್ತಾರೆ ಎಂಬುದರ ಕುರಿತು ಮಾಹಿತಿಯನ್ನು ಸಂಗ್ರಹಿಸಿದಾಗ, ಪೋಷಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಕೆಲವರು ಉದಾರಿಗಳಾಗಿದ್ದರೆ, ಇನ್ನು ಕೆಲವರು ತುಂಬಾ ಸಂಪ್ರದಾಯಸ್ಥರಾಗಿದ್ದು ತಾವು ಹೇಳಿದಂತೆ ಆಗಬೇಕೆಂಬ ಮನೋಭಾವನೆಯನ್ನು ಹೊಂದಿದ್ದಾರೆ. ಈ ಬಗ್ಗೆ ಗೌಡಾಲು ಬುಡಕಟ್ಟು ಸಮುದಾಯದವರು ಯಾವ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾರೆಂಬುದನ್ನು ಈ ಕೆಳಕಂಡಂತೆ ಅವಲೋಕಿಸಲಾಗಿದೆ.

**ಕೋಷ್ಟಕ-೪.೦೭**

**ಮಕ್ಕಳ ವಿವಾಹವನ್ನು ಕುರಿತು ತಿಳುವಳಿಕೆದಾರರ ಅಭಿಪ್ರಾಯ**

| ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಪ್ರೇಮ ವಿವಾಹ | ೫೧ | ೧೯.೬೯ |
| ಹಿರಿಯರು ಗೊತ್ತುಪಡಿಸಿದ ವಿವಾಹ | ೮೬ | ೩೩.೨೦ |

| | | |
|---|---|---|
| ಸರಳ ವಿವಾಹ | ೬೦ | ೨೩.೧೬ |
| ಅಂತರ್‌ಜಾತೀಯ ವಿವಾಹ | ೦೭ | ೦೨.೭೦ |
| ನೋಂದಾಯಿತ ವಿವಾಹ | ೧೮ | ೦೬.೯೫ |
| ಗೊತ್ತುಪಡಿಸಿದ ನೋಂದಾಯಿತ ವಿವಾಹ | ೩೭ | ೧೪.೨೮ |
| ಒಟ್ಟು | ೨೫೯ | ೧೦೦.೦೦ |

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಮಕ್ಕಳ ವಿವಾಹ ವಿಧಾನದ ಬಗ್ಗೆ ತಿಳುವಳಿಕೆದಾರರ ಅಭಿಪ್ರಾಯವನ್ನು ಈ ಕೋಷ್ಟಕದಲ್ಲಿ ಗಮನಿಸಿದಾಗ ೧೦೦ ತಿಳುವಳಿಕೆದಾರರಲ್ಲಿ ೫೧ (ಶೇ.೧೯.೬೯) ಜನರು ಪ್ರೇಮ ವಿವಾಹಕ್ಕೆ ಪ್ರೋತ್ಸಾಹ ನೀಡಿದರೆ ೮೬ (ಶೇ.೩೩.೨೦) ಜನರು ಹಿರಿಯರು ಗೊತ್ತುಪಡಿಸಿದ ವಿವಾಹಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಹಾಗೆಯೇ ೬೦ (ಶೇ.೨೩.೧೬) ಜನರು ಸರಳ ವಿವಾಹವನ್ನು ಪ್ರೋತ್ಸಾಹಿಸಿರುವುದನ್ನು, ೦೭ (ಶೇ.೨.೭೦) ಜನರು ಅಂತರ್‌ಜಾತಿ ವಿವಾಹವನ್ನು ಪ್ರೋತ್ಸಾಹಿಸಿರುವುದನ್ನು ಕಾಣಬಹುದು. ೧೮ (ಶೇ.೬.೯೫)ಜನ ನೋಂದಾಯಿತ ವಿವಾಹಕ್ಕೆ ಪ್ರೋತ್ಸಾಹ ನೀಡಿದರೆ. ೩೭ (ಶೇ.೧೪.೨೮) ಜನ ಗೊತ್ತು ಪಡಿಸಿದ ನೋಂದಾಯಿತ ವಿವಾಹವನ್ನು ಪ್ರೋತ್ಸಾಹಿಸಿರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ.

ಈ ಮೇಲಿನ ಕೋಷ್ಟಕವನ್ನು ಗಮನಿಸಿದಾಗ ನಮಗೆ ಗೋಚರಿಸುವ ಅಂಶವೆಂದರೆ ಸಂಪ್ರದಾಯಸ್ಥ ಗೌಡಾಲು ಕುಟುಂಬಗಳಲ್ಲಿ ಹೆಚ್ಚಿನ ಜನರು ನಿರ್ಧಾರದಂತೆ ವಿವಾಹವಾಗಬೇಕೆಂದು ಇಚ್ಛಿಸಿರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ. ಹಾಗೆಯೇ ಅತಿ ಕಡಿಮೆ ತಿಳುವಳಿಕೆದಾರರ ಅಂತರ್‌ಜಾತಿ ವಿವಾಹಕ್ಕೆ ಆದ್ಯತೆ ನೀಡಿದ್ದಾರೆ. ಆದರೆ ಇವರಲ್ಲಿ ಹೆಚ್ಚಿನವರು ಅಂತರ್‌ಜಾತಿ ವಿವಾಹಕ್ಕೆ ಮನ್ನಣೆಯನ್ನು ನೀಡುತ್ತಿಲ್ಲ ಎಂಬುದೂ ಸಹ ತಿಳಿದುಬರುತ್ತದೆ. ಈ ಕೋಷ್ಟಕವು ಮಾದರಿಯನ್ನು ಮೀರಿದೆ. ಇದಕ್ಕೆ ತಿಳುವಳಿಕೆದಾರರ ಮನೋಭಾವನೆಯು ಭಿನ್ನವಾಗಿದ್ದು, ಕೆಲವೊಂದು ಸೂಚನಾದಾರರು ವಿಭಿನ್ನ ಮನೋವೃತ್ತಿಯನ್ನು ಹೊಂದಿರುವುದೇ ಮೂಲ ಕಾರಣವಾಗಿದೆ.

**ತಿಳುವಳಿಕೆದಾರರ ವಿವಾಹದ ಸಂದರ್ಭದಲ್ಲಿ ಜಾತಕ ಕೇಳುವ ಸ್ವರೂಪ**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಜಾತಕ ನೋಡುವುದು ಒಂದು ಸಂಪ್ರದಾಯವಾಗಿದೆ, ಜಾತಕ ನೋಡಿ ಅಥವಾ ಪ್ರಸಾದವನ್ನು ಪಡೆದುಕೊಂಡು ವಿವಾಹ ಮಾಡುತ್ತಿರುವುದು ಕಂಡುಬರುತ್ತದೆ. ಕೆಲವರು ಸಾಲಾವಳಿ ನೋಡಿಕೊಂಡು ವಿವಾಹ ಮಾಡುತ್ತಿರುವುದು ಕಂಡುಬರುತ್ತದೆ. ಇದರ ಉದ್ದೇಶವೇನೆಂದರೆ ವಿವಾಹಿತರಾದ ದಂಪತಿಗಳು ನೂರು ಕಾಲ ಚೆನ್ನಾಗಿ ಬಾಳಿ ಬದುಕಬೇಕೆಂಬ ದೃಷ್ಟಿಯಿಂದ ಸಮಾಜದ ಮೇಲುಜಾತಿಯಲ್ಲಿ ಇದ್ದಂತಹ ಈ ಪದ್ಧತಿಯನ್ನು ಗೌಡಾಲು ಬುಡಕಟ್ಟು ಸಮುದಾಯಗಳಲ್ಲಿಯೂ ಅನುಸರಿಸುತ್ತಾರೆ. ಆದರೆ ಹಿಂದಿನ ದಿನಗಳಲ್ಲಿ ಈ ಪದ್ಧತಿಯು ಇರಲಿಲ್ಲ. ಜಾತಕ ನೋಡದೇ ವಿವಾಹವನ್ನು ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ಪದ್ಧತಿ ಸಂಸ್ಕೃತೀಕರಣದ ಪ್ರಭಾವದಿಂದಾಗಿ ಬೆಳೆಯುತ್ತಿರುವುದು ಗೋಚರವಾಗುತ್ತದೆ. ವಿವಾಹದ ಸಂದರ್ಭದಲ್ಲಿ ಅದನ್ನು ನೋಡಿ ಜೋಡಿಯು ಸರಿ

ಹೊಂದಿತ್ತದೆಯೇ, ಇಲ್ಲವೇ ಎಂಬುದನ್ನು ನಿರ್ಧರಿಸುವುದು ಕಂಡುಬರುತ್ತದೆ. ಗೌಡಾಲು ಬುಡಕಟ್ಟಿನವರು ಜಾತಕ, ಪ್ರಸಾದ, ಸಾಲಾವಳಿ ನೋಡಿಕೊಂಡು ವಿವಾಹ ಮಾಡಿಸುವವರಾಗಿದ್ದಾರೆ. ಈ ನಿಟ್ಟಿನಲ್ಲಿ ಸಾಗುತ್ತಿರುವ ಗೌಡಾಲು ಸಮುದಾಯದವರ ವಿವಾಹ ಪದ್ಧತಿಯ ಬಗೆಗಿನ ಮಾಹಿತಿಯನ್ನು ಸಂಗ್ರಹಿಸಿ ಈ ಕೆಳಗಿನ ಕೋಷ್ಟಕದ ಮೂಲಕ ಸಾದರಪಡಿಸಲಾಗಿದೆ.

**ಕೋಷ್ಟಕ-೪.೦೮**

**ವಿವಾಹದ ಸಂದರ್ಭದಲ್ಲಿ ಜಾತಕ ಕೇಳುವ ಸ್ವರೂಪ**

| ಸ್ವರೂಪ | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ಜಾತಕ | ೭೦ | ೪೧.೧೭ |
| ಪ್ರಸಾದ | ೭೦ | ೪೧.೧೭ |
| ಸಾಲಾವಳಿ ನೋಡುವುದು | ೩೦ | ೧೭.೬೪ |
| **ಒಟ್ಟು** | ೧೭೦ | ೧೦೦.೦೦ |
| **ನೋಡಲು ಕಾರಣಗಳು** | | |
| ಮುಂದಿನ ಜೀವನ ಸುಖವಾಗಿರಲು | ೭೯ | ೨೪.೩೮ |
| ಕಂಟಕವನ್ನು ನಿವಾರಿಸಲು | ೮೬ | ೨೬.೫೪ |
| ಇಬ್ಬರ ಜಾತಕ ಹೊಂದಾಣಿಕೆಯಾಗಲು | ೭೭ | ೨೩.೭೬ |
| ಜಾತಕ ಫಲಕ್ಕೆ ಅನುಗುಣವಾಗಿ ವಿವಾಹದ ಘಳಿಗೆ ಹೊಂದಾಣಿಕೆ ಮಾಡಲು | ೮೨ | ೨೫.೩೦ |
| **ಒಟ್ಟು** | ೩೨೪ | ೧೦೦.೦೦ |
| **ನೋಡಲು ಕಾರಣಗಳು** | | |
| ಹಿಂದಿನವರು ನೋಡುತ್ತಿರಲಿಲ್ಲ | ೩೭ | ೫೪.೪೧ |
| ಅದು ಬ್ರಾಹ್ಮಣ/ಅನ್ಯಜಾತಿಯವರ ಆಚರಣೆ, ನಮ್ಮದಲ್ಲ | ೧೭ | ೨೫.೦೦ |
| ಇಂದಿನ ಆಧುನಿಕ ಯುಗದಲ್ಲಿ ಜಾತಕ ನೋಡುವುದು ಸರಿಯಲ್ಲ | ೧೪ | ೨೦.೫೮ |
| **ಒಟ್ಟು** | ೬೮ | ೧೦೦.೦೦ |
| **ನೋಡಲು ಕಾರಣಗಳು** | | |

ಈ ಮೇಲಿನ ಕೋಷ್ಟಕದಲ್ಲಿ ಜಾತಕ ನೋಡುವ ಸ್ವರೂಪ, ಜಾತಕ ನೋಡಲು ಕಾರಣಗಳು ಮತ್ತು ನೋಡದೇ ಇರಲು ಕಾರಣಗಳು ಮುಂತಾದ ಅಂಶಗಳು ಗೋಚರಿಸುತ್ತವೆ.

ಒಟ್ಟು ೧೦೦ ಜನ ತಿಳುವಳಿಕೆದಾರರಲ್ಲಿ ೭೦ (ಶೇ.೪೧.೧೭) ಜನ ಜಾತಕವನ್ನು ನೋಡುವವರು, ೭೦ (ಶೇ.೪೧.೧೭) ಜನ ಪ್ರಸಾದ ನೋಡುವವರು, ೩೦ (ಶೇ.೧೭.೬೪) ಜನ ಸಾಲಾವಳಿ ನೋಡುವವರಿದ್ದಾರೆ.

ಇಲ್ಲಿ ಜಾತಕ ಮತ್ತು ಪ್ರಸಾದ ನೋಡುವವರ ಪ್ರಮಾಣ ಸಾಮಾನ್ಯವಾಗಿ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಸಾಲಾವಳಿ ನೋಡುವವರು ಕಡಿಮೆ ಪ್ರಮಾಣದಲ್ಲಿದ್ದಾರೆ. ಇಲ್ಲಿ ಸಂಶೋಧನಾ ಮಾದರಿಯು ಮೀರುತ್ತಿದೆ. ಕಾರಣವೇನೆಂದರೆ ಜಾತಕ ನೋಡುವ ತಿಳುವಳಿಕೆದಾರರು ಪ್ರಸಾದವನ್ನೂ ನೋಡುತ್ತಿದ್ದಾರೆ. ಹಾಗೆಯೇ ಇವರೇ ಪುನಃ ಸಾಲಾವಳಿಯನ್ನೂ ನೋಡುವುದು ಕಂಡುಬರುತ್ತದೆ.

ಜಾತಕ, ಸಾಲಾವಳಿ ಮತ್ತು ಪ್ರಸಾದಗಳನ್ನು ೭೯ (ಶೇ.೨೪.೩೮) ಜನ ಮುಂದಿನ ಜೀವನ ಸುಖಕರವಾಗಿರಲಿ ಎಂದು, ೮೬ (ಶೇ.೨೬.೫೪)ರಷ್ಟು ಜನ ಕಂಟಕಗಳನ್ನು ನಿವಾರಿಸಲು, ೭೭ (ಶೇ.೨೩.೭೬) ಇಬ್ಬರ ಜಾತಕ ಹೊಂದಾಣಿಕೆಯಾಗಲು, ೮೨, (ಶೇ.೨೫.೩೦)ಜನ ಜಾತಕ ಫಲಕ್ಕೆ ಅನುಗುಣವಾಗಿ ವಿವಾಹದ ಘಳಿಗೆ ಹೊಂದಾಣಿಕೆ ಮಾಡಬಹುದು ಎಂಬ ಕಾರಣಗಳಿಂದಾಗಿ ನೋಡುತ್ತಾರೆ. ಇದರಲ್ಲಿ ಹೆಚ್ಚು ಜನರು ಇಬ್ಬರ ಜೀವನ ಸುಖಕರವಾಗಿರಲಿ ಎಂದು ಜಾತಕ, ಸಾಲಾವಳಿ ಹಾಗೂ ಪ್ರಸಾದವನ್ನು ಪಡೆದು ವಿವಾಹವಾಗುತ್ತಿರುವುದು ಕಂಡುಬರುತ್ತದೆ. ಕೋಷ್ಟಕದಲ್ಲಿ ಮಾದರಿಯು ಮೊತ್ತವನ್ನು ಮೀರಿದೆ. ಕಾರಣವೇನೆಂದರೆ ಜಾತಕ ನೋಡಲು ನೀಡಿರುವ ಕಾರಣಗಳಲ್ಲಿ ಕೆಲವರು ಒಂದಕ್ಕೂ ಮೀರಿ ಎರಡು ಅಥವಾ ಮೂರು ಕಾರಣಗಳನ್ನು ನೀಡಿರುವುದು ಕಂಡುಬರುತ್ತದೆ.

ಜಾತಕ ನೋಡದೇ ಇರಲು ಕಾರಣ ನೀಡಿದವರಲ್ಲಿ ೩೭(ಶೇ.೫೪.೪೧) ಜನ ನೋಡದಿರಲು ನಮ್ಮ ಹಿಂದಿನವರು ಜಾತಕ ನೋಡುತ್ತಿರಲಿಲ್ಲ ಎಂಬ ಕಾರಣವನ್ನು ತಮ್ಮ ಅಭಿಪ್ರಾಯದಲ್ಲಿ ವ್ಯಕ್ತಪಡಿಸಿರುತ್ತಾರೆ. ೧೭(ಶೇ.೨೫) ಜನರು ಜಾತಕ ಪದ್ಧತಿಯು ಬ್ರಾಹ್ಮಣ/ಬೇರೆ ಜಾತಿಯ ನಿಲುವನ್ನು ಹೊಂದಿದೆ ಎಂಬುದನ್ನು ತಿಳಿಸಿದ್ದಾರೆ. ೧೪(ಶೇ.೨೦.೫೮) ಜನ ಇಂದಿನ ಆಧುನಿಕ ಯುಗದಲ್ಲಿ ಜಾತಕ ನೋಡುವುದು ಅಷ್ಟೊಂದು ಸೂಕ್ತವಲ್ಲ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಈ ಮೇಲಿನ ಎಲ್ಲ ಅಭಿಪ್ರಾಯಗಳ ಸಂಗ್ರಹದಿಂದ ತಿಳುವಳಿಕೆದಾರರು ವೈಜ್ಞಾನಿಕ ಮನೋಭಾವನೆಯನ್ನು ತಾಳುತ್ತಿದ್ದು, ಕಾಲದೊಂದಿಗೆ ಅವರ ಯೋಚನಾ ಶಕ್ತಿಯೂ ಹೊಸ ರೂಪವನ್ನು ಪಡೆಯುತ್ತಿರುವುದನ್ನು ಕಾಣಬಹುದಾಗಿದೆ.

### ವಿವಾಹದ ಸಂದರ್ಭದಲ್ಲಿ ಪುರೋಹಿತರಿಗೆ ನೀಡುವ ಆದ್ಯತೆಯ ಸ್ವರೂಪ

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಹಿಂದೆ ಪುರೋಹಿತರ ಅಗತ್ಯವಿರಲಿಲ್ಲ. ಬರಬರುತ್ತಾ ಸಂಸ್ಕೃತೀಕರಣದ ಪ್ರಭಾವದಿಂದಾಗಿ ವಿವಾಹದ ಪ್ರಕ್ರಿಯೆಯಲ್ಲಿ ಬದಲಾವಣೆಗಳು ಆಗುತ್ತಿವೆ. ಹಾಗೆಯೇ ವಿವಾಹ ಮಾಡುವಾಗ ಪುರೋಹಿತರು ಬೇಕೇ ಬೇಕು ಎಂಬ ನಂಬಿಕೆಯು ಇವರಲ್ಲಿ ಇರುವುದು ಕಂಡುಬರುತ್ತಿದೆ. ಬದಲಾದ ಜೀವನ ಸ್ಥಿತಿಗೆ ಅನುಸಾರವಾಗಿ ಮೇಲುಜಾತಿಯ ಸಂಪ್ರದಾಯಗಳನ್ನು ಇವರು ಅನುಸರಿಸುತ್ತಿರುವುದರಿಂದ ವಿವಾಹದ ಸಮಯದಲ್ಲಿ ಪುರೋಹಿತರು ಇರಬೇಕು ಎಂಬ ನಂಬಿಕೆಯು ಕೆಲವರಲ್ಲಿ ಬಲವಾಗಿ ಉಳಿದಿರುವುದು ಕಂಡುಬರುತ್ತದೆ.

### ಕೋಷ್ಟಕ-೪.೦೯

### ವಿವಾಹದ ಸಂದರ್ಭದಲ್ಲಿ ಪುರೋಹಿತರ ಅಗತ್ಯತೆ

| ಅಭಿಪ್ರಾಯ | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ಅಗತ್ಯವಿದೆ | ೫೯ | ೫೯.೦೦ |
| ಅಗತ್ಯವಿಲ್ಲ | ೪೧ | ೪೧.೦೦ |
| ಒಟ್ಟು | ೧೦೦ | ೧೦೦.೦೦ |
| ಅಗತ್ಯ ಇಲ್ಲವಾದರೆ ಕಾರಣಗಳು | | |
| ಗುರಿಕಾರರೇ ಸಾಕು | ೧೭ | ೪೧.೪೬ |
| ಸಂಪ್ರದಾಯದ ಪ್ರಕಾರ ಪುರೋಹಿತರ ಅಗತ್ಯವಿಲ್ಲ | ೧೩ | ೩೧.೭೦ |
| ಹಿಂದೆ ಪುರೋಹಿತರೇ ವಿವಾಹ ಮಾಡಲು ಬರುತ್ತಿರಲಿಲ್ಲ | ೧೧ | ೨೬.೮೨ |
| ಒಟ್ಟು | ೪೧ | ೧೦೦.೦೦ |

ವಿವಾಹದ ಸಂದರ್ಭದಲ್ಲಿ ಪುರೋಹಿತರ ಅಗತ್ಯತೆ ಇದೆ ಎಂಬುದಾಗಿ ಹೇಳಿರುವ ತಿಳುವಳಿಕೆದಾರರು ೫೯(ಶೇ.೫೯) ಜನ. ಹಾಗೆಯೇ ೪೧(ಶೇ.೪೧) ಜನ ವಿವಾಹದ ಸಂದರ್ಭದಲ್ಲಿ ತಿಳುವಳಿಕೆದಾರರಿಗೆ ಪುರೋಹಿತರ ಮೂಲಕ ವಿವಾಹ ಮಾಡಿಸುವ ಕುರಿತು ಅರಿವಿರಲಿಲ್ಲ. ಏಕೆಂದರೆ ಹಿಂದಿನಿಂದಲೂ ಪುರೋಹಿತರು ವಿವಾಹ ಮಾಡಿಸುತ್ತಿರಲಿಲ್ಲ. ಇತ್ತೀಚಿನ ವರ್ಷಗಳಲ್ಲಷ್ಟೇ ಗೌಡಾಲು ಸಮುದಾಯದಲ್ಲಿ ಪುರೋಹಿತರ ಪಾತ್ರ ಕಂಡುಬರುತ್ತಿದೆ ಎಂದು ತಿಳುವಳಿಕೆದಾರರು ತಮ್ಮ ನಿಲುವನ್ನು ವ್ಯಕ್ತಪಡಿಸಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಪುರೋಹಿತರ ಅಗತ್ಯತೆ ಇಲ್ಲ ಎಂದು ಹೇಳುವವರಲ್ಲಿ ೧೭(ಶೇ.೪೧.೪೬) ಜನ ಗುರಿಕಾರರೇ ವಿವಾಹ ಮಾಡಿಸುತ್ತಾರೆ ಎಂದು ಹೇಳಿದ್ದಾರೆ. ೧೩(ಶೇ.೩೧.೭೦) ಜನ ತಮ್ಮ ಸಂಪ್ರದಾಯದ ಪ್ರಕಾರ ವಿವಾಹದ ಸಂದರ್ಭದಲ್ಲಿ ಪುರೋಹಿತ ಅಗತ್ಯವಿಲ್ಲ, ಹಿಂದಿನಿಂದಲೂ ಗುರಿಕಾರ ಅಥವಾ ಹುಡುಗಿಯ ಸೋದರಮಾವ ಮುಂದೆ ನಿಂತು ವಿವಾಹ ನೆರವೇರಿಸುತ್ತಿದ್ದರು ಎಂದಿದ್ದಾರೆ. ೧೧ (ಶೇ.೨೬.೮೨)ರಷ್ಟು ಜನ ಹಿಂದೆ ಪುರೋಹಿತರಿಗೆ ವಿವಾಹ ಮಾಡಿಸಲು ಆಮಂತ್ರಿಸಿದ್ದರೆ ಅವರು ಬರುತ್ತಿರಲಿಲ್ಲ. ಈಗ ಅವರು ಬರುತ್ತಿದ್ದಾರೆ ಎಂಬ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಮೇಲಿನ ಕೋಷ್ಟಕದಿಂದ ಕಂಡುಬರುವ ಅಂಶವೆಂದರೆ ಹಿಂದಿನಿಂದಲೂ ವಿವಾಹ ಮಾಡಿಸುವಾಗ ಸೋದರಮಾವ ಅಥವಾ ಗೌಡಾಲು ಜನಾಂಗದ ಗಣ್ಯರು ಅಥವಾ ಊರಿನಲ್ಲಿ ಇರುವ ಗುರಿಕಾರರು ಮುಂದೆ ನಿಂತು ವಿವಾಹ ಮಾಡಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಮೇಲು ಜಾತಿಯ ಪ್ರಭಾವದಿಂದಾಗಿ ಪ್ರತಿಷ್ಠೆಯ ಸಂಕೇತವಾಗಿ ಪುರೋಹಿತರನ್ನು ಆಹ್ವಾನಿಸುತ್ತಾರೆ. ಪುರೋಹಿತರು ವಿವಾಹ ಮಾಡಿಸಿದರೆ ಅಂತಹ ವಿವಾಹ ಶಾಶ್ವತವಾಗಿ ಉಳಿಯುತ್ತದೆ ಎಂಬ ನಿಲುವಿನಿಂದಾಗಿ ಪುರೋಹಿತರಿಗೆ ಆದ್ಯತೆ ನೀಡುತ್ತಿದ್ದಾರೆ. ಕೆಲವೊಂದು ಕಡೆಗಳಲ್ಲಿ ಪುರೋಹಿತರಿಗೆ ಅವಕಾಶ ಕೊಡುವುದಿಲ್ಲ. ತಾವೇ ಮುಂದೆ ನಿಂತು ವಿವಾಹ ಮಾಡಿಸುವುದನ್ನು ಕಾಣಬಹುದು. ಸಂಪ್ರದಾಯಬದ್ಧರಾದ ಇವರು, ತಮ್ಮ ಹಳೆಯ ಸಂಪ್ರದಾಯ, ರೂಢಿ, ಪದ್ಧತಿಗಳನ್ನು ತಾವೇ

ಮುಂದುವರೆಸಿಕೊಂಡು ಹೋಗಬೇಕು ಎಂಬ ನಿಲುವನ್ನು ಹೊಂದಿರುವುದು ಇದರ ಹಿಂದಿರುವ ಮುಖ್ಯ ಉದ್ದೇಶ ಎಂಬುದನ್ನು ಸಂಶೋಧನೆಯಿಂದ ಕಂಡುಕೊಳ್ಳಬುದು.

**ಗೌಡಾಲು ಸಮುದಾಯದಲ್ಲಿರುವ ವರದಕ್ಷಿಣೆಯ ಪದ್ಧತಿ**

ಭಾರತದ ಪಲವಾರು ಸಾಮಾಜಿಕ ಸಮಸ್ಯೆಗಳಲ್ಲಿ ವರದಕ್ಷಿಣೆಯೂ ಒಂದು ಸಮಸ್ಯೆಯಾಗಿದೆ. ಹಿಂದೆ ವಧುವಿನ ಕಡೆಯವರು ವರನಿಗೆ ಚಿನ್ನ, ಹಣ, ವಸ್ತುಗಳು, ಆಸ್ತಿ, ದವಸ ಧಾನ್ಯಗಳು, ಪ್ರಾಣಿಗಳು ಇನ್ನೂ ಮುಂತಾದ ರೂಪಗಳಲ್ಲಿ ವರದಕ್ಷಿಣೆಯನ್ನು ನೀಡುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ವಿದ್ಯಾವಂತರಲ್ಲಿ ಈ ಸಾಮಾಜಿಕ ಪಿಡುಗಿನ ಪ್ರಮಾಣವು ಹೆಚ್ಚಾಗುತ್ತಿದ್ದು, ಮುಂದೆ ಇದೊಂದು ದೊಡ್ಡ ಸಾಮಾಜಿಕ ಸಮಸ್ಯೆಯಾಗುವಲ್ಲಿ ಯಾವುದೇ ಸಂಶಯವಿಲ್ಲ. Dowry ಎಂಬ ಪದಕ್ಕೆ Ziegler's English-Kannada Dictionary ಯಲ್ಲಿ ಬಳುವಳಿ, ಸ್ತ್ರೀಧನ, ಉಡುಗೊರೆ, ಕೊಡುಗೆ ಮುಂತಾದ ಅರ್ಥಗಳನ್ನು ನೀಡಲಾಗಿದೆ. ವರದಕ್ಷಿಣೆ ಎಂದರೆ ವಧುವಿನ ಕಡೆಯವರು ವಿವಾಹದ ಸಂದರ್ಭದಲ್ಲಿ ವರನಿಗೆ ಕೊಡುವಂತಹ ಕಾಣಿಕೆಯೇ ಆಗಿದೆ. ಸಾಮಾನ್ಯವಾಗಿ ವಿವಾಹವಾಗಲಿರುವ ಹೆಣ್ಣು ತನ್ನ ಗಂಡನಿಗೆ ವಿವಾಹದ ಸಲುವಾಗಿ ತರುವ ಹಣ, ವಸ್ತುಗಳು ಮತ್ತು ಸಂಪತ್ತು ವರದಕ್ಷಿಣೆಯಾಗಿದೆ. ೧೯೬೧ರ ವರದಕ್ಷಿಣೆ ನಿಷೇಧ ಕಾಯಿದೆಯ ವರದಕ್ಷಿಣೆ ಎಂದರೆ ಈ ಕೆಳಗಿನಂತೆ ವಿವರಿಸಲಾಗಿದೆ.

೧. ವಿವಾಹದ ಕಾರಣಕ್ಕಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಒಂದು ಪಕ್ಷದವರು ಇನ್ನೊಂದು ಪಕ್ಷದವರಿಂದ ಯಾವುದೇ ಆಸ್ತಿ ಅಥವಾ ಮೌಲ್ಯಯುಕ್ತ ಭದ್ರತೆಯನ್ನು ಸ್ವೀಕರಿಸುವುದು.

೨. ಹೆಣ್ಣು-ಗಂಡಿನ ಯಾವುದೇ ಕಡೆಯವರು ಆಸ್ತಿಯನ್ನು ಅಥವಾ ಸೊತ್ತನ್ನು ಕೊಡುವುದು ಮತ್ತು ಅದನ್ನು ಪಡೆದುಕೊಳ್ಳುವುದು.

೩. ವಿವಾಹದ ಸಂದರ್ಭದಲ್ಲಿ ಅಥವಾ ಅದಕ್ಕಿಂತ ಮುಂಚೆ ಅಥವಾ ನಂತರ ಯಾವುದೇ ಸ್ವತ್ತು ಅಥವಾ ಮೌಲ್ಯವುಳ್ಳ ಭದ್ರತೆಯ ವರದಕ್ಷಿಣೆ ಎಂದು ಕರೆಯಲ್ಪಟ್ಟಿದೆ.

ಈ ವರದಕ್ಷಿಣೆಯು ಭಾರತೀಯರಲ್ಲಿ ಹೆಚ್ಚಾಗಿ ಬೇರೂರಿದ್ದು ಇದೊಂದು ಸಾಮಾಜಿಕ ಪಿಡುಗೂ ಆಗಿದೆ. ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಇರುವ ವರದಕ್ಷಿಣೆಯ ಬಗ್ಗೆ ಗಮನಿಸುವುದಾದರೆ ಕೆಲವರು ಮಾತ್ರ ವರದಕ್ಷಿಣೆಯನ್ನು ಪಡೆಯುತ್ತಿದ್ದಾರೆ. ಇವರಲ್ಲಿ ಹೆಚ್ಚಿನವರು ವರದಕ್ಷಿಣೆಯನ್ನು ತೆಗೆದುಕೊಳ್ಳುತ್ತಿಲ್ಲ ಎಂಬುವುದು ಈ ಕೆಳಗಿನ ಕೋಷ್ಟಕದಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ-೪.೧೦**

**ತಿಳುವಳಿಕೆದಾರರಲ್ಲಿ ವರದಕ್ಷಿಣೆ ಪದ್ಧತಿ**

| ವಿವರ | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ವರದಕ್ಷಿಣೆ ಪದ್ಧತಿ ಇರುವವರು | ೨೦ | ೨೦.೦೦ |
| ವರದಕ್ಷಿಣೆ ಪದ್ಧತಿ ಇಲ್ಲದೇ ಇರುವವರು | ೮೦ | ೮೦.೦೦ |
| ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ನಮಗೆ ಕಂಡುಬರುವ ಸಂಗತಿ ಎಂದರೆ ೧೦೦ ಜನ ತಿಳುವಳಿಕೆದಾರರಲ್ಲಿ ೨೦(ಶೇ.೨೦) ಜನ ವರದಕ್ಷಿಣೆಯನ್ನು ಪಡೆಯುತ್ತಿದ್ದಾರೆ ಅಥವಾ ವರದಕ್ಷಿಣೆಯನ್ನು ಕೊಡುತ್ತಿದ್ದಾರೆ. ಹಾಗೆಯೇ ೮೦(ಶೇ.೮೦) ಜನ ವರದಕ್ಷಿಣೆಯನ್ನು ತೆಗೆದುಕೊಳ್ಳುತ್ತಿಲ್ಲ.

ಇಲ್ಲಿ ನಮಗೆ ಗೋಚರಿಸಿದಂತಹ ಸಂಗತಿ ಎಂದರೆ ಸಮಾಜದ ಮುಖ್ಯವಾಹಿನಿಯಿಂದ ಬಹಳ ಹಿಂದೆ ಉಳಿದಿರುವ ಈ ಗೌಡಾಲು ಕುಟುಂಬದವರಲ್ಲಿ ವರದಕ್ಷಿಣೆ ಇಲ್ಲದೇ ಇರುವುದು ಬಹು ವಿಶೇಷ ಸಂಗತಿಯಾಗಿದೆ. ಕೆಲವರು ವರದಕ್ಷಿಣೆಯನ್ನು ಪಡೆಯುತ್ತಿದ್ದರೂ ಸಹ ಇವರ ಪ್ರಮಾಣ ತುಂಬಾ ಕಡಿಮೆ ಇದೆ. ವರದಕ್ಷಿಣೆ ಪಡೆಯುವವರಲ್ಲಿ ವಿದ್ಯಾವಂತರ ಸಂಖ್ಯೆಯೇ ಹೆಚ್ಚು ಇರುವುದು ಗಮನಿಸಬೇಕಾದ ಅಂಶವಾಗಿದೆ.

**ವರದಕ್ಷಿಣೆ ಕೊಡುವ/ಪಡೆಯುವ ಕಾರಣಗಳು**

ಈ ಸಂಶೋಧನೆಯಿಂದ ನಮಗೆ ಕಂಡುಬರುವ ಸಂಗತಿ ಏನೆಂದರೆ ಹೆಣ್ಣು ಮಕ್ಕಳಿಗೆ ವಿವಾಹದ ಸಂದರ್ಭದಲ್ಲಿ ವರದಕ್ಷಿಣೆ ಕೊಡಲು ಅಥವಾ ಗಂಡುಮಕ್ಕಳು ವರದಕ್ಷಿಣೆ ಪಡೆಯಲು ಹಲವಾರು ಕಾರಣಗಳಿದ್ದು, ಅವುಗಳನ್ನು ಈ ಕೆಳಗಿನ ಕೋಷ್ಟಕದಿಂದ ಕಂಡುಕೊಳ್ಳಬಹುದು.

**ಕೋಷ್ಟಕ-೪.೧೧**

**ವರದಕ್ಷಿಣೆ ಕೊಡುವ ಮತ್ತು ಪಡೆಯುವ ಕಾರಣಗಳು**

| ಕಾರಣಗಳು | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ಭಿನ್ನಾಭಿಪ್ರಾಯ ಬರಬಾರದು ಎಂದು | ೮೦ | ೪೦.೦೦ |
| ಕಡ್ಡಾಯವಾಗಿ ಕೊಡಬೇಕಾದ ಸ್ಥಿತಿ ಇದೆ | ೨೦ | ೧೦.೦೦ |
| ಮಕ್ಕಳ ಜೀವನ ಸುಖಕರವಾಗಿರಲಿ ಎಂದು | ೯೦ | ೪೫.೦೦ |
| ಇದೊಂದು ಸಂಪ್ರದಾಯವಾಗಿದೆ | ೧೦ | ೦೫.೦೦ |
| **ಒಟ್ಟು** | **೨೦೦** | **೧೦೦.೦೦** |

**ಗಂಡು ಮಕ್ಕಳಿಗೆ ವಿವಾಹ ಮಾಡುವಾಗ ವರದಕ್ಷಿಣೆ ಪಡೆದವರು**

| ವಿವರ | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ವರದಕ್ಷಿಣೆ ಪಡೆದವರು | ೨೦ | ೨೦.೦೦ |
| ವರದಕ್ಷಿಣೆ ಪಡೆಯದೇ ಇರುವವರು | ೮೦ | ೮೦.೦೦ |
| **ಒಟ್ಟು** | **೨೦೦** | **೧೦೦.೦೦** |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ವರದಕ್ಷಿಣೆ ತೆಗೆದುಕೊಂಡವರ ಸಂಖ್ಯೆ ಕೇವಲ ೨೦(ಶೇ.೨೦) ಮಾತ್ರ ಇದೆ. ಮತ್ತು ೮೦(ಶೇ.೮೦)ರಷ್ಟು ಜನ ವರದಕ್ಷಿಣೆ ಪಡೆಯದೇ ಇರುವುದನ್ನು ಈ ಸಂಶೋಧನೆಯಿಂದ ಕಂಡುಕೊಳ್ಳಬಹುದು. ಇದೊಂದು ಗೌಡಾಲು ಬುಡಕಟ್ಟು ಸಮುದಾಯದವರಲ್ಲಿ ಇರುವಂತಹ ಉತ್ತಮ ಸಾಮಾಜಿಕ ಮೌಲ್ಯ ಎಂದು ಕರೆದರೆ ತಪ್ಪಾಗಲಾರದು.

ವರದಕ್ಷಿಣೆಯನ್ನು ತೆಗೆದುಕೊಳ್ಳಲು ನೀಡಿರುವ ಕಾರಣಗಳನ್ನು ನೋಡುವುದಾದರೆ ೮೦ (ಶೇ.೪೦) ಜನರು ಭಿನ್ನಾಭಿಪ್ರಾಯ ಬರಬಾರದು ಎಂಬ ಕಾರಣದಿಂದ ವರದಕ್ಷಿಣೆ ಪಡೆಯುತ್ತಾರೆ/ನೀಡುತ್ತಾರೆ. ೨೦ (ಶೇ.೧೦)ಜನ ವರದಕ್ಷಿಣೆಯನ್ನು ಕಡ್ಡಾಯವಾಗಿ ಕೊಡಬೇಕಾದಂತಹ ಪರಿಸ್ಥಿತಿ ಇದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ೯೦(ಶೇ.೪೫) ಜನ ವರದಕ್ಷಿಣೆ ಕೊಡಲು/ನೀಡಲು ಮುಖ್ಯ ಕಾರಣವೇನೆಂದರೆ ತಮ್ಮ ಮಕ್ಕಳ ಜೀವನ ಮುಂದಿನ ದಿನಗಳಲ್ಲಿ ಸುಖಕರವಾಗಿರಲಿ ಎಂಬ ಆಶಾವಾದವನ್ನು ಹೊಂದಿರುವುದೇ ಆಗಿದೆ. ಹಾಗೆಯೇ ೧೦(ಶೇ.೫)ರಷ್ಟು ಜನ ವರದಕ್ಷಿಣೆ ಕೊಡಲು ಮತ್ತು ಪಡೆಯಲು ಮುಖ್ಯ ಕಾರಣವೇನೆಂದರೆ ಇದೊಂದು ಸಂಪ್ರದಾಯವಾಗಿದೆ ಎಂಬ ಅಭಿಪ್ರಾಯವನ್ನು ತಾಳಿದ್ದಾರೆ. ಇಲ್ಲಿ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿರುವುದನ್ನು ಕಾಣಬಹುದು. ಉದಾಹರಣೆಗೆ ಭಿನ್ನಾಭಿಪ್ರಾಯ ಬರಬಾರದು ಎಂದು ಅಭಿಪ್ರಾಯ ಹೇಳಿದವರು ಕಡ್ಡಾಯವಾಗಿ ಕೊಡಲೇಬೇಕಾದ ಪರಿಸ್ಥಿತಿ ಇದೆ ಎಂಬುದಾಗಿಯೂ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಸೂಚಕರು ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚಿನ ಕಾರಣಗಳನ್ನು ನೀಡಿರುವುದರಿಂದ ಕೋಷ್ಟಕವು ಮಾದರಿಯನ್ನು ಮೀರಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ವರದಕ್ಷಿಣೆ ಪಡೆಯುವ ಅಥವಾ ಕೊಡುವ ಉದ್ದೇಶಗಳು**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ವರದಕ್ಷಿಣೆಯನ್ನು ಪಡೆಯುವುದು ಮತ್ತು ಕೊಡುವುದು ಶೇಕಡ ಪ್ರಮಾಣದಲ್ಲಿ ಕಡಿಮೆಯಾಗಿದ್ದು, ವರದಕ್ಷಿಣೆ ಕೊಡುವ ಮತ್ತು ಪಡೆಯುವ ಉದ್ದೇಶಗಳನ್ನು ಕೆಳಗಿನ ಕೋಷ್ಟಕದಿಂದ ತಿಳಿದುಕೊಳ್ಳಬಹುದಾಗಿದೆ.

**ಕೋಷ್ಟಕ-೪.೧೨**

**ವರದಕ್ಷಿಣೆ ಪಡೆಯುವ ಉದ್ದೇಶಗಳು**

| ಉದ್ದೇಶಗಳು | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ತಮ್ಮ ಸಹೋದರಿಯರಿಗೆ ಕೊಟ್ಟ ಹಣ ಭರಿಸಬೇಕಾಗಿರುವುದರಿಂದ | ೦೫ | ೦೫.೦೦ |
| ತಮ್ಮ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲದೇ ಇರುವ ಕಾರಣದಿಂದ | ೬೦ | ೬೦.೦೦ |
| ಸಹೋದರಿಯರ ಮದುವೆ ಖರ್ಚಿಗೆ | ೧೫ | ೧೫.೦೦ |
| ವರದಕ್ಷಿಣೆ ತೆಗೆದುಕೊಳ್ಳುವುದು ಲೋಕರೂಢಿಯಾಗಿದೆ | ೧೦ | ೧೦.೦೦ |
| ಅವರೇ ಇಷ್ಟಪಟ್ಟು ಕೊಟ್ಟಿದ್ದಾರೆ | ೧೦ | ೧೦.೦೦ |
| ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ೫(ಶೇ.೫)ರಷ್ಟು ಜನ ವರದಕ್ಷಿಣೆ ಪಡೆಯಲು ತಮ್ಮ ಸಹೋದರಿಯರಿಗೆ ಕೊಟ್ಟ ಹಣ ಭರಿಸಬೇಕಾಗಿರುವುದರಿಂದ ವರದಕ್ಷಿಣೆ ಪಡೆಯುತ್ತೇವೆ ಎಂಬ ನಿಲುವನ್ನು ವ್ಯಕ್ತಪಡಿಸಿದ್ದರೆ, ೬೦(ಶೇ.೬೦) ಜನ ತಮ್ಮ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲದೇ ಇರುವುದು ಇದಕ್ಕೆ ಕಾರಣ. ೧೫(ಶೇ.೧೫)ರಷ್ಟು ಜನ ಸಹೋದರಿಯರ ಮದುವೆ ಖರ್ಚಿಗಾಗಿ ಎಂದಿದ್ದಾರೆ. ೧೦(ಶೇ.೧೦)ರಷ್ಟು ಜನ ವರದಕ್ಷಿಣೆಯನ್ನು ತೆಗೆದುಕೊಳ್ಳುವುದು ಒಂದು ಲೋಕರೂಢಿಯಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತ

ಪಡಿಸಿದ್ದಾರೆ. ಹಾಗೆಯೇ ೧೦(ಶೇ.೧೦)ರಷ್ಟು ಜನ ವಧುವಿನ ಕಡೆಯವರೇ ಇಷ್ಟಪಟ್ಟು ವರದಕ್ಷಿಣೆಯನ್ನು ನೀಡುತ್ತಾರೆ ಎಂಬ ಕಾರಣವನ್ನು ನೀಡಿದ್ದಾರೆ.

ಇಲ್ಲಿ ಕಂಡುಬರುವ ವಿಶೇಷ ಸಂಗತಿ ಎಂದರೆ ಅತಿ ಹೆಚ್ಚು ಜನರು ತಮ್ಮ ಆರ್ಥಿಕ ಸ್ಥಿತಿಯು ಉತ್ತಮವಾಗಿಲ್ಲದೇ ಇರುವ ಉದ್ದೇಶಕ್ಕಾಗಿ ವರದಕ್ಷಿಣೆಯನ್ನು ತೆಗೆದುಕೊಳ್ಳಬೇಕಾಗುತ್ತದೆ ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಹಾಗೆಯೇ ಅತಿ ಕಡಿಮೆ ಜನ ತಮ್ಮ ಸಹೋದರಿಯರಿಗೆ ಕೊಟ್ಟ ಹಣವನ್ನು ಭರಿಸುವ ಉದ್ದೇಶಕ್ಕಾಗಿ ವರದಕ್ಷಿಣೆ ತೆಗೆದುಕೊಳ್ಳುತ್ತಿರುವುದಾಗಿ ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಾರೆಯಾಗಿ ವರದಕ್ಷಿಣೆ ಪಡೆಯಲು ಪ್ರಮುಖವಾಗಿ ಇವರ ಆರ್ಥಿಕ ಸ್ಥಿತಿಯೇ ಕಾರಣವಾಗಿದ್ದು, ಇವರಲ್ಲಿ ಬಡವರ ಸಂಖ್ಯೆಯೇ ಹೆಚ್ಚಾಗಿ ಇರುವ ಕಾರಣ ತಮ್ಮ ಆರ್ಥಿಕ ಸ್ಥಿತಿಯಿಂದ ಚೇತರಿಸಿಕೊಳ್ಳುವ ಸಲುವಾಗಿ ಕೆಲವರು ವರದಕ್ಷಿಣೆಯನ್ನು ಪಡೆಯುತ್ತಿದ್ದಾರೆ.

### ವರದಕ್ಷಿಣೆ ಮೊತ್ತವು ಹೆಚ್ಚು ಮತ್ತು ಕಡಿಮೆಯಾಗುವಂತಹ ಸಂದರ್ಭ

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ವರದಕ್ಷಿಣೆಯ ಮೊತ್ತವು ಕೆಲವೊಂದು ಸಮಯದಲ್ಲಿ ಹೆಚ್ಚು ಹಾಗೆಯೇ ಕೆಲವೊಂದು ಸಂದರ್ಭದಲ್ಲಿ ಕಡಿಮೆಯಾಗುತ್ತಿರುವುದಕ್ಕೆ ಕಾರಣವಾಗಿರುವ ಪ್ರಮುಖ ಅಂಶಗಳನ್ನು ಕೆಳಗಿನ ಕೋಷ್ಟಕದ ಮೂಲಕ ತಿಳಿದುಕೊಳ್ಳಬಹುದು.

**ಕೋಷ್ಟಕ-೪.೧೩**

**ವರದಕ್ಷಿಣೆ ಮೊತ್ತ ಹೆಚ್ಚು ಮತ್ತು ಕಡಿಮೆಯಾಗುವ ಸಂದರ್ಭಗಳು ಹೆಚ್ಚಾಗಲು ಕಾರಣಗಳು**

| ಕಾರಣಗಳು | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ಹೆಣ್ಣು ಸುಂದರಿಯಾಗಿಲ್ಲದಿದ್ದಾಗ | ೩೦ | ೩೦.೦೦ |
| ಹೆಣ್ಣು ಶಿಕ್ಷಣ ಹೊಂದಿಲ್ಲದೇ ಇದ್ದಾಗ | ೩೦ | ೩೦.೦೦ |
| ಗಂಡು ಉತ್ತಮ ಉದ್ಯೋಗದಲ್ಲಿದ್ದಾಗ | ೪೦ | ೪೦.೦೦ |
| ಗಂಡು ವೃತ್ತಿಶಿಕ್ಷಣ ಹೊಂದಿದ್ದಾಗ | ೩೦ | ೩೦.೦೦ |
| ಗಂಡು ಶ್ರೀಮಂತನಾಗಿದ್ದಾಗ | ೧೦ | ೧೦.೦೦ |
| **ಕಡಿಮೆಯಾಗಲು ಕಾರಣಗಳು** | | |
| ಹೆಣ್ಣು ಸುಂದರಿಯಾಗಿಲ್ಲದಿದ್ದಾಗ | ೪೦ | ೪೦.೦೦ |
| ಹೆಣ್ಣು ಉದ್ಯೋಗದಲ್ಲಿದ್ದಾಗ | ೩೦ | ೩೦.೦೦ |
| ಹೆಣ್ಣು ಬಡತನದಲ್ಲಿದ್ದಾಗ | ೪೫ | ೪೫.೦೦ |
| ಪ್ರೇಮ ವಿವಾಹದ ಸಂದರ್ಭದಲ್ಲಿ | ೬೦ | ೬೦.೦೦ |
| ಸಂಬಂಧದೊಳಗಿನ ವಿವಾಹದ ಸಂದರ್ಭದಲ್ಲಿ | ೭೦ | ೭೦.೦೦ |

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ವರದಕ್ಷಿಣೆಯನ್ನು ತೆಗೆದುಕೊಳ್ಳುವವರಲ್ಲಿ ಅದರಲ್ಲೂ ಹೆಚ್ಚು ವರದಕ್ಷಿಣೆ ತೆಗೆದುಕೊಳ್ಳುವವರಲ್ಲಿ ೩೦(ಶೇ.೩೦) ಜನ ಹೆಣ್ಣು ಸುಂದರಿಯಾಗಿಲ್ಲದಿದ್ದಾಗ, ೩೦(ಶೇ.೩೦) ಜನ ಹೆಣ್ಣು ಶಿಕ್ಷಣ ಹೊಂದಿಲ್ಲದೇ ಇದ್ದಾಗ, ೪೦(ಶೇ.೪೦) ಜನ ಗಂಡು ಉತ್ತಮ ಉದ್ಯೋಗದಲ್ಲಿದ್ದಾಗ, ೩೦ (ಶೇ.೩೦)ಜನ ಗಂಡು ವೃತ್ತಿಶಿಕ್ಷಣ ಹೊಂದ್ದಾಗ, ೧೦(ಶೇ.೧೦) ಜನ ಗಂಡು ಶ್ರೀಮಂತನಾಗಿದ್ದಾಗ ವರದಕ್ಷಿಣೆಯನ್ನು ನೀಡುವುದು ತೆಗೆದುಕೊಳ್ಳುವುದು ಸಂಶೋಧನೆಯಿಂದ ಕಂಡುಬರುತ್ತದೆ. ಇವರಲ್ಲಿ ಅತಿ ಹೆಚ್ಚು ಜನ ಗಂಡು ಉತ್ತಮ ಉದ್ಯೋಗದಲ್ಲಿ ಇದ್ದಾಗ ವರದಕ್ಷಿಣೆ ಹೆಚ್ಚು ತೆಗೆದುಕೊಳ್ಳುತ್ತಿರುವುದು ಮಾಹಿತಿ ಸಂಗ್ರಹಣೆಯಿಂದ ಕಂಡುಬರುತ್ತದೆ.

ವರದಕ್ಷಿಣೆ ಕಡಿಮೆ ತೆಗೆದುಕೊಳ್ಳಲು ಕಾರಣವೇನೆಂದರೆ, ೪೦(ಶೇ.೪೦) ಜನ ಹೆಣ್ಣು ಮಕ್ಕಳು ಸುಂದರಿಯರಾಗಿದ್ದಾಗ, ೩೦(ಶೇ.೩೦) ಜನ ಹೆಣ್ಣು ಉದ್ಯೋಗದಲ್ಲಿದ್ದಾಗ, ೪೫(ಶೇ.೪೫) ಜನ ಹೆಣ್ಣುಗಳು ಬಡತನದಲ್ಲಿ ಇದ್ದಾಗ, ೬೦(ಶೇ.೬೦) ಜನ ಪ್ರೇಮ ವಿವಾಹದ ಸಂದರ್ಭದಲ್ಲಿ ಹಾಗೂ ೭೦(ಶೇ.೭೦) ಜನ ಸಂಬಂಧಿಕರಲ್ಲಿ ವಿವಾಹವಾಗುತ್ತಿದ್ದರೆ ಅಂತಹ ಸಮಯದಲ್ಲಿ ವರದಕ್ಷಿಣೆಯ ಮೊತ್ತವು ಕಡಿಮೆಯಾಗುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಇಲ್ಲಿ ಅತಿ ಹೆಚ್ಚು ಅಂದರೆ ಸಂಬಂಧಿಕರ ಒಳಗೆ ವಿವಾಹವಾಗುವಾಗ ವರದಕ್ಷಿಣೆ ಪ್ರಮಾಣವು ಕಡಿಮೆ ತೆಗೆದುಕೊಳ್ಳುತ್ತಿರುವುದು ಕಂಡುಬರುತ್ತದೆ.

**ವಧುದಕ್ಷಿಣೆಯ ಕುರಿತು ವಿವರ**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ವಧುದಕ್ಷಿಣೆಯು ಇರುವಂತಹದ್ದು ಒಂದು ವಿಶೇಷ ಸಂಗತಿಯಾಗಿದೆ. ಹೇಗೆ ವರನಿಗೆ ಹಣ, ಚಿನ್ನ ಮತ್ತು ಸಂಪತ್ತುಗಳನ್ನು ಕಾಣಿಕೆಯಾಗಿ ಕೊಟ್ಟು ವಿವಾಹ ಮಾಡುವುದು ವರದಕ್ಷಿಣೆಯಾಗಿದೆಯೋ ಅದೇ ರೀತಿ ವಧುದಕ್ಷಿಣೆ ಎಂದರೆ ವಿವಾಹ ಮಾಡಿಕೊಂಡು ಬರುವ ಮಹಿಳೆಯ ತಂದೆಗೆ ಹಣ, ವಸ್ತುಗಳು, ಪ್ರಾಣಿಗಳು, ಚಿನ್ನ ಮತ್ತು ಸಂಪತ್ತನ್ನು ಕೊಡುಗೆಯಾಗಿ ಕೊಟ್ಟು ಅಂದರೆ ವಧುದಕ್ಷಿಣೆಯನ್ನು ರೂ. ೧೦ರಿಂದ ಹಿಡಿದು ರೂ. ೧೦,೦೦೦ದವರೆಗೂ ವಧುವಿನ ತಂದೆಗೆ ಕೊಟ್ಟು ಮದುವೆ ಮಾಡಿಕೊಂಡು ಬರುವುದು ವಧುದಕ್ಷಿಣೆಯಾಗಿದೆ.

**ಕೋಷ್ಟಕ-೪.೧೪**

**ವಧುದಕ್ಷಿಣೆ ಇರುವ ಕುಟುಂಬಗಳು**

| ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ವಧುದಕ್ಷಿಣೆ ಇದೆ | ೮೫ | ೮೫.೦೦ |
| ವಧುದಕ್ಷಿಣೆ ಇಲ್ಲ | ೧೫ | ೧೫.೦೦ |
| **ಒಟ್ಟು** | ೧೦೦ | ೧೦೦.೦೦ |

ಮೇಲಿನ ಕೋಷ್ಟಕದಲ್ಲಿ ನಮಗೆ ಕಂಡುಬರುವ ಸಂಗತಿ ಎಂದರೆ ಗೌಡಾಲು ಬುಡಕಟ್ಟು ಸಮುದಾಯಗಳಲ್ಲಿ ಒಟ್ಟು ೧೦೦ ತಿಳುವಳಿಕೆದಾರರಲ್ಲಿ ೮೫(ಶೇ.೮೫) ಜನರು ಹಿಂದಿನಿಂದಲೂ ವಧುದಕ್ಷಿಣೆಯನ್ನು ಕೊಟ್ಟು ವಿವಾಹ

ನೆರವೇರಿಸುತ್ತಿದ್ದರು. ಹಾಗೆಯೇ ೧೫(ಶೇ.೧೫) ಜನರು ಹಿಂದಿನಿಂದಲೂ ವಧುದಕ್ಷಿಣೆ ಆಚರಣೆಯಲ್ಲಿ ಇರಲಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಹಿಂದಿನಿಂದಲೂ ವಧುದಕ್ಷಿಣೆಯು ಆಚರಣೆಯಲ್ಲಿತ್ತು. ಈಗಲೂ ವಧುದಕ್ಷಿಣೆ ಇದೆ. ಆದರೆ ಅದರ ಪ್ರಮಾಣವು ಕಡಿಮೆ ಇರುವುದು ಕಂಡುಬರುತ್ತದೆ. ಉದಾಹರಣೆಗೆ ರೂ. ೧೦೧/- ರೂ. ೫೦೧/-, ೧೦೦೧/-, ಹಾಗೂ ರೂ.೫೦೦೧/-ಗಳನ್ನು ವಧುದಕ್ಷಿಣೆಯಾಗಿ ವಧುವಿನ ತಂದೆಗೆ ಕೊಟ್ಟು ವಿವಾಹವನ್ನು ನೆರವೇರಿಸುತ್ತಾರೆ. ವಧುದಕ್ಷಿಣೆಯು ವೇದಗಳ ಕಾಲದಲ್ಲಿ ಭಾರತೀಯ ಸಮಾಜದಲ್ಲಿ ಇರುವುದು ಕಂಡುಬರುತ್ತದೆ.

**ವಧುದಕ್ಷಿಣೆ ಬೆಳೆಯಲು ಕಾರಣ**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ವಧುದಕ್ಷಿಣೆಯು ಹಿಂದಿನಿಂದಲೂ ಬೆಳೆದು ಬಂದಂತಹ ಒಂದು ಸಂಪ್ರದಾಯವಾಗಿದೆ, ಇದು ವಿವಾಹದ ಸಮಯದಲ್ಲಿ ವಧುವಿನ ಪೋಷಕರಿಗೆ ಸಹಾಯವಾಗುವಂತಹ ಒಂದು ಪದ್ಧತಿಯಾಗಿದೆ. ವಧುದಕ್ಷಿಣೆಯು ಮುಂದುವರೆಯಲು ಹಲವಾರು ಅಂಶಗಳು ಕಾರಣವಾಗಿವೆ. ಇದನ್ನು ಈ ಮುಂದಿನ ಕೋಷ್ಟಕದಲ್ಲಿ ಕ್ರೋಢೀಕರಿಸಲಾಗಿದೆ.

**ಕೋಷ್ಟಕ-೪.೧೫**

**ವಧುದಕ್ಷಿಣೆ ಬೆಳೆಯಲು ಕಾರಣಗಳು**

| ವಿವರ | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ಸ್ತ್ರೀಯರ ಸಂಖ್ಯೆ ಕಡಿಮೆ ಇದ್ದಾಗ | ೧೦ | ೧೦.೦೦ |
| ವಧುದಕ್ಷಿಣೆಯು ಒಂದು ಸಂಪ್ರದಾಯವಾಗಿದೆ | ೬೦ | ೬೦.೦೦ |
| ಪುರುಷರ ಸಂಖ್ಯೆ ಹೆಚ್ಚು | ೦೭ | ೦೭.೦೦ |
| ವಧುದಕ್ಷಿಣೆಯ ಬಗ್ಗೆ ಸಮುದಾಯದಲ್ಲಿ ಇರುವ ನಂಬಿಕೆ | ೨೦ | ೨೦.೦೦ |
| ವಧುವಿನ ಮನೆಯವರಿಗೆ ರಕ್ಷಣೆ | ೦೩ | ೦೩.೦೦ |
| ಒಟ್ಟು | ೧೦೦ | ೧೦೦.೦೦ |

ವಧುದಕ್ಷಿಣೆಯು ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಂತಹ ಸಂಪ್ರದಾಯವಾಗಿದೆ. ಒಟ್ಟು ೧೦೦ ಜನ ತಿಳುವಳಿಕೆದಾರರಲ್ಲಿ ೧೦(ಶೇ.೧೦) ಜನ ವಧುದಕ್ಷಿಣೆ ಬೆಳೆಯಲು ಸ್ತ್ರೀಯರ ಸಂಖ್ಯೆ ಕಡಿಮೆಯಾಗಿರುವುದೇ ಮುಖ್ಯ. ಹಾಗೆಯೇ ೬೦(ಶೇ.೬೦) ಜನ ವಧುದಕ್ಷಿಣೆಯು ಒಂದು ಸಂಪ್ರದಾಯವಾಗಿದೆ ಎಂದಿದ್ದಾರೆ. ೦೭(ಶೇ.೦೭) ಜನ ಪುರುಷರ ಸಂಖ್ಯೆ ಹೆಚ್ಚು ಇರುವುದು ವುಧುದಕ್ಷಿಣೆಗೆ ಕಾರಣವಾಗಿದೆ. ಎಂದರೆ. ೨೦(ಶೇ.೩೦)ರಷ್ಟು ಜನ ವಧುದಕ್ಷಿಣೆಗೆ ಜನರಲ್ಲಿ ಇದರ ಬಗ್ಗೆ ಇರುವಂತಹ ನಂಬಿಕೆಯೇ ಕಾರಣ ಎಂದಿದ್ದಾರೆ. ೦೩(ಶೇ.೦೩) ಜನ ವಧುವಿನ ಮನೆಯವರಿಗೆ ರಕ್ಷಣೆ ನೀಡಲಿಕ್ಕಾಗಿ ವಧುದಕ್ಷಿಣೆ

ನೀಡುತ್ತಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಹೆಚ್ಚು ಜನ ವಧುದಕ್ಷಿಣೆಯು ಹಿಂದಿನಿಂದಲೂ ಒಂದು ಸಂಪ್ರದಾಯವಾಗಿ ಮುಂದುವರೆದು ಬಂದಿರುವುದರಿಂದ ಅದನ್ನು ಅನುಸರಿಸಿಕೊಂಡು ಬಂದಿರುವುದು ತಿಳಿಯುತ್ತದೆ. ಅತಿ ಕಡಿಮೆ ಜನ ವಧುವಿನ ಮನೆಯವರಿಗೆ ಅನುಕೂಲಕರವಾಗಲಿ ಎಂಬ ಕಾರಣಕ್ಕಾಗಿ ವಧುದಕ್ಷಿಣೆ ಕೊಡುತ್ತಿದ್ದಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಸಂಪ್ರದಾಯ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಇರುವಂತಹದ್ದು ಒಂದು ವಿಶೇಷ ಸಂಗತಿಯಾಗಿದೆ. ನಗರ ಪ್ರದೇಶದಲ್ಲಿ ಇಂದಿಗೂ ವರದಕ್ಷಿಣೆಯನ್ನು ನಾವು ಕಾಣುತ್ತೇವೆ. ಆದರೆ ಗುಡ್ಡಗಾಡು ಪ್ರದೇಶದಲ್ಲಿ ನೆಲೆಸಿರುವ ಗೌಡಾಲು ಜನಾಂಗದಲ್ಲಿ ವಧುದಕ್ಷಿಣೆಯು ಪ್ರಾಚೀನ ಪರಂಪರೆಯಾಗಿ ಬೆಳೆದು ಬಂದಿರುವುದು ಕಂಡುಬರುತ್ತದೆ.

**ಗೌಡಾಲು ಸಮುದಾಯಗಳಲ್ಲಿ ಇರುವ ಶೈಕ್ಷಣಿಕ ಸ್ಥಿತಿಗತಿ**

ಶಿಕ್ಷಣವು ಪ್ರತಿಯೊಬ್ಬ ವ್ಯಕ್ತಿಯ ಮೂಲಭೂತ ಹಕ್ಕಾಗಿದೆ. ಇದು ವ್ಯಕ್ತಿಯ ವ್ಯಕ್ತಿತ್ವದ ವಿಕಾಸಕ್ಕೆ ಪ್ರಮುಖವಾದ ಕಾರಣವಾಗಿದೆ. ಶಿಕ್ಷಣ ಎಂದರೆ "ಜನರು ತಮ್ಮ ಜೀವನದಲ್ಲಿ ಹುಟ್ಟಿದಂದಿನಿಂದ ಹಿಡಿದು ಸಾವಿನವರೆಗೆ ಏನನ್ನು ಕಲಿಯುತ್ತಾರೋ ಅದನ್ನೇ ಶಿಕ್ಷಣ" ಎಂದು ಜಾನ್ಸನ್ನರು "ಪ್ರಗತಿ ಸಾಧಿಸಿಕೊಂಡು ಧನಾತ್ಮಕವಾಗಿ ಸಾಮಾಜಿಕ ಬದಲಾವಣೆ ತರುವಲ್ಲಿ ಶಿಕ್ಷಣವು ಪ್ರಮುಖ ಪಾತ್ರವನ್ನು ಹೊಂದಿದೆ"" ಎಂದು ಹೇಳಿದ್ದಾರೆ. ಆದರೆ ಭಾರತವು ಎದುರಿಸುತ್ತಿರುವ ಹಲವಾರು ಸಾಮಾಜಿಕ ಸಮಸ್ಯೆಗಳಲ್ಲಿ ನಿರುದ್ಯೋಗ, ನೈರ್ಮಲ್ಯ, ಅತಿಯಾಗಿರುವ ಜನಸಂಖ್ಯೆ, ಜಾತೀಯತೆ, ಅನೈತಿಕತೆ, ಅಧಾರ್ಮಿಕತೆ, ಅನಕ್ಷರತೆ ಇನ್ನೂ ಹಲವಾರು ಸಮಸ್ಯೆಗಳನ್ನು ಕಾಣಬಹುದಾಗಿದೆ. ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಯಾಗಬೇಕಾದರೆ ಅಲ್ಲಿ ಶಿಕ್ಷಣ ಬೇಕು. ವ್ಯಕ್ತಿಯ ದೈಹಿಕ, ಮಾನಸಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಬೆಳವಣಿಗೆಯಾಗಬೇಕಾದರೆ ಅಲ್ಲಿ ಶಿಕ್ಷಣದ ಪಾತ್ರವು ಮುಖ್ಯವಾಗಿದೆ. ಆದರೆ ಭಾರತದಲ್ಲಿ ಅನಕ್ಷರತೆ ಹೆಚ್ಚು ಇರುವಂತಹ ಕಾರಣದಿಂದಾಗಿ ವ್ಯಕ್ತಿಯಲ್ಲಿರುವ ಪ್ರತಿಭೆಯನ್ನು ಸರಿಯಾಗಿ ಬಳಸಿಕೊಳ್ಳಲು ಆಗುತ್ತಿಲ್ಲ. ಒಬ್ಬ ವ್ಯಕ್ತಿಯು ಸರ್ವತೋಮುಖ ಬೆಳವಣಿಗೆಯಾಗಬೇಕಾದರೆ ಶಿಕ್ಷಣವು ಅವಶ್ಯಕವಾಗಿದೆ. ಇದಕ್ಕೆ ಪೂರಕವಾಗಿ Gurudev Tagore "Education is thai which makes one's life in harmon with all existence and thus enables the mind to find the ultimate truth which gives us the wealth of inner light and love and gives significance to life" ಎಂಬುದಾಗಿ ಅಭಿಪ್ರಾಯ ಪಡುತ್ತಾರೆ."[೧]

ಹಾಗೆಯೇ ಜನರಲ್ಲಿ ಬಾಲ್ಯದಿಂದ ವೃದ್ಧಾಪ್ಯದವರೆಗೆ, ಪ್ರಕೃತಿಗೆ ಅನುಗುಣವಾಗಿ, ಸಮಾಜದ ರೀತಿನೀತಿಗೆ ಅನುಗುಣವಾಗಿ ಮತ್ತು ಆಧ್ಯಾತ್ಮಿಕ ಜೀವನಕ್ಕೆ ಅಥವಾ ವಾತಾವರಣಕ್ಕೆ ಹೊಂದಿಕೊಂಡು ಬದುಕಲು ಶಿಕ್ಷಣವು ಅವಶ್ಯಕವಾಗಿದೆ. ಇದಕ್ಕೆ ಸಂಬಂಧಿಸಿದಂತೆ Raymout ಅವರು "Eduction the process of development from infancy to maturity, the process by which he adopts himself gradually in various ways of his physical and spiritual enviornment" ಎಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ."[೨]

ಗೌಡಾಲು ಬುಡಕಟ್ಟು ಸಮುದಾಯದವರ ಜೀವನದ ಸ್ಥಿತಿಗತಿಯನ್ನು ಅರ್ಥ ಮಾಡಿಕೊಳ್ಳಬೇಕಾದರೆ ಅವರು ಪಡೆದಿರುವ ಶಿಕ್ಷಣವನ್ನು ಕುರಿತು ಚರ್ಚಿಸಬೇಕಾಗುತ್ತದೆ. ಆಗ ಅವರ ಜೀವನದ ಸಂಪೂರ್ಣ ಚಿತ್ರಣವು ನಮಗೆ ಕಂಡುಬರುತ್ತದೆ. ಇವರಲ್ಲಿ ಹೆಚ್ಚಿನವರು ಅನಕ್ಷರಸ್ಥರು. ಕೆಲವರು ಮಾತ್ರ ಶಿಕ್ಷಣ ಪಡೆದಿದ್ದಾರೆ. ಹೆಚ್ಚಿನವರು ಅನಕ್ಷರಸ್ಥರಾಗಿರಲು ಹಲವಾರು ಕಾರಣಗಳನ್ನು ನಾವು ಕಾಣಬಹುದು. ಗುಡ್ಡಗಾಡು, ದಟ್ಟ ಅರಣ್ಯ ಪ್ರದೇಶ, ಕಣಿವೆ ಪ್ರದೇಶ, ನಗರಗಳಿಂದ ಬಹಳ ದೂರದ ಬೆಟ್ಟಗುಡ್ಡಗಳಲ್ಲಿ ನೆಲಸಿರುವ ಇವರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಅಲ್ಪಸ್ವಲ್ಪ ಮಟ್ಟಿಗೆ ಶಿಕ್ಷಣ ಪಡೆಯುತ್ತಿರುವುದು ಈ ಸಂಶೋಧನೆಯಿಂದ ನಮಗೆ ಕಂಡುಬರುತ್ತದೆ. ಶೈಕ್ಷಣಿಕವಾಗಿ ಹಿಂದೆ ಉಳಿದಿರುವ ಕಾರಣದಿಂದಾಗಿ ಇವರು ತಮ್ಮ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಹಿಂದೆ ಉಳಿದಿದ್ದಾರೆ ಎಂಬುದನ್ನು ಕಂಡುಕೊಳ್ಳಬಹುದು. ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ತಾಂತ್ರಿಕವಾಗಿ, ವೈಜ್ಞಾನಿಕವಾಗಿ, ವೈಚಾರಿಕವಾಗಿ ಸಂಪರ್ಕ ಸಾಧನಗಳ ಪ್ರಯೋಜನ ಪಡೆಯುವಲ್ಲಿ ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ಗೌಡಾಲು ಬುಡಕಟ್ಟು ಸಮುದಾಯದವರು ಹಿಂದೆ ಉಳಿದಿರುವುದು ಮಾಹಿತಿ ಸಂಗ್ರಹಣೆಯಿಂದ ಕಂಡುಬರುತ್ತದೆ.

**ಮಕ್ಕಳಿಗೆ ಶಿಕ್ಷಣ ಕೊಡಿಸುವ ಉದ್ದೇಶ**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕೊಡಿಸುವಲ್ಲಿ ಹತ್ತು ಹಲವಾರು ಉದ್ದೇಶಗಳನ್ನು ಹೊಂದಿದ್ದು, ಇದರ ಆಧಾರದ ಮೇಲೆ ಅವರು ಶಿಕ್ಷಣವನ್ನು ಬಯಸುತ್ತಾರೆ. ಒಟ್ಟು ೧೦೦ ಜನ ಸೂಚಕರಲ್ಲಿ ಇರುವ ವಿವಿಧ ಉದ್ದೇಶಗಳು ಈ ಕೆಳಗಿನಂತೆ ಕಂಡುಬರುತ್ತದೆ.

**ಕೋಷ್ಟಕ ೪.೧೬**

**ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುತ್ತಿರುವ ಉದ್ದೇಶಗಳು**

| ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಉತ್ತಮ ಭವಿಷ್ಯ ರೂಪಿಸಲು | ೧೦೦ | ೨೨.೬೬ |
| ಉತ್ತಮ ಶಿಕ್ಷಕರಾಗಲು | ೪೦ | ೧೦.೬೬ |
| ಉತ್ತಮ ಭೋಧನೆ | ೪೦ | ೧೦.೬೬ |
| ಶಾಲೆಗಳು ಮನೆಗೆ ಹತ್ತಿರ | ೫೦ | ೧೩.೩೩ |
| ಎಲ್ಲ ವರ್ಗದ ಮಕ್ಕಳು ಇರುತ್ತಾರೆ | ೫೦ | ೧೩.೩೩ |
| ಕಡಿಮೆ ಶುಲ್ಕ | ೯೫ | ೨೫.೩೩ |
| ಒಟ್ಟು | ೩೭೫ | ೧೦೦.೦೦ |

ಈ ಮೇಲಿನ ಕೋಷ್ಟಕದಿಂದ ಕಂಡುಬರುವ ಸಂಗತಿ ಎಂದರೆ ಕೆಲವೊಂದು ಸೂಚಕರು ಹಲವಾರು ಉದ್ದೇಶಗಳನ್ನು ಹೊಂದಿದ್ದು, ಅದರ ಆಧಾರದ ಮೇಲೆ ತಮ್ಮ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುತ್ತಾರೆ. ೧೦೦(ಶೇ. ೨೬.೬೬) ಜನ ಉತ್ತಮ ಭವಿಷ್ಯ ರೂಪಿಸಲು, ೪೦(ಶೇ. ೧೦.೬೬)ರಷ್ಟು ಜನ

ಉತ್ತಮ ಶಿಕ್ಷಕರಾಗಲಿ ಎಂಬ ಉದ್ದೇಶದಿಂದ ೪೦(ಶೇ. ೧೦.೬೬) ಜನ ಶಾಲಾ ಕಾಲೇಜುಗಳಲ್ಲಿ ಉತ್ತಮ ಬೋಧನೆ ಇದೆ ಎಂಬ ಕಾರಣದಿಂದಾಗಿ, ೫೦(ಶೇ. ೧೩.೩೩) ಜನ ಶಾಲಾ ಕಾಲೇಜುಗಳು ಇವರು ವಾಸವಾಗಿರುವ ಸ್ಥಳಕ್ಕೆ ಹತ್ತಿರದಲ್ಲಿದೆ ಎಂಬ ಉದ್ದೇಶಕ್ಕಾಗಿ, ೫೦(ಶೇ. ೧೩.೩೩) ಜನ ಎಲ್ಲ ವರ್ಗದ ಮಕ್ಕಳು ಶಾಲೆಯಲ್ಲಿ ಇರುತ್ತಾರೆ ಎಂಬ ಕಾರಣದಿಂದಾಗಿ ಶಿಕ್ಷಣ ಕೊಡಿಸುತ್ತಾರೆ. ಹಾಗೆಯೇ ೯೫(ಶೇ. ೨೫.೩೩)ರಷ್ಟು ಜನ ಕಡಿಮೆ ಶುಲ್ಕವಿದೆ ಎಂಬ ಕಾರಣಕ್ಕಾಗಿ ತಮ್ಮ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುತ್ತಿರುವುದು ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಅತಿ ಹೆಚ್ಚು ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುವ ಮುಖ್ಯ ಉದ್ದೇಶವು ಅವರ ಮಕ್ಕಳ ಮುಂದಿನ ಜೀವನ ಉತ್ತಮವಾಗಿರಲಿ ಎಂಬ ಕಾರಣವನ್ನು ಹೊಂದಿದೆ. ಹಾಗೆಯೇ ಶೇ. ೨೫.೩೩ರಷ್ಟು ಜನ ತಮ್ಮ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸಲು ಅಲ್ಲಿ ಇರುವ ಕಡಿಮೆ ಶುಲ್ಕವೇ ಕಾರಣ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅತಿ ಕಡಿಮೆ ಜನ ಶಾಲಾ ಕಾಲೇಜುಗಳಿಗೆ ಕಳುಹಿಸಲು ಉತ್ತಮ ಶಿಕ್ಷಕರಾಗಲು ಮತ್ತು ಉತ್ತಮ ಬೋಧನೆಯೇ ಕಾರಣ ಎಂದು ಹೇಳಿದ್ದಾರೆ.

ಈ ಕೋಷ್ಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ ಕೆಲವು ಸೂಚಕರು ಒಂದಕ್ಕಿಂತ ಹೆಚ್ಚು ಉದ್ದೇಶಗಳನ್ನು ನೀಡಿರುವ ಕಾರಣದಿಂದಾಗಿ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ.

ಉದಾಹರಣೆಗೆ ಉತ್ತಮ ಭವಿಷ್ಯ ರೂಪಿಸುವ ಉದ್ದೇಶದ ಜೊತೆಯಲ್ಲಿ ಉತ್ತಮ ಶಿಕ್ಷಕರಾಗಲು, ಶಾಲೆಗಳು ಮನೆಗೆ ಹತ್ತಿರದಲ್ಲಿದೆ, ಎಲ್ಲ ವರ್ಗಗಳ ಮಕ್ಕಳು ಶಾಲೆಯಲ್ಲಿ ಇರುತ್ತಾರೆ ಮತ್ತು ಕಡಿಮೆ ಶಾಲಾ ಶುಲ್ಕವಿದೆ ಎಂಬ ಕಾರಣಕ್ಕಾಗಿ ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ನೀಡುತ್ತಿದ್ದೇವೆ ಎಂಬ ಉತ್ತರವನ್ನು ವ್ಯಕ್ತಪಡಿಸಿರುವುದು ಕಂಡುಬರುತ್ತದೆ.

### ಕಾಲೇಜು ಶಿಕ್ಷಣದ ಸ್ವರೂಪ

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಶಿಕ್ಷಣ ಪಡೆದವರ ಸಂಖ್ಯೆಯು ಕಡಿಮೆ ಇದ್ದು, ಅದರಲ್ಲಿ ಕಾಲೇಜು ಶಿಕ್ಷಣ ಪಡೆದವರ ಸಂಖ್ಯೆಯಂತೂ ತುಂಬಾ ಕಡಿಮೆ ಇರುವುದು ಕಂಡುಬರುತ್ತದೆ. ಕಾಲೇಜಿನಲ್ಲಿ ಬಿ.ಎ., ಬಿ.ಎಸ್.ಸಿ. ಬಿ.ಕಾಂ. ಡಿ.ಎಡ್. ಬಿ.ಎಡ್. ಡಿಪ್ಲೊಮಾ, ಐ.ಟಿ.ಐ, ಕಾನೂನು ಶಿಕ್ಷಣ, ಇಂಜಿನಿಯರಿಂದ, ವೈದ್ಯಕೀಯ ಮುಂತಾದ ಶಿಕ್ಷಣದಲ್ಲಿ ಈ ಬುಡಕಟ್ಟು ಸಮುದಾಯದವರು ಬಹಳ ಕಡಿಮೆ ಸಂಖ್ಯೆಯಲ್ಲಿ ಇರುವುದು ಈ ಕೆಳಗಿನ ಕೋಷ್ಟಕದ ಮೂಲಕ ಸೂಚಿತವಾಗುತ್ತದೆ.

**ಕೋಷ್ಟಕ ೪.೧೭**

**ಕಾಲೇಜು ಹಂತದಲ್ಲಿ ಶಿಕ್ಷಣ ಪಡೆದವರ ಸ್ವರೂಪ**

| ಶಿಕ್ಷಣದ ಸ್ವರೂಪ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಪಿ.ಯು.ಸಿ. ಶಿಕ್ಷಣ ಪಡೆದವರು | ೨೧ | ೪೧.೧೭ |
| ಪದವಿ ಶಿಕ್ಷಣ ಪಡೆದವರು | ೧೦ | ೧೮.೫೧ |

| | | |
|---|---|---|
| ಡಿ.ಎಡ್. ಮುಗಿಸಿದವರು | ೦೬ | ೧೧.೭೬ |
| ಬಿ.ಎಡ್. ಮುಗಿಸಿದವರು | ೦೫ | ೦೯.೮೦ |
| ಐ.ಟಿ.ಐ. ಮುಗಿಸಿದವರು | ೦೩ | ೦೫.೮೮ |
| ಡಿಪ್ಲೊಮಾ ಮುಗಿಸಿದವರು | ೦೧ | ೦೧.೯೬ |
| ಇಂಜಿನಿಯರಿಂಗ್ ಮುಗಿಸಿದವರು | ೦೩ | ೦೫.೮೮ |
| ಎಲ್.ಎಲ್.ಬಿ. ಮುಗಿಸಿದವರು | ೦೨ | ೦೩.೯೨ |
| ಎಂ.ಬಿ.ಬಿ.ಎಸ್. ಮುಗಿಸಿದವರು | - | - |
| ಒಟ್ಟು | ೫೧ | ೧೦೦.೦೦ |

ಈ ಬುಡಕಟ್ಟು ಸಮುದಾಯದ ತಿಳುವಳಿಕೆದಾರರ ಮೇಲೆ ಮಾಡಿದ ಸಮೀಕ್ಷೆಯಲ್ಲಿ ಅವರ ಮಕ್ಕಳ ವಿದ್ಯಾಭ್ಯಾಸವನ್ನು ಕುರಿತು ಮಾಹಿತಿ ಸಂಗ್ರಹಿಸಿದಾಗ ಪಿ.ಯು.ಸಿ. ಶಿಕ್ಷಣ ಮುಗಿಸಿದವರು ೨೧(ಶೇ. ೪೧.೧೭) ಜನ ಇದ್ದಾರೆ. ಪದವಿ ಶಿಕ್ಷಣ ಪಡೆದವರು ೧೦(ಶೇ. ೧೮.೫೧) ಜನರಿದ್ದಾರೆ. ೬(ಶೇ. ೧೧.೭೬) ಜನ ಡಿ.ಎಡ್. ಮಾಡಿದ್ದಾರೆ. ೫(ಶೇ. ೯.೮೦) ಜನ ಬಿ.ಎಡ್. ಮುಗಿಸಿದ್ದಾರೆ. ೩ ಜನ (ಶೇ. ೫.೮೮) ಜನ ಐ.ಟಿ.ಐ. ಮುಗಿಸಿದವರಿದ್ದಾರೆ. ೦೧(ಶೇ. ೧.೯೬) ರಷ್ಟು ಜನ ಡಿಪ್ಲೊಮಾ ಮುಗಿಸಿದ್ದಾರೆ. ೦೩(ಶೇ. ೫.೮೮) ಜನ ಇಂಜಿನಿಯರಿಂಗ್ ಮುಗಿಸಿದ್ದಾರೆ. ಕೊನೆಯದಾಗಿ ಕಾನೂನು ಮುಗಿಸಿದವರ ಸಂಖ್ಯೆ ೦೨(ಶೇ. ೩.೯೨) ರಷ್ಟಿದೆ. ಆದರೆ ಈ ಸಮುದಾಯದಲ್ಲಿ ಯಾರೂ ಎಂ.ಬಿ.ಬಿ.ಎಸ್. ಪದವಿಯನ್ನು ಪಡೆದಿಲ್ಲ.

ಒಟ್ಟು ೧೦೦ ತಿಳುವಳಿಕೆದಾರರ ಕುಟುಂಬಗಳಲ್ಲಿ ಕಾಲೇಜು ಶಿಕ್ಷಣ ಅಂದರೆ ಪಿ.ಯು.ಸಿ. ಮುಗಿಸಿದವರು ಕೇವಲ ೨೧ ಜನ, ಇಂಜಿನಿಯರಿಂಗ್ ಪದವಿಯನ್ನು ಕೇವಲ ಮೂರು ಜನ ಪಡೆದಿದ್ದಾರೆ. ಎಂ.ಬಿ.ಬಿ.ಎಸ್. ಪದವಿಯನ್ನು ಒಬ್ಬರೂ ಪಡೆದಿಲ್ಲ. ಇಲ್ಲಿ ನಮಗೆ ಕಂಡುಬರುವ ಸಂಗತಿ ಎಂದರೆ ಉನ್ನತ ಶಿಕ್ಷಣವನ್ನು ಮುಗಿಸಿದವರು ಕಡಿಮೆ ಇದ್ದಾರೆ. ಇದಕ್ಕೆ ಕಾರಣ ಇವರಲ್ಲಿರುವಂತಹ ಹಲವಾರು ಸಮಸ್ಯೆಗಳು ಮುಂದಿನ ದಿನಗಳಲ್ಲಿ ಸರಕಾರವು ಇವರಲ್ಲಿ ಇರುವಂತಹ ಸಮಸ್ಯೆಗಳನ್ನು ನಿವಾರಣೆ ಮಾಡಿದರೆ ಮಾತ್ರ ಗೌಡಾಲು ಸಮುದಾಯದಲ್ಲಿ ಶೈಕ್ಷಣಿಕ ಪ್ರಗತಿಯನ್ನು ಕಾಣಲು ಸಾಧ್ಯ ಎಂಬುದು ದೃಢವಾಗುತ್ತದೆ.

**ಶಿಕ್ಷಣ ಸಂಸ್ಥೆಗಳಲ್ಲಿ ಸೌಲಭ್ಯ ಪಡೆದವರು**

ಗೌಡಾಲು ಬುಡಕಟ್ಟು ಸಮುದಾಯದ ಮಕ್ಕಳ ಶಿಕ್ಷಣದ ಪ್ರಗತಿಗಾಗಿ ಸರಕಾರಿ ಸಂಸ್ಥೆ ಮತ್ತು ಸರ್ಕಾರೇತರ ಸಂಸ್ಥೆಗಳು ಕರ್ತವ್ಯನಿರತವಾಗಿವೆ. ಇವುಗಳ ಮೂಲಕ ವಿದ್ಯಾರ್ಥಿಗಳಿಗೆ ಶಿಕ್ಷಣ ಸಂಸ್ಥೆಗಳಲ್ಲಿ ವಸತಿನಿಲಯ, ವಿದ್ಯಾರ್ಥಿ ವೇತನ, ಪುಸ್ತಕ ವಿತರಣೆ, ಬಟ್ಟೆ ಮತ್ತು ಕಲಿಕಾ ಸಾಮಗ್ರಿಗಳ ಸವಲತ್ತುಗಳನ್ನು ಒದಗಿಸಿಕೊಡುತ್ತಿರುವುದು ಈ ಸಂಶೋಧನೆಯಿಂದ ಕಂಡುಕೊಳ್ಳಬಹುದು.

### ಕೋಷ್ಟಕ ೪.೧೮

### ಶಿಕ್ಷಣ ಸಂಸ್ಥೆಗಳಲ್ಲಿ ಶೈಕ್ಷಣಿಕ ಸೌಲಭ್ಯಗಳನ್ನು ಪಡೆದವರು

| ವಿವರಗಳು | ಸೌಲಭ್ಯ ಪಡೆದವರು | ಸೌಲಭ್ಯ ಇಚ್ಛಿಸುವವರು | ಸೌಲಭ್ಯ ಇಚ್ಛಿಸದೇ ಇರುವುದು |
|---|---|---|---|
| ವಿದ್ಯಾರ್ಥಿ ವೇತನ | ೯೦ | ೧೦ | -- |
| ಉಚಿತ ಹಾಸ್ಟೆಲ್ | ೫೦ | ೪೦ | ೧೦ |
| ಕಲಿಕಾ ಸಾಮಗ್ರಿಗಳು | ೪೦ | ೬೦ | -- |
| ಶೈಕ್ಷಣಿಕ ಮೀಸಲಾತಿ | ೯೦ | ೧೦ | -- |
| ತರಬೇತಿ | ೨೦ | ೮೦ | -- |

ಮೇಲಿನ ಕೋಷ್ಟಕದಿಂದ ತಿಳಿಯುವ ಸಂಗತಿಯೆಂದರೆ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸುತ್ತಿರುವ ಸಮಯದಲ್ಲಿ ವಿದ್ಯಾರ್ಥಿ ವೇತನವನ್ನು ಪಡೆಯುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ ೯೦. ಪಡೆಯಲು ಇಚ್ಛಿಸುವವರ ಸಂಖ್ಯೆ ೧೦ ಇದೆ. ಉಚಿತ ಹಾಸ್ಟೆಲ್ ಸೌಲಭ್ಯ ಹೊಂದಿದವರು ೫೦ ವಿದ್ಯಾರ್ಥಿಗಳಿದ್ದಾರೆ. ಉಚಿತ ಹಾಸ್ಟೆಲ್ ಸೌಲಭ್ಯ ಬಯಸುವವರು ೫೦ರಷ್ಟು ಜನರಿದ್ದಾರೆ. ಬಯಸದೇ ಇರುವವರ ಸಂಖ್ಯೆ ೧೦ರಷ್ಟಿದೆ. ಕಲಿಕಾ ಸಾಮಗ್ರಿಗಳನ್ನು ಪಡೆಯುವವರ ಸಂಖ್ಯೆ ೪೦, ಹಾಗೂ ಕಲಿಕಾ ಸಾಮಗ್ರಿ ಪಡೆಯಲು ೬೦ ಜನ ವಿದ್ಯಾರ್ಥಿಗಳು ಬಯಸುತ್ತಾರೆ. ಶೈಕ್ಷಣಿಕ ಮೀಸಲಾತಿ ಪಡೆದವರ ಸಂಖ್ಯೆ ೯೦ರಷ್ಟಿದೆ. ಮೀಸಲಾತಿ ಪಡೆಯಲು ಇಚ್ಛಿಸುವವರು ೧೦ರಷ್ಟಿದ್ದಾರೆ. ಕೊನೆಯದಾಗಿ ಸರಕಾರದಿಂದ ಕೊಡುವಂತಹ ತರಬೇತಿ ಪಡೆಯುವವರು ೨೦ ಜನರಿದ್ದರೆ, ತರಬೇತಿ ಪಡೆಯಲು ಇಚ್ಛಿಸುವವರು ೮೦ ಜನರಿದ್ದಾರೆ. ಹಾಗೆಯೇ ಮೇಲಿನ ಎಲ್ಲ ಹಂತಗಳಲ್ಲಿಯೂ ಸರಕಾರದಿಂದ ಸವಲತ್ತು ಇಚ್ಛಿಸುವುದಿಲ್ಲ ಎನ್ನುವವರು ಯಾರೂ ಇಲ್ಲ. ಆದರೆ ೧೦ ಜನರು ಉಚಿತ ಹಾಸ್ಟೆಲ್ ಸೌಲಭ್ಯ ಪಡೆಯಲು ಇಚ್ಛಿಸುವುದಿಲ್ಲ ಎಂಬ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಮೇಲಿನ ಕ್ರೋಢೀಕರಿಸಿದ ಎಲ್ಲ ಅಂಶಗಳಿಂದ ನಮಗೆ ತಿಳಿದು ಬರುವ ಸಂಗತಿ ಎಂದರೆ ಶೈಕ್ಷಣಿಕ ಮೀಸಲಾತಿ ಮತ್ತು ವಿದ್ಯಾರ್ಥಿ ವೇತನ ಪಡೆದವರ ಸಂಖ್ಯೆಯೇ ಅಧಿಕವಾಗಿದೆ. ಸರಕಾರದಿಂದ ಕೊಡುವಂತಹ ತರಬೇತಿ ಪಡೆಯುತ್ತಿರುವವರ ಸಂಖ್ಯೆ ಅತಿ ಕಡಿಮೆ ಇರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ. ಯಾವುದೇ ಸೌಲಭ್ಯವನ್ನು ಪಡೆಯಲು ಇಚ್ಛಿಸದೇ ಇರುವವರು ಯಾರೂ ಇಲ್ಲದಿದ್ದರೂ ಕೇವಲ ೧೦ ವಿದ್ಯಾರ್ಥಿಗಳು ಹಾಸ್ಟೆಲಿನ ಸೌಲಭ್ಯದ ಅವಶ್ಯಕತೆ ಬೇಕಾಗಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದಕ್ಕೆ ಇವರು ವಾಸವಾಗಿರುವ ಸ್ಥಳದಿಂದ ಕಾಲೇಜುಗಳಿಗೆ ಸಾರಿಗೆ ಸೌಲಭ್ಯ ಅನುಕೂಲವಾಗಿರುವುದೇ ಮುಖ್ಯ ಕಾರಣ ಎಂಬ ಸಂಗತಿಯು ಕಂಡುಬರುತ್ತದೆ.

### ಸ್ತ್ರೀ ಮತ್ತು ಪುರುಷರ ನಡುವೆ ಇರುವ ಶೈಕ್ಷಣಿಕ ಸಮಾನ ಅವಕಾಶಗಳಲ್ಲಿಯ ಸ್ವರೂಪ

''ಪ್ರಾಚೀನ ಕಾಲದಿಂದಲೂ ಸ್ತ್ರೀ ಮತ್ತು ಪುರುಷರ ಶೈಕ್ಷಣಿಕ ಅಂಶಗಳ ಕುರಿತು ನೋಡುವುದಾದರೆ ಸ್ತ್ರೀಯರಿಗೆ ಹಿಂದೆ ಶಿಕ್ಷಣದಲ್ಲಿ ಅಷ್ಟೊಂದು ಪ್ರೇರಣೆ ಇರಲಿಲ್ಲ. ಬರಬರುತ್ತಾ ಬ್ರಿಟಿಷರ ಕಾಲದ ನಂತರದಲ್ಲಿ

ಸ್ತ್ರೀಯರಿಗೆ ಹೆಚ್ಚಿನ ಆದ್ಯತೆಯನ್ನು ಕೊಡಲಾಗಿದೆ.''[೮] ಆಧುನಿಕ ಕಾಲದಲ್ಲಿ ಸ್ತ್ರೀಯರಿಗೆ ಆದ್ಯತೆಯನ್ನು ನೀಡಲಾಗಿದ್ದು, ಇದರ ಪ್ರಭಾವದಿಂದಾಗಿ ಗೌಡಾಲು ಸಮುದಾಯದ ಹೆಣ್ಣು ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಕೊಡಲಾಗಿದೆ. ಆದರೆ ಅದು ಪುರುಷರಿಗೆ ಕೊಟ್ಟಂತಹ ಅವಕಾಶಗಳಿಗೆ ಹೋಲಿಸಿದರೆ ಕಡಿಮೆಯಾಗಿರುವುದನ್ನು ಈ ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ ೪.೧೯**

**ಶಿಕ್ಷಣ ಪಡೆಯುವಲ್ಲಿ ಸ್ತ್ರೀಯರು ಮತ್ತು ಪುರುಷರಿಗೆ ಇರುವ ಸಮಾನ ಅವಕಾಶಗಳ ಸ್ವರೂಪ**

| ಅವಕಾಶಗಳು | ಒಟ್ಟುಸಂಖ್ಯೆ | ಶೇಕಡಾವಾರು |
|---|---|---|
| ಸಮಾನ ಅವಕಾಶ ಕೊಡಬೇಕು | ೬೭ | ೬೭.೦೦ |
| ಸಮಾನ ಅವಕಾಶ ಕೊಡಬಾರದು | ೩೩ | ೩೩.೦೦ |
| **ಒಟ್ಟು** | ೧೦೦ | ೧೦೦.೦೦ |
| **ಸಮಾನ ಅವಕಾಶಗಳು ಕೊಡಬೇಕಾದರೆ ಕಾರಣಗಳು** | | |
| ಉತ್ತಮ ಜೀವನಕ್ಕಾಗಿ | ೨೨ | ೩೨.೮೩ |
| ಸಮಸ್ಯೆಯನ್ನು ಎದುರಿಸಲು | ೧೧ | ೧೬.೪೧ |
| ಸಾಮರ್ಥ್ಯಕ್ಕಾಗಿ | ೧೨ | ೧೭.೯೧ |
| ಜ್ಞಾನಾರ್ಜನೆಗಾಗಿ | ೧೩ | ೧೯.೪೦ |
| ಸ್ವಾವಲಂಬನೆಗಾಗಿ | ೦೯ | ೧೩.೪೩ |
| **ಒಟ್ಟು** | **೬೭** | **೧೦೦.೦೦** |
| **ಸಮಾನ ಅವಕಾಶಗಳನ್ನು ಕೊಡಬಾರದು ಎನ್ನಲು ನೀಡಿರುವ ಕಾರಣಗಳು** | | |
| ಮಹಿಳೆಯರಿಗೆ ಹೆಚ್ಚಿನ ಶಿಕ್ಷಣ ಅನಗತ್ಯ | ೨೨ | ೬೬.೬೬ |
| ಅವರನ್ನು ರಕ್ಷಣೆ ಮಾಡುವುದು ಕಷ್ಟ | ೧೧ | ೩೩.೩೩ |
| **ಒಟ್ಟು** | ೩೩ | ೧೦೦.೦೦ |

ಮೇಲಿನ ಕೋಷ್ಟಕದಿಂದ ಕಂಡುಬರುವ ಸಂಗತಿ ಎಂದರೆ ೧೦೦ ಸೂಚಕರಲ್ಲಿ ೬೭ (ಶೇ. ೬೭) ಜನ ಸಮಾನ ಅವಕಾಶ ಸ್ತ್ರೀಯರಿಗೆ ಕೊಡಬೇಕು ಎಂಬ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಹಾಗೆಯೇ ೩೩ (ಶೇ. ೩೩) ಜನ ಮಹಿಳೆಯರಿಗೆ ಸಮಾನ ಅವಕಾಶ ಕೊಡಬಾರದು ಎಂಬುದಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದಕ್ಕೆ ಕಾರಣವೇನೆಂದರೆ ಯಾವ ಸೂಚಕರು ವೈಜ್ಞಾನಿಕ ಮತ್ತು ವೈಚಾರಿಕ ದೃಷ್ಟಿಕೋನವನ್ನು ಹೊಂದಿದ್ದಾರೆ ಅಂತಹವರು ಸಮಾನ ಅವಕಾಶ ಕೊಡಬೇಕು ಎಂಬುದಾಗಿ ತನ್ನ ಅಭಿಪ್ರಾಯ ವ್ಯಕ್ತಪಡಿಸಿದರೆ, ಯಾರು ಈ ದೃಷ್ಟಿಕೋನವನ್ನು ಹೊಂದಿಲ್ಲವೋ ಅಂತಹವರು ಸಮಾನ ಅವಕಾಶ ನೀಡಬಾರದು ಎಂದು ಹೇಳಿದ್ದಾರೆ.

ಸಮಾನ ಅವಕಾಶ ಕೊಡಬೇಕಾದರೆ ಅಗತ್ಯ ಕಾರಣವೇನೆಂದರೆ ೨೨ (ಶೇ.೩೨.೮೩) ಜನ ಉತ್ತಮ ಜೀವನಕ್ಕಾಗಿ ಎಂಬ ಕಾರಣವನ್ನು ನೀಡಿದ್ದಾರೆ. ೧೧ (ಶೇ.೧೬.೧೪) ಜನ ಸಮಸ್ಯೆಯನ್ನು ಎದುರಿಸಲು ಎಂಬ ಅಭಿಪ್ರಾಯವನ್ನು ತಿಳಿಸಿದರೆ, ೧೨ (ಶೇ.೧೭.೯೧) ಜನ ಅವರ ಸಾಮರ್ಥ್ಯ ಗುರುತಿಸಲು ಎಂದು ಹೇಳಿದ್ದಾರೆ. ೧೩ (ಶೇ.೧೯.೪೦) ಜನ ಜ್ಞಾನಾರ್ಜನೆಗಾಗಿ ಎಂಬ ತಮ್ಮ ನಿಲುವನ್ನು ಸೂಚಿಸಿದ್ದಾರೆ. ಕೊನೆಯದಾಗಿ ೦೯ (ಶೇ.೧೩.೪೩) ಜನ ಮಹಿಳೆಯರಿಗೆ ಶಿಕ್ಷಣದಲ್ಲಿ ಸಮಾನತೆ ಕೊಡಬೇಕು, ಏಕೆಂದರೆ ಸ್ವಾವಲಂಬಿ ಜೀವನ ನಡೆಸಲು ಇದು ಸಹಕಾರಿಯಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಹೆಚ್ಚು ಜನ ಉತ್ತಮ ಜೀವನ ನಡೆಸಲು ಸಮಾನತೆ ಕೊಡಬೇಕು ಎಂಬುದಾಗಿ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಈ ಬುಡಕಟ್ಟು ಜನರಲ್ಲಿ ಹೆಚ್ಚಿನವರು ಶಿಕ್ಷಣದಲ್ಲಿ ಸ್ತ್ರೀಯರಿಗೆ ಸಮಾನತೆ ಕೊಡಬೇಕು ಎಂದಿದ್ದಾರೆ. ಏಕೆಂದರೆ ಸಮಾಜದಲ್ಲಿ ಅವರು ಉತ್ತಮ ಸ್ಥಾನವನ್ನು ಗಳಿಸಲು ಹಾಗೂ ಜೀವನದಲ್ಲಿ ಬರಬಹುದಾದ ಸಂಕಷ್ಟಗಳನ್ನು ಎದುರಿಸಲು ಇದು ಸಹಕಾರಿಯಾಗಿದೆ ಎಂಬುದೇ ಇದಕ್ಕೆ ಇವರು ನೀಡುವ ಪ್ರಮುಖ ಕಾರಣವಾಗಿದೆ.

ಇಲ್ಲಿ ಗೌಡಾಲು ಬುಡಕಟ್ಟು ಸಮುದಾಯದ ದೃಷ್ಟಿಕೋನವು ಸಮಾಜದ ಬಗೆಗಿನ ಕಳಕಳಿ, ಸಮಾಜದ ಉನ್ನತ ಪ್ರಗತಿಯ ಆಶಯವನ್ನು ಒಳಗೊಂಡಿದ್ದು, ಸ್ತ್ರೀ ಶಿಕ್ಷಣದ ಮಹತ್ವವನ್ನು ಕಂಡುಕೊಂಡಿದೆ. ಮಗುವಿಗೆ ತಾಯಿಯೇ ಮೊದಲ ಗುರು ಎಂಬ ಮಾತಿನ ಸತ್ಯಾಂಶವು ಈ ಸಮುದಾಯದವರ ಅರಿವಿಗೆ ಬರುತ್ತಿರುವುದು ಒಂದು ಸಂತೋಷದಾಯಕ ವಿಷಯವಾಗಿದೆ. ಹೀಗಾಗಿ ಸ್ತ್ರೀ ಪುರುಷರ ನಡುವೆ ಇರುವ ಸಮಾನತೆಯ ಬಗ್ಗೆ ಗೌಡಾಲು ಸಮುದಾಯದವರ ಅಭಿಪ್ರಾಯವನ್ನು ಈ ಸಂಶೋಧನೆಯ ಮೂಲಕ ತಿಳಿದುಕೊಳ್ಳಲು ಸಾಧ್ಯವಾಗಿದೆ.

ಕೊನೆಯದಾಗಿ ಸಮಾನತೆಯ ಅವಕಾಶ ಕೊಡಬಾರದು ಎಂಬ ಕೆಲವರ ನಿಲುವು ಈ ಮುಂದಿನಂತಿದೆ. ೨೨ (ಶೇ.೬೬.೬೬) ಜನರ ಅಭಿಪ್ರಾಯದ ಪ್ರಕಾರ ಮಹಿಳೆಯರಿಗೆ ಉನ್ನತ ಅಥವಾ ಹೆಚ್ಚಿನ ಶಿಕ್ಷಣದ ಅಗತ್ಯವಿಲ್ಲ. ೧೧ (ಶೇ.೩೩.೩೩) ಜನರು ಉನ್ನತ ಶಿಕ್ಷಣವನ್ನು ಪಡೆಯಲು ಸ್ತ್ರೀಯರು ಹೊರಗೆ ಹೊರಟರೆ ಅವರನ್ನು ರಕ್ಷಣೆ ಮಾಡುವುದು ಕಷ್ಟದ ಕೆಲಸವಾಗುತ್ತದೆ. ಆದ್ದರಿಂದ ಅವರಿಗೆ ಸಮಾನ ಅವಕಾಶ ನೀಡಬಾರದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಮೇಲಿನ ಕೋಷ್ಟಕದಿಂದ ಕಂಡುಬರುತ್ತದೆ.

ಮೇಲಿನ ಅಂಶಗಳನ್ನು ಅವಲೋಕಿಸಿದಾಗ ಸ್ತ್ರೀಯರಿಗೆ ಸಮಾನ ಅವಕಾಶ ನೀಡಬಾರದು ಎನ್ನುವವರ ಸಂಖ್ಯೆಗಿಂತಲೂ ನೀಡಬೇಕು ಎಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದವರ ಸಂಖ್ಯೆಯೇ ಅಧಿಕವಾಗಿರುವುದು ತಿಳಿದುಬರುತ್ತದೆ. ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಶೇಕಡ ೭೬ ತಿಳುವಳಿಕೆದಾರರು ಮಹಿಳೆಯರಿಗೆ ಪುರುಷರಿಗಿರುವಷ್ಟೇ ಸಮಾನ ಅವಕಾಶಗಳನ್ನು ನೀಡಬೇಕು ಎಂಬ ತಮ್ಮ ಅಭಿಪ್ರಾಯವನ್ನು ನೀಡಿದ್ದು, ಇದು ಅವರ ವಿಶಾಲ ಹಾಗೂ ವೈಜ್ಞಾನಿಕ ದೃಷ್ಟಿಕೋನವನ್ನು ವ್ಯಕ್ತಪಡಿಸುತ್ತದೆ ಎಂಬುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ಮಹಿಳೆಯರಿಗೆ ದೂರದ ನಗರಗಳಲ್ಲಿ ಶಿಕ್ಷಣ ಕೊಡಿಸುವ ಬಗೆಗಿರುವ ಅಭಿಪ್ರಾಯಗಳು**

ಗೌಡಾಲು ಬುಡಕಟ್ಟು ಸಮುದಾಯದವರು ಸ್ತ್ರೀಯರ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದ್ದರೂ ಸಹ ಮಹಿಳೆಯರನ್ನು ದೂರದ ಪಟ್ಟಣಗಳಿಗೆ ಅಥವಾ ನಗರಗಳಿಗೆ ಕಳುಹಿಸಿ ವಿದ್ಯಾಭ್ಯಾಸ ನೀಡುವಿರಾ ಎಂಬ ಪ್ರಶ್ನೆ

ಬಂದಾಗ, ಅವರ ಅಭಿಪ್ರಾಯವು ಬದಲಾವಣೆಗೊಂಡಿದ್ದು, ಮಹಿಳೆಯರಿಗೆ ಎಷ್ಟೇ ಶಿಕ್ಷಣ ನೀಡಿದರೂ ಸಹ ಅದು ಪ್ರಯೋಜನವಿಲ್ಲ. ಗಂಡನ ಮನೆಗೆ ಹೋಗಲೇ ಬೇಕು, ಪಾತ್ರೆ ತಿಕ್ಕುವುದು ಅಥವಾ ಮನೆಯ ಕೆಲಸ ಅವರಿಗೆ ತಪ್ಪಿದ್ದಲ್ಲ ಎಂಬ ನಿಲುವನ್ನು ಗೌಡಾಲು ಸಮುದಾಯದವರು ಹೊಂದಿರುವುದು ಈ ಸಂಶೋಧನೆಯಿಂದ ಗೋಚರವಾಗುತ್ತದೆ. ಇದಕ್ಕೆ ಸಂಬಂಧಿಸಿದ ವಿವರವನ್ನು ಈ ಕೆಳಗಿನ ಕೋಷ್ಟಕದ ಮೂಲಕ ತಿಳಿದುಕೊಳ್ಳಬಹುದು.

**ಕೋಷ್ಟಕ ೪.೨೦**

ಮಹಿಳೆಯರಿಗೆ ದೂರದ ನಗರ ಪಟ್ಟಣಗಳಲ್ಲಿ ಶಿಕ್ಷಣ ಕೊಡಿಸುವ ಬಗೆಗಿರುವ ಅಭಿಪ್ರಾಯಗಳ ಸ್ವರೂಪ

| ಪ್ರಾಧಾನ್ಯತೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಕೊಡಿಸುತ್ತೇವೆ | ೪೭ | ೪೭.೦೦ |
| ಕೊಡಿಸುವುದಿಲ್ಲ | ೫೩ | ೫೩.೦೦ |
| ಒಟ್ಟು | ೧೦೦ | ೧೦೦.೦೦ |
| **ಕೊಡಿಸುವುದಾದರೆ ಕಾರಣಗಳು** | | |
| ಸ್ವಾವಲಂಬನೆಗಾಗಿ | ೧೧ | ೨೩.೪೦ |
| ಉತ್ತಮ ಗುಣಮಟ್ಟದ ಶಿಕ್ಷಣಕ್ಕಾಗಿ | ೦೭ | ೧೪.೮೯ |
| ಸಮಾನ ಅವಕಾಶಕ್ಕಾಗಿ | ೦೯ | ೧೯.೧೪ |
| ಅನಿವಾರ್ಯವಾದರೆ | ೦೭ | ೧೪.೮೯ |
| ಆಸಕ್ತಿ ಇದ್ದರೆ | ೦೮ | ೧೭.೦೨ |
| ಸ್ಥಳೀಯ ಸೌಲಭ್ಯ ಇಲ್ಲವಾದರೆ | ೦೫ | ೧೦.೬೩ |
| ಒಟ್ಟು | ೪೭ | ೧೦೦.೦೦ |
| **ಕೊಡಿಸುವುದಿಲ್ಲವಾದರೆ ಕಾರಣಗಳು** | | |
| ಅನಗತ್ಯ | ೦೯ | ೧೬.೯೮ |
| ಎಷ್ಟು ಓದಿಸಿದರೂ ಅಷ್ಟೇ | ೦೮ | ೧೫.೦೯ |
| ಹಣಕಾಸಿನ ಕೊರತೆ | ೧೫ | ೨೮.೩೦ |
| ಭಯವಿರುವುದು | ೦೯ | ೧೬.೯೮ |
| ಹೆಣ್ಣು ಮಕ್ಕಳು ಮನೆಯಲ್ಲಿಯೇ ಇರಬೇಕು | ೧೨ | ೨೨.೬೪ |
| ಒಟ್ಟು | ೫೩ | ೧೦೦.೦೦ |

ಮಹಿಳೆಯರಿಗೆ ದೂರದ ಪಟ್ಟಣ ಅಥವಾ ನಗರ ಪ್ರದೇಶಗಳಲ್ಲಿ ಶಿಕ್ಷಣ ಕೊಡಿಸುವಲ್ಲಿ ಸಮುದಾಯದವರ ನಿಲುವು ಅಷ್ಟೊಂದು ಉತ್ತಮವಾಗಿಲ್ಲವೆಂಬುದು ಮೇಲಿನ ಕೋಷ್ಟಕದಿಂದ ತಿಳಿದುಕೊಳ್ಳಬಹುದು. ಒಟ್ಟು ೧೦೦ ಜನ ತಿಳುವಳಿಕೆದಾರರಲ್ಲಿ ೪೭(ಶೇ.೪೭) ಜನ ನಗರ ಪ್ರದೇಶಗಳಲ್ಲಿ ಶಿಕ್ಷಣ ಕೊಡಿಸಬೇಕು ಎಂಬ ಅಭಿಪ್ರಾಯವನ್ನು ಹೊಂದಿದ್ದರೆ ೫೩(ಶೇ.೫೩) ಜನರು ನಗರ ಪ್ರದೇಶಗಳಲ್ಲಿ ಶಿಕ್ಷಣ ಕೊಡಿಸಬಾರದು ಎಂಬ ನಿಲುವನ್ನು ತೋರಿಸಿದ್ದಾರೆ. ಇದಕ್ಕೆ ಕಾರಣವೆಂದರೆ ಗುಡ್ಡಗಾಡು ಪ್ರದೇಶಗಳಲ್ಲಿ ವಾಸವಾಗಿರುವ ಅವರು ನಗರ ಪ್ರದೇಶ ಅಥವಾ ಪಟ್ಟಣ ಪ್ರದೇಶಗಳಿಂದ ಸುಮಾರು ದೂರದಲ್ಲಿ ವಾಸವಾಗಿದ್ದು, ಪಟ್ಟಣ ಮತ್ತು ನಗರಗಳ ಬಗ್ಗೆ, ಅಲ್ಲಿಯ ಜನರ ಬಗ್ಗೆ ವಿಶ್ವಾಸವಿಲ್ಲದೇ ಇರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ.

ನಗರ ಪ್ರದೇಶದಲ್ಲಿ ಶಿಕ್ಷಣವನ್ನು ಕೊಡಿಸಲು ಕಾರಣವೇನೆಂದರೆ ೧೧(ಶೇ.೨೩.೪೦) ಜನ ಸ್ವಾವಲಂಬನೆಗಾಗಿ ಶಿಕ್ಷಣ ಕೊಡಿಸಲು ಇಷ್ಟಪಟ್ಟಿದ್ದಾರೆ. ೦೭(ಶೇ.೧೪.೮೯) ಜನ ಗುಣಮಟ್ಟದ ಶಿಕ್ಷಣಕ್ಕಾಗಿ, ೦೯(ಶೇ.೧೯.೧೪) ಜನ ಸಮಾನ ಅವಕಾಶ ಪಡೆಯಲಿಕ್ಕೆ ಶಿಕ್ಷಣ ಕೊಡಿಸಲು, ೦೭(ಶೇ.೧೪.೮೯) ಜನ ಅನಿವಾರ್ಯವಾದರೆ ಶಿಕ್ಷಣ ಕೊಡಿಸಲು ಒಪ್ಪಿದ್ದಾರೆ. ೦೮(ಶೇ.೧೭.೦೨) ಜನ ಓದುವ ಆಸಕ್ತಿ ಇದ್ದರೆ ಸ್ತ್ರೀಯರಿಗೆ ಶಿಕ್ಷಣ ಕೊಡಿಸಲು ಒಪ್ಪಿದ್ದರೆ ೦೫(ಶೇ.೧೦.೬೩) ಜನ ಸ್ಥಳೀಯ ಸೌಲಭ್ಯವಿಲ್ಲವಾದರೆ ನಗರ ಪ್ರದೇಶಗಳಿಗೆ ಕಳುಹಿಸಿ ಶಿಕ್ಷಣ ಕೊಡಿಸಲು ಇಷ್ಟಪಟ್ಟಿದ್ದಾರೆ.

ಇಲ್ಲಿ ನಗರ ಪ್ರದೇಶಗಳಿಗೆ ಕಳುಹಿಸಿ ಶಿಕ್ಷಣ ಕೊಡಿಸುವವರ ಪ್ರಮಾಣ ಕಡಿಮೆ ಇದೆ. ಇವರಲ್ಲಿ ಹೆಚ್ಚಿನ ಜನ ನಗರಗಳಿಗೆ ಏಕೆ ಕಳುಹಿಸಿ ಶಿಕ್ಷಣ ಕೊಡಿಸಲು ಇಚ್ಚಿಸುತ್ತಾರೆ ಎಂದರೆ ಸ್ತ್ರೀಯರು ಸ್ವಾವಲಂಬನೆ ಹೊಂದಬೇಕೆಂಬ ಕಾರಣಕ್ಕಾಗಿ ಹಾಗೆಯೇ ಅತಿ ಕಡಿಮೆ ಜನ ಸ್ಥಳೀಯ ಮಟ್ಟದಲ್ಲಿ ಉನ್ನತ ಶಿಕ್ಷಣ ಇಲ್ಲದೇ ಇರುವ ಕಾರಣಕ್ಕಾಗಿ ನಗರ ಪ್ರದೇಶಗಳಿಗೆ ಕಳುಹಿಸಿ ಶಿಕ್ಷಣ ಕೊಡಿಸಲು ಒಪ್ಪುತ್ತಾರೆ ಎಂಬುದೂ ಈ ಸಂಶೋಧನೆಯಿಂದ ದೃಢವಾಗುತ್ತದೆ.

ಕೊನೆಯದಾಗಿ ನಗರ ಪ್ರದೇಶಗಳಲ್ಲಿ ಸ್ತ್ರೀಯರಿಗೆ ಶಿಕ್ಷಣ ಕೊಡಿಸದೇ ಇರುವವರ ಸಂಖ್ಯೆ ಹೆಚ್ಚು ಇದ್ದು, ಇದಕ್ಕೆ ೦೯(ಶೇ.೧೬.೯೮) ಜನ ಸ್ತ್ರೀಯರಿಗೆ ನಗರ ಪ್ರದೇಶಗಳಿಗೆ ಕಳುಹಿಸಿ, ಶಿಕ್ಷಣ ಕೊಡಿಸುವುದು ಅನಗತ್ಯ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ೦೮(ಶೇ.೧೫.೦೯) ಜನ ಎಷ್ಟು ಓದಿಸಿದರೂ ಅಷ್ಟೇ ಅದರಿಂದ ಪ್ರಯೋಜನವಿಲ್ಲ ಎಂಬುದಾಗಿ ಹೇಳಿದ್ದಾರೆ. ೧೫(ಶೇ.೨೮.೩೦) ಜನ ಹಣಕಾಸಿನ ಕೊರತೆ ಇದ್ದಾಗ ಕಳುಹಿಸಲು ಆಗುವುದಿಲ್ಲ ಎಂದಿದ್ದಾರೆ. ೦೯(ಶೇ.೧೬.೯೮) ಜನ ಭಯದ ಕಾರಣದಿಂದಾಗಿ ನಗರಗಳಿಗೆ ಕಳುಹಿಸಿ ಓದಿಸಲು ಒಪ್ಪುವುದಿಲ್ಲ. ೧೨(ಶೇ.೨೨.೬೪) ಜನರ ಪ್ರಕಾರ ಹೆಣ್ಣು ಮಕ್ಕಳು ಮನೆಯಲ್ಲಿಯೇ ಇರಬೇಕು ಎಂಬ ಕಾರಣಕ್ಕಾಗಿ ಅವರನ್ನು ಪಟ್ಟಣಗಳಿಗೆ ಕಳುಹಿಸಿ ಓದಿಸಲು ಇಚ್ಛಿಸುವುದಿಲ್ಲ. ಹೀಗೆ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಹೆಚ್ಚಿನ ಜನರು ಪಟ್ಟಣ ಅಥವಾ ನಗರ ಪ್ರದೇಶಗಳಿಗೆ ಕಳುಹಿಸಿ ಶಿಕ್ಷಣ ಕೊಡಿಸಲು ಒಪ್ಪುವುದಿಲ್ಲ ಎಂಬುದನ್ನು ಕಂಡುಕೊಳ್ಳಬಹುದು.

ಈ ಬುಡಕಟ್ಟು ಸಮುದಾಯದಲ್ಲಿ ನಗರ ಪ್ರದೇಶಗಳಿಗೆ ಕಳುಹಿಸಿ ಶಿಕ್ಷಣ ಕೊಡಿಸದಿರಲು ಪ್ರಮುಖ ಕಾರಣ ಎಂದರೆ ಹಣಕಾಸಿನ ಕೊರತೆ ಒಟ್ಟು ೧೫.(ಶೇ.೨೮.೩೦) ಜನ ಈ ಕಾರಣದಿಂದಲೇ ಕಳುಹಿಸುವುದಿಲ್ಲ. ೦೮(ಶೇ.೧೫.೦೯) ಜನರ ಪ್ರಕಾರ ಎಷ್ಟು ಓದಿಸಿದರೂ ಅಷ್ಟೇ, ಹೆಣ್ಣು ಮಕ್ಕಳನ್ನು ವಿವಾಹ ಮಾಡಿ ಕಳುಹಿಸಲೇಬೇಕು ಎಂಬ ಸಂಕುಚಿತ ಮನೋಭಾವನೆ ಹೊಂದಿರುವುದನ್ನು ನಾವು ಈ ಸಂಶೋಧನೆಯಿಂದ ಕಂಡುಕೊಳ್ಳಬಹುದು.

**ವಂತಿಕೆ ನೀಡಿ ಶಿಕ್ಷಣ ಕೊಡಿಸುವವರ ವಿವರ**

ಪೋಷಕರು ತಮ್ಮ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ಅಥವಾ ವೃತ್ತಿಯಾಧಾರಿತ ಶಿಕ್ಷಣವನ್ನು ಕೊಡಿಸಬೇಕಾದರೆ ಪೋಷಕರ ಆರ್ಥಿಕ ಮಟ್ಟವು ಸುಧಾರಿತವಾಗಿರಬೇಕು. ಯಾರು ಆರ್ಥಿಕ ಸಮಸ್ಯೆಗಳಿಂದ ಬಳಲುತ್ತಿದ್ದಾರೆಯೋ

ಅಂತಹವರು ಸಾಮಾನ್ಯ ಶಿಕ್ಷಣವನ್ನೂ ಕೊಡಿಸಲು ಸಾಧ್ಯವಿಲ್ಲ. ಇಂತಹ ಸ್ಥಿತಿಯಲ್ಲಿ ಗೌಡಾಲು ಬುಡಕಟ್ಟು ಸಮುದಾಯದವರು ತಮ್ಮ ಮಕ್ಕಳಿಗೆ ನಗರ ಪ್ರದೇಶಗಳಿಗೆ ಕಳುಹಿಸಿ ಡೊನೇಷನ್ ನೀಡಿ ಓದಿಸುವಲ್ಲಿ ಅವರ ನಿಲುವು ಯಾವ ರೀತಿ ಇದೆ ಎಂಬುದನ್ನು ಕುರಿತು ಕೆಳಗಿನ ಕೋಷ್ಟಕದ ಮೂಲಕ ಕಂಡುಕೊಳ್ಳಬಹುದು.

ಕೋಷ್ಟಕ ೪.೨೧

ಮಕ್ಕಳಿಗೆ ವಂತಿಕೆ ನೀಡಿ ಶಿಕ್ಷಣ ಕೊಡಿಸುವುದರ ಸ್ವರೂಪ

| ವಂತಿಕೆ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಕೊಡುತ್ತೇವೆ | ೦೭ | ೦೭.೦೦ |
| ಕೊಡುವುದಿಲ್ಲ | ೯೩ | ೯೩.೦೦ |
| ಒಟ್ಟು | ೧೦೦ | ೧೦೦.೦೦ |
| ಕೊಡುವುದಾದರೆ ಕಾರಣಗಳು | | |
| ಉತ್ತಮ ಶಿಕ್ಷಣಕ್ಕಾಗಿ | ೦೫ | ೭೧.೪೨ |
| ವಂತಿಕೆ ನೀಡಿದರೆ ಮಾತ್ರ ಸೀಟು ಸಿಗುತ್ತದೆ | -- | -- |
| ವಂತಿಕೆ ನೀಡುವುದು ಕಡ್ಡಾಯವಾಗಿದೆ | -- | -- |
| ವಂತಿಕೆ ಕೊಡುವುದು ಅಗತ್ಯವಾದರೆ ಕೊಡುತ್ತೇವೆ | | -- -- |
| ಒಟ್ಟು | ೦೭ | ೧೦೦.೦೦ |
| ಕೊಡುವುದಿಲ್ಲವಾದರೆ ಕಾರಣಗಳು | | |
| ವಂತಿಕೆ ನೀಡಲು ಇಷ್ಟಪಡುವುದಿಲ್ಲ | ೩೨ | ೩೪.೪೦ |
| ಸರ್ಕಾರಿ ಶಿಕ್ಷಣವೇ ಒಳ್ಳೆಯದು | ೨೧ | ೨೨.೫೮ |
| ವಂತಿಕೆ ನೀಡಿ ಶಿಕ್ಷಣ ಕೊಡಿಸುವ ಅವಶ್ಯಕತೆ ಇಲ್ಲ | | ೧೭೧೮.೨೭ |
| ಅರ್ಹತೆಯ ಆಧಾರದ ಮೇಲೆ ಸೀಟು ಸಿಗುತ್ತದೆ. | | ೨೩.೨೪.೭೩ |
| ಒಟ್ಟು | ೯೩ | ೧೦೦.೦೦ |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ನಮಗೆ ಕಂಡುಬರುವ ಅಂಶವೇನೆಂದರೆ ಗೌಡಾಲು ಬುಡಕಟ್ಟು ಸಮುದಾಯದವರು ಆರ್ಥಿಕ ಸಮಸ್ಯೆಗಳನ್ನು ಎದುರಿಸುತ್ತಿರುವುದರಿಂದ ವಂತಿಕೆ ಹಣ ಕೊಟ್ಟು ಮಕ್ಕಳಿಗೆ ಶಿಕ್ಷಣ ಕೊಡಿಸಲು ಬಯಸುವುದಿಲ್ಲ. ಒಟ್ಟು ೧೦೦ ಜನ ಸೂಚಕರಲ್ಲಿ ೯೩(ಶೇ. ೯೩) ಜನ ವಂತಿಕೆಯನ್ನು ಕೊಡಲು ಒಪ್ಪುವುದಿಲ್ಲ. ಏಕೆಂದರೆ ಇವರಲ್ಲಿ ಇರುವ ಬಡತನ ಮತ್ತು ಅನಕ್ಷರತೆಯೇ ಇದಕ್ಕೆ ಮೂಲ ಕಾರಣ. ಹಾಗೆಯೇ ಕೇವಲ ೦೭(ಶೇ. ೦೭) ಜನ ವಂತಿಕೆಯನ್ನು ಕೊಡಲು ಬಯಸುತ್ತಾರೆ. ಏಕೆಂದರೆ ಇವರು ಅಲ್ಪಸ್ವಲ್ಪ ಆರ್ಥಿಕವಾಗಿ ಸುಧಾರಣೆ ಆಗಿರುವವರು ಮತ್ತು ಆಧುನಿಕ ಗುಣಮಟ್ಟದ ಶಿಕ್ಷಣದ ಮತ್ತು ವೃತ್ತಿ ಆಧಾರಿತ ಶಿಕ್ಷಣದ ಮಹತ್ವದ ಬಗ್ಗೆ ತಿಳಿದವರಾಗಿದ್ದಾರೆ. ಹಾಗಾಗಿ ಗೌಡಾಲು ಬುಡಕಟ್ಟು ಸಮುದಾಯದವರು ವಂತಿಕೆ ಕೊಟ್ಟು ಶಿಕ್ಷಣ ಕೊಡಿಸುವ ಮಟ್ಟದಲ್ಲಿ ಇಲ್ಲ ಎಂಬುದು ಮೇಲಿನ ಕೋಷ್ಟಕದಿಂದ ಕಂಡುಕೊಳ್ಳಬಹುದು.

ಕೇವಲ ೦೭(ಶೇ. ೦೭) ಜನ ಮಾತ್ರ ವಂತಿಕೆ ಕೊಟ್ಟರೂ ೦೫(ಶೇ. ೭೧.೪೨) ಜನ ಉತ್ತಮ ಶಿಕ್ಷಣ ಮಕ್ಕಳಿಗೆ ಕೊಡಿಸುವ ಉದ್ದೇಶದಿಂದ ವಂತಿಕೆಯನ್ನು ಕೊಡುತ್ತಿದ್ದಾರೆ. ಹಾಗೆಯೇ ೦೨(ಶೇ. ೨೮.೫೭) ಜನ ವಂತಿಕೆ ಕೊಡುವುದು ಅಗತ್ಯವಾದಲ್ಲಿ ಮಾತ್ರ ಕೊಡುತ್ತೇವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇವರು ವಂತಿಕೆ ನೀಡಿದರೆ ಮಾತ್ರ ಸೀಟು ಸಿಗುತ್ತದೆಯೇ ಅಥವಾ ವಂತಿಕೆ ನೀಡುವುದು ಕಡ್ಡಾಯವಾಗಿದೆಯೇ ಎಂಬ ವಿಷಯದ ಬಗ್ಗೆ ಯಾವುದೇ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ ಎಂಬುದು ಸಂಶೋಧನೆಯಿಂದ ತಿಳಿದುಬರುತ್ತದೆ.

ಈ ಸಮುದಾಯದಲ್ಲಿ ಅತಿ ಹೆಚ್ಚು ಅಂದರೆ ೯೩(ಶೇ. ೯೩)ರಷ್ಟು ಜನ ವಂತಿಕೆ ಕೊಡುವುದಿಲ್ಲ ಎಂದಿದ್ದಾರೆ. ಇವರಲ್ಲಿ ೩೨(ಶೇ. ೩೪.೪೦) ಜನ ವಂತಿಕೆ ನೀಡಲು ತಮಗೆ ಇಚ್ಛೆ ಇಲ್ಲ ಎಂಬ ಕಾರಣವನ್ನು ನೀಡಿದ್ದಾರೆ. ೨೧(ಶೇ. ೨೨.೫೮) ಜನ ಸರ್ಕಾರಿ ಶಿಕ್ಷಣವೇ ಒಳ್ಳೆಯದು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ೧೭(ಶೇ.೧೮.೨೭) ಜನ ವಂತಿಕೆ ನೀಡಿ ಶಿಕ್ಷಣ ಕೊಡಿಸುವ ಅವಶ್ಯಕತೆ ನಮಗೆ ಇಲ್ಲ ಎಂದು ಹೇಳುತ್ತಾರೆ. ೨೩(ಶೇ.೨೪.೭೩) ಜನ ಅರ್ಹತೆಯ ಆಧಾರದ ಮೇಲೆ ಸೀಟು ಸಿಗುತ್ತದೆ. ಹಾಗಾಗಿ ವಂತಿಕೆ ನೀಡುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಾರೆಯಾಗಿ ಈ ಸಮುದಾಯದವರು ವಂತಿಕೆ ನೀಡುವ ಸ್ಥಿತಿಯಲ್ಲಿ ಇಲ್ಲ ಎಂಬುವುದನ್ನು ಕಂಡುಕೊಳ್ಳಬಹುದು.

ಕೊನೆಯದಾಗಿ ಗೌಡಾಲು ಬುಡಕಟ್ಟು ಸಮುದಾಯದವರು ಗುಡ್ಡಗಾಡು, ಬೆಟ್ಟ ಪ್ರದೇಶಗಳಲ್ಲಿ ನೆಲೆಸಿದ್ದು, ಆಹಾರ, ಉದ್ಯೋಗ ವಸತಿ, ಬಟ್ಟೆ ಹಾಗೂ ಮೂಲಭೂತ ಸಮಸ್ಯೆಗಳಿಂದ ಬಳಲುತ್ತಿದ್ದು, ಇವರಿಗೆ ತಮ್ಮ ಮಕ್ಕಳನ್ನು ಸಾಮಾನ್ಯ ಶಾಲೆಗಳಿಗೆ ಕಳುಹಿಸುವುದೇ ಕಷ್ಟಸಾಧ್ಯವಾಗಿರುವಾಗ ಇವರು ವಂತಿಕೆ ಕೊಟ್ಟು ಶಿಕ್ಷಣ ಕೊಡಿಸುವಂತಹ ಆ ಮಟ್ಟದ ಆರ್ಥಿಕ ಸ್ಥಿತಿಯನ್ನು ಹೊಂದಿಲ್ಲ. ತಮ್ಮ ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸ ನೀಡಬೇಕೆಂಬ ಇಚ್ಛೆ ಹೊಂದಿದ್ದರೂ ಇವರ ಆರ್ಥಿಕ ದುಸ್ಥಿತಿ ಇವರನ್ನು ನಿರಾಶರನ್ನಾಗಿ ಮಾಡಿದೆ ಎಂಬ ಅಂಶ ಈ ಸಂಶೋಧನೆಯಿಂದ ತಿಳಿದುಬರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯದವರಿಗೆ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳಿಂದ ಸರಿಯಾದ ಸವಲತ್ತುಗಳು ಹಾಗೂ ಅವಕಾಶಗಳು ಲಭ್ಯವಾದರೆ ಈ ಬುಡಕಟ್ಟು ಸಮುದಾಯದಲ್ಲಿ ಸಮಗ್ರ ಬದಲಾವಣೆ ತರಲು ಸಾಧ್ಯವಿದೆ ಎಂಬ ವಿಷಯ ಈ ಸಂಶೋಧನೆಯಿಂದ ಕಂಡುಬರುತ್ತದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಆಧಾರವನ್ನು ಇಲ್ಲಿಯವರೆಗೆ ಮಾಡಿದ ಸಮಾಜಶಾಸ್ತ್ರೀಯ ದೃಷ್ಟಿಕೋನದ ಅವಲೋಕನವು ದೊರಕಿಸಿಕೊಡುತ್ತದೆ. ಇಲ್ಲಿ ಒಂದು ಬುಡಕಟ್ಟು ಸಮುದಾಯವು ಇತರ ಸಮುದಾಯಗಳಿಗಿಂತ ಯಾವ ರೀತಿ ಭಿನ್ನವಾಗಿದೆ ಎಂಬುದನ್ನು ತಿಳಿಯುವಲ್ಲಿ ಸಾಮಾಜಿಕ ಮತ್ತು ಶೈಕ್ಷಣಿಕ ಬದುಕು ಬಹಳ ಮುಖ್ಯ ಪಾತ್ರ ವಹಿಸುತ್ತದೆ. ಗೌಡಾಲು ಬುಡಕಟ್ಟು ಜನರ ಕುಟುಂಬ ಪದ್ಧತಿಯು ಪಿತೃವಂಶೀಯ ಕುಟುಂಬವಾಗಿದ್ದು, ಆಚಾರ-ವಿಚಾರ, ರೂಢಿ-ಸಂಪ್ರದಾಯಗಳಲ್ಲಿ ತನ್ನದೇ ಆದ ನಂಬಿಕೆಯನ್ನು ಹೊಂದಿದೆ. ಮಕ್ಕಳಕಟ್ಟು ಕುಟುಂಬ ಪದ್ಧತಿಯನ್ನು ಇವರಲ್ಲಿ ಕಾಣಬಹುದು. ಮನೆಯಲ್ಲಿ ಪುರುಷರು ಅಥವಾ ಇರುವ ಹಿರಿಯ ಗಂಡಸರು ಅಥವಾ ಮನೆ ಹಿರಿಯ ಮಗ ಯಜಮಾನಿಕೆಯ ಜವಾಬ್ದಾರಿಯನ್ನು ಹೊಂದಿರುತ್ತಾನೆ. ಯಜಮಾನಿಕೆಯು ತಲತಲಾಂತರದಿಂದ ಬಂದಿರುವುದಾಗಿದೆ. ಹಾಗೆಯೇ

ಉಡುಪಿ ಜಿಲ್ಲೆಯಲ್ಲಿ ಇರುವಂತಹ ಗೌಡಾಲು ಕುಟುಂಬಗಳು ಮಾತೃಪ್ರಧಾನ ಕುಟುಂಬ ಪದ್ಧತಿಯನ್ನು ಹೊಂದಿದ್ದು, ಮನೆಯಲ್ಲಿ ಎಲ್ಲ ಜವಾಬ್ದಾರಿಯು ತಾಯಿ ಅಥವಾ ಹಿರಿಯ ಮಹಿಳೆಯು ಹೊಂದಿರುವುದು ಕಂಡುಬರುತ್ತದೆ. ಇಲ್ಲಿ ಅಳಿಯಕಟ್ಟು ಪದ್ಧತಿ ಇರುವುದು ಗಮನಕ್ಕೆ ಬರುತ್ತದೆ. ಇದಕ್ಕೆ ಪ್ರಮುಖ ಕಾರಣವೆಂದರೆ ಹಿಂದಿನವರಿಂದ ಈ ಪದ್ಧತಿಯು ಇವರಿಗೆ ಬಳುವಳಿಯಾಗಿ ಬಂದಿರುವುದಾಗಿದೆ. ಕುಟುಂಬದ ಆರ್ಥಿಕ ವ್ಯವಸ್ಥೆಯು ಬದಲಾವಣೆಯಾಗುತ್ತಿದ್ದು, ಮನೆಯಲ್ಲಿ ಪಿತೃವಿನ ಮೂಲಕ ವಂಶವನ್ನು ಗುರುತಿಸುವುದು ಕಂಡುಬರುತ್ತದೆ. ಹಿಂದಿನ ಸಾಮಾಜಿಕ ಪದ್ಧತಿಗಳ ಆಚರಣೆಗಳು ಇಂದಿಗೂ ಮುಂದುವರೆದುಕೊಂಡು ಬಂದಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ, ಗುಡ್ಡಗಾಡು ಪ್ರದೇಶಗಳಲ್ಲಿ, ದಟ್ಟ ಅರಣ್ಯ ಪ್ರದೇಶಗಳಲ್ಲಿ ನೆಲೆಸಿರುವ ಇವರು ಸಮಾಜದ ಇತರೆ ವರ್ಗಗಳಿಗಿಂತಲೂ ಕಡಿಮೆ ಸ್ಥಾನಮಾನ ಹೊಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಶಿಕ್ಷಣ ಪಡೆದ ಗೌಡಾಲು ಬುಡಕಟ್ಟು ಸಮುದಾಯದವರ ಸ್ಥಾನಮಾನದಲ್ಲಿ ಸುಧಾರಣೆ ಆಗುತ್ತಿರುವುದು ಕಂಡುಬರುತ್ತದೆ.

ಹಾಗೆಯೇ ವಿವಾಹದ ಸಂದರ್ಭದಲ್ಲಿ ಪ್ರಸಾದ, ಜಾತಕ ಮತ್ತು ಸಾಲಾವಳಿ ಕೇಳಿ ವಿವಾಹ ಮಾಡಿಸುತ್ತಾರೆ. ಇವು ಇತ್ತೀಚಿನ ದಿನಗಳಲ್ಲಿ ಬದಲಾಗಿ ಧಾರೆ ಎರೆಯುವ ಸಂಪ್ರದಾಯ ಪ್ರಾರಂಭವಾಗಿದೆ. ಹಿಂದಿನಿಂದಲೂ ವಿವಾಹಕ್ಕೆ ಹೆಚ್ಚಿನ ಆದ್ಯತೆಯನ್ನು ಇವರಲ್ಲಿ ನೀಡಲಾಗಿದೆ. ವಿವಾಹವು ಶಾಸ್ತ್ರೋಕ್ತವಾಗಿ, ಸಂಪ್ರದಾಯಬದ್ಧವಾಗಿ, ಹಿರಿಯರ ಇಚ್ಛೆಗೆ ಅನುಸಾರವಾಗಿ ನಡೆಯುತ್ತದೆ. ಸಾಮಾನ್ಯವಾಗಿ ಹಿರಿಯರು ಗೊತ್ತುಪಡಿಸಿದ ವಿವಾಹ ಪದ್ಧತಿಯೇ ಹೆಚ್ಚಾಗಿದೆ. ಪ್ರೇಮ ವಿವಾಹಗಳು ಇವರಲ್ಲಿ ನಡೆಯುತ್ತಿವೆ. ಪ್ರೇಮ ವಿವಾಹದಲ್ಲಿ ಹುಡುಗಿ ಮತ್ತು ಹುಡುಗ ಪರಸ್ಪರ ಒಪ್ಪಿಕೊಂಡು ವಿವಾಹವಾಗುವುದು ಕಂಡುಬರುತ್ತದೆ. ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಅಂತರ್ ಜಾತಿ ವಿವಾಹಕ್ಕೆ ಮಾನ್ಯತೆ ಇಲ್ಲ. ಅಂತರ್‌ಜಾತೀಯ ವಿವಾಹವಾದವರ ಸಂಖ್ಯೆಯು ಅತಿ ವಿರಳವಾಗಿದೆ.

ಗೌಡಾಲು ಬುಡಕಟ್ಟು ಕುಟುಂಬಗಳಲ್ಲಿ ಯಾವುದೇ ಸಾಂಪ್ರದಾಯಿಕ ಕಾರ್ಯಕ್ರಮದಲ್ಲಿ ಗುರಿಕಾರರು ಇರಬೇಕಿದ್ದಿತು. ಆದರೆ ಸಮಾಜದಲ್ಲಿ ಆದಂತಹ ಸಾಮಾಜಿಕ ಬದಲಾವಣೆಗಳ ಕಾರಣದಿಂದಾಗಿ ಇತ್ತೀಚೆಗೆ ಗುರಿಕಾರರಿಗೆ ಅಷ್ಟೊಂದು ಮಹತ್ವ ನೀಡುತ್ತಿಲ್ಲ ಎಂಬುದು ಕೈಗೊಳ್ಳಲಾದ ಸಂಶೋಧನೆಯಿಂದ ತಿಳಿದುಬರುತ್ತದೆ. ಹಿರಿಯರ ಸಮ್ಮುಖದಲ್ಲಿಯೇ ಎಲ್ಲ ಕಾರ್ಯಕ್ರಮಗಳು ಜರುಗುವುದನ್ನು ನಾವು ಇಲ್ಲಿ ಕಾಣಬಹುದು. ಇವರ ಕುಟುಂಬಗಳ ಪದ್ಧತಿಯಲ್ಲಿ ಹಲವಾರು ಬದಲಾವಣೆಗಳಾಗುತ್ತಿವೆ. ಇದಕ್ಕೆ ಕಾರಣವೇನೆಂದರೆ ಆಧುನೀಕರಣ, ಸಂಸ್ಕೃತೀಕರಣ ಮತ್ತು ಪಾಶ್ಚಾತ್ಯೀಕರಣದ ಫಲವಾಗಿ ಕುಟುಂಬ ವ್ಯವಸ್ಥೆಯಲ್ಲಿ ಬದಲಾವಣೆಗಳಾಗುತ್ತಿರುವುದನ್ನು ಕಂಡುಕೊಳ್ಳಬಹುದಾಗಿದೆ.

ಹಿಂದೆ ಈ ಬುಡಕಟ್ಟು ಸಮುದಾಯದವರಲ್ಲಿ ವರದಕ್ಷಿಣೆ ಇರಲಿಲ್ಲ. ಇತ್ತೀಚಿನ ದಿನಗಳಲ್ಲಿ ವರದಕ್ಷಿಣೆಯು ಸ್ವಲ್ಪ ಪ್ರಮಾಣದಲ್ಲಿ ಹೆಚ್ಚಾಗುತ್ತಿರುವುದನ್ನು ಕಾಣಬಹುದಾಗಿದೆ. ಇವರಲ್ಲಿ ವರದಕ್ಷಿಣೆ ಬೆಳೆಯಲು ಮತ್ತು ಶಿಕ್ಷಣದ ಪ್ರಭಾವವೇ ಮುಖ್ಯ ಕಾರಣವಾಗಿದೆ. ಯಾರು ವಿದ್ಯಾವಂತರಿದ್ದಾರೆಯೋ, ಉದ್ಯೋಗದಲ್ಲಿದ್ದಾರೆಯೋ

ಅಂತಹವರೇ ವರದಕ್ಷಿಣೆಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಹಿಂದಿನಿಂದ ಬೆಳೆದುಕೊಂಡು ಬಂದ ವರದಕ್ಷಿಣೆ ಪದ್ಧತಿಯು ಯಾರು ಹೆಣ್ಣು ಮಕ್ಕಳನ್ನು ಹೆಚ್ಚಾಗಿ ಪಡೆದಿದ್ದಾರೆಯೋ ಅಂತಹವರಿಗೆ ಚಿಂತೆ ಇರುವುದಿಲ್ಲ. ಈ ವಧುದಕ್ಷಿಣೆಯನ್ನು ವಿವಿಧ ರೂಪದಲ್ಲಿ ವರನ ಕಡೆಯವರು ವಧುವಿನ ಕಡೆಯವರಿಗೆ ನೀಡಿ ವಿವಾಹ ಮಾಡಿಕೊಂಡು ಹೋಗುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಇದರ ಪ್ರಮಾಣ ಕಡಿಮೆಯಾಗುತ್ತಿದೆ. ವರದಕ್ಷಿಣೆಯು ೧೦೧, ೧೦೦೧, ೫೦೦೧, ೧೦೦೦೧ ಅಥವಾ ಅದಕ್ಕಿಂತ ಹೆಚ್ಚು ಪ್ರಮಾಣದಲ್ಲಿರುತ್ತದೆ. ವಧುದಕ್ಷಿಣೆಯನ್ನು ನೀಡಿ ವಿವಾಹವನ್ನು ಮಾಡಿಕೊಂಡು ಹೋಗುತ್ತಿರುವ ಪದ್ಧತಿ ಈಗಲೂ ಇರುವುದು ಈ ಅಧ್ಯಯನದಿಂದ ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯದವರಲ್ಲಿ ಶಿಕ್ಷಣ ಪಡೆದವರ ಸಂಖ್ಯೆಯು ಕಡಿಮೆ ಇದ್ದು, ಇತ್ತೀಚಿನ ದಿನಗಳಲ್ಲಿ ಸರಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಶಿಕ್ಷಣಕ್ಕೆ ಉತ್ತೇಜನ ನೀಡುತ್ತಿರುವುದು ಕಂಡುಬರುತ್ತದೆ. ಸ್ತ್ರೀಯರಿಗೆ ಹಾಗೂ ಪುರುಷರಿಗೆ ಸಮಾನವಾದ ಶಿಕ್ಷಣವನ್ನು ನೀಡಲು ಗೌಡಾಲು ಸಮುದಾಯದವರು ಬಯಸುತ್ತಾರೆ. ಈ ಕೆಲವು ದಿನಗಳಲ್ಲಿ ಧನಾತ್ಮಕ ಬದಲಾವಣೆಗಳು ಇವರಲ್ಲಿ ಆಗುತ್ತಿರುವುದು ಕಂಡುಬರುತ್ತದೆ. ಆದರೆ ಸ್ತ್ರೀಯರಿಗೆ ದೂರದ ಪಟ್ಟಣ ಅಥವಾ ನಗರ ಪ್ರದೇಶಗಳಿಗೆ ಕಳುಹಿಸಿ ಶಿಕ್ಷಣ ಕೊಡಿಸಲು ಒಪ್ಪುವುದಿಲ್ಲ. ಇದಕ್ಕೆ ಬಡತನ, ಭೀತಿ, ಆರ್ಥಿಕ ಕಾರಣ, ಸಂಕುಚಿತ ಮನೋಭಾವನೆ ಮುಖ್ಯ ಕಾರಣ ಎಂದು ಕಂಡುಬರುತ್ತದೆ. ಕುಟುಂಬದ ಹಿರಿಯರಲ್ಲಿ ಶಿಕ್ಷಣದ ಪ್ರಮಾಣವು ಕಡಿಮೆ ಇದೆ. ಆದ ಕಾರಣ ಮಕ್ಕಳ ಶಿಕ್ಷಣಕ್ಕೆ ಸಂಪೂರ್ಣ ಪ್ರಾಮುಖ್ಯತೆ ನೀಡುತ್ತಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಬದಲಾವಣೆಗಳು ಆಗುತ್ತಿವೆ. ಇವರು ಕಲಿಯುವ ಶಾಲೆಗಳಲ್ಲಿ ಸರಕಾರದ ಹಲವಾರು ಸವಲತ್ತುಗಳು ದೊರೆಯುತ್ತಿವೆ. ಕೆಲವೊಂದು ಕಡೆಗಳಲ್ಲಿ ಇದು ಸಮರ್ಪಕವಾಗಿ ದೊರೆಯುತ್ತಿಲ್ಲ. ಇತ್ತೀಚಿನ ದಿನಗಳಲ್ಲಿ ಸರಕಾರವು ಹೆಚ್ಚಿನ ಧನಸಹಾಯ ಮಾಡುತ್ತಿದ್ದು, ಶಾಲೆಗಳ ವ್ಯವಸ್ಥೆ, ವಸತಿ ಶಾಲೆಗಳು, ವಿದ್ಯಾರ್ಥಿ ನಿಲಯಗಳು, ಕಲಿಕಾ ಸಾಮಗ್ರಿಗಳು, ವಿದ್ಯಾರ್ಥಿ ವೇತನ, ಉಚಿತ ಬಟ್ಟೆ ಹಾಗೂ ಪುಸ್ತಕಗಳ ಸವಲತ್ತುಗಳನ್ನು ನೀಡುತ್ತಿರುವುದು ಕಾಣಬಹುದಾಗಿದೆ. ಹಾಗೆಯೇ ಹಲವಾರು NGO ಸಂಸ್ಥೆಗಳು ಹಾಗೂ ಕೆಲವು ಮಠಾಧೀಶರು, ಧಾರ್ಮಿಕ ಸಂಸ್ಥೆಗಳು ಮತ್ತು ಮುಖಂಡರು ಬುಡಕಟ್ಟು ಸಮುದಾಯದ ಪ್ರಗತಿಗೆ ಶ್ರಮಿಸುತ್ತಿರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಸೂಚಕರ ಅಭಿಪ್ರಾಯದಂತೆ ಅವರ ಆಚಾರ-ವಿಚಾರ, ನಡೆನುಡಿ, ಉಡುಗೆ-ತೊಡುಗೆ, ಕುಟುಂಬ ಪದ್ಧತಿಯಲ್ಲಿ ಬದಲಾವಣೆಗಳು ಆಗುತ್ತಿವೆ. ಗೌಡಾಲು ಬುಡಕಟ್ಟು ಸಮುದಾಯದ ಸಾಮಾಜಿಕ ಮತ್ತು ಶೈಕ್ಷಣಿಕ ಬದುಕನ್ನು ಕುರಿತ ಅಧ್ಯಯನದಲ್ಲಿ ಪಿತೃವಂಶೀಯ ಮಕ್ಕಳಕಟ್ಟು, ಕುಟುಂಬ ಪದ್ಧತಿ ಮತ್ತು ಮಾತೃವಂಶೀಯ ಕುಟುಂಬ ಪದ್ಧತಿ ಹಾಗೂ ಅವಿಭಕ್ತ ಮತ್ತು ವಿಭಕ್ತ ಕುಟುಂಬ ಪದ್ಧತಿ ಕಂಡುಬರುತ್ತದೆ. ಪುರುಷ ಮತ್ತು ಮಹಿಳೆಯರ ಸ್ಥಾನಮಾನ, ವಿವಾಹದ ವಿಧಿ-ವಿಧಾನಗಳು, ಗುರಿಕಾರ ಪದ್ಧತಿ, ವರದಕ್ಷಿಣೆ, ವಧುದಕ್ಷಿಣೆ, ಶಿಕ್ಷಣ ಮುಂತಾದ ಅನೇಕ ಅಂಶಗಳನ್ನು ಹಾಗೂ ಹಿಂದೆ ಇವು ಯಾವ ರೀತಿಯಲ್ಲಿ ಇದ್ದವು, ಈಗ ಯಾವ ರೀತಿಯಲ್ಲಿ ಇವೆ, ಈ ಸಮುದಾಯದವರ ಜೀವನದ ವಿವಿಧ ಸ್ತರಗಳಲ್ಲಿ ಯಾವ ರೀತಿಯಲ್ಲಿ ಬದಲಾವಣೆಗಳು ಆಗುತ್ತಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ.

### ಆ.ನ್ಯಾಯ ಪದ್ಧತಿ

ಮಾನವ ಸಮಾಜವು ಯಾವಾಗ ವಿಕಾಸ ಹೊಂದುತ್ತಾ ಬಂತೋ ಅಲ್ಲಿಂದಲೇ ಮಾನವನ ಬೆಳವಣಿಗೆಗೆ ಅನುಗುಣವಾಗಿ ಅವನದೇ ಆದ ಬದುಕು ರೂಪುಗೊಂಡಿತು. ಅವ್ಯವಸ್ಥೆಯ ಜೀವನಕ್ಕೆ ತನಗೆ ಅರಿವಿಲ್ಲದೆ ಅನೇಕ ವಿಧಿನಿಷೇಧಗಳನ್ನು ತನ್ನಲ್ಲಿ ಸೃಷ್ಟಿಸಿಕೊಂಡು ಬಾಳುವೆ ಗಡೆಸುವ ಪರಿಪಾಟವನ್ನು ಮಾಡಿಕೊಂಡ ನಂತರ ಬದುಕಿನ ಜೊತೆಯಲ್ಲಿಯೇ ಹೆಣೆದುಕೊಂಡು ಬಂದ ನಂಬಿಕೆಗಳು ಮಾನವನಿಗೆ ನ್ಯಾಯ ತೀರ್ಮಾನಕ್ಕೆ ಆಹ್ವಾನವನ್ನು ನೀಡಿವೆ. ಆದ್ದರಿಂದ ಮಾನವನು ಭೂಮಿಯಲ್ಲಿ ಹುಟ್ಟಿದಾಗಿನಿಂದಲೇ ಒಂದಿಲ್ಲೊಂದು ರೂಪದಲ್ಲಿ ಅವನಿಗೆ ನ್ಯಾಯವನ್ನು ನೀಡಲಾಗುತ್ತಿದೆ. ಯಾವಾಗ ಉಳಿತಾಯ ಎಂಬ ಪರಿಕಲ್ಪನೆಯು ಅಸ್ತಿತ್ವಕ್ಕೆ ಬಂದಿತೋ ಅಲ್ಲಿಂದಲೇ ನ್ಯಾಯದ ವ್ಯವಹಾರಗಳು ಹೆಚ್ಚಾಗತೊಡಗಿದವು. ''ಇತಿಹಾಸದ ಪುಟಗಳನ್ನು ಅವಲೋಕಿಸಿದಾಗ ಪ್ರಪಂಚದ ಎಲ್ಲ ಕಡೆಯೂ ನ್ಯಾಯ ಪದ್ಧತಿಯು ಇರುವುದು ನಿಜ ಸಂಗತಿಯಾಗಿದೆ. ನ್ಯಾಯವನ್ನು ಕೊಡುವ ವಿಧಾನಗಳು ದೇಶದಿಂದ ದೇಶಕ್ಕೆ ರಾಜ್ಯದಿಂದ ರಾಜ್ಯಕ್ಕೆ ಹಾಗೂ ಸಮುದಾಯಗಳಿಂದ ಸಮುದಾಯಕ್ಕೆ ಭಿನ್ನತೆಯಿಂದ ಕೂಡಿರುತ್ತವೆ.''[೨೧] ಇಲ್ಲಿ ಗೌಡಾಲು ಸಮುದಾಯವು ಪಶ್ಚಿಮಘಟ್ಟವನ್ನು ಆಶ್ರಯಿಸಿಕೊಂಡು ಜೀವಿಸುತ್ತಿರುವುದರಿಂದ ಇವರ ಜೀವನ ನಿರ್ವಹಣೆಯ ವಿಧಾನಗಳು ಮತ್ತು ಪರಸ್ಪರ ಸಣ್ಣ ಪುಟ್ಟ ವೈಮನಸ್ಸಿನಿಂದ ವಾದ ಜಗಳಗಳಿಗಾಗಿ ನ್ಯಾಯ ಪದ್ಧತಿಯನ್ನು ರೂಢಿಸಿಕೊಳ್ಳುವ ಕಾನೂನುಬದ್ಧವಾದ ಹಕ್ಕು ತನಗಿದೆಯೆಂದೂ ಇದಕ್ಕೆ ಪರಿಹಾರವನ್ನು ಕಂಡುಕೊಳ್ಳುವುದು ತನಗೆ ಮಾತ್ರ ಬಿಟ್ಟಿದ್ದೆಂದೂ ಭಾವಿಸಿದ್ದನು ಎನ್ನುವುದನ್ನು ಮರೆಯುವಂತಿಲ್ಲ. ಆದ್ದರಿಂದ ಯಾವುದೇ ಸಮುದಾಯದ ಸಾರ್ವತ್ರಿಕ ನ್ಯಾಯ ಮುಖ್ಯವಾದ ಹಿನ್ನೆಲೆಯಿಂದ ಹಂತ ಹಂತವಾಗಿ ಬುಡಕಟ್ಟುಗಳಲ್ಲಿ ನ್ಯಾಯ ಪದ್ಧತಿ ರಚನೆಗೊಂಡು ಬಂದಿದೆ. ಭಾರತದಲ್ಲಿ ವಾಸ ಮಾಡುವ ಪ್ರತಿಯೊಂದು ಸಮುದಾಯಗಳು ನ್ಯಾಯ ಪಂಚಾಯಿತಿಯನ್ನು ಹೊಂದಿದಂತೆ, ಇಲ್ಲಿ ಗೌಡಾಲು ಸಮುದಾಯ ಪ್ರಾಚೀನ ಕಾಲದಿಂದಲೂ ಸಮುದಾಯದ ಏಳಿಗೆಗಾಗಿ ನ್ಯಾಯ ಪದ್ಧತಿಯನ್ನು ಪಾಲಿಸುತ್ತ ಬಂದಿದೆ. ಹಾಗಾಗಿ ನ್ಯಾಯ ಪದ್ಧತಿಯು ಅನೇಕ ಹೆಸರುಗಳಿಂದ ಕರೆಸಿಕೊಂಡಿದೆ. ಅಲ್ಲದೆ ಪ್ರಸ್ತುತದಲ್ಲಿ ಚಾಲ್ತಿಯಲ್ಲಿದೆ. ಕುಲ ಪಂಚಾಯಿತಿ, ಜಾತಿ ಪಂಚಾಯಿತಿ, ನ್ಯಾಯ ಪಂಚಾಯಿತಿಗಳು ಸಮುದಾಯದಲ್ಲಿ ಶಾಂತಿ ಹಾಗೂ ಸುವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗುತ್ತಿವೆ. ಗೌಡಾಲುಗಳಲ್ಲಿ ನ್ಯಾಯಪಂಚಾಯಿತಿಯ ಸದಸ್ಯರನ್ನು ಅನುಭವದ ಆಧಾರದ ಮೇಲೆ ಮತ್ತು ಪಕ್ಷಪಾತ ಮಾಡದ ಸಮುದಾಯದ ವ್ಯಕ್ತಿಯನ್ನು ಇಡೀ ಕುಲದವರು ಸೇರಿ ಆಯ್ಕೆ ಮಾಡುತ್ತಾರೆ. ಇಲ್ಲಿ ತಮ್ಮ ಸಮುದಾಯದ ಸಂಘಟನೆ ವಿಘಟನೆಯಾಗದಂತೆ ನೋಡಿಕೊಳ್ಳುವುದು, ತಮ್ಮಲ್ಲಿನ ಒಳ ಜಗಳಗಳನ್ನು ತಾವೇ ಬಗೆಹರಿಸಿಕೊಳ್ಳುವುದು, ನಿರಪರಾಧಿಗಳಿಗೆ ಸರಿಯಾದ ನ್ಯಾಯ ಒದಗಿಸುವುದು ಹೀಗೆ ಸಮಾಜದಲ್ಲಿನ ಒಳಿತು ಕೆಡುಕುಗಳನ್ನು ಪರಿಶೀಲಿಸಿ ಸಮಯೋಚಿತ ನಿರ್ಣಯವನ್ನು ಕೈಗೊಂಡು ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವುದರ ಮೂಲಕ ಸಮುದಾಯದಲ್ಲಿ ಐಕ್ಯತೆಯನ್ನು ಕಾಪಾಡಿಕೊಂಡು ಬರುವುದೇ ಈ ಪಂಚಾಯಿತಿಯ ಸದಸ್ಯರ ಮುಖ್ಯ ಉದ್ದೇಶವಾಗಿರುತ್ತದೆ. ಅಲ್ಲದೆ ಹಾಡಿಯ ಮುಖಂಡರು ಯಾವ ನಿರ್ಣಯಗಳನ್ನು ಉಲ್ಲಂಘಿಸುವಂತಿಲ್ಲ. ಸಮುದಾಯದ ನೀತಿ ನಿಯಮಗಳನ್ನು

ಕಟ್ಟುಕಟ್ಟಳೆಗಳನ್ನು ಉಲ್ಲಂಘನೆ ಮಾಡಿದ್ದೇ ಆದರೆ ಅಂಥ ವ್ಯಕ್ತಿಗಳನ್ನು, ಕುಟುಂಬವನ್ನು ಜಾತಿಯಿಂದ ಬಹಿಷ್ಕರಿಸುವ ಸಂಪೂರ್ಣ ಹಕ್ಕು ಮುಖಂಡರಿಗೆ ಇರುತ್ತದೆ. ಸಮುದಾಯದಲ್ಲಿ ಇವರಿಗೆ ವಿಶೇಷವಾದ ಸ್ಥಾನವಿರುತ್ತದೆ. ಸತ್ಯದ ಮಾರ್ಗ ಇವರದ್ದಾಗಿರುತ್ತದೆ. ಆದ್ದರಿಂದ ಗೌಡಾಲುಗಳು ತಮ್ಮದೇ ಆದ ನೀತಿ ನಿಯಮಗಳ ಚೌಕಟ್ಟಿನೊಳಗೆ ನ್ಯಾಯ ಪದ್ಧತಿಯನ್ನು ರೂಪಿಸಿಕೊಂಡಿರುತ್ತಾರೆ. ಇವರಲ್ಲಿ ಎಂತಹ ಅಪರಾಧಗಳಿದ್ದರೂ ತಮ್ಮಲ್ಲಿಯೇ ಬಗೆಹರಿಸಿಕೊಳ್ಳುತ್ತಾರೆ.

ಗೌಡಾಲುಗಳಲ್ಲಿ ಕುಲ ಪಂಚಾಯಿತಿಯನ್ನು ಮೀರಿ ಹೊರಗಿನ ಕೋರ್ಟಿಗೆ ಹೋದ ಉದಾಹರಣೆಗಳು ಇಲ್ಲ ಬದಲಿಗೆ ಸಮುದಾಯದ ಪಂಚಾಯಿತಿ ನೀತಿ ನಿಯಮ ತೀರ್ಮಾನಗಳಿಗೆ ಬದ್ಧರಾಗಿ ಪರಸ್ಪರ ಸಹಕಾರ ಮನೋಭಾವದಿಂದ ಇಂದಿಗೂ ಸಹ ಉಳಿಸಿ ಬೆಳೆಸಿಕೊಂಡು ಬಂದಿರುವುದು ಕಂಡುಬರುತ್ತದೆ. ಗೌಡಾಲುಗಳಲ್ಲಿ ನಡೆಯುವ ನ್ಯಾಯ ನಿರ್ಣಯ ಸಮುದಾಯದ ಗೌರವವನ್ನು, ಐಕ್ಯತೆಯನ್ನು ಕಾಪಾಡುವಲ್ಲಿ ಮುಖ್ಯ ಪಾತ್ರ ವಹಿಸಿದೆ. ಏಕೆಂದರೆ ಇವರಲ್ಲಿನ ನ್ಯಾಯಪಂಚಾಯಿತಿ ಸಮಾಜಮುಖಿಯಾಗಿ ಸತ್ಯದ ಪರವಾಗಿ ಕೆಲಸ ಮಾಡುತ್ತದೆ. ಸಮುದಾಯದಲ್ಲಿ ಯಾರೇ ಆಗಲಿ ಮಾಡಿದ ತಪ್ಪುಗಳನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಿ, ಸೌಹಾರ್ದಯುತವಾಗಿ ಬಗೆಹರಿಸಲು ಪ್ರಯತ್ನಿಸುತ್ತಾರೆ. ತಪ್ಪಿಗೆ ಶಿಕ್ಷೆ ಕೊಡುವುದು ಮುಖ್ಯವಾಗಿರುವುದಿಲ್ಲ. ಇನ್ನು ಮುಂದಾದರೂ ತಪ್ಪುಗಳನ್ನು ಮಾಡದಿರಲಿ ಎಂಬ ಅಭಿಲಾಷೆಯಿಂದ ತೀರ್ಪುಗಳನ್ನು ನೀಡುವುದು ಗೌಡಾಲುಗಳಲ್ಲಿ ಕಂಡುಬರುತ್ತದೆ.

ಗೌಡಾಲು ಸಮುದಾಯದಲ್ಲಿ ಯಾವುದೇ ಹಬ್ಬ ಆಚರಣೆ ಮತ್ತು ಹಾಡಿಯ ನ್ಯಾಯದ ವಿಷಯಕ್ಕಾಗಿ ಮುಂಡಾನಿ ಕೂಡಿಗೆ, ಜಿರ್ಕ್ರೂಡಿಗೆ, ದಾನಕೂಡಿಗೆಯೆಂದು ಮೂರು ಕೂಡಿಗೆಯ ಮುಖಂಡರು ನ್ಯಾಯ ತೀರ್ಮಾನದ ರೂವಾರಿಗಳಾಗಿರುತ್ತಾರೆ. ಇಲ್ಲಿ ಯಾವುದೇ ಜಗಳಗಳು ಸಂಭವಿಸಿದರೆ ಅಥವಾ ಪರಸ್ಪರರಲ್ಲಿ ವೈಮನಸ್ಸು ಉಂಟಾದರೆ ಇಲ್ಲವೇ ಹಾಡಿಯಲ್ಲಿ ಯಾವುದಾದರೂ ಅಪರಾಧ ಸಂಭವಿಸಿದರೆ, ಸಮುದಾಯ ದವರೆಲ್ಲರೂ ಸೇರಿ ಈ ಮೂರು ಕೊಡುಗೆಯವರಿಗೆ ದೂರು ಕೊಡುವುದು ಮತ್ತು ಎಲ್ಲರ ಮುಖಾಂತರ ಬಗೆಹರಿಸಿ ಕೊಳ್ಳುವ ನ್ಯಾಯಪದ್ಧತಿ ಇವರಲ್ಲಿದೆ.

ಕುದುರೆಮುಖದ ಬಾಳಿಗೆರೆ ಗ್ರಾಮದ ಶ್ರೀಧರ್ ಅವರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ''ಗೌಡಾಲುಗಳಲ್ಲಿ ನ್ಯಾಯ ಪದ್ಧತಿಗೆ ಸಂಬಂಧಿಸಿದಂತೆ ಒಟ್ಟು ೧೬ ಕೂಡಿಗೆಯವರು ಇದ್ದಾರೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ೬ ಕೂಡಿಗೆಯವರು ಚಾಲ್ತಿಯಲ್ಲಿದ್ದಾರೆ'' ಎನ್ನುತ್ತಾರೆ. ಇದರಲ್ಲಿ ಮುಂಡಾನಿ ಕೂಡಿಗೆ, ಜಿರ್ಕ್ರೂಡಿಗೆ, ದಾನ ಕೂಡಿಗೆ, ತೊಡ್ಲು ಕೂಡಿಗೆ, ಹೊರನಾಡು ಕೂಡಿಗೆ, ಆರು ಕೂಡಿಗೆ ಎಂದು ವಿಭಾಗ ಮಾಡಿಕೊಂಡು ಸಮುದಾಯದ ಐಕ್ಯತೆ ಮತ್ತು ಸಾಮರಸ್ಯವನ್ನು ಕಾಪಾಡಿಕೊಂಡು ಬಂದಿರುವುದು ಇಲ್ಲಿ ಮುಖ್ಯವಾಗಿದೆ.''[೧೨] ಇದುವರೆಗೂ ಗೌಡಾಲುಗಳು ಜಗಳವಾಡಿಕೊಂಡು ಕೋರ್ಟು ಕಛೇರಿಗಳಿಗೆ ಹೋದ ಉದಾಹರಣೆಗಳು ಸಿಗುವುದಿಲ್ಲ. ಆದರೆ ಸಮುದಾಯದ ಒಳಿತಿಗೆ ಧಕ್ಕೆ ತರುವಂತಹ ಕಾರ್ಯಗಳನ್ನು ಇತರೆ ಜಾತಿಯವರಾಗಲಿ ಅಥವಾ ಬೇರೆಯವರು ಅನ್ಯಥಾ ತೊಂದರೆ ಕೊಟ್ಟರೆ ನ್ಯಾಯಕ್ಕಾಗಿ ಪೊಲೀಸ್ ಕಛೇರಿಗಳಿಗೆ ಹೋಗಿದ್ದಾರೆ.

ಇಲ್ಲಿ ಗೌಡಾಲು ಸಮುದಾಯ ಯಾವುದೇ ಮದುವೆ, ಹಬ್ಬ ಆಚರಣೆ ಪೂಜೆಗಳನ್ನು ಎಲ್ಲರೂ ಸೇರಿ ಮಾಡುವಾಗ ಕೂಡಿಗೆಯ ಯಜಮಾನರು ಇರಲೇಬೇಕು. ಅಲ್ಲದೆ, ಯಾವುದೇ ಅಪರಾಧಗಳು ಸಮುದಾಯದಲ್ಲಿ ಸಂಭವಿಸಿದರೆ ೫ ಕೂಡಿಗೆಯವರು ಸೇರಿ ತೀರ್ಪನ್ನು ನೀಡುತ್ತಿದ್ದರು. ಒಂದು ಪಕ್ಷ ತೀರ್ಪು ನ್ಯಾಯಯುತವಾಗಿ ಇರದಿದ್ದರೆ ಅಥವಾ ತೀರ್ಪು ಕೊಡುವಾಗ ಗೊಂದಲಗಳು ಪ್ರಾರಂಭವಾದರೆ ಆರು ಕೂಡಿಗೆಯ ಯಜಮಾನರ ಸಹಾಯವನ್ನು ಪಡೆದು ನ್ಯಾಯವನ್ನು ಎಲ್ಲರಿಗೂ ಒಪ್ಪಿಗೆಯಾಗುವಂತೆ ನೀಡುತ್ತಾರೆ. ಈ ರೀತಿಯಾಗಿ ಅವರದೇ ಆದ ನ್ಯಾಯ ತೀರ್ಮಾನಗಳನ್ನು ಮಾಡಿಕೊಂಡು ಸ್ವಚ್ಛಂದವಾಗಿ ಬದುಕುವ ಈ ಸಮುದಾಯಕ್ಕೆ ಆಧುನಿಕ ಕಾನೂನುಗಳು ನುಂಗಲಾರದ ತುತ್ತುಗಳಾಗಿವೆ. ಹೀಗಾಗಿ ಬುಡಕಟ್ಟು ಸಮುದಾಯಗಳಿಗೆ ಇವರದೇ ಆದ ನ್ಯಾಯಶಾಸ್ತ್ರವನ್ನು ತರಬೇಕಾಗಿದೆ. ಆದರೆ ಇತ್ತೀಚಿನ ಸರ್ಕಾರಗಳು ಒಟ್ಟು ಸಮಾಜವನ್ನು ಇಟ್ಟುಕೊಂಡು ಕಾನೂನುಗಳನ್ನು ತರುತ್ತಿರುವುದು ಎಷ್ಟರಮಟ್ಟಿಗೆ ಸರಿಯೆಂದು ಇಂದಿನ ದಿನಮಾನಗಳಲ್ಲಿ ಆಲೋಚಿಸಲೇ ಬೇಕು.

ಗೌಡಾಲುಗಳಲ್ಲಿ ಕೂಡಿಗೆಯ ಪದ್ಧತಿಯಲ್ಲಿ ನ್ಯಾಯಮಂಡಳಿ ಇರುವುದರಿಂದ ಕೊಪ್ಪ, ಮೂಡಿಗೆರೆ, ಶೃಂಗೇರಿ, ತಾಲೂಕಿನಲ್ಲಿ ಗಟ್ಟಿತನ ಬಂದಿದೆ. ಅದರಲ್ಲೂ ಇವರಲ್ಲಿ ಸಂಘಟನೆಯ ಮನೋಭಾವ ಬಲಿಷ್ಠತೆಯಿಂದ ಕೂಡಿದೆ. ಇಲ್ಲಿ ಇವರದೇ ಆದ ನ್ಯಾಯವು ಇರುವುದರಿಂದ ಇಡೀ ಬುಡಕಟ್ಟಿನ ಜೀವನ ಬೆಲೆಯುಳ್ಳದ್ದಾಗಿದೆ.

ಇವರಲ್ಲಿ ಕಾನೂನುಗಳು ಜನರಿಂದ ಯೋಜಿಸಲ್ಪಟ್ಟು ನ್ಯಾಯಮಂಡಳಿಯಿಂದ ಅನುಮೋದನೆ ಪಡೆದು ಮುಖಂಡರಿಂದ ರೂಪಗೊಳ್ಳುತ್ತವೆ. ಇಲ್ಲಿ ತೆಗೆದುಕೊಳ್ಳುವ ನಿರ್ಣಯಗಳು ಯಾರಿಗೂ ಮನಸ್ತಾಪವಾಗದಂತೆ ಸರ್ವರ ಹಿತದೃಷ್ಟಿಯಿಂದ ಕೂಡಿರುತ್ತವೆ. ಅಲ್ಲದೆ ಈ ರೀತಿಯ ನ್ಯಾಯ ಪದ್ಧತಿ ಇರುವುದರಿಂದ ಜನರು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ನಿಕಟವಾದ ಸಂಪರ್ಕ ಹೊಂದಿದ್ದಾರೆ.

ಗೌಡಾಲುಗಳಲ್ಲಿ ನ್ಯಾಯ ತೀರ್ಮಾನಗಳು ಸಮುದಾಯದ ವಿನಾಶಕ್ಕಿಂತ ಸಾಧ್ಯವಾದಷ್ಟು ಕಾಪಾಡುವ ಬಹುಪಾಲು ಜನರ ಒಪ್ಪಿಗೆಯಂತೆ ಇರುತ್ತವೆ. ಆದ್ದರಿಂದ ಇಲ್ಲಿ ಮನವರಿಕೆಯಾಗುವುದು ಏನೆಂದರೆ ಬುಡಕಟ್ಟಿನ ಜನರು ಒಳ್ಳೆಯ ಜ್ಞಾನ, ನ್ಯಾಯಪ್ರಜ್ಞೆ ಹಾಗೂ ಮೂಲಭೂತ ಮಾನವೀಯತೆ ಇರುವವರೆಂಬುದಕ್ಕೆ ಇವರು ನೀಡುವ ನ್ಯಾಯ ತೀರ್ಮಾನಗಳೇ ಸಾಕ್ಷಿಯಾಗಿ ನಿಲ್ಲುವುದಲ್ಲದೆ ಆಧುನಿಕ ನ್ಯಾಯ ತೀರ್ಮಾನಗಳಿಗೆ ನಾಚಿಸುವಂತೆ ಗೋಚರಿಸುತ್ತವೆ. ಇವರಲ್ಲಿ ನ್ಯಾಯ ತೀರ್ಮಾನಗಳು ಸರಳವಾಗಿವೆ. ಮೋಸವೇ ಗೊತ್ತಿರದ ಹಾಗೂ ವಿದ್ಯಾಭ್ಯಾಸದ ಜ್ಞಾನವಿಲ್ಲದಿರುವ ಜನಪದರನ್ನು ಕಾನೂನು ಪದ್ಧತಿಗಳಿಂದ ರಕ್ಷಿಸಿ, ಸಮುದಾಯಕ್ಕೆ ನೆಮ್ಮದಿಯಿಂದ ಜೀವಿಸಲು ಅನುವು ಮಾಡಿಕೊಡುವುದರಿಂದ ಬುಡಕಟ್ಟಿನ ಜನರಿಗೆ ಆಧುನಿಕ ನ್ಯಾಯಾಲಯಗಳು ಬೇರೆಯವು ಅಥವಾ ಹೊರಗಿನವು ಅನ್ನಿಸುತ್ತದೆ. ಏಕೆಂದರೆ ಸಮುದಾಯದಲ್ಲಿ ಉಂಟಾದ ಜಗಳವನ್ನು ಪರಿಹರಿಸಿಕೊಳ್ಳುವುದಕ್ಕೆ ಕೋರ್ಟ್, ಕಛೇರಿಗಳಿಗೆ ಹೋಗದೆ ತಮ್ಮ ಕುಲಪಂಚಾಯತಿಯನ್ನೇ ಆಶ್ರಯಿಸಿದ್ದಾರೆ. ಒಂದು ಪಕ್ಷ ತಕರಾರುಗಳನ್ನು ಬಗೆಹರಿಸಿಕೊಳ್ಳಲು ಕುಲಪಂಚಾಯಿತಿ ನಿಯಮಗಳನ್ನು ಮೀರಿ ಕೋರ್ಟ್‌ಗೆ ಹೋದದ್ದೇ ಆದರೆ ಅಂತವರನ್ನು ಜಾತಿಯಿಂದ ಬಹಿಷ್ಕರಿಸುವ ಪರಿಪಾಟವಿದೆ.

ಈ ಹಿನ್ನೆಲೆಯಿಂದ ತಮ್ಮಲ್ಲಿನ ನ್ಯಾಯ ಪಂಚಾಯಿತಿಯ ವಿರುದ್ಧ ಯಾರೂ ನಡೆದುಕೊಳ್ಳದೆ ಕೋರ್ಟಿನ ತೀರ್ಪಿಗಿಂತ ಕೂಡಿಗೆಯವರು ನೀಡುವ ತೀರ್ಪಿನಲ್ಲಿ ಹೆಚ್ಚು ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ. ಇಲ್ಲಿ ನ್ಯಾಯ ತೀರ್ಮಾನ ಮಾಡುವ ಕೂಡಿಗೆಯವರು ತಮ್ಮವರೇ ಆಗಿರುವುದರಿಂದ ವಾದಿ-ಪ್ರತಿವಾದಿಗಳ ಚಲನ-ವಲನಗಳನ್ನು ಚೆನ್ನಾಗಿ ಅರಿತವರಾಗಿರುತ್ತಾರೆ. ಕೂಡಿಗೆಯವರು ಸಮುದಾಯದಲ್ಲಿ ಒಂದು ಭಾಗವೇ ಆಗಿರುವುದರಿಂದ ಸಮುದಾಯದ ಒಳಗಡೆ ನಡೆಯುವ ತಂಟೆ ತಕರಾರುಗಳನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಿ ತೀರ್ಪುಗಳನ್ನು ನೀಡುತ್ತಾರೆ. ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಬುಡಕಟ್ಟು ಲಕ್ಷಣಗಳನ್ನು ಉಳಿಸಿಕೊಂಡಿರುವ ಗೌಡಾಲು ಸಮುದಾಯವು ಅಲಿಖಿತ ನ್ಯಾಯ ಪದ್ಧತಿಯನ್ನು ಹಾಗೂ ನ್ಯಾಯ ಪದ್ಧತಿಯ ಮೌಲ್ಯಗಳನ್ನು ಉಳಿಸಿಕೊಂಡು ಬಂದಿದೆ. ಮದುವೆ, ಹಬ್ಬ, ಆಚರಣೆಗಳು, ಸಮುದಾಯದ ಅಭಿವೃದ್ಧಿ, ನ್ಯಾಯ-ಅನ್ಯಾಯ ಕೊಡು ಕೊಳ್ಳುವಿಕೆ ಸಂದರ್ಭಗಳಲ್ಲಿ ಮಾತಿಗೆ ಹೆಚ್ಚಿನ ಬೆಲೆಯುಂಟು. ಒಂದು ಸರಿಮಾತು ಕೊಟ್ಟರೆ ಅದಕ್ಕೆ ಸರಿಯಾಗಿ ನಡೆದುಕೊಳ್ಳುತ್ತಾರೆ. ಇಲ್ಲಿಯ ನ್ಯಾಯ ಪದ್ಧತಿಯನ್ನು ಗಮನಿಸಿದರೆ ಭಾರತದಲ್ಲಿ ಬುಡಕಟ್ಟುಗಳೆನಿಸಿಕೊಂಡ ಎಷ್ಟೋ ಅನಕ್ಷರಸ್ಥ ಸಮುದಾಯಗಳಲ್ಲಿ ಇಂದೂ ಸಹ ಮಾತಿಗೆ ಹೆಚ್ಚಿನ ಮನ್ನಣೆಯಿದೆ. ಇಲ್ಲಿ ಮಾತಿಗೆ ತಪ್ಪಿದವರಿಗೆ ಕೊಡುವ ಶಿಕ್ಷೆಗಳು ಕಠಿಣವಾಗಿರುವುದರಿಂದ ಮಾತಿಗೆ ತಪ್ಪುವ ಸನ್ನಿವೇಶಗಳು ತುಂಬ ವಿರಳವಾಗಿದೆ.

ಗೌಡಾಲುಗಳಲ್ಲಿ ಸಾಮಾಜಿಕ ಸಂಘಟನೆ ಬಿಗಿಯಾಗಿದ್ದು ಅದನ್ನು ಉಳಿಸಿ ಬೆಳಸಿಕೊಂಡು ಹೋಗಲು ಒಟ್ಟು ಸಮುದಾಯ ಶ್ರಮಿಸುತ್ತದೆ. ಇದಕ್ಕೆ ಉದಾಹರಣೆಯಾಗಿ ಪೊಲೀಸ್ ಅಧಿಕಾರಿಗಳು ಇವರ ಹಾಡಿಯ ಯುವನೇತಾರನಾದ ಪರಮೇಶ್ ಅವರನ್ನು ಗುಂಡಿನಿಂದ ಕೊಲೆ ಮಾಡಿದಾಗ ಇಡೀ ಚಿಕ್ಕಮಗಳೂರಿನ ಗೌಡಾಲುಗಳು ಸಂಘಟನೆಗೊಂಡು ಪ್ರತಿಭಟಿಸಿರುವುದೇ ಸಾಕ್ಷಿಯಾಗಿ ನಿಲ್ಲುತ್ತದೆ. ಆದ್ದರಿಂದ ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ ಮತ್ತು ವ್ಯಕ್ತಿಗಳ ಅಧ್ಯಯನದಿಂದ ಇವರ ನ್ಯಾಯ ಪದ್ಧತಿ ಇಲ್ಲಿ ಸಂರಚನೆಗೊಂಡಿದೆ.

ಗೌಡಾಲು ಸಮುದಾಯದಲ್ಲಿ ಊರಿನ ಮುಖಂಡನನ್ನು ಊರ ಗೌಡನೆಂದು, ಎರಡು ಊರಿನ ಗೌಡನನ್ನು ಎರಡು ಕೂಡಿಗೆ ಗೌಡನೆಂದು, ಮೂರು ಊರಿನ ಗೌಡನನ್ನು ಮೂರು ಕೂಡಿಗೆ ಗೌಡನೆಂದು ಇದೇ ರೀತಿಯಾಗಿ ಆರು ಕೂಡಿಗೆ ಗೌಡನನ್ನು ನಾಡಗೌಡನೆಂದು ಕರೆಯುತ್ತಾರೆ. ನಾಡಿನ ವಿಚಾರವಾಗಲಿ ಅಥವಾ ಊರಿನ ವಿಚಾರವಾಗಲೀ ಇಲ್ಲವೇ ಯಾವುದೇ ಸಮಸ್ಯೆಯಿದ್ದರೆ ಊರಿನಗೌಡ ನಾಡಗೌಡನಿಗೆ ತಿಳಿಸುತ್ತಾನೆ. ಆರು ಊರಿನ ಗೌಡರೆಲ್ಲರು ಈ ಪಂಚಾಯಿತಿಯಲ್ಲಿ ಸೇರಿ ವಿಚಾರವನ್ನು ತಿಳಿದಾಗ ಒಂದು ಕೂಡಿಗೆ ಗೌಡ, ಎರಡು ಕೂಡಿಗೆ ಗೌಡ, ಮೂರು ಕೂಡಿಗೆ ಗೌಡ ಸೇರಿ ವಿಷಯವನ್ನು ಆಳವಾಗಿ ಚರ್ಚಿಸಿ ನಂತರ ಅಂತಿಮವಾಗಿ ನಾಡಗೌಡ ತೀರ್ಪನ್ನು ಕೊಡುತ್ತಾನೆ. ಈ ರೀತಿಯಾಗಿ ಕೊಟ್ಟ ತೀರ್ಪನ್ನು ಎರಡು ಗುಂಪುಗಳು ಒಪ್ಪಿಕೊಂಡು ಎಲ್ಲರಿಗೂ ಸಮ್ಮತವಾಗುತ್ತದೆ.

ಗೌಡಾಲುಗಳಲ್ಲಿ ನಡೆಯುವ ನ್ಯಾಯ ಪದ್ಧತಿ ತುಂಬ ವಿಶಿಷ್ಟವಾಗಿದೆ. ಇಲ್ಲಿ ಒಂದು ಪಂಚಾಯಿತಿ ಸೇರಿತೆಂದರೆ ಯಾವುದೇ ಸಮಸ್ಯೆಗಳನ್ನು ಬಗೆಹರಿಸಬೇಕು ಹಾಗೂ ಕುಲ ಮತ್ತು ಬುಡಕಟ್ಟಿನಲ್ಲಿ ಸಮಸ್ಯೆಗಳು ಬಾರದಂತೆ ನೋಡಿಕೊಳ್ಳಬೇಕು. ಒಂದು ಪಕ್ಷ ಕುಲಕ್ಕೆ ಅಪಮಾನವಾದಾಗ ಪಂಚಾಯಿತಿಯಲ್ಲಿ ಅಂತವರನ್ನು ತೆಗೆಯಬೇಕು.

ಇಲ್ಲಿ ಮದುವೆಯ ಕಾರ್ಯಗಳನ್ನು ಪಂಚಾಯಿತಿಯವರೇ ನಿಂತು ಮಾಡಬೇಕು ಎಂಬ ನಿಯಮಗಳನ್ನು ಮಾಡಿಕೊಂಡಿದ್ದಾರೆ.

ಗೌಡಾಲುಗಳಲ್ಲಿ ನ್ಯಾಯ ತೀರ್ಮಾನ ಅಥವಾ ತೀರ್ಪುಗಳು ಸಮುದಾಯದ ಒಳಿತಿಗಾಗಿ ರೂಪಗೊಂಡಂತೆ ಇರುತ್ತವೆ. ಆದರೆ ಈ ಬಾಡಕಟ್ಟಿನಲ್ಲಿ ಜಗಳ ಹೊಡೆದಾಟ ತುಂಬ ವಿರಳ. ಒಂದು ವೇಳೆ ಆದರೂ ಹೆಚ್ಚಾಗಿ ಮದುವೆಗೆ ಸಂಬಂಧಿಸಿದ್ದವು ಆಗಿರುತ್ತವೆ. ಅಂದರೆ ಹುಡುಗ, ಹುಡುಗಿಯ ಸಮಸ್ಯೆಗಳು, ಕೌಟುಂಬಿಕ ಸಮಸ್ಯೆಗಳು ಮಾತ್ರ ಪಂಚಾಯ್ತಿ ಮುಂದುಗಡೆ ಬರುತ್ತವೆ. ಊರಗೌಡ ಇವುಗಳನ್ನು ಬಗೆಹರಿಸುತ್ತಾನೆ. ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ಯಾರಿಗೂ ಯಾವ ಕಾರಣಕ್ಕೂ ನೋವಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ಊರುಗೌಡನ ಪಂಚಾಯಿತಿ ನ್ಯಾಯ ತೀರ್ಪಿನ ಮೇಲೆ ನಿಂತಿರುತ್ತದೆ. ಹುಡುಗ ಹುಡುಗಿಯನ್ನು ಪ್ರೀತಿಸಿ ಆಕಸ್ಮಿಕವಾಗಿ ಮೋಸ ಮಾಡುವ ಸಂದರ್ಭದಲ್ಲಿದ್ದರೆ ಹುಡುಗ ಮತ್ತು ಹುಡುಗಿ ಮನೆಯವರನ್ನು ಕುಲದಿಂದ ಹೊರಗೆ ಹಾಕುವ ಬೆದರಿಕೆಯನ್ನು ಒಡ್ಡಿ ಮದುವೆಯನ್ನು ಮಾಡಿಸುತ್ತಾರೆ.

ಅಣ್ಣಾ ತಮ್ಮಂದಿರು ಜಗಳವಾಡಿದರೆ ಅವರಿಬ್ಬರಿಗೆ ರಾಜಿ ಮಾಡುವ ಕೆಲಸವನ್ನು ಕೂಡ ಇಲ್ಲಿಯೇ ಮಾಡುತ್ತಾರೆ. ಇವರು ಮಾಡಿದ ತಪ್ಪಿಗೆ ಶಿಕ್ಷೆ ಯಾವುದೆಂದರೆ ಪಂಚಾಯಿತಿಗೆ ಒಂದು ಹಂದಿಯ ಊಟವನ್ನು ಹಾಕಬೇಕು. ಈ ರೀತಿಯಾಗಿ ನ್ಯಾಯ ನಿರ್ಣಯಗಳು ಇವರಲ್ಲಿ ಕಂಡುಬರುತ್ತವೆ.

### ೩.ಉತ್ತರಾಧಿಕಾರಿ

ಭಾರತೀಯ ಸಮಾಜವನ್ನು ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಅವಲೋಕಿಸುತ್ತಾ ಹೊರಟರೆ ಒಂದು ಕಾಲದಲ್ಲಿ ಗುಂಪು ಗುಂಪಾಗಿ ಕಾಡಿನ ಮರದ ತೋಪುಗಳಲ್ಲಿ ಬದುಕನ್ನು ರೂಪಿಸಿಕೊಂಡಿದ್ದ ಮಾನವರು ಕಂಡುಬರುತ್ತಾರೆ. ಈ ಗುಂಪಿನಲ್ಲಿ ಒಬ್ಬರು ಹಿರಿಯರು ಹಾಗೂ ನಾಯಕತ್ವದ ಗುಣವನ್ನು ಹೊಂದಿದವರನ್ನು ಮುಖಂಡನೆಂದು ಭಾವಿಸಿಕೊಂಡು ಜೀವನವನ್ನು ನಡೆಸಿಕೊಂಡು ಬರುವ ಸಂಪ್ರದಾಯ ಪ್ರಾಚೀನ ಕಾಲದಿಂದಲೂ ಇರುವುದು ತಿಳಿಯುತ್ತದೆ. ಮೂಲ ಬುಡಕಟ್ಟು ಸಮುದಾಯವಾಗಿರುವ ಗೌಡಾಲು ಸಮುದಾಯ ಮತ್ತು ಇತರೆ ಸಮುದಾಯಗಳು ಕೂಡ ತಮ್ಮ ಪ್ರತಿಯೊಂದು ಸಮುದಾಯಕ್ಕೆ ನಾಯಕನನ್ನು ನೇಮಿಸಿಕೊಂಡು ಜೀವಿಸುತ್ತಿರುವುದು ಆಧುನಿಕ ಸಮಾಜದಲ್ಲಿ ಗಮನಾರ್ಹವಾಗಿದೆ. ಗೌಡಾಲು ಸಮುದಾಯದಲ್ಲಿ ಊರಿನಗೌಡ, ನಾಡಗೌಡರು ಸಮುದಾಯದ ಗೌಡರಾಗಿರುತ್ತಾರೆ. ಈ ರೀತಿಯ ಗೌಡಿಕೆಯು ವಂಶಪರಂಪರೆಯಾಗಿ ಮುಂದುವರಿದುಕೊಂಡು ಇವರಲ್ಲಿ ಉತ್ತರಾಧಿಕಾರಿಯು ಮುಂದುವರಿಯುತ್ತಾರೆ. ಅಲ್ಲದೆ ಸಮುದಾಯದ ಯಾವುದೇ ಕೆಲಸಗಳು ಅಂದರೆ ಮದುವೆ, ಹಬ್ಬ, ನ್ಯಾಯ ತೀರ್ಮಾನ, ಬೇಟೆ, ಕೃಷಿ ಮುಂತಾದ ಸಂದರ್ಭದಲ್ಲಿ ಊರಿನಗೌಡ ನಾಡಗೌಡರು ಮುಖ್ಯ ಪಾತ್ರವನ್ನು ವಹಿಸುತ್ತಾರೆ.

ಗೌಡಾಲು ಸಮುದಾಯದಲ್ಲಿ ಕುಟುಂಬದ ಪಾತ್ರ ಬಹುಮುಖ್ಯವಾಗಿದೆ. ಒಂದು ಕಾಲದಲ್ಲಿ ಕಾಡಿನಲ್ಲಿ ಸಿಗುವ ಕಾಡು ಉತ್ಪನ್ನಗಳಿಂದ ತಮ್ಮ ಮೂಲ ಕಸುಬನ್ನು ಮಾಡಿಕೊಂಡು ಬದುಕು ಸಾಗಿಸುವ ಸಮುದಾಯ ಇಂದು ವಿವಿಧ ದಿಕ್ಕುಗಳಲ್ಲಿ ಕವಲೊಡೆದು ಜೀವಿಸುತ್ತಿದೆ. ಇಲ್ಲಿ ಕುಟುಂಬದ ಯಜಮಾನನ ಪಾತ್ರ ಮತ್ತು

ಯಜಮಾನಿಯ ಪಾತ್ರಗಳು ಇಡೀ ಕುಟುಂಬದ ಶ್ರೇಯಸ್ಸಿಗಾಗಿ ಇರುತ್ತದೆ. ಗೌಡಾಲುಗಳಲ್ಲಿ ಕುಟುಂಬದ ಉತ್ತರಾಧಿಕಾರಿ ಪುರುಷನೇ ಆಗಿರುತ್ತಾನೆ. ಇದು ಕಳಸ ಮತ್ತು ಮೂಡಿಗೆರೆಯಲ್ಲಿ ನೆಲೆಯನ್ನು ಕಂಡುಕೊಂಡಿರುವ ಗೌಡಾಲುಗಳಲ್ಲಿ ಇದೆ. ಉಳಿದಂತೆ ಕೊಪ್ಪ, ಶೃಂಗೇರಿಯ ದಿಕ್ಕಿನಲ್ಲಿ ವಾಸ ಮಾಡುವ ಇವರಲ್ಲಿ ಅಳಿಯಕಟ್ಟು ಪದ್ಧತಿ ಮುಂದುವರಿದುಕೊಂಡು ಬಂದಿದೆ. ಆದರೆ ಇಲ್ಲಿಯೂ ಪುರುಷನೇ ಕುಟುಂಬದ ಉತ್ತರಾಧಿಕಾರಿಯಾಗಿರುತ್ತಾನೆ.

ಇವರ ಕುಟುಂಬದಲ್ಲಿ ನಡೆಯುವ ಹಬ್ಬ, ಜನನ, ಋತುಮತಿ, ಮದುವೆ, ಸಾವು ಹಾಗೂ ಕೃಷಿಗೆ ಸಂಬಂಧಿಸಿದ ಭಿತ್ತನೆಗಳು, ಹೆಣ್ಣು ಕೊಡುವ ಕಾರ್ಯ ಅಥವಾ ಗಂಡು ಹುಡುಕುವ ಕಾರ್ಯಗಳಲ್ಲಿ ಪುರುಷನ ನಿರ್ಧಾರದ ಜೊತೆಗೆ ಮನೆಯ ಒಡತಿಯ ನಿರ್ಧಾರವೂ ಇರುತ್ತದೆ. ಈ ಸಮುದಾಯದಲ್ಲಿ ಕುಟುಂಬದಲ್ಲಿ ಗಂಡ ಸತ್ತರೆ ಇಡೀ ಮನೆಯ ಜವಾಬ್ದಾರಿಯು ಹೆಂಡತಿಯ ಮೇಲೆ ಇರುವುದರಿಂದ ಮನೆಯ ಯಾವುದೇ ತೀರ್ಮಾನಗಳನ್ನು ತೆಗೆದುಕೊಳ್ಳುವ ಉತ್ತರಾಧಿಕಾರಿ ಸ್ತ್ರೀಯಾಗಿರುತ್ತಾಳೆ. ಆದರೆ ಮಕ್ಕಳು ಬೆಳೆದು ದೊಡ್ಡವರಾದ ಮೇಲೆ ನಿಸ್ಸಂದೇಹವಾಗಿ ಪುರುಷನೇ ಉತ್ತರಾಧಿಕಾರಿಯಾಗಿರುತ್ತಾನೆ. ಗೌಡಾಲುಗಳ ಕುಟುಂಬದಲ್ಲಿ ಗಂಡು ಸಂತಾನವಿಲ್ಲದಿದ್ದಾಗ ತಮ್ಮ ಹೆಣ್ಣು ಮಕ್ಕಳಿಗೆ ಮದುವೆ ಮಾಡಿ ಮೊದಲನೇ ಮಗಳ ಗಂಡನನ್ನು ಮನೆಯ ಮಗನಾಗಿ ಸ್ವೀಕರಿಸುತ್ತಾರೆ. ಇದಕ್ಕೆ ಅಳಿಯಕಟ್ಟು ಎಂದು ಕರೆಯುತ್ತಾರೆ. ಆದ್ದರಿಂದ ಇಲ್ಲಿ ಅಳಿಯನೇ ಮುಂದಿನ ಉತ್ತರಾಧಿಕಾರಿಯಾಗುತ್ತಾನೆ. ಆದ್ದರಿಂದ ಕುಲದ ಯಾವುದೇ ಕಾರ್ಯಗಳಿಗೆ ಮನೆಯ ಯಜಮಾನ ಭಾಗಿಯಾಗಿ ಇಡೀ ಹಾಡಿಯ ಸದಸ್ಯರೆಲ್ಲರೂ ಕುಲದ ಉದ್ಧಾರಕ್ಕಾಗಿ ನಡೆಯುವ ಯಾವುದೇ ಸಂದರ್ಭದಲ್ಲಿ ತಪ್ಪಿಸದೇ ಭಾಗವಹಿಸಬೇಕಾಗಿರುತ್ತದೆ. ಅಲ್ಲದೆ ಮನೆಯ ಯಜಮಾನ ತನ್ನ ಗಂಡು ಮಕ್ಕಳಿಗೆ ಕುಲವೆಂದರೆ ಏನು? ಕುಲದ ನಿಯಮಗಳು ಎಷ್ಟರಮಟ್ಟಿಗೆ ಕಟ್ಟುನಿಟ್ಟಾಗಿರುತ್ತವೆ. ಕುಲದ ವಿಷಯಕ್ಕೆ ಹಾಗೂ ನಿಯಮಗಳಿಗೆ ಯಾವುದೇ ಕಾರಣಕ್ಕೆ ವಿರುದ್ಧವಾಗಿ ಇರಬಾರದು ಎಂಬ ರೀತಿಯಲ್ಲಿ ಮಕ್ಕಳನ್ನು ಬೆಳೆಸುವ ಅಥವಾ ತಯಾರಿ ಮಾಡುವ ಜವಾಬ್ದಾರಿ ಕುಟುಂಬದ ಯಜಮಾನನ ಕರ್ತವ್ಯವಾಗಿರುತ್ತದೆ. ಆದ್ದರಿಂದ ಗೌಡಾಲು ಸಮುದಾಯದ ಯಾವುದೇ ತೀರ್ಮಾನಗಳು ಕಟ್ಟುನಿಟ್ಟಾಗಿ ಇರುವುದರಿಂದ ಆಧುನಿಕ ಸಂದರ್ಭದ ಸಮಾಜದಲ್ಲಿ ತಮ್ಮದೇ ಆದ ಬದುಕು ಗೋಚರಿಸಲು ಕಾರಣವಾಗಿದೆ.

**ಈ. ಉಡುಗೆ-ತೊಡುಗೆ**

ಮನುಷ್ಯ ಹುಟ್ಟುವಾಗ ಯಾವುದೇ ಉಡುಪನ್ನು ಹಾಕಿಕೊಂಡಿರಲಿಲ್ಲ. ಅದರಂತೆ ಹೋಗುವಾಗಲೂ ಯಾವುದೇ ಉಡುಗೆಯನ್ನು ಹಾಕಿಕೊಂಡು ಹೋಗುವುದಿಲ್ಲ. ಆದರೆ ಬಂದು ಹೋಗುವ ಮಾರ್ಗದಲ್ಲಿ ಏನೆಲ್ಲ ಅನುಭವಿಸುತ್ತಾನೆ. ಮನುಷ್ಯನು ಬೆತ್ತಲಾಗಿ ಬಂದು ತನ್ನ ಬೌದ್ಧಿಕ ವಿಕಾಸಕ್ಕೆ ಅನುಗುಣವಾದ ಬದುಕನ್ನು ರೂಪಿಸಿಕೊಂಡಿರುವುದು ಚರಿತ್ರೆಯಿಂದ ತಿಳಿದ ಹಿನ್ನೆಲೆಯಲ್ಲಿ ಗಮನಿಸುತ್ತ ಹೊರಟರೆ ಗಂಡು ಮತ್ತು ಹೆಣ್ಣಿನ ದೇಹಗಳ ಜೈವಿಕ ಸ್ವರೂಪವೇ ಮಾನವ ಕಲ್ಪನೆಗೆ ಕಾರಣವಾಗಿರುವುದು ತಿಳಿದುಬರುತ್ತದೆ. ''ಮೈಥುನದಂತಹ ಬಹುಮುಖ್ಯ ಕ್ಷಣಗಳಲ್ಲಿ ಮನುಷ್ಯನ ಜೈವಿಕ ರಚನೆಯಲ್ಲಿ ಕಾಣುವ ಸ್ಪಂದನಶೀಲ ಗುಣದಿಂದ ಸ್ವತಃ

ಮನುಷ್ಯನಿಗೆ ಮುಜುಗರವಾದಂತಿದೆ. ಮಾನವ ಪ್ರೌಢಾವಸ್ಥೆಗೆ ತಲುಪಿದಂತೆಲ್ಲಾ ದೇಹದಲ್ಲಾಗುವ ಸ್ವಾಭಾವಿಕವಾದ ಪರಿವರ್ತನೆಗಳು ಆತನಿಗೆ ಸುಖ ಕೊಟ್ಟ ಹಾಗೆಯೇ ಹೇಳಿಕೊಳ್ಳಲಾಗದಂತಹ ನಾಚಿಕೆಯನ್ನು ಉಂಟು ಮಾಡಿದ್ದರಿಂದಲೂ ಹಾಗೂ ಇದರ ಜೊತೆಗೆ ನಿಸರ್ಗದೊಡನೆ ಸ್ವಚ್ಛಂದವಾಗಿ, ಲೀಲಾಜಾಲವಾಗಿ ಬದುಕುತ್ತಿದ್ದ ಮನುಷ್ಯನಿಗೆ ಬರುಬರುತ್ತಾ ವಾತಾವರಣದಲ್ಲಾಗುವ ವೈಪರಿ ತ್ಯದಿಂದಾಗಿ ದೇಹದ ರಕ್ಷಾಕವಚವಾದ ಚರ್ಮದಲ್ಲಿ ನಿಗ್ರಹಶಕ್ತಿ ಕಡಿಮೆಯಾಗಿ ಮಾನವನಿಗೆ ಬಟ್ಟೆ ಬರೆ ಅವಶ್ಯವಾಯಿತು. ಒಂದು ಕಾಲದಲ್ಲಿ ಮರದ ತೊಗಟೆ, ಎಲೆ, ಸೊಪ್ಪು ಮೊದಲಾದವುಗಳನ್ನು ಮೈಗೆ ಸುತ್ತಿಕೊಳ್ಳುತ್ತಿದ್ದ ಮಾನವ ತನ್ನ ದೇಹರಕ್ಷಣೆಗಾಗಿ ಮಾತ್ರವಲ್ಲ ತನ್ನ ದೇಹದ ಸೌಂದರ್ಯ ವರ್ಧನೆಯ ಕಾರಣಕ್ಕಾಗಿ ಕೂಡ ಅತ್ಯಾಧುನಿಕವಾದ ಫ್ಯಾಷನ್ ಡಿಸೈನ್‌ನಂತಹ ಬೃಹತ್ ಉದ್ದಿಮೆಗಳನ್ನು ಹೊಂದಿರುವುದು ಇಂದಿನ ದಿನಮಾನಗಳಲ್ಲಿ ಕಾಣಲಾಗುವುದು. ಇಂದು ಬಟ್ಟೆಯ ಕೈಗಾರಿಕೆಗಳು ದಿನದಿಂದ ದಿನಕ್ಕೆ ತೀವ್ರವಾಗಿ ಕ್ರಾಂತಿಯನ್ನುಂಟುಮಾಡಿವೆ. ಪರಿಣಾಮವಾಗಿ ಮಾನವನಿಗೆ ಮಾನ ಮುಚ್ಚುವ ಉಡುಗೆಯಾಗಿರದೆ ಮನುಷ್ಯನ ಉಡುಗೆಯಿಂದ ಪ್ರತಿಷ್ಠೆ, ಅಂತಸ್ತುಗಳನ್ನು ತೋರಿಸುವ ಉಡುಗೆಗಳಾಗಿವೆ. ಕೈಗಾರಿಕಾ ಕ್ರಾಂತಿಯ ನಂತರ ಜಗತ್ತಿನಾದ್ಯಂತ ಉತ್ಪಾದನೆ ಮಾಡಿದ ವೈವಿಧ್ಯಮಯ ಉಡುಗೆಗಳು ತಮ್ಮ ಸ್ವರೂಪದಲ್ಲಿ ಬದಲಾಗಿದ್ದರಿಂದ ಮತ್ತು ಮಾನವನ ಬದುಕು ಕೂಡ ವೈವಿಧ್ಯತೆಯ ಕಡೆ ಮುಖ ಮಾಡಿರುವುದರಿಂದ ಬದಲಾವಣೆಯ ಸಮಾಜಕ್ಕೆ ಅನುಗುಣವಾಗಿ ಉಡುಪನ್ನು ಧರಿಸಲು ಪ್ರಾರಂಭಿಸಿರುವುದು ಇಂದಿನ ಮಾನವನ ಮನೋಭಾವನೆಯಾಗಿದೆ.''[೨೩]

ಇಂದು ಶ್ರೀಮಂತರು ತಮ್ಮ ಹುಟ್ಟು ಹಬ್ಬ, ಮದುವೆ, ನಾಮಕರಣ ಮುಂತಾದವುಗಳಿಗೆ ಬಟ್ಟೆಯನ್ನು ಹಂಚುವಾಗ ಆಗುವ ತಳಸಮುದಾಯಗಳ ನೂಕುನುಗ್ಗಲು ಹೇಳಲಿಕ್ಕೆ ಆಗದು. ಆದ್ದರಿಂದ ಉಡುಗೆ ತೊಡುಗೆಗಳು ಆಧುನಿಕ ಸಮುದಾಯದಲ್ಲಿ ಅನೇಕ ಸಮಸ್ಯೆಗಳಿಗೆ ದಾರಿ ಮಾಡಿಕೊಟ್ಟಿರುವುದು ಕೂಡ ಶೋಚನೀಯವಾಗಿದೆ. ''ಇವೆಲ್ಲವುಗಳ ಮಧ್ಯಮಾನವ ಉಡುಗೆ ತೊಡುಗೆಯ ವಿಷಯದಲ್ಲಿ ಪ್ರತಿಷ್ಠೆಗಾಗಿ ಬಳಸುವ ಅನಿವಾರ್ಯ ಆಚರಣೆಯಾಗಿ ಮಾಡಿಕೊಂಡಿದ್ದಾನೆ. ಒಂದು ಕಾಲದಲ್ಲಿ ಮಾನವನ್ನು ಕಾಪಾಡಿಕೊಳ್ಳುವ ಕಲ್ಪನೆಯಾಗಿದ್ದ ಉಡುಗೆ ತೊಡುಗೆಯೂ ಇಂದು ಸಾಮಾಜಿಕ ಪ್ರತಿಷ್ಠೆಯ ಸಂಕೇತವಾಗಿ ಬಳಕೆಯಲ್ಲಿರುವುದು ಗೌರವದ ಜೊತೆಗೆ ಸೌಂದರ್ಯವರ್ಧನೆಯ ಸಾಧನವೂ ಆಗಿದೆ. ಇಂದು ಬೃಹತ್ ಉದ್ದಿಮೆಗಳು ಕೋಟಿಗಟ್ಟಲೆ ಬಂಡವಾಳ ಹೂಡಿ ಸ್ಪರ್ಧೆ ಮತ್ತು ಜಾಹೀರಾತುಗಳ ಅಬ್ಬರದಲ್ಲಿ ಮಾನವನ ಮೂಲಭೂತ ಅಗತ್ಯತೆಗಳನ್ನು ಮರೆಸುತ್ತಿರುವುದು ಇಲ್ಲದವರ ಪಾಲಿಗೆ ನರಕವಾಗಿದೆ. ಅಲ್ಲದೆ ಅಸಂಖ್ಯಾತ ಬಡವರ ಬದುಕಿಗೆ ಇವತ್ತಿಗೂ ಉಡುಗೆ-ತೊಡುಗೆಗಳು ಅವಶ್ಯಕ ಸಾಮಗ್ರಿಗಳಾಗಿವೆಯೇ ವಿನಃ ವಿಲಾಸದ ವಸ್ತುಗಳಾಗಿಲ್ಲ. ಆಡಂಬರ, ಪ್ರದರ್ಶನ ಉಳ್ಳವರ ಶೋಕಿಯ ಸಂಗತಿಗಳಷ್ಟೇ ಅಲ್ಲ, ಅವರಿಗೆ ಹಣವನ್ನು ತಂದುಕೊಡುವ ಅಪಾರವಾದ ವಿಷಯಗಳಾಗಿವೆ. ಆದ್ದರಿಂದ ಬುಡಕಟ್ಟುಗಳಿಗೆ ಮತ್ತು ಕೆಳಸ್ತರದ ಸಮುದಾಯಗಳಿಗೆ ಉಡುಗೆ-ತೊಡುಗೆಗಳು ಕನಸಿನ ಗಂಟಾಗಿವೆ.''[೨೪]

ಗೌಡಾಲು ಸಮುದಾಯದಲ್ಲಿ ಉಡುಗೆ-ತೊಡುಗೆಗಳು ಮುಖ್ಯವಾದ ಪಾತ್ರ ವಹಿಸುತ್ತವೆ. ಏಕೆಂದರೆ ಮಲೆನಾಡಿನ ಪಶ್ಚಿಮ ಘಟ್ಟಗಳಲ್ಲಿ ಪ್ರಾಚೀನ ಕಾಲದಿಂದಲೂ ಜೀವನವನ್ನು ಮಾಡುತ್ತ ಬರುತ್ತಿರುವ ಇವರಲ್ಲಿ

ಈ ಪರಿಸರಕ್ಕೆ ಹಾಗೂ ಅರಣ್ಯಕ್ಕೆ ಅನುಗುಣವಾದ ಉಡುಪನ್ನು ಧರಿಸುವ ಪದ್ಧತಿಯಿರುವುದು ಕಂಡುಬರುತ್ತದೆ. ಇಲ್ಲಿ ಉಡುಪಿನ ಬಗ್ಗೆ ವಿವರವಾಗಿ ಚರ್ಚಿಸಲೇಬೇಕಾಗಿರುವುದರಿಂದ ಮಾನವ ಬದುಕಲು ಗಾಳಿ, ನೀರು, ವಸತಿ ಎಷ್ಟು ಮುಖ್ಯವೋ ಅಷ್ಟೇ ಅವಶ್ಯಕವಾದುದು ಉಡುಪು ಎಂಬುದು ನಿಜಸಂಗತಿಯಾಗಿದೆ. ಏಕೆಂದರೆ ಉಡುಗೆ-ತೊಡುಗೆಗಳ ಅವಶ್ಯಕತೆ ಹೆಚ್ಚು ನೈಸರ್ಗಿಕವಾದುದು. ಯಾವುದೇ ಸಮಾಜದಲ್ಲಿ ಉಡುಗೆ-ತೊಡುಗೆಗಳು ಆ ಸಮಾಜವನ್ನು ಬೇರೆ ಸಮಾಜದಿಂದ ಪ್ರತ್ಯೇಕಿಸಲು ಸಹಾಯಕವಾಗುವ ಬಾಹ್ಯ ಸಾಧನವಾಗಿರುವುದರಿಂದ ಪ್ರತಿಯೊಂದು ಸಮಾಜವು ತನ್ನ ಅಸ್ತಿತ್ವವನ್ನು ತಾನು ರೂಢಿಸಿಕೊಂಡು ಉಡುಗೆ-ತೊಡುಗೆಗಳಿಂದ ಗುರುತಿಸಿಕೊಳ್ಳುತ್ತದೆ. ಉಡುಗೆಗಳು ಸಾಮೂಹಿಕ ಬದುಕಿನಲ್ಲಿ ವ್ಯಕ್ತಿ ವ್ಯಕ್ತಿಗೂ ಇರುವ ಸಂಬಂಧ ಸಂಪರ್ಕಗಳನ್ನು ಹೊರ ಜಗತ್ತಿಗೆ ತೋರಿಸುತ್ತವೆ. ಇಲ್ಲಿ ಲಿಂಗ ವಯಸ್ಸು, ಸಾಮಾಜಿಕ ಅಂತಸ್ತು, ವೃತ್ತಿ ಕಸಬುಗಳನ್ನು ಸೇರಿಸಿ, ಉಡುಗೆಗಳು ಸಾಧಿಸುವ ಭಿನ್ನತೆ ಬೆಳವಣಿಗೆಗಳನ್ನು ಗಮನಿಸಬೇಕಾಗುತ್ತದೆ. ಗೌಡಾಲು ಸಮುದಾಯದಲ್ಲಿ ಸ್ತ್ರೀ ಮತ್ತು ಪುರುಷರು ತಮ್ಮ ದೇಹ ಪ್ರಕೃತಿ ಹಾಗೂ ತಾವು ನಿರ್ವಹಿಸುವ ಕೆಲಸ ಕಾರ್ಯಗಳ ಸ್ವರೂಪ ಸ್ವಭಾವಕ್ಕನುಗುಣವಾಗಿ ಉಡುಗೆ ತೊಡುಗೆ ಧರಿಸಿರುವುದು ಕಂಡುಬರುತ್ತದೆ. ಇವರಲ್ಲಿ ವಯಸ್ಸಿಗನುಗುಣವಾಗಿ ಉಡುಗೆಗಳು ವ್ಯತ್ಯಾಸ ಹೊಂದಿರುವುದು ಕಂಡುಬರುತ್ತದೆ.

ಇಲ್ಲಿ ಗೌಡಾಲುಗಳು ಕೃಷಿಯನ್ನು ಅವಲಂಬಿಸಿ ಜೀವನ ನಡೆಸುವವರಾಗಿದ್ದು, ಸಂಪ್ರದಾಯವಾದಿಗಳು, ಆರ್ಥಿಕವಾಗಿ ದುರ್ಬಲರು ಆಗಿದ್ದಾರೆ. ಇವರ ಉಡುಗೆಗಳಲ್ಲಿ ಯಾವುದೇ ಸಂಸ್ಕೃತೀಕರಣದ ಪ್ರಭಾವ ಹೆಚ್ಚಾಗಿ ಕಂಡುಬಂದಿಲ್ಲ. ಇವರ ಉಡುಗೆ ತೊಡುಗೆಗಳನ್ನು ಮುಖ್ಯವಾಗಿ ಎರಡು ಪ್ರಕಾರಗಳಾಗಿ ವಿಂಗಡಿಸಲಾಗುವುದು. ೧. ದಿನನಿತ್ಯದ ಉಡುಗೆಗಳು, ೨. ಹಬ್ಬ ಆಚರಣೆಗಳಲ್ಲಿ ಉಡುವ ಉಡುಗೆಗಳು.

ಗೌಡಾಲುಗಳು ಹೆಚ್ಚು ಸಮಯವನ್ನು ಗದ್ದೆ ತೋಟಗಳಲ್ಲಿಯೇ ಕಳೆಯುವುದರಿಂದ ಗದ್ದೆ ತೋಟಗಳಲ್ಲಿ ಹಿರಿಯರು ಲಂಗೋಟಿ ಕಟ್ಟಿಕೊಂಡು ಮೊಳಕಾಲಿನಿಂದ ಮೇಲಕ್ಕೆ ಮಾತ್ರ ಮುಚ್ಚುವಂತೆ ಸೊಂಟಕ್ಕೆ ಮೋಟು ಪಂಚೆಯೊಂದನ್ನು ಸುತ್ತಿಕೊಂಡಿರುತ್ತಾರೆ. ಇದರ ಜೊತೆಗೆ ಸೊಂಟಕ್ಕೆ ದಟ್ಟಿ ಬಿಗಿಯುವರು. ಇದಕ್ಕೆ ಹಿಂಭಾಗದಲ್ಲೊಂದು ಕಬ್ಬಿಣದ ಕೊಂಡಿಯಿರುತ್ತದೆ. ಈ ಕೊಂಡಿಯಲ್ಲಿ ಕೆಲಸದ ಕತ್ತಿ ತೂಗಾಡುತ್ತದೆ. ಮೈಗೆ ಅಂಗಿ, ತಲೆಗೆ ವಾಟವಾಳದ ಟೋಪಿ ಧರಿಸಿರುತ್ತಾರೆ. ಅಲ್ಲದೆ ಹೆಗಲ ಮೇಲೊಂದು ಕಂಬಳಿ ಕುಪ್ಪೆ ಹಾಕಿಕೊಂಡಿರುತ್ತಾರೆ. ಈ ಕುಪ್ಪೆಯು ಚಳಿಯಾದಾಗ ಹೊದೆಯಲು ಮಳೆ ಬಂದಾಗ ಗೋಪ್ಪೆ ಮಾಡಿ ತಲೆಯ ಮೇಲೆ ಹಾಕಿಕೊಂಡು ಮಳೆಯಿಂದ ರಕ್ಷಿಸಿಕೊಳ್ಳಲು, ಮಲಗುವಾಗ ಹಾಸಿಕೊಳ್ಳಲು ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಇವೆಲ್ಲವುಗಳ ಜೊತೆಗೆ ಎಲೆ ಅಡಿಕೆ ಚೀಲ ಸದಾ ಸೊಂಟದಲ್ಲಿರುತ್ತದೆ.

ಮುದುಕರು ಒಂದು ಲಂಗೋಟಿ ಕಟ್ಟಿ, ಮೈಮೇಲೊಂದು ಉದ್ದ ಅಂಗಿ ತೊಡುವರು. ಈ ಅಂಗಿಗೆ ಗುಂಡಿಯಿರುವುದಿಲ್ಲ. ಆದರೆ ಇವರು ಹೆಗಲ ಮೇಲೊಂದು ಕಂಬಳಿ ಹೊದ್ದಿರುತ್ತಾರೆ. ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ಪುರುಷರು ಕೆಲಸ ಮುಗಿಸಿ ಮನೆಗೆ ಬಂದ ಮೇಲೆ ಧರಿಸುವ ಉಡುಪಿನಲ್ಲಿ ಗಮನಾರ್ಹವಾದ ವ್ಯತ್ಯಾಸಗಳೇನೂ ಕಾಣುವುದಿಲ್ಲ. ಆದರೆ ಸೊಂಟಕ್ಕೆ ಸುತ್ತಿದ ಒಡ್ಯಾಣ, ಮೈಮೇಲೆ ಧರಿಸಿದ

ಅಂಗಿ, ತಲೆಯ ಮೇಲಿನ ಟೋಪಿಗಳಿಗೆ ವಿಶ್ರಾಂತಿ ಸಿಗುತ್ತದೆ. ನಂತರ ಸಾಮಾನ್ಯವಾಗಿ ಲುಂಗಿ, ಅಂಗಿಯನ್ನು ಧರಿಸುತ್ತಾರೆ.

ಗೌಡಾಲುಗಳು ಹಬ್ಬ ಹರಿದಿನಗಳಲ್ಲಿ ಮೊದಲು ಯಾವುದೇ ಉಡುಪನ್ನು ಧರಿಸದೇ ಸಾಮಾನ್ಯವಾಗಿ ಇರುತ್ತಿದ್ದರು. ಆದರೆ ಇತ್ತೀಚೆಗೆ ಹಬ್ಬಗಳಲ್ಲಿ ವಿಶಿಷ್ಟವಾದ ಉಡುಪನ್ನು ಧರಿಸುವ ಪದ್ಧತಿಯಿದೆ. ಎಲ್ಲರೂ ಹೊಸ ಹೊಸ ಬಟ್ಟೆಗಳನ್ನು ಹಾಕಿಕೊಂಡು ಸಂಬಂಧಿಕರ ಮನೆಗಳಿಗೆಲ್ಲ ಹೋಗಿ ಬರುವ ಪರಿಪಾಟವನ್ನು ರೂಢಿಸಿಕೊಂಡಿದ್ದಾರೆ. ಆದರೆ ಬಂಧುಗಳ ಮನೆಗೆ ಹೋಗುವಾಗ ಪಂಚೆ ಹಾಕಿಕೊಂಡು ಉದ್ದನೆಯ ಕಸೆ ಅಂಗಿ ಕರಿಕೋಟು, ತಲೆಗೆ ಕೆಂಪು ರುಮಾಲು, ಹೆಗಲ ಮೇಲೆ ಶಲ್ಯ ಹಾಕಿಕೊಂಡು ಕೈಯಲ್ಲಿ ಹದಿನಾರು ಕಡ್ಡಿಯ ವಾಛೆ ಛತ್ರಿಯನ್ನು ಹಿಡಿಯುವರು. ಹಣೆಗೆ ಎರಡು ಬಿಳಿಯ ನಾಮಗಳ ನಡುವೆ ಕೆಂಪು ನಾಮ ಹಾಕಿಕೊಂಡಿರುವುದು ವಿಶೇಷವಾಗಿರುತ್ತದೆ.

ಆದರೆ ಕುದುರೆ ಪೂಜೆಯಂತಹ ಹಬ್ಬಗಳಲ್ಲಿ ಹಿರಿಯರು ಮೊಳಕಾಲು ಮೀರುವಂತೆ ಕೆಂಪಂಚಿನ ಪಂಚೆಯ ಕಚ್ಚೆ ಹಾಕಿ ಒಂದು ಜುಬ್ಬಾ ತೊಟ್ಟಿರುತ್ತಾರೆ. ತಲೆಗೆ ಮುಂಡಾಸು ಸುತ್ತಿ ಕಾಲಲ್ಲಿ ಜೇಕಿನ ಜೋಡು ಹಾಕಿ ಕೈಯಲ್ಲಿ ದೊಡ್ಡದೊಂದು ಉದ್ದವಾದ ಬೆತ್ತದ ದೊಣ್ಣೆ ಹಿಡಿದಿರುತ್ತಾರೆ ಮತ್ತು ಒಂದು ಶಾಲು ಹೊದ್ದಿರುತ್ತಾರೆ.

ಯುವಕರು ಅಂಗಿ ಮತ್ತು ಅಡ್ಡಪಂಚೆ ಉಡುತ್ತಾರೆ. ಪಂಚೆಯ ಮೇಲೆ ಬೆಳ್ಳಿಯ ನೇವಾಳ ಉಡದಾರ ರಾರಾಜಿಸುತ್ತದೆ. ಮತ್ತೆ ಕೆಲವರು ಪ್ಯಾಂಟ್ ಅಂಗಿಯನ್ನು ತೊಡುತ್ತಾರೆ. ಇವರಲ್ಲಿ ಮದುವೆಯ ಗಂಡನ್ನು ಸಿದ್ಧ ಮಾಡಲು ತುಂಬ ಕಾಳಜಿ ವಹಿಸುತ್ತಾರೆ. ಮದುವೆಯ ಗಂಡಿಗೆ ಹೊಸ ಬೆಳ್ಳಿ ಉಡದಾರ ಹಾಕಿ ಅಂಗಿಯನ್ನು ಹಾಕಿ ಕೆಂಪಂಚಿನ ಎಂಟು ಮೊಳದ ಒಂದು ಹೊಸ ಪಂಚೆಯನ್ನು ಕತ್ತರಿ ಹಾಕಿ ಕಚ್ಚೆ ಉಡಿಸುವರು. ಅಲ್ಲದೆ ಉದ್ದನೆಯ ನಿಲುವಂಗಿ ಹಾಕಿಸಿ ಇದರ ಮೇಲೆ ಮದುವೆಗೆಂದು ಸಿದ್ಧಪಡಿಸಿದ ಹೊಸಕೋಟು ತೊಡಿಸುವರು. ತಲೆಗೆ ಬಿಳಿ ಟೋಪಿ ಹಾಕಿ ಅದರ ಮೇಲೆ ಜರಿಪೇಟೆ ಸುತ್ತುತ್ತಾರೆ ಮತ್ತು ಕೋಟಿನ ಮೇಲೆ ಅಡ್ಡಡ್ಡ ಶಲ್ಯ ಕೂಡ ಹಾಕಿರುತ್ತಾರೆ. ಇವೆಲ್ಲ ಉಡುಗೆಗಳೂ ಈಗಲೂ ಮುಂದುವರಿದುಕೊಂಡು ಹೋಗುತ್ತಿರುವುದು ಈ ಸಮುದಾಯದ ವಿಶೇಷವಾಗಿದೆ.

ಈ ಸಮುದಾಯ ೧೮ ಮತ್ತು ೧೯ನೇ ಶತಮಾನದಲ್ಲಿ ಮನೆಯ ಒಳಗೂ, ಹೊರಗು ದಿನವಿಡೀ ಹೊಟ್ಟೆಯ ಪಾಡಿಗಾಗಿ ಸುಡು ಬಿಸಿಲಿನಲ್ಲಿ ಕೆಲಸ ಮಾಡುತ್ತಿದ್ದವರಿಗೆ ತಮ್ಮ ಮಾನ ಮತ್ತು ಮೈಯನ್ನು ಮುಚ್ಚಿಕೊಳ್ಳುವಷ್ಟು ಬಟ್ಟೆ ಕೂಡ ದೊರೆಯುತ್ತಿರಲಿಲ್ಲ. ಅದರಿಂದಾಗಿ ಸೊಂಟಕ್ಕೆ ಸುತ್ತಿಕೊಂಡ ಅರಿವೆಯ ತುಂಡಿನ ಒಂದು ಸೆರಗನ್ನೇ ಎದೆಯ ಮೇಲೆ ಹಾಕಿಕೊಂಡಿರುತ್ತಿದ್ದರಂತೆ. ಇಲ್ಲಿ ಹಿರಿಯ ಮಹಿಳೆಯರು ಕೈಮಗ್ಗದ ಹದಿನೆಂಟು ಮೊಳದುದ್ದದ ಸೀರೆಯನ್ನು ಗೊಬ್ಬೆ ಹಾಕಿ ಉಡುವುದು ಸಾಮಾನ್ಯವಾಗಿತ್ತು ಎನ್ನುತ್ತಾರೆ. ಆದರೆ ಇತ್ತೀಚಿನ ಸಮಾಜಕ್ಕೆ ಅನುಗುಣವಾಗಿ ಉಡುಗೆಯಲ್ಲಿ ಬದಲಾಗಿದೆ. ಸ್ತ್ರೀಯರ ಉಡುಗೆ-ತೊಡುಗೆಯನ್ನು ಕ್ಷೇತ್ರ ಕಾರ್ಯದಲ್ಲಿ ಗಮನಿಸುತ್ತಾ ಹೊರಟರೆ, ಒಂದು ವಿಶೇಷವೆಂದರೆ ಮಳೆಗಾಲದ ದಿನಗಳಲ್ಲಿ ವಲ್ಲಿ ಹೊದ್ದಿರುವುದರ ಜೊತೆಗೆ ತಲೆದುಡುಗೆಯಾಗಿ ಹೊಂಬಾಳೆಯ ''ಹಾಳೆ ಕೊಟ್ಟೆ''ಯನ್ನು ಧರಿಸುತ್ತಾರೆ. ಮಹಿಳೆಯರು ಧರಿಸುವ ಆಭರಣಗಳಲ್ಲಿ ಮೂಗು, ಕಿವಿ ಕೈಕಾಲಿನ ಆಭರಣಗಳು ಸಾಮಾನ್ಯರಂತೆಯೇ ಇವೆ.

ಗೌಡಾಲುಗಳ ಮಹಿಳೆಯರು ಹಬ್ಬ ಹರಿದಿನಗಳಲ್ಲಿ ಹೊಸ ಸೀರೆಯನ್ನು ಕೆಲವರು ಉಟ್ಟರೆ ಮತ್ತೆ ಕೆಲವರು ಸಾಮಾನ್ಯ ಸೀರೆಗಳನ್ನು ಉಡುತ್ತಾರೆ. ಆದರೆ ನೆಂಟರ ಮನೆಗಳಿಗೆ ಹೋಗುವಾಗ ಸೊಂಟಕ್ಕೆ ಜರತಾರಿ ಸೀರೆ ಸುತ್ತಿ ಗೊಬ್ಬೆ ಸೆರಗು ಹಾಕಿ ಕಟ್ಟಿ ರವಿಕೆ ಧರಿಸುತ್ತಾರೆ. ತಲೆಗೂದಲನ್ನು ಬೈತಲೆ ತೆಗೆದು ಕೂದಲನ್ನು ಚೆನ್ನಾಗಿ ಬಾಚಿಕೊಂಡು ಜಡೆ ಹಾಕಿಕೊಂಡು ಹೋಗುತ್ತಾರೆ. ಅಲ್ಲದೆ ಹಣೆಗೆ ಬೊಟ್ಟಿಟ್ಟು ಕಿವಿಗೆ ಬುಗುಡಿ, ಕೊರಳಿಗೆ ಸರ ಕೈಗೆ ಚಿನ್ನದ ಬಳೆ ಕಡಗ ಹಾಕಿ ಸಿಂಗರಿಸಿಕೊಳ್ಳುತ್ತಾರೆ. ಈ ಎಲ್ಲ ಹಿನ್ನೆಲೆಯನ್ನು ಗಮನಿಸಿದರೆ ಪ್ರಸ್ತುತ ಪರಿವರ್ತನೆಯ ಸಮಾಜದಲ್ಲಿ ಸೇರಿಕೊಂಡು ಹೊರಗಿನ ಸಮುದಾಯಗಳ ಪರಸ್ಪರ ಸಂಪರ್ಕದಿಂದ ಎಲ್ಲರಂತೆಯೇ ಉಡುಗೆಗಳನ್ನು ಉಡುವ ಪದ್ಧತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಇತ್ತೀಚೆಗೆ ಸರ್ಕಾರದಿಂದ ಮುಂಜೂರಾದ ಯೋಜನೆಗಳು, ಗಿರಿಜನ ಆಶ್ರಮ ಶಾಲೆಗಳು, ಅರಣ್ಯ ಇಲಾಖೆಯ ಅಧಿಕಾರಿಗಳು ಮತ್ತು ಪೇಟೆಗಳಿಗೆ ಹೋಗಿ ಬರುವುದರಿಂದ ಇವರಲ್ಲಿ ಉಡುಗೆ ತೊಡುಗೆಗಳು ಹಾಗೂ ಜನನ, ಋತುಮತಿ, ಮದುವೆ, ಸಾವು, ಹಬ್ಬದಂತಹ ಆಚರಣೆಗಳಲ್ಲಿ ಸಾಮಾನ್ಯರಂತೆ ಜೀವನವನ್ನು ಸಾಗಿಸುತ್ತಿರುವುದು ಇಲ್ಲಿ ಗಮನಾರ್ಹವಾದ ಸಂಗತಿಯಾಗಿದೆ. ಆದ್ದರಿಂದ ಮಾನವನ ಸೌಂದರ್ಯ ಕಲ್ಪನೆ ವೈವಿಧ್ಯಮಯ ವೇಷಭೂಷಣಗಳು ಜೀವನವನ್ನು ತಿಳಿಯಲು ಕಾರಣವಾಗಿರಬಹುದು. ಇಲ್ಲಿ ಉಡುಪಿನ ಕರ್ತವ್ಯವು ಅಂಗಾಂಗಗಳ ರಕ್ಷಣೆಯಲ್ಲದೆ ಒಂದು ವಿಶಿಷ್ಟವಾದ ಸೊಗಸಿನ ಎಳೆಯು ಸೇರಿಕೊಂಡಿರುತ್ತದೆ. ಈ ಪರಿಯನ್ನು ಗೌಡಾಲುಗಳಲ್ಲಿ ಗುರುತಿಸಲಾಗುವುದು ಇವರಲ್ಲಿ ಪುರುಷರು ಮತ್ತು ಸ್ತ್ರೀಯರು ಪೇಟೆಯಲ್ಲಿ ವಾಸ ಮಾಡುವಂತಹ ಜನರ ಲಕ್ಷಣಗಳನ್ನು ಹೊಂದುತ್ತಿದ್ದಾರೆ. ಅಂದರೆ ಎಲ್ಲ ರೀತಿಯ ಆಹಾರವನ್ನು ಬಳಸಿದಂತೆ ವಿವಿಧ ಬಗೆಯ ಆಭರಣಗಳನ್ನು ಇಷ್ಟಪಡುತ್ತಾರೆ. ಇವರು ಮಕ್ಕಳಿಗೆ ಕಾಲಿಗೆ ಕಡಗ, ಕೈಗೆ ಪಾಟ್ಲಿ ಹಾಕುತ್ತಾರೆ. ಇದನ್ನು ಕೇಳಿದಾಗ ನಮ್ಮ ವಂಶವು ಮುಂದುವರಿಯಲು ಹಾಗೂ ಮಕ್ಕಳ ರಕ್ಷಣೆಗಾಗಿ ಇದಕ್ಕೆ ವೈಜ್ಞಾನಿಕ ಹಿನ್ನೆಲೆಯಿದೆ ಎನ್ನುತ್ತಾರೆ. ಅಂದರೆ ಕೈ ಕಾಲುಗಳು ತೆಳ್ಳಗಾಗಿ ದಬ್ಬ ಗಾತ್ರವಾಗುವುದನ್ನು ತಡೆದು ಕೈಕೀಲುಗಳಿಗೆ ಸ್ಪಷ್ಟ ಆಕಾರವನ್ನು ನೀಡುವ ಶಕ್ತಿ ಈ ಆಭರಣಗಳಾಗಿದೆ ಎನ್ನುತ್ತಾರೆ. ಇವರಲ್ಲಿ ಮಕ್ಕಳಿಗೆ ತಾಮ್ರದ ತಾಯಿತವನ್ನು ಭೂತ ಪಿಶಾಚಿಗಳ ಪೀಡೆಯ ನಿವಾರಣೆಗಾಗಿ ಕಟ್ಟುವುದಾದರೂ ದೇಹಕ್ಕೆ ಅಗತ್ಯವಾಗಿ ಬೇಕಾದ ಲೋಹಸ್ಪರ್ಶವನ್ನು ನೀಡುತ್ತದೆ ಎಂಬ ಜ್ಞಾನ ಇವರಲ್ಲಿದೆ. ಮದುವೆಯಲ್ಲಿ ಗಂಡಿನ ಎಡಕೈಗೆ ಕಠಾರಿಯನ್ನು ಕೊಡುತ್ತಾರೆ. ಇದರ ಗುಟ್ಟು ಕೇಳಿದಾಗ ಮದುವೆಯಾದ ಹೆಂಡತಿಯನ್ನು ರಕ್ಷಿಸಬೇಕೆಂಬುದು ಇದರ ಸಂಕೇತವಾಗಿದೆ ಎನ್ನುತ್ತಾರೆ. ಗೌಡಾಲು ಬುಡಕಟ್ಟು ಸಾಮಾನ್ಯವಾಗಿ ಮಲೆನಾಡಿನ ಪರಿಸರಕ್ಕೆ ಯೋಗ್ಯವಾದ ಉಡುಗೆ-ತೊಡುಗೆಯನ್ನು ಮೈಗೂಡಿಸಿಕೊಂಡು ಬದುಕಿನ ದಾರಿಯನ್ನು ನಡೆಸಿಕೊಂಡು ಹೋಗುತ್ತಿದೆ. ಇವರಲ್ಲಿ ಗಂಡಸರ ವೇಷಭೂಷಣಗಳನ್ನು ಹೆಂಗಸರು, ಹೆಂಗಸರ ವೇಷಭೂಷಣಗಳನ್ನು ಗಂಡಸರು ಧರಿಸಬಾರದೆಂಬ ನಿಯಮವನ್ನು ರೂಢಿಸಿಕೊಂಡಿದ್ದಾರೆ.

ಮಲೆನಾಡಿನ ಗೌಡಾಲುಗಳು ಉಡುಗೆ ತೊಡುಗೆಯಲ್ಲಿ ಬೇರೆ ಬೇರ ಸಂಸ್ಕೃತಿಗಳ ಪ್ರಭಾವದಿಂದಾಗಿ ಸುಧಾರಣೆಯನ್ನು ಸಾಧಿಸಿದ್ದರೂ ಸ್ಥಳೀಯ, ಪ್ರಾದೇಶಿಕ, ಸಾಮಾಜಿಕ ಭಿನ್ನತೆಯನ್ನು ಇವರು ಉಳಿಸಿಕೊಂಡು ಬಂದಿದ್ದಾರೆ. ಯಾವುದೇ ನಿರ್ದಿಷ್ಟ ಧಾರ್ಮಿಕ ಸಿದ್ಧಾಂತ ನಿರ್ಬಂಧಗಳಿಗೊಳಗಾಗದ ಈ ಸಮಾಜದವರು ತಮ್ಮದೇ

ಆದ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಅನ್ಯ ಸಂಸ್ಕೃತಿ ಸಮಾಜಗಳ ಸಂಪರ್ಕ ಪ್ರಭಾವಪೂರ್ಣವಾಗಿದ್ದು, ಇವರ ಸಾಂಸ್ಕೃತಿಕ, ಸಾಮಾಜಿಕ ಅಗತ್ಯಕ್ಕನುಗುಣವಾಗಿ ಇವರಲ್ಲಿರುವ ವೇಷಭೂಷಣಗಳನ್ನು ಗಮನಿಸಿದಾಗ ಪ್ರತ್ಯೇಕತೆಯು ಇನ್ನೂ ದಟ್ಟವಾಗಿ ಉಳಿದಿರುವುದು ತಿಳಿಯುತ್ತದೆ.

**ಉ. ಸಾಮಾಜಿಕ ಸಂಘ-ಸಂಸ್ಥೆಗಳು**

ವೈವಿಧ್ಯತೆಯ ಸಂಸ್ಕೃತಿಯಲ್ಲಿ ಏಕತೆಯನ್ನು ಸಾರುವ ಆಶಯವನ್ನು ಹೊಂದಿರುವ ಭಾರತೀಯ ಸಮಾಜದಲ್ಲಿ ಇತರೆ ಸಮುದಾಯಗಳು ವಾಸಿಸುವಂತೆ ಗೌಡಾಲು ಸಮುದಾಯವು ವಾಸಿಸುತ್ತಿದೆ. ಇದು ಇಂಡಿಯಾದ ಬಹುಸಂಸ್ಕೃತಿಯ ನೆಲೆಯಲ್ಲಿ ತನ್ನದೇ ಆದ ಸಾಂಸ್ಕೃತಿಕ ಲೋಕದೊಳಗೆ ತನ್ನದೇ ಆದ ಸಾಮಾಜಿಕ ಸಂಘ-ಸಂಸ್ಥೆಗಳನ್ನು ಸಂರಚಿಸಿಕೊಂಡಿದೆ. ಈ ಹಿನ್ನೆಲೆಯನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸುತ್ತ ತಿಳುವಳಿಕೆದಾರರನ್ನು ವಿಚಾರಿಸಿದಾಗ ದೊರೆತ ಮಾಹಿತಿ ಈ ಸಮುದಾಯದ ಅಧ್ಯಯನಕ್ಕೆ ಪೂರಕವಾಯಿತು. ಈ ಸಮುದಾಯದೊಳಗೆ ವಿವಾಹ, ಕುಟುಂಬ, ಆಸ್ತಿ, ಉತ್ತರಾಧಿಕಾರ ಮೊದಲಾದುದು ಭಾರತೀಯ ಸಮಾಜದ ಮೂಲ ಕಲ್ಪನೆಗಳನ್ನು ಹೊಂದಿದೆ. ಪರಂಪರಗತವಾಗಿ ಬಂದಿರುವ ಹಾಗೂ ಸಮುದಾಯದ ಸಂಸ್ಥೆಗಳ ಮೂಲಕ ಒಪ್ಪಿತವಾದ ಸಂಪ್ರದಾಯ, ಧರ್ಮ, ನೀತಿ ಕಟ್ಟೆಗಳನ್ನು ಮೈಗೂಡಿಸಿಕೊಂಡು ಪ್ರಸ್ತುತ ಸಮಾಜದ ಕಡೆ ಮುಖ ಮಾಡಿರುವುದು ಕಂಡುಬರುತ್ತದೆ. ಅಲ್ಲದೆ ಗೌಡಾಲು ಸಮುದಾಯದ ಪ್ರತಿಯೊಬ್ಬ ವ್ಯಕ್ತಿಯು ಈ ರೀತಿಯ ನಿಯಮಗಳಿಗೆ ಬದ್ಧನಾಗಿರುತ್ತಾನೆ. ಅವುಗಳನ್ನು ಮೀರಿ ನಡೆಯುವಂತಿಲ್ಲ. ಒಂದು ಪಕ್ಷ ಮೀರಿ ನಡೆದರೆ ತಮ್ಮ ನೆರೆ-ಹೊರೆ ಗ್ರಾಮದವರ ಅಸಮ್ಮತಿ, ಅಸಹಕಾರಗಳನ್ನು ಎದುರಿಸಬೇಕಾಗುತ್ತದೆ. ಆದ್ದರಿಂದ ಈ ಬುಡಕಟ್ಟಿನಲ್ಲಿರುವ ಸಾಮಾಜಿಕ ಸಂಘ-ಸಂಸ್ಥೆಗಳು ಬಿಡಿಸಲಾಗದೆ ಇರುವ ಕಗ್ಗಂಟಿನಂತೆ ಇರುತ್ತವೆ.

ಗೌಡಾಲು ಸಮುದಾಯದ ವ್ಯಕ್ತಿ ಹುಟ್ಟಿನಿಂದಲೇ ಸಮುದಾಯದ ಸಂಘ-ಸಂಸ್ಥೆಗಳ ಸದಸ್ಯನಂತೆ ಆಗಿ ಬಿಡುತ್ತಾನೆ. ಅಂದರೆ ಇಲ್ಲಿ ಮುಖಾಮುಖಿಯ ಸಂಬಂಧವಿದ್ದು, ಇವರಲ್ಲಿ ಯಾವುದೇ ವಿಷಯಕ್ಕೆ ನೀತಿ ನಿಯಮದ ಬಗ್ಗೆ ತಿಳಿಹೇಳಲು ಒಂದು ವ್ಯವಸ್ಥೆ ಇರುತ್ತದೆ. ಅಂದರೆ ಇವರದೇ ಒಂದು ಪಂಚಾಯಿತಿ ಸಂಸ್ಥೆ ಇದೆ. ಇಲ್ಲಿ ಸಮುದಾಯದ ಅಭಿವೃದ್ಧಿಗೆ ಸಂಬಂಧಿಸಿದಂತೆ ನಡಾವಳಿಗಳು ರಚನೆಗೊಳ್ಳುತ್ತವೆ. ಅನೌಪಚಾರಿಕ ಶಿಕ್ಷಣ ಸಂಸ್ಥೆಗಳೆಂದೇ ಕರೆಯಲ್ಪಡುವ, ನೆರೆಹೊರೆ, ಗೆಳೆಯರ ಒಳಗೆ, ಕುಟುಂಬ ನೀತಿ ನಿಯಮಗಳು ಪ್ರತಿಯೊಂದು ಗ್ರಾಮಗಳಲ್ಲಿ ವಾಸ ಮಾಡುವ ತಳಸಮುದಾಯಗಳ ಸಾಮಾಜಿಕ ಸಂಘ-ಸಂಸ್ಥೆಗಳಂತೆ ಗೌಡಾಲು ಸಮುದಾಯದ ಸಾಮಾಜಿಕ ಸಂಘ-ಸಂಸ್ಥೆಗಳಾಗಿವೆ. ಇಲ್ಲಿ ಪ್ರತಿಯೊಂದು ಹಾಡಿಗೆ ಒಬ್ಬ ಹಿರಿಯ ಇರುತ್ತಾನೆ. ಇದಕ್ಕೆ ಅನುಗುಣವಾಗಿ ಇವರಲ್ಲಿ ಕೂಡಿಗೆಗಳು ಅಸ್ತಿತ್ವದಲ್ಲಿವೆ. ಆದ್ದರಿಂದಲೇ ಇಲ್ಲಿ ಪ್ರತಿಯೊಬ್ಬರ ಪರಿಚಯ ಇರುವುದರಿಂದ ಯಾವುದೇ ವ್ಯಕ್ತಿ ತನ್ನ ಲೋಪದೋಷಗಳನ್ನು ಮುಚ್ಚಿಕೊಳ್ಳಲಾಗುವುದಿಲ್ಲ. ಪ್ರತಿಯೊಂದು ಹಾಡಿಯಲ್ಲಿ ಪರಸ್ಪರರ ಸಾಮಾಜಿಕ ಸಂಬಂಧಗಳು ಚೆನ್ನಾಗಿರುವುದರಿಂದ ಹುಟ್ಟು, ಸಾವು, ಮದುವೆ, ಮುಂಜಿಗಳಲ್ಲಿ ಹಾಗೂ ವೈಧವ್ಯ, ವಿಧುರತೆ ಒದಗಿದಾಗ, ರೋಗರುಜಿನಗಳ ಬಾಧೆಗೆ ತುತ್ತಾದಾಗ ವ್ಯಕ್ತಿಗಳ ಸಹಾಯಕ್ಕೆ ಇಡೀ ಹಾಡಿಯ ಕುಟುಂಬಗಳು ನೆರವನ್ನು ನೀಡುತ್ತವೆ. ಹಾಗಾಗಿ ಇಂದಿನ ದಿನಮಾನಗಳಲ್ಲಿ

ಗೌಡಾಲು ಸಮುದಾಯ ತನ್ನ ಸಾಮಾಜಿಕ ಸಂಘ-ಸಂಸ್ಥೆಗಳಲ್ಲಿ ಪ್ರಾಚೀನ ಕಾಲದಲ್ಲಿದ್ದ ಸಮುದಾಯದ ಸಾಮಾಜಿಕ ವ್ಯವಸ್ಥೆಯನ್ನು ಅದರ ತಿಳುವಳಿಕೆಯಲ್ಲಿ ಬಚ್ಚಿಟ್ಟುಕೊಂಡು ಬದುಕು ಸಾಗಿಸುತ್ತಿದೆ. ಆದ್ದರಿಂದಲೇ ಇವರಲ್ಲಿ ಕುಟುಂಬ ಮತ್ತು ಸಮುದಾಯದ ಕುಲ ಶ್ರೇಷ್ಠತೆಯನ್ನು ಪಡೆದಿವೆ.

ಗೌಡಾಲುಗಳು ಹಾಡಿಯ ಕೆಲಸಗಳನ್ನು ಕೂಡ ಮಾಡುತ್ತಾರೆ. ಅಂದರೆ ಸಮಯ ಬಂದಾಗ ಕಮ್ಮಾರರು, ಪಶುವೈದ್ಯರು, ಯಾರಿಗಾದರೂ ಅನಾರೋಗ್ಯವಾದಾಗ ನಾಟಿ ವೈದ್ಯರು, ಕೂಲಿಗಳು ಆಗುತ್ತಾರೆ. ಇವೆಲ್ಲವು ಇವರ ಮನಸ್ಸಿನಲ್ಲಿ ಮೂಡಿಬರಲು ಕಾರಣಗಳನ್ನು ಹುಡುಕುತ್ತ ಹೊರಟರೆ ಇವರೇ ರಚಿಸಿಕೊಂಡಿರುವ ಸಾಮಾಜಿಕ ಸಂಸ್ಥೆಗಳು ತಯಾರಿ ಮಾಡಿದ ಬಗೆಯಾಗಿವೆ.

ಇವರಲ್ಲಿ ಭಿಕ್ಷುಕರು, ವೃದ್ಧರ ಸಮಸ್ಯೆ, ಅಂಗವಿಕಲರ ಅನಾಥಪ್ರಜ್ಞೆ ವಿಧವೆಯರು ಬೀದಿಪಾಲುಗಳಂತೆ ಯಾವುದೇ ರೀತಿಯ ಸಾಮಾಜಿಕ ಸಮಸ್ಯೆಗಳಾಗಿ ರೂಪಿತವಾಗಿರಬೇಕಾಗಿದ್ದ ಚಿಕ್ಕ ಚಿಕ್ಕ ಸಮಸ್ಯೆಗಳಿಗೆ ಇವರೇ ಪರಿಹಾರವನ್ನು ಹುಡುಕಿಕೊಂಡಿಲ್ಲದಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿಚಾರಿಸಿದಾಗ ಇವರದೇ ಆದ ಸಾಮಾಜಿಕ ಸಂಘ-ಸಂಸ್ಥೆಗಳು ಬಿಗಿಯಾಗಿ ರೂಪಿತಗೊಂಡಿರುವುದು ಇಲ್ಲಿ ಮುಖ್ಯವಾಗುತ್ತದೆ.

''ಗೌಡಾಲುಗಳಲ್ಲಿ ಯಾವುದೇ ಹಬ್ಬ ಹರಿದಿನಗಳಿಗೆ, ಮದುವೆಯಂತಹ ಆಚರಣೆಗಳಲ್ಲಿ ಇಡೀ ಸಮುದಾಯದವರು ಒಪ್ಪಿಕೊಂಡು ಪರಿಭಾವಿಸುವ ವ್ಯವಸ್ಥೆ ಇತ್ತು ಎಂದು ಕ್ಷೇತ್ರಕಾರ್ಯದಲ್ಲಿ ಶ್ರೀಧರ್ ಅವರು ಹೇಳಿರುವ ಮಾಹಿತಿ ಗಮನಿಸುತ್ತ ಹೊರಟರೆ ಇವರಿಗೆ ಸಮುದಾಯದ ಗುರುಗಳಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಸಾಮಾಜಿಕ ಸಂಘ-ಸಂಸ್ಥೆಗಳು ಒಂದು ಸಮುದಾಯದ ಹಿತದೃಷ್ಟಿಯಿಂದ ಬೇಕಾಗುತ್ತದೆ ಎಂಬ ಅರಿವು ಇವರಿಗೆ ಇರುವುದು ಸ್ಪಷ್ಟವಾಗುತ್ತದೆ. ಇಲ್ಲಿ ಕದ್ರಿಗುರುಗಳನ್ನು ಮೊದಲಿನಂತೆ ಕರೆಸುವ ಪದ್ಧತಿ ಈಗ ಇಲ್ಲದಿರುವುದನ್ನು ನೋಡಿದರೆ ಕದ್ರಿಗುರುಗಳಿಗೂ ಮತ್ತು ಇವರಿಗೆ ಇದ್ದ ಸಂಪರ್ಕ ಕಡಿತ ಗೊಂಡಿರುವುದಲ್ಲದೆ ಸಮುದಾಯದ ಜನರು ಪರಸ್ಪರ ಒಪ್ಪಿಕೊಳ್ಳದ ಸ್ಥಿತಿಯಲ್ಲಿದ್ದಾಗ ಎಲ್ಲರೂ ಸೇರಿ ಕದ್ರಿಗುರುಗಳನ್ನು ಯಾವುದೇ ನ್ಯಾಯ ಪದ್ಧತಿಗಳಿಗೆ, ಹಬ್ಬ, ಆಚರಣೆಗಳಿಗೆ ಕರೆಸದೆ ಶೃಂಗೇರಿಯ ಗುರುಗಳನ್ನು ನಮ್ಮ ಗುರುಗಳೆಂದು ಒಪ್ಪಿಕೊಂಡಿರುವುದು ಪ್ರಸ್ತುತ ಸಮುದಾಯದ ವಿಶೇಷವಾಗಿದೆ.''[೧೫] ಇಲ್ಲಿ ಚರ್ಚಿಸಬೇಕಾಗಿರುವುದೇನೆಂದರೆ ಒಂದು ಮೂಲಬುಡಕಟ್ಟಾಗಿರುವ ಹಾಗೂ ಕಾಡಿನಲ್ಲಿ ಆಶ್ರಯವನ್ನು ಪಡೆದು ಬದುಕನ್ನು ಕಂಡುಕೊಂಡು ಹಂತ ಹಂತವಾಗಿ ಬದಲಾವಣೆಯ ಸಮಾಜದ ರೂಪರೇಷಗಳನ್ನು ಒಪ್ಪಿಕೊಂಡು ಸಮಾಜಶಾಸ್ತ್ರದ ಚಿಂತಕರಾದ ಎಂ.ಎನ್. ಶ್ರೀನಿವಾಸರವರು ಹೇಳಿದಂತೆ ''ಮೇಲುಸ್ತರದ ಸಂಸ್ಕೃತಿಗೆ ಮಾರುಹೋಗುತ್ತಿದ್ದಾರೆ. ಆದ್ದರಿಂದ ಯಾವುದೇ ಸಮುದಾಯದ ಪ್ರಾರಂಭದ ಬದುಕಿನ ಮತ್ತು ಇತ್ತೀಚಿನ ಕಾಲಘಟ್ಟದ ಬದುಕಿಗೂ ವ್ಯತ್ಯಾಸವಿರುವುದಲ್ಲದೆ ತನ್ನ ಮೂಲ ರೂಪದ ಬದುಕಿನಲ್ಲಿ ಬದಲಾಗುತ್ತಿರುವುದಲ್ಲದೆ, ತನ್ನ ಸಾಮಾಜಿಕ ಸಂಘ-ಸಂಸ್ಥೆಗಳಲ್ಲಿಯೂ ಬದಲಾವಣೆಯನ್ನು ಬಯಸುತ್ತಿದೆ''[೧೬] ಎನ್ನುವುದು ಪ್ರಸ್ತುತ ಅಧ್ಯಯನದಿಂದ ತಿಳಿದುಬಂದಿದೆ. ಯಾವುದೇ ಒಂದು ಸಮುದಾಯವು ತನ್ನ ಹೃದಯ ಭಾಗದಲ್ಲಿ ತನ್ನದೇ ಆದ ಸಂಸ್ಕೃತಿ, ಆಚರಣೆಯನ್ನು ಮೈಗೂಡಿಸಿಕೊಂಡಿರುತ್ತದೆ. ವೆಂಕಟರಮಣನನ್ನು ಇವರು ದೇವರು ಮಾಡಿಕೊಂಡು

ನಾಮವನ್ನು ಧರಿಸುತ್ತಾರೆ. ಗೌಡಾಲು ಸಮುದಾಯವು ತನ್ನ ಆರ್ಥಿಕ ಅಬಲತೆ, ಶಿಕ್ಷಣದ ಕೊರತೆ, ಸಾಮಾಜಿಕ ತಿಳುವಳಿಕೆಯ ಕೊರತೆ, ತಮ್ಮ ಸಮುದಾಯದ ಸಂಘಟನೆಯ ದುರ್ಬಲಗಳಿಂದ ಪ್ರಭುತ್ವವು ನಿರ್ಮಾಣ ಮಾಡಿದ ಅಧಿಕಾರಶಾಹಿ, ಪುರೋಹಿತಶಾಹಿಗಳು ಪ್ರಾಚೀನಕಾಲದಿಂದಲೂ ಪರಂಪರಾಗತವಾಗಿ ಬುಡಕಟ್ಟು ಸಮುದಾಯಗಳ ದೈವ ಮತ್ತು ದೇವರುಗಳನ್ನು ವಶಪಡಿಸಿಕೊಂಡು ದುರ್ಬಲವಾದ ಸಮುದಾಯಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿವೆ, ಚಿಕ್ಕಮಗಳೂರು ಜಿಲ್ಲೆಯಲ್ಲಿಯು ಬುಡಕಟ್ಟು ಹಿತದೃಷ್ಟಿಯಿಂದ ಹಿತಕರವಾಗಿರದೆ ಶೋಷಣೆಯಿಂದ ಕೂಡಿದೆ, ಶೃಂಗೇರಿಯ ಮಠದ ಪ್ರಭಾವ ಹೆಚ್ಚಾಗಿದೆ. ಇಲ್ಲಿ ಗೌಡಾಲುಗಳು ಈ ಮಠದ ಗುರುಗಳನ್ನು ಒಪ್ಪಿಕೊಂಡಿರುವುದಲ್ಲದೆ ಶ್ರೀ ಶಂಕರಾಚಾರ್ಯರು ನಮ್ಮ ಗುರುಗಳೆಂದು ನಂಬಿಕೊಂಡಿದ್ದಾರೆ. ಆದ್ದರಿಂದ ಇಲ್ಲಿಯ ಸಣ್ಣಪುಟ್ಟ ಕೆಲಸಗಳನ್ನು ಮಾಡುತ್ತಾರೆ. ಆದರೆ ಸಮಾಜದ ವಸ್ತುಸ್ಥಿತಿ ಇವರನ್ನು ಬೇರೆಯಾಗಿಯೇ ಗ್ರಹಿಸಿರುವುದು ಇಲ್ಲಿ ಗಮನಿಸಲೇಬೇಕಾಗಿರುವ ಸಂಗತಿಯಾಗಿದೆ.

ಗೌಡಾಲು ಸಮುದಾಯ ಸಾಮಾಜಿಕ ಸಂಘ-ಸಂಸ್ಥೆಗಳ ದೃಷ್ಟಿಯಿಂದ ಇತರ ಬುಡಕಟ್ಟು ಸಮುದಾಯಗಳಿಗಿಂತ ಭಿನ್ನತೆಯನ್ನು ಕಾಪಾಡಿಕೊಂಡು ಬಂದಿದೆ. ಏಕೆಂದರೆ ಗಿರಿಜನ ಹಿತರಕ್ಷಣ ಸಮಿತಿ, ಆದಿವಾಸಿ ಹಿತರಕ್ಷಣ ಸಮಿತಿ, ಗಿರಿಜನರ ಸಂಘ, ಗಿರಿಜನ ಮಹಿಳೆಯರ ಸ್ವಸಹಾಯ ಸಂಘಗಳು, Lamps Societyಯಂತಹ ಸಂಘ-ಸಂಸ್ಥೆಗಳನ್ನು ರಚನೆ ಮಾಡಿಕೊಂಡು ಪಶ್ಚಿಮಘಟ್ಟಗಳ ಇಳಿಜಾರಿನಿಂದ ಪೇಟೆಯವರೆಗೆ ವಿವಿಧ ದಾರಿಗಳಲ್ಲಿ ನಡಿಗೆಯನ್ನು ಪ್ರಾರಂಭಿಸಿ ಹೋರಾಟವನ್ನು ಮಾಡಿದೆ. ಇದು ಒಂದು ರೀತಿಯಲ್ಲಿ ಸಮುದಾಯದ ಬೆಳವಣಿಗೆಗೆ ಪೂರಕವಾಗಿರುವುದಲ್ಲದೆ ಆಧುನಿಕ ಸಮಾಜದ ಜಾತಿ ಶ್ರೇಣೀಕರಣದ ಮೇಲುಸ್ತರದಲ್ಲಿರುವ ಸಮುದಾಯಗಳೊಡನೆ ಸೇರಿ ಬದುಕು ರೂಪಿಸುವ ಬಗೆಯದ್ದಾಗಿದೆ.

ಇಲ್ಲಿ ಈ ಸಮುದಾಯ ಕಾಡಿನಲ್ಲಿ ಭೂಮಾಲೀಕರ ಹಿಡಿತವನ್ನು ಬಿಡಿಸಿಕೊಂಡು ಹೊರಬರಲು ಆಗದೆ ಇದ್ದ ಕಾಲದಿಂದ ಹಂತಹಂತವಾಗಿ ಹೊರಬರುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಆದರೂ ಇತ್ತೀಚಿಗೆ ಈ ರೀತಿಯ ಸಂಘ-ಸಂಸ್ಥೆಗಳನ್ನು ರೂಪಿಸಿಕೊಳ್ಳುತ್ತಿದೆಯೆಂದರೆ ಇದರ ಹಿಂದೆ ಶ್ರಮವು ಕಠಿಣವಾಗಿದೆ ಎಂದು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

ಗೌಡಾಲು ಬುಡಕಟ್ಟು ತನ್ನ ಕುಟುಂಬದಲ್ಲಿ ಯಾವ ರೀತಿಯಾಗಿ ಶ್ರಮವನ್ನು ಹಂಚಿಕೊಂಡು ಬದುಕು ಸಾಗಿಸುತ್ತದೆಯೋ ಅದೇ ರೀತಿಯಲ್ಲಿ ತನ್ನ ಸಮಾಜದ ಸಾಮಾಜಿಕ ಸಂಸ್ಥೆಗಳನ್ನು ಕೂಡ ರಚನೆ ಮಾಡಿಕೊಂಡಿರುವುದು ಇಲ್ಲಿ ವಿಶೇಷವಾಗಿದೆ. ಅಂದರೆ ಪ್ರತಿಯೊಂದು ಸಂಘ-ಸಂಸ್ಥೆಯಲ್ಲಿ ಯಾರಿಗೆ ಯಾವ ಕೆಲಸವನ್ನು ವಹಿಸಿರುತ್ತಾರೋ ಅವರೇ ಆ ಕೆಲಸವನ್ನು ಮಾಡಬೇಕು ಎಂಬ ನಿಯಮಗಳನ್ನು ರಚಿಸಿಕೊಂಡು ಪಾಲಿಸುತ್ತಿದ್ದಾರೆ. ಈ ರೀತಿಯ ಕರ್ಮಗಳಿಗೆ ಯಾವುದೇ ಹಣವು ದೊರೆಯದಿದ್ದರೂ ಇಡೀ ಸಮುದಾಯದ ಹಿತಕ್ಕಾಗಿ ಕೆಲಸ ಮಾಡುತ್ತಿರುವುದನ್ನು ಗಮನಿಸಬಹುದು. ಗೌಡಾಲುಗಳಲ್ಲಿ ಸಹಕಾರ, ಸಹಬಾಳ್ವೆ ಪರಸ್ಪರರ ಅವಲಂಬನೆ ಇರುವುದರಿಂದ ಸಮುದಾಯದ ಶ್ರೇಯಸ್ಸು ಕೂಡ ಇತರ ಬುಡಕಟ್ಟುಗಳಿಗೆ ಹೋಲಿಸಿದರೆ ಉತ್ತಮವೆಂದು ಸಾಬೀತಾಗುತ್ತದೆ.

ಗೌಡಾಲು ಸಮುದಾಯವು ಪೇಟೆಯ ಸಂಪರ್ಕವನ್ನು ಇಟ್ಟುಕೊಂಡಿದೆ ಮತ್ತು ಇತ್ತೀಚೆಗೆ ಪ್ರಾಥಮಿಕ ಶಾಲೆಗಳು ಇವರಿರುವ ಸ್ಥಳಗಳಲ್ಲಿ ಸ್ಥಾಪನೆಯಾಗಿರುವುದರಿಂದ ಸಮುದಾಯದ ಸಂಘ-ಸಂಸ್ಥೆಗಳಲ್ಲಿ ಸದಸ್ಯತ್ವವನ್ನು ಹೊಂದಿದ್ದಾರೆ. ಇವರು S.D.M.C ಮತ್ತು ಜಿಲ್ಲೆಯ ಕೆಲವೊಂದು ಸಾಮಾಜಿಕ ನ್ಯಾಯ ಸಮಿತಿಯ ಸದಸ್ಯರು ಆಗಿದ್ದಾರೆ. ಆದ್ದರಿಂದ ಗೌಡಾಲು ಸಮುದಾಯವು ಸಾಮೂಹಿಕ ಅಭಿವೃದ್ಧಿಯ ಯೋಜನೆಗಳಲ್ಲಿ ಆಸಕ್ತಿಯನ್ನು ಹೊಂದಿ ಸಹಕಾರ ತತ್ವವನ್ನು ಮೈಗೂಡಿಸಿಕೊಂಡು ಜೀವಿಸುವ ಸಮುದಾಯವಾಗಿದೆ.

**೨.೩. ಗೌಡಾಲು ಸಮುದಾಯದ ಆರ್ಥಿಕ ಸ್ಥಿತಿಗತಿಗಳು**

ಪ್ರಸ್ತುತ ಬುಡಕಟ್ಟಿನ ಆರ್ಥಿಕ ಸ್ಥಿತಿಗತಿಯನ್ನು ಚರ್ಚಿಸುವುದಕ್ಕಿಂತ ಪೂರ್ವದಲ್ಲಿ ನಾವು ಪ್ರಾಚೀನ ಭಾರತದಿಂದ ಇಲ್ಲಿಯವರೆಗೆ ಯಾವ ರೂಪದಲ್ಲಿ ಸಮುದಾಯಗಳು ಆರ್ಥಿಕ ಚಟುವಟಿಕೆಗಳನ್ನು ರೂಢಿಗತವಾಗಿಸಿಕೊಂಡು ಬಂದಿವೆ ಎಂಬುದನ್ನು ಅರಿಯಬೇಕಾಗಿದೆ. ಈ ಹಿನ್ನೆಲೆಯಲ್ಲಿಯೇ ಭಾರತದಲ್ಲಿ ವಾಸ ಮಾಡುತ್ತಿರುವ ಬುಡಕಟ್ಟುಗಳ ಆರ್ಥಿಕ ಸ್ಥಿತಿಗತಿ ಕುರಿತು ಅಧ್ಯಯನ ಮಾಡಲೇಬೇಕಾದ ಅನಿವಾರ್ಯತೆ ಇಂದಿನ ದಿನಮಾನಗಳಲ್ಲಿ ಮುಖ್ಯವಾಗುತ್ತದೆ. ಏಕೆಂದರೆ ಒಂದು ಕಾಲದಲ್ಲಿ ಅಲೆಮಾರಿಗಳಾಗಿ ವ್ಯವಸ್ಥಿತವಲ್ಲದ ಬದುಕನ್ನು ರೂಪಿಸಿಕೊಂಡಿದ್ದ ಮಾನವ ಹಂತ ಹಂತವಾಗಿ ಬೌದ್ಧಿಕ ಮಟ್ಟಕ್ಕನುಗುಣವಾಗಿ ತಮ್ಮ ಜೀವನ ಶೈಲಿಯನ್ನು ರೂಪಿಸಿಕೊಳ್ಳುತ್ತಾ ಬಂದಿರುವುದು ಇತಿಹಾಸದಿಂದ ಮನವರಿಕೆಯಾಗಿದೆ. ಈ ಹಿನ್ನೆಲೆಯಲ್ಲಿಯೇ ಬುಡಕಟ್ಟು ಸಮುದಾಯಗಳು ತಮ್ಮ ದಿನನಿತ್ಯದ ಹಸಿವಿನ ಬವಣೆಯನ್ನು ನೀಗಿಸಿಕೊಳ್ಳಲು ಕಾಡಿನಲ್ಲಿ ಸಿಗುವ ಹಣ್ಣುಗಳು, ಜೇನು, ಕಾಡು ಕಿತ್ತಳೆ, ಗೆಣಸು ಮುಂತಾದವುಗಳನ್ನು ಕಿತ್ತುತಿನ್ನುತ್ತ ಗುಂಪು ಗುಂಪಾಗಿ ಸೇರಿಕೊಂಡು ಹಂಚಿಕೊಂಡು ತಿನ್ನುತ್ತಿದ್ದವರು ಎಂಬುದನ್ನು ಮರೆಯುವಂತಿಲ್ಲ. ಆದ್ದರಿಂದ ಬುಡಕಟ್ಟು ಸಮುದಾಯಗಳ ಬದುಕು ಉಳಿತಾಯದ ಮನೋಭಾವನೆಯಿಲ್ಲದ ಬದುಕಾಗಿತ್ತು ಹಾಗೂ ಹಣದ ಪರಿಕಲ್ಪನೆಯ ಅರಿವು ಕೂಡ ಅವರಿಗೆ ಇರಲಿಲ್ಲ ಎಂಬುದು ಗಮನಾರ್ಹವಾದುದು.

ಮಾನವ ಸಮಾಜಜೀವಿಯೊಂದೇ ಅಲ್ಲ, ಆರ್ಥಿಕ ಜೀವಿಯೂ ಕೂಡ ಹೌದು. ಆರ್ಥಿಕ ಜೀವನವು ಸಮಾಜ ಜೀವನದ ಒಂದು ಭಾಗ. ಸಮಾಜದಲ್ಲಿ ಆರ್ಥಿಕ ಅಗತ್ಯತೆಗಳು ಮತ್ತು ಚಟುವಟಿಕೆಗಳು ಪ್ರಧಾನವಾದುವು. ಮಾನವ ತನ್ನ ಜೀವನ ನಿರ್ವಹಣೆಗಾಗಿ ಆರ್ಥಿಕ ಚಟುವಟಿಕೆಗಳಲ್ಲಿ ನಿರತನಾಗಿರುತ್ತಾನೆ. ಆದ್ದರಿಂದ ಆರ್ಥಿಕ ಚಟುವಟಿಕೆಗಳು ಮತ್ತು ಸಾಮಾಜಿಕ ಅಂಶಗಳು ಬುಡಕಟ್ಟುಗಳಲ್ಲಿ ಅಂತರ್ ಸಂಬಂಧವನ್ನು ಹೊಂದಿರುತ್ತವೆ. ಆರ್ಥಿಕ ಸಂಸ್ಥೆಗಳು ಮತ್ತು ಇತರ ಸಂಸ್ಥೆಗಳ ಸಂಬಂಧವು ಆದಿವಾಸಿಗಳಲ್ಲಿ ಅತಿ ನಿಕಟವಾಗಿದೆ. ಇಲ್ಲಿ ಜೀವನ ನಿರ್ವಹಣೆಯು ಅಲೌಕಿಕ ಶಕ್ತಿಗಳು, ಸಾಂಪ್ರದಾಯಿಕ ನಿಷೇಧಗಳು, ಅಂತಸ್ತು, ಸಾಮುದಾಯಿಕ ಕಲ್ಯಾಣ ಮತ್ತು ಅನೌಪಚಾರಿಕ ಸಾಮಾಜಿಕ ಒತ್ತಡಗಳೊಡನೆ ನಿಕಟ ಸಂಬಂಧವನ್ನು ಹೊಂದಿದೆ. ಈ ಪರಿಣಾಮವಾಗಿ ಬುಡಕಟ್ಟುಗಳ ಕುಟುಂಬವು ಎಲ್ಲ ಆರ್ಥಿಕ ಚಟುವಟಿಕೆಗಳ ಉತ್ಪಾದನೆ, ಉಪಭೋಗ ಶೇಖರಣೆ ಕೇಂದ್ರವಾಗಿದೆ.

ಸಂಶೋಧನೆಯ ಸಂದರ್ಭದಲ್ಲಿ ಸಮುದಾಯಗಳನ್ನು ಕುರಿತು ಆಲೋಚಿಸುವಾಗ ಆರ್ಥಿಕ ದೃಷ್ಟಿಕೋನವನ್ನು ಗಮನಿಸಬೇಕಾಗುತ್ತದೆ. ``ಭಾರತವು ಪ್ರಾಚೀನ ಸಮಾಜದಿಂದ ಇಲ್ಲಿಯವರೆಗೆ ಯಾವ ರೂಪದಲ್ಲಿ ಬೆಳೆದು

ಬಂದಿದೆ ಎಂಬುದನ್ನು ಚರ್ಚಿಸಬೇಕಾದ ಅವಶ್ಯಕತೆ ಇದೆ. ಪ್ರಭುತ್ವದ ಆ ದಿನದಲ್ಲಿ ಜೀವನವನ್ನು ಸಾಗಿಸಿಕೊಂಡು ಬಂದಿರುವ ತಳಸಮುದಾಯಗಳು ಭಾರತದ ವರ್ಣ ವ್ಯವಸ್ಥೆಯನ್ನು ಒಪ್ಪಿಕೊಂಡು ಬಂದಿರುವುದು ಇತಿಹಾಸದಿಂದ ಮನವರಿಕೆಯಾಗಿದೆ. ಈ ಹಿನ್ನೆಲೆಯಿಂದ ತಲ ತಲಾಂತರವಾಗಿ ಆರ್ಥಿಕ ಕಾರಣಗಳಿಗಾಗಿ ಬುಡಕಟ್ಟು ಸಮುದಾಯಗಳು ಪರಿತಪಿಸುವುದಷ್ಟೇ ಅಲ್ಲ, ಶೋಷಕರಿಂದ ಶೋಷಣೆಗೆ ಒಳಗಾಗುತ್ತಲೇ ಬಂದಿವೆ. ಇದರಿಂದ ಉತ್ಪಾದಕ ಶಕ್ತಿಗಳು ಮತ್ತು ಅವುಗಳ ಪರಿಣಾಮಗಳು ಸಮಾಜದ ಮೂಲಭೂತ ಸ್ತರಗಳಲ್ಲಿ ಸಕ್ರಿಯವಾಗಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಹಾಗಾಗಿ ಬುಡಕಟ್ಟು ಸಮುದಾಯಗಳು ಮತ್ತು ಪ್ರಭುತ್ವದ ವ್ಯವಸ್ಥೆಯ ನಡುವೆ ಆರ್ಥಿಕ ಅಂಶಗಳಿಗಾಗಿ ಸಂಘರ್ಷವು ಏರ್ಪಟ್ಟಿರುವುದು ಸ್ಪಷ್ಟವಾಗಿ ಸಾಮಾಜಿಕ ವ್ಯವಸ್ಥೆಯ ಒಳಗಡೆ ಗೋಚರಿಸುತ್ತದೆ.''[೧]

ಪ್ರಾಚೀನ ಕಾಲದಿಂದ ಪ್ರಸ್ತುತ ಕಾಲದವರೆಗೆ ಧರ್ಮದ ಹೆಸರಿನಲ್ಲಿ ಆರ್ಥಿಕತೆಯನ್ನು ಭದ್ರಪಡಿಸಿಕೊಳ್ಳಲು ಹಲವು ರೀತಿಯ ಹೋರಾಟಗಳು ನಡೆಯುತ್ತಾ ಇರುವುದು ಮುಖ್ಯವಾಗುತ್ತದೆ. ಆದ್ದರಿಂದ ವಂಶಪಾರಂಪರ್ಯವಾಗಿ ಇನ್ನೊಬ್ಬರ ಹಂಗಿನಲ್ಲಿಯೇ ಬದುಕನ್ನು ಕಳೆಯುತ್ತಾ ಬಂದಿರುವ ಬುಡಕಟ್ಟುಗಳ ಮತ್ತು ದಲಿತ ಸಮುದಾಯಗಳ ಬದುಕನ್ನು ಕುರಿತು ವಸ್ತುನಿಷ್ಠವಾದ ಅಧ್ಯಯನಗಳ ಅವಶ್ಯಕತೆಯು ಪ್ರಸ್ತುತ ಬದಲಾಗುತ್ತಿರುವ ಸಮಾಜಕ್ಕೆ ಮುಖ್ಯವಾದುದಾಗಿದೆ. ಆದ್ದರಿಂದ ನಾವು ಗೌಡಾಲು ಸಮುದಾಯದ ಆರ್ಥಿಕ ವ್ಯವಸ್ಥೆಯನ್ನು ಕುರಿತು ಚಿಂತಿಸುವುದಷ್ಟೇ ಅಲ್ಲ ಇಂದಿನ ದಿನಮಾನಗಳಲ್ಲಿ ಈ ಬುಡಕಟ್ಟಿನ ಸ್ಥಿತಿಗತಿ ಏನು ಎಂದು ಚರ್ಚಿಸಲೇಬೇಕಾಗಿರುವುದರಿಂದ ಅಧ್ಯಯನದ ದೃಷ್ಟಿಯಿಂದ ಮಹತ್ವವನ್ನು ಪಡೆಯುತ್ತದೆ. ಈ ಹಿನ್ನೆಲೆಯಿಂದ ಗೌಡಾಲು ಸಮುದಾಯದ ಸಾಮಾಜಿಕ ಸ್ಥಾನಮಾನ ನಿರ್ಧರಿಸುವಲ್ಲಿ ಆರ್ಥಿಕ ಸ್ಥಿತಿಗತಿ ಮುಖ್ಯ ಪಾತ್ರ ವಹಿಸುತ್ತಿದೆ. ''ಏಕೆಂದರೆ ಸಮಾಜದಲ್ಲಿ ಜಾತಿ ಜಾತಿಗಳ ನಡುವೆ ಮೇಲು ಕೀಳು ಎಂಬ ಬೇಧಗಳಿರುವಂತೆ ಆರ್ಥಿಕ ಸಂದರ್ಭದಲ್ಲೂ ಸಹ ಬಡವ ಶ್ರೀಮಂತ ಎಂಬ ಶ್ರೇಣೀಕರಣಗಳಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿರುವುದರಿಂದ ಭಾರತದ ಬುಡಕಟ್ಟುಗಳು ಅನೇಕ ಶತಮಾನಗಳಿಂದ ಸಾಮಾಜಿಕ, ರಾಜಕೀಯ, ಆರ್ಥಿಕ ನ್ಯೂನತೆಗಳನ್ನು ಅನುಭವಿಸುತ್ತಾ ಬಂದಂತೆ ಗೌಡಾಲು ಬುಡಕಟ್ಟು ಕೂಡ ಈ ತೆರನಾದ ಸಮಸ್ಯೆಗಳಿಂದ ಬಳಲುತ್ತಿದೆ. ಬುಡಕಟ್ಟು ಸಮುದಾಯಗಳು ಅನಾದಿ ಕಾಲದಿಂದಲೂ ಆರ್ಥಿಕವಾಗಿ ದುರ್ಬಲವಾಗಿರುವುದರಿಂದ ಸಮಾಜದ ಮುಂದುವರಿದ ವರ್ಗಗಳ ಶೋಷಣೆಗೆ ಗುರಿಯಾಗಿ ಹಿಂದುಳಿಯಬೇಕಾಗಿದೆ. ಔದ್ಯೋಗಿಕತೆಯ ಪ್ರವೇಶ ಆದ ಮೇಲೂ ಇಂದಿನವರೆಗೆ ಬುಡಕಟ್ಟುಗಳನ್ನು ಕೂಲಿಕಾರನನ್ನಾಗಿ ನೇಮಿಸಿಕೊಂಡು ದುಡಿಸಿಕೊಳ್ಳುತ್ತಾ ತೀವ್ರ ಅವಮಾನ, ಹಸಿವು, ಗಂಭೀರ ಸ್ವರೂಪದ ರೋಗರುಜಿನಗಳಿಗೆ ತುತ್ತಾಗಿರುವ ಬುಡಕಟ್ಟು ಸಮುದಾಯ ನಿಜವಾಗಿಯೂ ದಟ್ಟ ದಾರಿದ್ರ್ಯದ ನೆರಳಿನಲ್ಲಿ ಬದುಕುತ್ತಿದೆ. ತೀವ್ರಗತಿಯ ಆಧುನೀಕರಣ ಮತ್ತು ಕೈಗಾರಿಕೀಕರಣ ದೇಶದಲ್ಲಿ ಅರಣ್ಯ ಪ್ರದೇಶವನ್ನು ಕಿರಿದುಗೊಳಿಸಿದೆ.''[೨] ಆದ್ದರಿಂದ ಬುಡಕಟ್ಟು ಸಮುದಾಯಗಳ ಜೀವನೋಪಾಯಕ್ಕೆ ಪ್ರತಿಕೂಲವಾಗಿದೆ. ಪನರ್‌ವಸತಿ ಮತ್ತು ಪುನರ್ ಬಂಡವಾಳ ಯೋಜನೆಗಳು ಇವರನ್ನು ಕಾಡಿನಿಂದ ಬಯಲಿಗೆ ಸ್ಥಳಾಂತರಗೊಳಿಸಿ ಶೋಚನೀಯವಾದ ಸ್ಥಿತಿಗೆ ತೆಗೆದುಕೊಂಡು ಹೋಗಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಬುಡಕಟ್ಟು ಸಮುದಾಯಗಳ ಆರ್ಥಿಕ ಚಟುವಟಿಕೆಗಳನ್ನು ಚರ್ಚಿಸ ಹೊರಟರೆ ''ಪ್ರಾಚೀನ ಕಾಲದಿಂದಲೂ ಸ್ವಂತ ಆಸ್ತಿಯ ಕಲ್ಪನೆಯಿಲ್ಲದೆ ಆದಿಮಾನವನ ಬದುಕಿನ ಶೈಲಿಯಲ್ಲಿಯೇ ಜೀವಿಸುತ್ತಾ ಆಹಾರವನ್ನು ಹುಡುಕುತ್ತಾ ಆಹಾರ ಸಂಗ್ರಹಣೆ ಮತ್ತು ಬೇಟೆಯಿಂದ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದರು. ಕೃಷಿಯ ಅನ್ವೇಷಣೆ ಆದ ನಂತರ ಒಂದೆಡೆ ನಿಲ್ಲದೆ ಅಲೆಯುತ್ತಾ ಕುಮರಿ ಬೇಸಾಯವನ್ನು ಮಾಡುತ್ತಾ ಸ್ಥಳದಿಂದ ಸ್ಥಳಕ್ಕೆ ಸ್ಥಳಾಂತರಗೊಳ್ಳುವ ಪ್ರವೃತ್ತಿಯನ್ನು ಮೈಗೂಡಿಸಿಕೊಂಡರು. ಅರಣ್ಯವನ್ನು ನಮ್ಮೆಲ್ಲರ ತಾಯಿಯೆಂದು ಭೂಮಿಗೆ ತಾಯಿಯ ಸ್ಥಾನವನ್ನು ಕೊಡುವುದರ ಮೂಲಕ ವನದೇವತೆಯನ್ನು ತಮ್ಮ ಆರಾಧ್ಯ ದೇವರು ಎಂಬ ಮನೋಭಾವನೆಯಲ್ಲಿ ನಂಬಿಕೆಯನ್ನು ಇಟ್ಟುಕೊಂಡು ಕಾಡಿನಲ್ಲಿ ತುಂಡು ತುಂಡು ಭೂಮಿಯನ್ನು ಮಾಡಿಕೊಂಡು ಮಿಗಿತಾಯದ ಮನೋಪ್ರವೃತ್ತಿಯಿಲ್ಲದ ಬದುಕನ್ನು ಮಾಡುತ್ತಿದ್ದರು. ಆದರೆ ಸಾಮಾಜಿಕ ಬದಲಾವಣೆ ಹಾಗೂ ವಸಾಹತುಗಳ ಆಗಮನ ಬುಡಕಟ್ಟುಗಳ ಸಾಂಪ್ರದಾಯಿಕ ಬದುಕಿಗೆ ಕೊಡಲಿಪೆಟ್ಟಾಯಿತು. ಪರಿಣಾಮವಾಗಿ ಆಧುನಿಕ ಪ್ರಪಂಚದ ಬದುಕಿನ ರೂಪರೇಷೆಗಳು ಗೊತ್ತಿರದವರಿಗೆ ಬದುಕು ದಿಕ್ಕು ತೋಚದಾಯಿತು.''[8] ಈ ಹಿನ್ನೆಲೆಯಲ್ಲಿ ಗೌಡಾಲು ಬುಡಕಟ್ಟು ತನ್ನ ಸಮುದಾಯದ ಬದುಕಿನ ಬಂಡಿಯನ್ನು ಸಾಗಿಸಿಕೊಂಡು ಬಂದಿದೆ.

ಇಲ್ಲಿ ಮುಖ್ಯವಾಗಿ ಗಮನಿಸಲೇಬೇಕಾಗಿರುವುದೇನೆಂದರೆ ಭಾರತಕ್ಕೆ ವಿದೇಶಿಯರು ಯಾವಾಗ ಪ್ರವೇಶ ಮಾಡಿದರೋ ಅಂದಿನಿಂದಲೇ ಪಶ್ಚಿಮಘಟ್ಟದ ಕಾಡುವಾಸಿಗಳಾದ ಬುಡಕಟ್ಟುಗಳ ಅರ್ಥ ವ್ಯವಸ್ಥೆಯು ಅಸ್ಥಿರವಾಗುವುದಕ್ಕೆ ಪ್ರಾರಂಭಿಸಿದೆ. ''ಭಾರತದಲ್ಲಿದ್ದ ಸಾಂಬಾರ ಪದಾರ್ಥಗಳ ಆಸೆಯಿಂದ ಯುರೋಪಿಯನ್ನರು ತಮ್ಮ ವಸಾಹತುಗಳನ್ನು ಸ್ಥಾಪಿಸುವುದರ ಮೂಲಕ ಆರ್ಥಿಕತೆಯ ಪ್ರಭುತ್ವವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡರು. ಪರಿಣಾಮವಾಗಿ ಪ್ರಾಚೀನ ಕಾಲದಲ್ಲಿ ಸಾಮಾಜಿಕ ವ್ಯವಸ್ಥೆಯ ಶ್ರೇಣೀಕರಣದ ಒಳಗೆ ಜೀವಿಸುತ್ತಿದ್ದವರು ಪುನಃ ಭೂಮಾಲೀಕರ ಹಾಗೂ ವಿದೇಶಿಯರ ಕೈಗೊಂಬೆಯಾಗಿ ತಾವು ಪರಂಪರಾಗತವಾಗಿ ನಂಬಿಕೊಂಡು ಬಂದಿದ್ದ ಮತ್ತು ತಮ್ಮ ದಿನನಿತ್ಯದ ಹಸಿವನ್ನು ನೀಗಿಸುವ ಕಾಯಿದೆಗಳ ಕಣಜವಾಗಿದ್ದ ಅರಣ್ಯವನ್ನು ಅನಿವಾರ್ಯವಾಗಿ ಬೇರೊಬ್ಬರಿಗೆ ಬಿಟ್ಟುಕೊಟ್ಟು ಅನಾಥವಾದರು. ಪರಿಣಾಮವಾಗಿ ಪಶ್ಚಿಮಘಟ್ಟದ ಅರಣ್ಯ ಪ್ರದೇಶಗಳೆಲ್ಲವು ಭೂಮಾಲೀಕರ ಅಡಿಕೆ, ತೆಂಗು, ಮಾವು, ರಬ್ಬರ್, ಟೀ, ಕಾಫಿ, ಸಿಲ್ವರ್ ತೋಟಗಳಾಗಿ ಪರಿವರ್ತಿತವಾದವು. ಇದರ ಫಲವಾಗಿ ದಿನಗೂಲಿಯ ಆಳುಗಳಾಗಿ ಭೂಮಾಲೀಕರ ತೋಟಗಳಲ್ಲಿ ಬುಡಕಟ್ಟುಗಳು ದುಡಿಯಲು ಪ್ರಾರಂಭಿಸಿರುವುದನ್ನು ಇಂದಿನ ದಿನಮಾನಗಳಲ್ಲಿ ಕಾಣಲಾಗುವುದು.''[9]

ಮಲೆನಾಡಿನಲ್ಲಿ ವಿದೇಶಿಯರ ಆಗಮನದಿಂದ ಹಾಗೂ ಇಲ್ಲಿಯ ಭೂಮಾಲೀಕರಿಂದ ಬುಡಕಟ್ಟುಗಳ ಸ್ಥಿರವಾದ ಹಾಗೂ ಸ್ವಚ್ಛಂದವಾದ ಆರ್ಥಿಕ ಮತ್ತು ಸಾಮಾಜಿಕ ಜೀವನ ಅಸ್ಥಿರವಾಗಿ ಸಾಮೂಹಿಕ ಜೀವನ ಮತ್ತು ಸರ್ವರ ಸದಭಿರುಚಿಮಯವಾಗುತ್ತಾ ದಿನನಿತ್ಯದ ಬದುಕಿಗಾಗಿ ಪರಿತಪಿಸುವಂತಹ ವ್ಯವಸ್ಥೆಯು ನಿರ್ಮಾಣವಾಗಿರುವುದು ಶೋಚನೀಯವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಗೌಡಾಲು ಸಮುದಾಯದ ಆರ್ಥಿಕ ಚಟುವಟಿಕೆಗಳು ನಡೆದು ಬಂದ ದಾರಿಯು ಭಿನ್ನವಾಗಿರದೇ ಮಲೆನಾಡಿನ ಪರಿಸರಕ್ಕೆ ಅನುಗುಣವಾದ ಆರ್ಥಿಕತೆಯನ್ನು ರೂಪಿಸಿಕೊಂಡಿರುವುದರಿಂದ ಇಲ್ಲಿ ಚರ್ಚೆಗೆ ಬಹುಮುಖ್ಯವಾಗಿದೆ.

೨.೪. ಕೃಷಿ

ಕೃಷಿಯ ದೃಷ್ಟಿಯಿಂದ ಬುಡಕಟ್ಟು ಸಮುದಾಯಗಳನ್ನು ಅಧ್ಯಯನದ ಹಿನ್ನೆಲೆಯಲ್ಲಿ ಚರ್ಚಿಸಲು ಹೊರಟರೆ ಗೌಡಾಲು ಸಮುದಾಯವು ಮೂಲ ಕೃಷಿ ಪದ್ಧತಿಯಲ್ಲಿಯೇ ತನ್ನ ಬದುಕನ್ನು ಸಾಗಿಸಿಕೊಂಡು ಹಂತ ಹಂತವಾಗಿ ಕೃಷಿಯನ್ನು ಮಾಡುತ್ತ ಬಂದಿರುವ ಸಮುದಾಯವಾಗಿದೆ. ಭಾರತ ದೇಶವು ಕೃಷಿ ಪ್ರಧಾನ ದೇಶವಾಗಿರುವುದರಿಂದ ಇಲ್ಲಿ ವಾಸಿಸುವಂತಹ ಯಾವುದೇ ಸಮುದಾಯಗಳ ಬದುಕು ಕೃಷಿಯನ್ನೇ ಅವಲಂಬಿಸಿರುವುದರಿಂದ ಗೌಡಾಲು ಸಮುದಾಯದ ಕುಟುಂಬಗಳು ಅರಣ್ಯದ ಉತ್ಪನ್ನಗಳು ಮತ್ತು ಕೃಷಿಯನ್ನೇ ಅವಲಂಬಿಸಿರುವ ಸಂಗತಿ ಗೋಚರಿಸುತ್ತದೆ.

ಮಲೆನಾಡಿನ ಪರಿಸರಕ್ಕೆ ಅನುಗುಣವಾದ ಕೃಷಿಯನ್ನು ಗೌಡಾಲು ಬುಡಕಟ್ಟು ಅವಲಂಬಿಸಿದೆ. ಇಲ್ಲಿ ಪ್ರಾಚೀನ ಕಾಲದಿಂದ ಬುಡಕಟ್ಟುಗಳು ಬದುಕು ಕಟ್ಟಿಕೊಂಡ ಹಿನ್ನೆಲೆಯಲ್ಲಿಯೇ ಈ ಸಮುದಾಯವು ಕೂಡ ಬದುಕಿನ ದಾರಿಯನ್ನು ಹುಡುಕಿಕೊಂಡಿರುವುದು ಗಮನಾರ್ಹವಾದ ಸಂಗತಿ. ಏಕೆಂದರೆ ಪ್ರಾಚೀನ ಕಾಲದಲ್ಲಿ ಭೂಮಿಯ ಒಡೆತನ ಹಾಗೂ ಅದರ ಉಸ್ತುವಾರಿಕೆಯು ಪ್ರಭುತ್ವದ ಕೈಯಲ್ಲಿದ್ದು ಈ ದೇಶದ ಯಾವುದೇ ಸಮುದಾಯಗಳು ಜೀತದಾಳುಗಳಂತೆ ದಿನವಿಡೀ ದುಡಿದು ಭೂಮಿಯ ಒಡೆಯರು ಕೊಟ್ಟ ಕಾಳು ಕಡಿಗಳನ್ನು ಮಾತ್ರ ತಮ್ಮ ಹೊಟ್ಟೆಗಾಗಿ ಉಪಯೋಗಿಸುತ್ತಿದ್ದರು. ಆದರೆ ಕೃಷಿಯಿಂದ ಬಂದ ಯಾವುದೇ ಲಾಭವು ಇವರ ಕೈಗೆ ಸೇರುತ್ತಿರಲಿಲ್ಲ. ಭೂಮಿಯನ್ನು ತಳ ಸಮುದಾಯಗಳು ಹೊಂದಿದ್ದರೆ ಅದನ್ನು ಕಬಳಿಸುವ ತಂತ್ರಗಾರಿಕೆಯನ್ನು ಕಂದಾಯ ವಸೂಲಿಯ ರೂಪದಲ್ಲಿ ಮಾಡಿರುವುದು ಚರಿತ್ರೆಯನ್ನು ಅವಲೋಕಿಸಿದಾಗ ತಿಳಿಯುವುದರಿಂದ ೫ ಮತ್ತು ೬ನೇ ಶತಮಾನಗಳಿಂದ ಇಲ್ಲಿಯವರೆಗೆ ಪ್ರಭುತ್ವ ಮತ್ತು ಬಂಡವಾಳಶಾಹಿಯ ನೀತಿಗೆ ಅನುಗುಣವಾದ ಕಾಯಿದೆಗಳು ಜಾರಿಗೆ ಬಂದು ಭೂಮಿಯು ಆದಿವಾಸಿ ಸಮುದಾಯಗಳಿಂದ ನುಣುಚಿಕೊಳ್ಳುತ್ತಿರುವುದಕ್ಕೆ ಪ್ರಸ್ತುತ ಸಮುದಾಯವು ಹೊರತಾಗಿಲ್ಲ ಎಂಬುದು ಕ್ಷೇತ್ರಕಾರ್ಯದಿಂದ ತಿಳಿಯುತ್ತದೆ. ಈ ಹಿನ್ನೆಲೆಯನ್ನು ಗಮನಿಸಿದಾಗ ಗೌಡಾಲು ಸಮುದಾಯವು ಬದುಕಿಗಾಗಿ ಆಹಾರವನ್ನು ಹುಡುಕುತ್ತಾ ಕಾಡಿನಲ್ಲಿ ಗೆಡ್ಡೆ ಗೆಣಸುಗಳನ್ನು ಸಂಗ್ರಹಣೆ ಮಾಡಿಕೊಂಡು ಗುಂಪು ಗುಂಪಾಗಿ ಜೀವನವನ್ನು ಮಾಡುತ್ತಾ ಬಂದಿರುವುದು ಕ್ಷೇತ್ರಕಾರ್ಯದಲ್ಲಿ ಮಾಹಿತಿದಾರರು ನೀಡುವ ಮಾಹಿತಿಯಿಂದ ಗ್ರಹಿಸಲಾಗಿದೆ. ಇತರೆ ಬುಡಕಟ್ಟುಗಳಂತೆ ಗೌಡಾಲು ಸಮುದಾಯ ಕೂಡ ಆಹಾರ ಸಂಗ್ರಹಣೆ, ಬೇಟೆ, ಕುಮ್ರಿ ಬೇಸಾಯ ಹಾಗೂ ಕೃಷಿಯಿಂದ ಬದುಕು ರೂಪಿಸಿಕೊಂಡ ಬುಡಕಟ್ಟಾಗಿದೆ. ಇದಕ್ಕೆ ಸಾಕ್ಷಿಯಾಗಿ ಈಗಲು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿಕೊಂಡು Lamp Societyಯ ಮೂಲಕ ಮಾರಾಟ ಮಾಡುತ್ತಿರುವುದನ್ನು ಗಮನಿಸಲಾಗಿದೆ. ಇನ್ನೂ ಕೆಲವು ಕುಟುಂಬಗಳು ಅಲ್ಲಲ್ಲಿ ತುಂಡು ತುಂಡು ಭೂಮಿಯನ್ನು ಕೃಷಿಗೆ ಬಳಸುತ್ತಿರುವುದು ತಿಳಿಯುತ್ತದೆ.

ಮಲೆನಾಡಿನ ಪ್ರದೇಶವು ಹೆಚ್ಚು ಮಳೆ ಬೀಳುವಂತಹ ಪ್ರದೇಶವಾದ್ದರಿಂದ ಇಲ್ಲಿ ವಾಸ ಮಾಡುತ್ತಿರುವ ಈ ಸಮುದಾಯವು ಬತ್ತ, ಅಡಿಕೆ, ಬಾಳೆ, ಮೆಣಸು, ಕಾಫಿ, ಉದ್ದು, ಹೆಸರು, ಹುರುಳಿ ಮುಂತಾದ ದವಸಧಾನ್ಯಗಳನ್ನು ಬೆಳೆಯುತ್ತದೆ. ಜೊತೆಗೆ ವೀಳೆದೆಲೆ, ಅನಾನಸ್ಸುಗಳನ್ನು ಕೂಡ ಬೆಳೆಯುವಂತಹ ಪರಿಪಾಟವನ್ನು ರೂಢಿಸಿಕೊಂಡಿದೆ.

ಈ ಎಲ್ಲ ಬೆಳೆಗಳನ್ನು ಮಳೆ ನೀರಿನ ಆಶ್ರಯದಲ್ಲಿ ಬೆಳೆಯುತ್ತಿರುವುದು ಇಲ್ಲಿ ಗಮನಾರ್ಹವಾಗಿದೆ. ಆದ್ದರಿಂದ ಈ ಭಾಗಗಳಲ್ಲಿ ಯಾವುದೇ ಕೆರೆಕಾಲುವೆಗಳಿರದೆ ಬೆಟ್ಟಗಳ ಇಳಿಜಾರಿನಲ್ಲಿ ದುಮುಕುವ ನೀರಿನ ಆಶ್ರಯವು ಇವರ ಬದುಕಿಗೆ ವರವಾಗಿದೆ. ಏತ ನೀರಾವರಿ ಅತ್ಯಂತ ಕಡಿಮೆಯ ಪ್ರಮಾಣದಲ್ಲಿ ಕಂಡುಬರುತ್ತದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ವಾಸ ಮಾಡುತ್ತಿರುವ ಈ ಬುಡಕಟ್ಟು ಸಮುದಾಯವು ಕೃಷಿಯ ಕ್ರಿಯೆಯನ್ನು 'ಶಕ್ಕುದಾರ ಕಟ್ಟುವ' ಶುಭಾಚರಣೆಯಿಂದ ಪ್ರಾರಂಭಿಸುತ್ತದೆ. ಮೊದಲ ಬಾರಿಗೆ ಉಳುಮೆ ಕಟ್ಟುವುದಕ್ಕೆ ಶಕ್ಕುದಾರ ಕಟ್ಟುವುದು ಎನ್ನುತ್ತಾರೆ. ಅಂದರೆ ಇದರ ಅರ್ಥವನ್ನು ಗೌಡಾಲು ಶಕುನ ನೋಡಿ ಕಟ್ಟುವುದು ಎನ್ನುತ್ತಾರೆ. ಈ ಪದ್ಧತಿ ಸಾಮಾನ್ಯವಾಗಿ ಯುಗಾದಿಯ ಹಬ್ಬದ ನಂತರ ಪರಂಪರಾಗತವಾಗಿ ಬಂದ ಹಾಗೂ ಗೊತ್ತುಪಡಿಸಿದ ದಿನವಾಗಿರುತ್ತದೆ. ಗುರುವಾರ ಮತ್ತು ಭಾನುವಾರದಂದು ತಮ್ಮ ದೈವಕ್ಕೆ ಹಣ್ಣುಕಾಯಿ ಕೊಟ್ಟು ಜೋಯಿಸರು ಹೇಳಿದ ವೇಳೆಗೆ ಸರಿಯಾಗಿ ಅಂದರೆ ಹಾಡಿಯ ಮುಖಂಡನ ಆಜ್ಞೆಯಂತೆಯೇ ಮೂಡುಮುಖನಾಗಿ ಎತ್ತುಗಳನ್ನು ನಿಲ್ಲಿಸಿ ನೇಗಿಲು ಹೂಡುತ್ತಾರೆ. ಮೇಳಿ ಹಿಡಿದು ಉಳುವ ವ್ಯಕ್ತಿ ಎತ್ತುಗಳಿಗೆ ಕಾಯಿ ಒಡೆದು ಎಲೆ ಅಡಿಕೆ ಹಣ್ಣುಗಳನ್ನಿಟ್ಟು ಪೂಜೆ ಸಲ್ಲಿಸಿ ಗದ್ದೆಯನ್ನು ಸುತ್ತ ಉಳುತ್ತಾನೆ. ಮುಂದೆ ಮಳೆ ಬಿದ್ದ ಮೇಲೆ ಮಣ್ಣಿನ ಹದ ನೋಡಿಕೊಂಡು ಗದ್ದೆ ಉಳುಮೆಯನ್ನು ಮಾಡುತ್ತಾರೆ. ಮುಂಗಾರು ಮಳೆ ಸುರಿಯತೊಡಗುವುದಕ್ಕೆ ಮೊದಲು ಆರು ಕಟ್ಟಿ ಆಗೋಡಿ ಬಿತ್ತನೆ ಗದ್ದೆಗಳ ತಯಾರಿಗಾಗಿ ಉಳುಮೆ ಮಾಡುತ್ತಾರೆ. ಇದನ್ನು ಮಾಗಿ ಹೂಟೆ ಎಂದು ಕರೆಯುತ್ತಾರೆ. ಅನುಕೂಲವಿದ್ದವರು ಎರಡು ಉಕ್ಕೆಯಾದ ಗದ್ದೆಗಳಿಗೆ ಮುಂಗಾರು ಬೆಳೆಗಳನ್ನು ಬೆಳೆಯುತ್ತಾರೆ. ಅವುಗಳಲ್ಲಿ ಎಳ್ಳು, ಅವರೆ ಬೆಳೆಗಳಾಗಿರುತ್ತವೆ. ಈ ಬೆಳೆಗಳು ಅಲ್ಪಾವಧಿಯವಾಗಿದ್ದು ಬತ್ತ ನಾಟಿ ಮಾಡುವುದಕ್ಕೆ ಮೊದಲೇ ಕೊಯ್ಲಿಗೆ ಬರುತ್ತವೆ.

ಗೌಡಾಲುಗಳು ಅಗೆ ಹಾಕುವ ಗದ್ದೆಗಳನ್ನು 'ಆಗೋಡಿ' ಎಂದು ಕರೆಯುತ್ತಾರೆ. ಎರಡು ಮೂರು ಸಲ ಉಳುಮೆ ಮಾಡಿ ಆ ನಂತರ ಮಣ್ಣು ಚೆನ್ನಾಗಿ ಪುಡಿಯಾದ ಮೇಲೆ ಹಾಗೂ ಮಣ್ಣು ಮಾಗಿದ ಕೂಡಲೇ ಬೀಜ ಹಾಕುವ ಕಾಲ ಸನ್ನಿತವಾಗಿದೆ ಎಂದು ಭಾವಿಸಿ ಎಕರೆಗೆ ಆರು ಗಾಡಿ ಗೊಬ್ಬರದಂತೆ ಬಿತ್ತುವ ಗದ್ದೆಗಳಿಗೆ ಗೊಬ್ಬರ ಸಾಗಿಸಿ ಅದನ್ನು ಚೆಲ್ಲುತ್ತಾರೆ. ಆದರೆ ಅಂಚು ಕೆತ್ತುವುದು, ಹೆಂಟೆ ಒಡೆಯುವುದು, ಕಸ ಕಡ್ಡಿಗಳನ್ನು ಹೆರಕುವುದು, ಬೇಲ ಕಟ್ಟುವುದು ಇಂತಹ ಪ್ರಾಥಮಿಕ ಕೆಲಸ ಕಾರ್ಯಗಳಾದ ಮೇಲೆ ಗೊಬ್ಬರ ಮಣ್ಣಿನಲ್ಲಿ ಕಲೆತು ಹೋಗುವಂತೆ ಎರಡು ಉಕ್ಕೆ ಉಳುಮೆ ಮಾಡಿ ಕೃಷಿ ಭೂಮಿಯನ್ನು ಸಿದ್ಧಮಾಡಿಕೊಂಡು ಬರುತ್ತಾರೆ. ನಂತರ ಭರಣಿ ಮಳೆ ಹೊತ್ತಿಗೆ ಬೀಜ ಮುಹೂರ್ತ ನಡೆಯುತ್ತದೆ. ಈ ರೀತಿಯ ಆಚರಣೆಯು ಸಾಂಪ್ರದಾಯಿಕ ರೀತಿಯಲ್ಲಿ ನಡೆಯುವ ಪದ್ಧತಿಯು ಭಾರತೀಯ ಸಮಾಜದಲ್ಲಿದ್ದ ಕೃಷಿಯ ಪಾವಿತ್ರ್ಯತೆಯನ್ನು ಸಾರುವ ಹಾಗೂ ಸಮಾಜದ ಉಳಿವು ಅಳಿವು ಕೃಷಿಯಿಂದಲೇ ಎಂಬುದನ್ನು ಗುರುತಿಸುವಂತಹದಾಗಿದೆ. ಆದ್ದರಿಂದ ಬುಡಕಟ್ಟು ಸಮುದಾಯಗಳಲ್ಲಿ ಪರಿವರ್ತನೆ ಸಮಾಜದೊಳಗೆ ಎಷ್ಟರಮಟ್ಟಿಗೆ ಕೃಷಿಯು ತನ್ನ ಸ್ಥಾನವನ್ನು ಇಟ್ಟುಕೊಂಡಿದೆ ಎಂದು ಮನವರಿಕೆಯಾಗುತ್ತದೆ. ಇಲ್ಲಿ ಗೌಡಾಲು ಸಮುದಾಯವು ಸಗಣಿಯಿಂದ ಸಾರಿಸಿದ ಕುಕ್ಕೆಗೆ ಕೆಂಪಾದ ಬಿಳಿಯ ನಾಮವನ್ನು ಹಾಕಿ ಇದರೊಳಗೆ ಬೀಜದ ಭತ್ತವನ್ನು ತುಂಬಿಕೊಂಡು ಸಗಣಿಯಿಂದ ಬೆನಕನನ್ನು ಮಾಡಿ ಅದಕ್ಕೆ

ಗರಿಕೆಯನ್ನು ಸಿಗಿಸಿಕೊಂಡು ಪೂರ್ವ ದಿಕ್ಕಿನ ಮೂಲೆಯಲ್ಲಿ ಬೀಜದ ಕುಕ್ಕೆಯನ್ನು ಇಟ್ಟು ಹಣತೆ ಹತ್ತಿಸಿ ಹಣ್ಣು ಕಾಯಿಗಳಿಂದ ಪೂಜೆ ಮಾಡಿ, ಸ್ಥಳದಿಂದಲೇ ೫ ಸಲ ಭೂಮಿಯನ್ನು ಬಗೆದು 'ಹೂಲಿಗ್ಯಾ' ಎಂದು ಎಲ್ಲರು ಹೇಳುತ್ತಾ ಬೀಜವನ್ನು ಬಿತ್ತುತ್ತಾರೆ. ಈ ರೀತಿ ಗೌಡಾಲು ಬುಡಕಟ್ಟು ತನ್ನ ಕೃಷಿಯ ಆಚರಣೆಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಆದರೆ ಮಲೆನಾಡಿನ ತಪ್ಪಲು ಪ್ರದೇಶಗಳಲ್ಲಿ ಬದುಕನ್ನು ರೂಪಿಸಿಕೊಂಡಿರುವ ಸಮುದಾಯಗಳು ಎರಡು ಬಗೆಯ ಸಾಗುವಳಿ ಕ್ರಮಗಳನ್ನು ರೂಢಿಸಿಕೊಂಡಿವೆ. ಒಂದು ಬಿತ್ತನೆ ಇನ್ನೊಂದು ನಾಟಿ ಮಾಡುವ ಕ್ರಮ ನೀರು ಎಲ್ಲಿ ಹರಿಯುತ್ತದೆ ಅಲ್ಲಿ ಗದ್ದೆಗಳನ್ನು ಮಾಡಿಕೊಂಡು ಬತ್ತದ ನಾಟಿ ಮಾಡುತ್ತಾರೆ. ಉಳಿದ ಒಣಭೂಮಿಯಲ್ಲಿ ಬೂದಿ, ಕೊಟ್ಟಿಗೆ ಗೊಬ್ಬರವನ್ನು ಹದ ಮಾಡಿದ ಮೇಲೆ ಚೆಲ್ಲಿ ಆ ನಂತರ ಬಿತ್ತನೆಯ ಕ್ರಮವನ್ನು ಮಾಡುವ ಪರಿಪಾಠವನ್ನು ರೂಢಿಗತವಾಗಿ ಮಾಡಿಕೊಂಡಿರುವುದು ಗಮನಾರ್ಹವಾದುದು. ಏಕೆಂದರೆ ಒಣಭೂಮಿಯಲ್ಲಿ ಬಿತ್ತನೆ ಮಾಡಿದ ಮೇಲೆ ೩ ದಿನಗಳ ಒಳಗೆ ಜೋರಾಗಿ ಮಳೆ ಬರಬಾರದು, ಒಂದು ವೇಳೆ ಬಂದರೆ ಬಿತ್ತಿದ ಬೀಜದ ಮೇಲೆ ಇರುವ ಹೆಪ್ಪುಗಟ್ಟಿದ ಭೂಮಿ ಸಡಿಲಗೊಳ್ಳಲು ಮುಳ್ಳಿನ ಕಟ್ಟಿಗೆಗಳಿಂದ ಏಸೆ ಎಳಿಸುತ್ತಾರೆ. ನಂತರ ಕೊರಡು ಹೊಡೆಯುವರು. ಇದರಿಂದ ಬಿತ್ತಿದ ಸಸಿ ಬುಡ ಸಡಿಲಗೊಳ್ಳುವುದಲ್ಲದೆ ಪೆರು ಬೆಳೆಯಲು ಅನುಕೂಲವಾಗುತ್ತದೆ. ಬೆಳೆಯು ಬೆಳೆಯುತ್ತಿರುವ ಸಂದರ್ಭದಲ್ಲಿ ಮಳೆ ನೀರಿಗಾಗಿ ಬೆಳೆಯು ಕಾಯುತ್ತಿರುತ್ತದೆ. ಮಳೆಯು ಚೆನ್ನಾಗಿ ಬಂದು ಗದ್ದೆಗಳಲ್ಲಿ ನೀರು ತುಂಬಿದ ಮೇಲೆ ಬಗೇನೆ ಮರದ ಮೊಳ್ಳಿಯಿಂದ ಅಲ್ಲಿ ಹೊಡೆಯುತ್ತಾರೆ. ಇದರಿಂದಾಗಿ ಕಳೆ ಕಿತ್ತು ಹೋಗುತ್ತದೆ. ಅಲ್ಲದೆ ಹೆಪ್ಪುಗಟ್ಟಿ ನಿಂತಿದ್ದ ಕೆಸರು ಕದಡಿ ಮೊಸರಾಗುತ್ತದೆ. ಪರಿಣಾಮವಾಗಿ ಬೆಳೆದ ಪೈರು ಚೆನ್ನಾಗಿ ಹಸಿರುಗಟ್ಟಿ ದಷ್ಟ ಪುಷ್ಟವಾಗಿ ಬೆಳೆಯುತ್ತದೆ. ಆ ನಂತರ ಒಂದು ಅಥವಾ ಎರಡು ವಾರಗಳ ಬಳಿಕ ಗದ್ದೆಯಲ್ಲಿ ಚೆನ್ನಾಗಿ ನೀರು ತುಂಬಿಸಿಕೊಂಡು ಬಗನೆ ಕೂರಡು ಹೊಡೆಯುವ ಪದ್ಧತಿಯಿದೆ. ಇದರಿಂದಾಗಿ ಕಸ ಕಡ್ಡಿ ಕಳೆಗಳೆಲ್ಲವು ಬುಡಮೇಲು ಆಗುತ್ತವೆ. ಆ ನಂತರ ಬೆಳೆದ ಪೈರನ್ನು ತಮ್ಮ ತಮ್ಮ ಮನೆಯ ಮುಂದಿನ ಅಂಗಳಕ್ಕೆ ತಂದು ಒಂದು ಕಡೆ ಗುಂಪು ಗುಂಪಾಗಿ ಹಾಕಿಕೊಂಡಿರುತ್ತಾರೆ.

ಇನ್ನೊಂದು ರೀತಿಯ ಕೃಷಿಯು ಗೌಡಾಲುಗಳಲ್ಲಿ ಪ್ರಚಲಿತವಿದೆ. ಅದೇ ಗದ್ದೆ ನಾಡಿ ಮಾಡುವ ವಿಧಾನ ಇಲ್ಲಿ ಕೆಸರುಗದ್ದೆಗಳನ್ನು ಕಾಡಿನ ಎಲ್ಲ ಸೊಪ್ಪು ಕೊಟ್ಟಿಗೆ ಗೊಬ್ಬರಕ್ಕೆ ಕತ್ರರಿಸಿ ಕೊಳೆಯಲು ಗದ್ದೆಗಳಲ್ಲಿ ನೀರು ಬಿಟ್ಟು ನಂತರ ಅರ್ಧ ಎಕ್ಕರೆ ಜಾಗಕ್ಕೆ ಒಂದು ಖಂಡುಗ ಬತ್ತವನ್ನು ಮೊಳಕೆ ಮಾಡಿ ಅಂದರೆ ಬತ್ತವನ್ನು ಬಸಿರಿಕಟ್ಟಿಸಿ ಚೆಲ್ಲುತ್ತಾರೆ. ಈ ತೆರನಾದ ಸಂಪ್ರದಾಯವನ್ನು ಈ ಬುಡಕಟ್ಟು ಇಂದಿನ ದಿನಮಾನಗಳಲ್ಲಿ ರೂಢಿಸಿಕೊಂಡು ಬಂದಿದೆ. ಇದರಿಂದ ಗದ್ದೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೀರು ತುಂಬಿಸಿ ನಂತರ ಸಮಪ್ರಮಾಣದಲ್ಲಿ ನೀರು ಇರುವಂತೆ ನೋಡಿಕೊಂಡು ಅಗೆ ಹಾಕಲು ಸಿದ್ಧ ಮಾಡಿಕೊಳ್ಳುತ್ತಾರೆ. ಗದ್ದೆಯಲ್ಲಿ ಪಟ್ಟಗಳನ್ನು ರಚಿಸಿ ಆ ಪಾತಿಗಳ ಮೇಲೆ ಬೀಜ ಚೆಲ್ಲುತ್ತಾರೆ. ಈ ರೀತಿಯಾಗಿ ಚೆಲ್ಲಿದ ಬೀಜದ ಮೇಲೆ ತೆಳುವಾಗಿ ಹುಡಿ ಮಣ್ಣು ಚೆಲ್ಲುವ ಪರಿಪಾಟವಿದೆ. ಇದನ್ನು ಈಗಲು 'ಬರ ಅಗೆ' ಎಂದು ಕರೆಯುತ್ತಾರೆ.

''ಗೌಡಾಲುಗಳು ನಾಟಿಯನ್ನು ಆರಂಭಿಸುವ ಮೊದಲು ಗದ್ದೆಗಳಿಗೆ ಗೊಬ್ಬರ ಹಾಕುವುದು, ಬೇಲಿ ಒಡ್ಡುಗಳನ್ನು ಕಟ್ಟುವುದು 'ಹೂಳಕೆ' ಹೊಡೆಯುವುದು, ಬದ ಸವರುವುದು ಮುಂತಾದ ಪ್ರಾಥಮಿಕ ಕೆಲಸಗಳನ್ನು

ಕೃಷಿಗೆ ಸಂಬಂಧಪಟ್ಟಂತೆ ಮಾಡುತ್ತಾರೆ. ಇಲ್ಲಿ ಗಮನಿಸಲೇಬೇಕಾದ ಸಂಗತಿಯೆಂದರೆ ಬುಡಕಟ್ಟುಗಳಲ್ಲಿ ಅವರದೇ ಆದ ವಿಶಿಷ್ಟವಾದ ಬದುಕು ಇರುತ್ತದೆ ಎಂಬುದಕ್ಕೆ ಕೃಷಿಯ ವಿಧಾನದ ಆಚರಣೆಗಳು ನಮ್ಮ ಕಣ್ಣು ಮುಂದೆ ಬಂದು ನಿಲ್ಲುತ್ತವೆ. ಆದ್ದರಿಂದ ಕ್ಷೇತ್ರಕಾರ್ಯದಲ್ಲಿ ಗೌಡಾಲುಗಳನ್ನು ಕುರಿತು ಪಡೆದ ಮಾಹಿತಿಯು ಮುಖ್ಯವಾಗುತ್ತದೆ. ಏಕೆಂದರೆ ಇವರು ಮಳೆ ತೊಡಗುವುದಕ್ಕೆ ಮೊದಲೇ ನಾಟಿ ಮಾಡುವ ಗದ್ದೆಗಳಿಗೆ ತರಗೆಲೆ, ಕಾಡಿಸಿ ಹುಳುಕು ಮಣ್ಣು, ಕರೆಯಗೋಡು, ಬಿದಿರು ಕುರಿ, ಕೆಮ್ಮಣ್ಣುಗಳ ಜೊತೆಗೆ ಕೂಡು ಹಟ್ಟಿಯ ಗೊಬ್ಬರ ಗುಂಡಿಯಿಂದ ಗದ್ದೆಗಳಿಗೆ ತಂದು ಹಾಕುತ್ತಾರೆ. ಮಳೆಯು ಆರಂಭವಾದ ಮೇಲೆ ಕಡ್ಡಾಯ ಎನ್ನುವಂತೆ ಕಬ್ಬಿಣ, ನೇಗಿಲಿನಿಂದ ಎಲ್ಲ ಗದ್ದೆಗಳ ಗೊಬ್ಬರವನ್ನು ಕತ್ತರಿಸಿ ಹಾಕಿ ಸೊಪ್ಪು ಮತ್ತು ಕೊಟ್ಟಿಗೆ ಗೊಬ್ಬರ ಕೊಳೆಯುವಂತೆ ಮಾಡಿ ನಂತರ ಗದ್ದೆಯನ್ನು ಮಟ್ಟ ಮಾಡಿಕೊಳ್ಳುತ್ತಾರೆ. ಈ ರೀತಿಯಾಗಿ ಎಲ್ಲ ಸಿದ್ಧತೆಗಳು ನಡೆದ ಮೇಲೆ ಅಗೆ ಹಾಕಿದ ಒಂದು ತಿಂಗಳು ಎಂಟು ದಿನಕ್ಕೆ ಸರಿಯಾಗಿ ಬತ್ತದ ಸಸಿಯನ್ನು ಕೀಳುತ್ತಾರೆ. ಈ ಪದ್ಧತಿಯನ್ನು ಮುಹೂರ್ತ ನೋಡಿ ಕೀಳುತ್ತಾರೆ. ಅಲ್ಲದೆ ಇಲ್ಲಿಯೂ ಕೂಡ ಅಗೆಯನ್ನು ಹಾಕಿರುವ ಪೂರ್ವ ಒಂದು ಕುಡಿಬಾಳೆ ಎಲೆ ಹಾಸಿ ಸಗಣಿಯಿಂದ ಮಾಡಿದ ಬೆನಕನನ್ನು ಗರಿಕೆಯ ಪತ್ರೆಗಳನ್ನು ಇಟ್ಟು ಅರಿಸಿನ ಕುಂಕುಮ ಹಚ್ಚಿ ಕಾಯಿ ಒಡೆದು ಹಣ್ಣು ಹೂಗಳಿಂದ ಭೂಮಿಯ ಒಡೆಯನ ಹೆಂಡತಿ ಪೂಜಿಸುತ್ತಾಳೆ. ಯಜಮಾನಿಯೇ ಮೊದಲು ಒಂದೆರಡು ಸಸಿಗಳನ್ನು ಕಿತ್ತು ನಂತರ ಬೇರೆಯವರು ಕೀಳುವ ಪರಿಪಾಟವಿದೆ.''[7]

ಇಲ್ಲಿ ಕೃಷಿಯು ವಿಶೇಷವಾಗಿದೆ. ಏಕೆಂದರೆ ಮಲೆನಾಡಿನ ಬುಡಕಟ್ಟು, ಬದುಕಿನ ಆಚರಣೆಗಳು ಹಾಗೂ ಬಯಲು ಸೀಮೆಯ ಜೀವನದ ಆಚರಣೆಗಳ ಹೋಲಿಕೆ ಮಾಡಿದಾಗ ಬುಡಕಟ್ಟುಗಳು ತಮ್ಮದೇ ಆದ ಜನಪದೀಯ ಅಂಶಗಳನ್ನು ಕಾಪಾಡಿಕೊಂಡು ಬಂದಿರುವುದು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗುತ್ತವೆ. ಆದ್ದರಿಂದ ಇಲ್ಲಿ ಗೌಡಾಲು ಸಮುದಾಯವು ತಮ್ಮ ತುಂಡು ತುಂಡು ಭೂಮಿಗೆ ಅಗತ್ಯವಿದ್ದಷ್ಟು ಸಸಿ ಕಿತ್ತ ನಂತರ 'ತೂಡನಟ್ಟಿಶಾಸ್ತ್ರ' ಮಾಡುತ್ತಾರೆ. ಅಂದರೆ ಮೊದಲು ಹಾಕುವ ನಾಟಿಯೇ 'ತೂಡನಟ್ಟಿ'. ಮನೆಯ ಯಜಮಾನ ಬೆನಕನನ್ನು ಪೂಜಿಸಿ ೪ ಎಸಳು ಸಸಿಗಳನ್ನು ನೆಡುತ್ತಾನೆ. ಆ ನಂತರ ಇತರ ಮಹಿಳೆಯರು ಅದೇ ರೀತಿ ಮಾಡುತ್ತಾರೆ. ತೂಡನಟ್ಟಿ ಮುಗಿದ ಮೇಲೆ ಐದು ಕುನ್ನೆರಲು ಗಿಡದ ರೆಂಬೆಗಳು, ಐದು ಮುಂಡಗದ ಕಣೆಗಳನ್ನು ಗದ್ದೆಯಲ್ಲಿ ಅಲ್ಲಲ್ಲಿ ನೆಟ್ಟು ಹಲಸಿನ ಕಾಯೊಂದನ್ನು ಎರಡು ಹೋಳುಮಾಡಿ ಒಂದೊಂದು ಭಾಗದಿಂದಲೂ ಒಂದೊಂದು ತೊಳೆ ತೆಗೆದುಕೊಂಡು ಗದ್ದೆಗಳಿಗೆ ಹಾಕಿ ಉಳಿದ ಪಲಾರವನ್ನು ನಾಡಿ ಮಾಡಿದವರಿಗೆ ತಿನ್ನಲು ಕೊಡುತ್ತಾರೆ. ಎಲ್ಲ ರೀತಿಯ ಆಚರಣೆಗಳನ್ನು ಕೃಷಿಯಲ್ಲಿ ಮಾಡಿ ಕೃಷಿಯನ್ನು ಅಭಿವೃದ್ಧಿಗೊಳಿಸಿಕೊಳ್ಳುವುದರತ್ತ ಗಮನ ಹರಿಸುತ್ತಾರೆ. ಬೆಳೆದ ಬೆಳೆಯನ್ನು ಕಾಡುಮೃಗ ಪಕ್ಷಿಗಳಿಂದ ರಕ್ಷಿಸಲು ತುಂಬ ಶ್ರಮ ಪಡುತ್ತಾರೆ.

ಗೌಡಾಲು ಸಮುದಾಯವು ಕೃಷಿಯನ್ನು ಸಂರಕ್ಷಿಸಿಕೊಂಡು ನಂತರ ಬೆಳೆದ ಪೈರಿನಲ್ಲಿ ತೆನೆ ಕಾಣಿಸಿಕೊಂಡಾಗ ಅದನ್ನು ಸ್ಪರ್ಶಿಸಿ ಕೈಮುಗಿದು ಕಿತ್ತುತಂದು ಕಣಜದಲ್ಲೂ, ಪಣತದಲ್ಲೂ ಇಡುತ್ತದೆ. ಹೀಗೆ ಮಾಡಿದರೆ ಪತ ಬರಿದಾಗುವುದಿಲ್ಲವೆಂಬ ನಂಬಿಕೆ ಇದೆ. ಇವರಲ್ಲಿ ಹಣದ ಕೊರತೆಯಿರುವುದರಿಂದ ಬತ್ತದ ಕೊಯ್ಲಿನ ಕೆಲಸ ಮುಯ್ಯಾಳು ಪದ್ಧತಿಯಲ್ಲಿ ನಡೆಯುತ್ತದೆ. ಇಲ್ಲಿ ಸಹಕಾರ ಪದ್ಧತಿಯಂತೆ ಎಲ್ಲರೂ ಸೇರಿ ಪ್ರತಿಯೊಬ್ಬರ

ಗದ್ದೆಗಳಿಗೆ ಕೊಯಿಲು ಮಾಡುತ್ತಾರೆ. ಕೊಯಿಲು ಮಾಡಿದ ಬೆಳೆಯನ್ನು ಹೊರೆ ಕಟ್ಟಿ ಕಣಕ್ಕೆ ಹೊತ್ತು ತರುತ್ತಾರೆ. ಆದರೆ ಕೊಯಿಲಿನ ಕಾಲದಲ್ಲಿ ಮಳೆ ಬಂದರೆ ತೆನೆ ಬತ್ತವನ್ನು ಸಿವುಡು ಕಟ್ಟಿ ಒಂದು ಮರದ ತುಂಡು ಇಟ್ಟು ಅದರ ಮೇಲೆ ಬಡಿದು ಕಾಳನ್ನು ಬಿಡಿಸುತ್ತಾರೆ. ಇಲ್ಲಿ ಗಮನಿಸುವುದೇನೆಂದರೆ ಗೌಡಾಲುಗಳು ಶುಭದಿನದಂದು ಒಕ್ಕಣೆ ಆರಂಭಿಸುವವರಾಗಿದ್ದಾರೆ. ಆದರೆ ಮೊದಲು ಸೀಮೆ ದೇವತೆಗೆ ಪೂಜೆ ಸಲ್ಲಿಸಿ ತೀರ್ಥ ಪ್ರಸಾದಗಳನ್ನು ಎಲ್ಲರಿಗೂ ಕೊಟ್ಟು ಕೋಳಿ ಕುಯ್ದು ಅಡುಗೆ ಮಾಡಿ ಕಡುಬು ಕೋಳಿಸಾರು ಉಂಡು ಒಕ್ಕಣೆಗೆ ಮಾಡುವರು. ಅಲ್ಲದೆ ರೋಣುಗಲ್ಲುಗಳನ್ನು ಕೆಲವು ಕುಟುಂಬಗಳು ಬಳಸಿದರೆ ಮತ್ತೆ ಕೆಲವು ಕುಟುಂಬಗಳು ಎತ್ತುಗಳಿಂದ ತುಳಿಸಿ ಒಕ್ಕಣೆ ಮಾಡುವರು. ಸಾಮಾನ್ಯವಾಗಿ ಗೌಡಾಲುಗಳು ತಮ್ಮ ಮನೆಯ ಮುಂದಿನ ಅಂಗಳದಲ್ಲಿ ಭತ್ತದ ಹುಲ್ಲನ್ನು ಹರಡಿ ಒಣಗಿದ ಮೇಲೆ ಕೋಣ ಅಥವಾ ಎತ್ತುಗಳಿಂದ ತುಳಿಸುತ್ತಾರೆ. ಒಂದು ತುಳಿತ ಆದ ಮೇಲೆ ನೆರಗನ್ನು ಬಾರುಕೋಲಿನಿಂದ ಮುಗುಚಿ ಮತ್ತೆ ಕೆಲವರು ದೊಡ್ಡ ದೊಡ್ಡ ಕಟ್ಟಿಗೆಯ ಕೋಲಿನಿಂದ ತಿರುವಿ ಹಾಕಿ ಇನ್ನೊಂದು ತುಳಿತ ತುಳಿಸುವರು. ಬತ್ತವು ಸಂಪೂರ್ಣವಾಗಿ ಹುಲ್ಲಿನಿಂದ ಉದುರಿದ ಮೇಲೆ ಹುಲ್ಲು ತೆಗೆದು ಬಗನೆಸೂಗೆ ಕಡ್ಡಿಗಳನ್ನು ತೆಗೆದುಕೊಂಡು ಬತ್ತದೊಂದಿಗಿರುವ ಸಣ್ಣ ಹೊಟ್ಟನ್ನು ಬೇರ್ಪಡಿಸುತ್ತಾರೆ. ನಂತರ ಬತ್ತವನ್ನು ರಾಶಿ ಮಾಡುತ್ತಾರೆ. ಹೋದ, ಬಂದ ಗಾಳಿಗೆ ತೂರಿ ಮತ್ತೆ ಸಂಪ್ರದಾಯದ ರೀತಿಯಲ್ಲಿ ಪೂಜೆಯನ್ನು ಮಾಡಿ ಆ ನಂತರವೇ ಮನೆಯ ಒಳಗಡೆ ತರುವ ಪದ್ಧತಿಯು ಗೌಡಾಲು ಬುಡಕಟ್ಟಿನಲ್ಲಿ ರೂಢಿಗತವಾಗಿರುವ ಕೃಷಿಯ ವಿಧಾನವಾಗಿದೆ. ಆದರೆ ಇಲ್ಲಿ ಕೃಷಿಯನ್ನು ಆಶ್ರಯವಾಗಿಸಿಕೊಂಡು ಬದುಕುತ್ತಿರುವ ಗೌಡಾಲು ಬುಡಕಟ್ಟಿನ ಕುಟುಂಬಗಳು ವಿರಳವಾಗಿವೆ. ಏಕೆಂದರೆ ಯಾವುದೇ ಭೂಮಿಯಿಲ್ಲದೆ ಭೂಮಿ ಇದ್ದರೂ ಕಾಲಕ್ಕೆ ಭೂಮಾಲೀಕರ ತೋಟಗದ್ದೆಗಳಲ್ಲಿ ದಿನಗೂಲಿಯಾಗಿ ದುಡಿಯುವವರು ಇಲ್ಲಿದ್ದಾರೆ ಎಂಬುದು ಅಧ್ಯಯನದಿಂದ ತಿಳಿದ ಮಾಹಿತಿಯಾಗಿದೆ. ಈ ಹಿನ್ನೆಲೆಯಿಂದ ಆರ್ಥಿಕವಾಗಿ ಪ್ರಬಲರಾದಾಗ ಮಾತ್ರ ಯಾವುದೇ ಸಮುದಾಯ ಸಮಾಜದ ವ್ಯವಸ್ಥೆಯಲ್ಲಿ ತನ್ನ ಸ್ಥಾನವನ್ನು ಇಟ್ಟುಕೊಳ್ಳಲು ಸಾಧ್ಯ. ಆದ್ದರಿಂದ ಗೌಡಾಲು ಸಾಮಾಜಿಕ ಬದಲಾವಣೆಯ ದಾರಿಯಲ್ಲಿ ಬರಬೇಕಾಗಿದೆ. ಅಲ್ಲದೆ ಅವರಿಗೆ ಇರುವ ಅಲ್ಪ ಸ್ವಲ್ಪ ಭೂಮಿಯ ಪಟ್ಟವನ್ನು ಸರ್ಕಾರ ಮಾನ್ಯತೆ ಮಾಡಬೇಕಾದ ಅನಿವಾರ್ಯತೆಯಿದೆ ಎಂಬುದು ಕ್ಷೇತ್ರಕಾರ್ಯದ ಸಮಯದಲ್ಲಿ ಪಡೆದ ಮಾಹಿತಿಯು ಗಮನಿಸುವಂತಹದ್ದಾಗಿದೆ. ಆದ್ದರಿಂದ ಗೌಡಾಲು ಸಮುದಾಯವು ಕೃಷಿಯಲ್ಲಿ ದವಸ ಧಾನ್ಯಗಳನ್ನಷ್ಟೇ ಅಲ್ಲದೆ ತೋಟದ ಬೆಳೆಗಳನ್ನು ಬೆಳೆಯುತ್ತಿರುವುದನ್ನು ಅಧ್ಯಯನ ದೃಷ್ಟಿಯಿಂದ ಕ್ಷೇತ್ರಕಾರ್ಯ ಮಾಡಿ ಮಾಹಿತಿಯನ್ನು ಸಂಗ್ರಹಿಸಿದಾಗ ತಿಳಿದು ಬಂದಿದೆ. ಚಿಕ್ಕಮಗಳೂರು ಮಲೆನಾಡಿನ ಪ್ರದೇಶವಾಗಿರುವುದಷ್ಟೇ ಅಲ್ಲದೆ ಕಣಿವೆ ಕಂದರಗಳ ತಗ್ಗು ಪ್ರದೇಶಗಳಿಂದ ಕೂಡಿರುವುದರಿಂದ ಹಾಗೂ ಮಳೆಗಾಲದಲ್ಲಿ ಮಳೆಯೂ ಚೆನ್ನಾಗಿ ಆಗುವುದರಿಂದ ತೋಟದ ಬೆಳೆಗಳನ್ನು ಬೆಳೆಯಲು ಹಿತಕರವಾದ ಹವಾಮಾನವು ಇರುವುದರಿಂದ ಗೌಡಾಲು ಬುಡಕಟ್ಟು ಬೆಟ್ಟದ ಇಳಿಜಾರಿನಲ್ಲಿ ಅಲ್ಲಲ್ಲಿ ತುಂಡು ತುಂಡು ತೋಟಗಳನ್ನು ಮಾಡಿಕೊಂಡಿದೆ. ಇಲ್ಲಿರುವ ಬೆಟ್ಟ ಗುಡ್ಡಗಳು ಈ ಸಮುದಾಯದ ಬದುಕಿಗೆ ಆಸರೆಯಾಗಿ ನೆಲೆ ನಿಂತಿರುವಂತೆ ಗೋಚರಿಸುತ್ತಿವೆ. ಆದ್ದರಿಂದ ಗೌಡಾಲು ಸಮುದಾಯ ಚಿಕ್ಕ ಚಿಕ್ಕ ತೋಟಗಳನ್ನು ಮಾಡಿಕೊಂಡಿವೆ.

ಮಲೆನಾಡಿನಲ್ಲಿ ವಾಸಿಸುವ ಗೌಡಾಲು ಬುಡಕಟ್ಟು ಭಾರತದ ಅರ್ಥವ್ಯವಸ್ಥೆಯ ಒಳಗಡೆ ಬದುಕುವ ಸಮುದಾಯವಾಗಿದೆ. ಇವರು ಭಾರತೀಯ ಸಂಸ್ಕೃತಿಯ ನೂರಾರು ತಲೆಮಾರುಗಳ ಕುರುಹುಗಳನ್ನು ತನ್ನ ಒಡಲಿನೊಳಗೆ ಕಾಪಾಡಿಕೊಂಡು ಬಂದಿರುವುದನ್ನು ಅವರ ಕೃಷಿ, ಪಶುಪಾಲನೆ, ಕೈ ಕಸುಬುಗಳಿಂದ ತಿಳಿಯಬಹುದಾಗಿದೆ. ಆದ್ದರಿಂದ ಗೌಡಾಲು ಸಮುದಾಯ ಸಾಮಾನ್ಯವಾಗಿ ವಾಸಿಸುವ ಹಾಡಿ ಭೌಗೋಳಿಕವಾಗಿ ನಿರ್ದಿಷ್ಟ ಎಲ್ಲೆಗಳನ್ನು ಪಡೆದಿದ್ದಂತೆಯೇ ರಾಜಕೀಯವಾಗಿಯೂ ತನ್ನನ್ನು ತಾನು ನಿಯಂತ್ರಿಸಿಕೊಳ್ಳುತ್ತ ಬಂದಿದೆ. ಅವರದೇ ಆದ ಆರ್ಥಿಕ ಚಟುವಟಿಕೆಯನ್ನು ಅವರ ಜೀವನದ ಎಲ್ಲ ಅಗತ್ಯತೆಗಳನ್ನು ಪೂರೈಸುತ್ತಾ ಕಸುಬುಗಾರರು, ಸೇವೆಗಾರರು, ಹಾಡಿಯ ಮುಖಂಡರು ಎಂಬ ಭೇದಭಾವವಿಲ್ಲದೆ ಒಂದಾಗಿ ಬಾಳುತ್ತಿದ್ದಾರೆ. ತತ್ಪರಿಣಾಮವಾಗಿ ಕೃಷಿಯ ಜ್ಞಾನದ ಜೊತೆಗೆ ತೋಟಗಾರಿಕೆಯ ಬೆಳೆಗಳನ್ನು ಬೆಳೆಯುವುದರಲ್ಲಿ ನಿಪುಣರಾಗಿದ್ದಾರೆ.

ಈ ರೀತಿಯ ಬದುಕನ್ನು ಪ್ರಚಲಿತ ದಿನಮಾನಗಳಲ್ಲಿ ರೂಢಿಗತವಾಗಿ ಮಾಡಿಕೊಂಡು ಬಂದಿರುವ ಇವರು ಆರ್ಥಿಕ ಸುಧಾರಣೆಗಾಗಿ ಅಡಿಕೆಯ ತೋಟಗಳನ್ನು ಮಾಡುತ್ತಾರೆ. ಒಂದು ವಿಶೇಷತೆಯೆಂದರೆ ಬತ್ತದಂತೆಯೇ ಅಡಿಕೆಯನ್ನು ಮಳೆಯ ನೀರಿನಿಂದ ಬೆಳೆಯುವುದು ಮುಖ್ಯವಾಗಿದೆ. ಕ್ಷೇತ್ರಕಾರ್ಯದಲ್ಲಿ ತಿಳುವಳಿಕೆದಾರರನ್ನು ''ತೋಟದ ಬೆಳೆಗೆ ಸಂಬಂಧಿಸಿದಂತೆ ಕೇಳಿದಾಗ ಅಡಿಕೆ ಬೆಳೆಗೆ ತೇವ, ತಂಪು, ಇರಲೇಬೇಕು, ಕಾಡುಮರಗಳ ನೆರಳಿರುವೆಡೆಯಲ್ಲಿ ನೀರಾವರಿ ಸೌಕರ್ಯ ಇದ್ದೆಡೆಗಳಲ್ಲಿ ತೋಟವನ್ನು ಕೂರಿಸುತ್ತವೆ ಎನ್ನುತ್ತಾರೆ. ಜಮೀನಿನಲ್ಲಿ ಒಂದು ಶುಭದಿನದಂತು 'ಕಪ್ಪು' ತೊಡುವರು, ಒಂದು ಕಪ್ಪಿಗೂ ಇನ್ನೊಂದು ಕಪ್ಪಿಗೂ ೧೨ ಅಡಿ ಅಂತರವಿರುವಂತೆ ಒಂದೂವರೆ ಅಡಿ ಆಳದ ಕಪ್ಪು ತೊಡುತ್ತಾರೆ. ಅಲ್ಲದೆ ಕಪ್ಪಿನಿಂದ ಎರಡು ಅಡಿ ಅಂತರ ಬಿಟ್ಟು ಹನ್ನೆರಡು ಅಡಿಗೊಂದರಂತೆ ಸಾಲಾಗಿ ಕುಳಿ ತೆಗೆದು ಕೊಟ್ಟಿಗೆ ಅಥವಾ ಹಟ್ಟಿಗೊಬ್ಬರ ಹಾಕಿ ಹದಕ್ಕೆ ಕೆಲವು ನುಣ್ಣು ಮಿಶ್ರ ಮಾಡಿ ಅಡಿಕೆಯ ಸಸಿಗಳನ್ನು ನೆಡುತ್ತಾರೆ. ಅಡಿಕೆಯ ಸಸಿಗಳಿಗೆ ನೆರಳು, ನೀರನ್ನು ಒದಗಿಸುವುದಕ್ಕಾಗಿ ಸಸಿಯ ಮಗ್ಗಲಲ್ಲಿ ಒಂದೊಂದು ಬಾಳೆ ಕಂದನ್ನು ನೆಡುತ್ತಾರೆ. ಅಲ್ಲದೆ ತೋಟಕ್ಕೆ ಸುತ್ತಲೂ ಬೇಲಿ ಅಥವಾ ಒಡ್ಡು ಹಾಕುತ್ತಾರೆ. ಇಲ್ಲಿ ಅಡಿಕೆ ಸಸಿ ಮತ್ತು ಬಾಳೆ ಕುದುಗಳೊಂದಿಗೆ ಬೆಳೆದಿದ್ದ ಕಳೆ ಕಸವನ್ನು ಕೆತ್ತಿ ಎಳೆದು ರಾಶಿ ಮಾಡುತ್ತಾ ಸಸಿ ಇರುವ ಬುಡವನ್ನು ಕೆತ್ತಿ ಸಸಿಯ ಸುತ್ತಲಿನ ಜಾಗವನ್ನು ಗುದ್ದಲಿಯಿಂದ ಕೊಚ್ಚುತ್ತಾರೆ. ಇದೆಲ್ಲ ಮಾಡಿದ ಮೇಲೆ ಹಟ್ಟಿಗೊಬ್ಬರ, ಕೆಮ್ಮಣ್ಣು ಮತ್ತು ಸೊಪ್ಪನ್ನು ಸಸಿಯ ಬುಡಕ್ಕೆ ಹಾಕುತ್ತಾರೆ. ಮುಂದುವರಿದು ವರ್ಷ ಬಿಟ್ಟು ವರ್ಷ ಇದೇ ರೀತಿಯಾಗಿ ಬೇಸಾಯವನ್ನು ಮಾಡುವ ಪದ್ಧತಿಯನ್ನು ಕಾಣಲಾಗುವುದು. ಇಷ್ಟೆಲ್ಲ ಕೆಲಸ ಮುಗಿದ ಮೇಲೆ ೫ ಅಥವಾ ೬ನೆಯ ವರ್ಷಕ್ಕೆ ಅಡಿಕೆ ಸಸಿಗಳು ಫಲ ಕೊಡಲು ಸಿದ್ಧವಾಗುತ್ತವೆ. ಆದರೆ ಈ ತೆರವಾದ ಕೃಷಿಯಿಂದ ನೆಮ್ಮದಿಯ ಬದುಕನ್ನು ಗೌಡಾಲುಗಳು ಮಾಡುತ್ತಾರೆ ಎಂದು ಭಾವಿಸುವಂತಿಲ್ಲ. ಏಕೆಂದರೆ ಇವರ ಕಾಡಿನೊಳಗಿನ ಬದುಕಿಗೆ ಅನೇಕ ಸಮಸ್ಯೆಗಳು ಕಾಡುತ್ತಿವೆ. ಅದರಂತೆ ಇವರು ಬೆಳೆಯುವ ಅಡಿಕೆ ಬೆಳೆಗೆ ವಿಪರೀತ ಮಳೆಯಿಂದಾಗಿ ಅಡಿಕೆ ಕೊನೆಗಳು ರೋಗಕ್ಕೆ ತುತ್ತಾಗಬಹುದು ಇದಕ್ಕೆ ಅವರದೇ ಆದ ಆಲೋಚನಾ ಕ್ರಿಯೆಯಲ್ಲಿ ಪರಿಹಾರಗಳನ್ನು ಮಾಡುತ್ತಾರೆ. ಇವರೂ ಮೊದಲು ಫಸಲನ್ನು ಕೀಳಿಸುವ ಮೊದಲು ತೋಟಕ್ಕೆ ಯಾವುದೇ ರೀತಿಯ ತೊಂದರೆಗಳಾಗದಂತೆ ತೋಟಕ್ಕೆ

ಕಾಡುಹಂದಿಯನ್ನು ಬಲಿ ಕೊಡುತ್ತಾರೆ. ಬಲಿ ಕೊಡುವಾಗ ಹಂದಿ ಬಲಿ ಕೊಡುವ ಸ್ಥಳದಲ್ಲಿ ಚರುವನ್ನಿಟ್ಟು ಒಂದು ಕಕ್ಕಡೆ ಹೊತ್ತಿಸಿಡುತ್ತಾರೆ. ಹಂದಿಯ ತಲೆಯ ಮೇಲೂ ಒಂದು ಕಕ್ಕಡೆ ಇಟ್ಟು ಮುಂದೆ ಯಾವ ಯಾವುದೇ ಅನಾಹುತ ಸಂಭವಿಸದಿರಲಿ ಎಂದು ದೈವವನ್ನು ಪ್ರಾರ್ಥಿಸಿ ಆ ನಂತರ ಹಂದಿಯನ್ನು ಬಲಿ ಕೊಡುವರು. ಹಂದಿಯ ತಲೆಯನ್ನು ಅಲ್ಲೆ ಗುಂಡಿ ತೆಗೆದು ಹೂಳಿ ಉಳಿದ ಭಾಗವನ್ನು ಅಡಿಗೆ ಮಾಡಿ ಕುಲ ಬಾಂಧವರಿಗೆ ತೋಟದಲ್ಲೇ ಊಟ ಹಾಕುತ್ತಾರೆ. ಆ ನಂತರ ಮನೆಯ ಯಜಮಾನ ಒಂದು ಶುಭದಿನದಂದು ಅಡಿಕೆಯನ್ನು ಕೊಯ್ದು ತರುವ ರೂಢಿಯನ್ನು ಮಾಡಿಕೊಂಡಿದ್ದಾರೆ. ಆದರೆ ಬೆಳೆಯನ್ನು ಗೌಡಾಲು ಸಮುದಾಯದ ಎಲ್ಲರೂ ಬೆಳೆಯುವುದಕ್ಕೆ ಸಾಧ್ಯವಾಗದೆ ಕೆಲವರು ಈ ಬೆಳೆಯಿಂದ ದೂರವಿದ್ದಾರೆ. ಪ್ರಸ್ತುತ ದಿನಮಾನಗಳಲ್ಲಿ ಅಡಿಕೆಯನ್ನು ಮಾರಾಟ ಮಾಡಿಕೊಂಡು ಹೋಗುವ ಮಧ್ಯಸ್ಥಿಕೆಗಾರರು ಇವರನ್ನು ಶೋಷಿಸುತ್ತಿದ್ದಾರೆ. ಅಂದರೆ ಇವರಿಂದ ಕಡಿಮೆ ಬೆಲೆಗೆ ತೆಗೆದುಕೊಂಡು ಹೆಚ್ಚಿನ ಬೆಲೆಗೆ ಮಾರಾಟ ಮಾಡಿಕೊಂಡು ಲಾಭವನ್ನು ಮಾಡಿಕೊಳ್ಳುವ ಪರಿಪಾಟವು ಹಾಗೆಯೇ ಮುಂದುವರಿದಿರುವುದು ಗಮನಾರ್ಹವಾದ ಸಂಗತಿಯಾಗಿದೆ.''[೬]

ಗೌಡಾಲು ಸಮುದಾಯವು ಅಲ್ಪ ಸ್ವಲ್ಪ ಕಬ್ಬು ಬೆಳೆಯನ್ನು ಬೆಳೆಯುತ್ತಿದೆ. ಜೊತೆಗೆ ಮುಂಗಾರು ಬೆಳೆಗಳಾದ ಹೆಸರು, ಎಳ್ಳು, ಅವರೆ, ಉದ್ದು ಹರಳು, ಹುರುಳಿ ಮುಂತಾದವುಗಳನ್ನು ಬೆಳೆಯುತ್ತಿದೆ. ಈ ರೀತಿಯಾಗಿ ಈ ಬುಡಕಟ್ಟು ತನ್ನ ಬದುಕಿಗಾಗಿ ಕಾಡಿನ ಇಳಿಜಾರಿನಲ್ಲಿ ತುಂಡು ತುಂಡು ಭೂಮಿಯನ್ನು ಕೃಷಿಗೆ ಒಳಪಡಿಸಿಕೊಂಡು ಅಡಿಕೆ, ಕಬ್ಬು, ಬಾಳೆ, ಕಾಫಿ, ಶುಂಠಿಗಳನ್ನು ಬೆಳೆದು ಈಗಲೂ Lamp Societyಗೆ ಮಾರಾಟ ಮಾಡಿ ಬಂದ ಅಲ್ಪ ಸ್ವಲ್ಪ ಹಣದಿಂದ ಬದುಕನ್ನು ರೂಪಿಸಿಕೊಳ್ಳುತ್ತಿದ್ದರೂ ಕೂಡ ಇವರ ಜೀವನದ ಮಟ್ಟ ಸುಧಾರಣೆಯಾಗದೆ ಸರ್ಕಾರದ ಯೋಜನೆಗಳು ಸರಿಯಾಗಿ ಸಿಗದೆ, ಕೃಷಿಯ ಬಗ್ಗೆ ಸರಿಯಾದ ಮಾಹಿತಿ ಲಭ್ಯವಾಗದೆ ಇರುವುದರಿಂದ ಇವರಲ್ಲಿ ಕೃಷಿಯು ಕುಂಟುತ್ತಾ ಸಾಗುತ್ತಿದೆ. ಆದ್ದರಿಂದ ಈ ವಿಷಯ ಅಧ್ಯಯನ ದೃಷ್ಟಿಯಿಂದ ಮುಖ್ಯವಾಗುತ್ತದೆ.

**ಗೌಡಾಲುಗಳು ಬಳಸುವ ಕೃಷಿ ಸಂಬಂಧಿ ಉಪಕರಣಗಳು**

ಗೌಡಾಲುಗಳು ಕೃಷಿಗಾಗಿ ತಮ್ಮ ಬದುಕಿನ ಉದ್ದಕ್ಕೂ ಬಳಸುವ ಉಪಕರಣಗಳ ಬಗ್ಗೆ ಆಲೋಚಿಸುತ್ತಾ ಹೊರಟರೆ ಉಪಕರಣಗಳಲ್ಲಿ ವೈವಿಧ್ಯತೆಯು ಕಂಡುಬರುತ್ತದೆ. ಒಂದೊಂದು ಉಪಕರಣಕ್ಕೂ ತನ್ನದೇ ಆದ ಉಪಯೋಗ ಹಾಗೂ ವೈಶಿಷ್ಟ್ಯ ಇದೆ. ಆದ್ದರಿಂದ ಇವುಗಳ ಬಳಕೆಯಲ್ಲೂ ಸಂಪ್ರದಾಯನಿಷ್ಠ ಮನೋಭಾವವೇ ಪ್ರಧಾನವಾಗಿ ಕಂಡುಬರುತ್ತದೆ. ಇಲ್ಲಿ ಗೌಡಾಲುಗಳು ಒಂದು ಉಪಕರಣಕ್ಕೆ ಏನಾದರೂ ಆದರೆ ಸಹಿಸಿಕೊಳ್ಳುವುದಿಲ್ಲ. ಒಂದು ಪಕ್ಷ ಯಾವುದಾದರೂ ಒಂದು ಉಪಕರಣವು ಅಚಾನಕ್ ಆಗಿ ಮುರಿದರೆ ಇಡೀ ನಮ್ಮ ಬದುಕಿನ ಮೇಲಾದ ಕೆಡುಕು ಎಂದು ಪರಿಭಾವಿಸಿಕೊಳ್ಳುತ್ತಾರೆ. ಇಲ್ಲಿ ವಿಶೇಷತೆಯೆಂದರೆ ಕೃಷಿಯನ್ನು ಪ್ರಾರಂಭಿಸುವಾಗ ಯಾವುದೇ ಉಪಕರಣವನ್ನು ಮುಟ್ಟುವಾಗ ಶರಣು ಮಾಡಿ ಮುಟ್ಟುತ್ತಾರೆ. ತಮ್ಮ ಕಾಯಕದ ವಸ್ತುಗಳನ್ನು ಗೌರವದಿಂದ ಕಾಣುವ ಸಾಂಸ್ಕೃತಿಕ ಅಂಶವನ್ನು ನಾವು ಇಲ್ಲಿ ಗುರುತಿಸಲಾಗುವುದು.

ಇಲ್ಲಿ ಕೃಷಿಗಾಗಿ ಬಳಸುವ ಉಪಕರಣಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗುವುದು. ಗುದ್ದಲಿ, ಕುಂಟಾಣೆ, ಪಿಕಾಸಿ, ಹಾರೆ, ನೇಗಿಲು, ನೊಗ, ಕೊರಡು, ನೂಳ್ಳಿ, ಅಲುಕು, ಕುಕ್ಕೆ, ಮಣ್ಣು ತಟ್ಟೆ, ಹೆಡಗೆ, ಜಿಲ್ಲೆ, ಹರವಿ,

ಗೂಡೆ, ಕಣಜ, ಪಣತ, ಕೊಡಲಿ, ಗರಗಸ, ಮೇಟಿ, ರೋಣಗಲ್ಲು, ಬ್ಯಾರಕೋಲು, ಒರಲು, ಗೋರೆಮಣೆ, ಸಣ್ಣೆ, ಮೊರ, ಬಗನೆಸೋಗೆ, ಗಾಡಿ, ಮಿಣೆ ಮುಂತಾದವುಗಳನ್ನು ಬಳಸಿಕೊಂಡು ಕೃಷಿಯ ಬದುಕನ್ನು ಮೈಗೂಡಿಸಿಕೊಳ್ಳುತ್ತಿರುವುದನ್ನು ಕ್ಷೇತ್ರಕಾರ್ಯದಲ್ಲಿ ಸಹಭಾಗಿ ಅವಲೋಕನದ ಮೂಲಕ ತಿಳಿಯಲಾಗಿದೆ. ಆದ್ದರಿಂದ ಗೌಡಾಲು ಸಮುದಾಯವು ಪಶ್ಚಿಮಘಟ್ಟದ ಮೈಸಿರಿಗೆ ಅನುಗುಣವಾದ ಹಾಗೂ ಭಾರತೀಯ ಸಾಂಪ್ರದಾಯಿಕ ಕೃಷಿಯನ್ನು ಮುಂದುವರೆಸಿಕೊಂಡು ಬಂದಿರುವುದು ಮುಖ್ಯವಾಗಿದೆ.

ಗೌಡಾಲು ಬುಡಕಟ್ಟು ಸಮುದಾಯದವರ ಆರ್ಥಿಕ ಮತ್ತು ಸಾಮಾಜಿಕ ಜೀವನ ಕುರಿತು ಈ ಅಧ್ಯಯನದಲ್ಲಿ ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ. ಆರ್ಥಿಕ ಜೀವನದಲ್ಲಿ ಇವರು ಹೊಂದಿರುವ ಕಸುಬುಗಳು, ಆರ್ಥಿಕ ಚಟುವಟಿಕೆಗಳು, ಉತ್ಪಾದನೆ, ವಿನಿಮಯ, ವಿತರಣೆ ಮತ್ತು ಅನುಭೋಗಗಳನ್ನು ಆರ್ಥಿಕ ಚಟುವಟಿಕೆ ಎಂದು ಕರೆಯಬಹುದು. ಭಾರತವು ಅಭಿವೃದ್ಧಿ ಹೊಂದುತ್ತಿರುವ ಕೃಷಿಪ್ರಧಾನ ದೇಶವಾಗಿದ್ದು, ರಾಷ್ಟ್ರೀಯ ಮತ್ತು ತಲಾ ಆದಾಯವು ಕಡಿಮೆ ಇರುವ ಕಾರಣದಿಂದಾಗಿ ಜನರ ಜೀವನ ಮಟ್ಟವು ತುಂಬಾ ಹಿಂದೆ ಉಳಿದಿದೆ. ಬಂಡವಾಳದ ಕೊರತೆ ಸಂಪತ್ತಿನ ಕೊರತೆ ಇದೆ. ಸಂಪತ್ತು ಇದ್ದರೂ ಸಹ ಅದನ್ನು ಸರಿಯಾಗಿ ಬಳಸಿಕೊಳ್ಳಲು ಆಗುತ್ತಿಲ್ಲ. ಹಳೆಯ ಕೃಷಿ ಪದ್ಧತಿ, ವೈಜ್ಞಾನಿಕ ವಿಧಾನದಿಂದ ಉತ್ಪಾದನೆ ಮಾಡದೇ ಇರುವುದು, ಕೃಷಿಯಲ್ಲಿ ಯಂತ್ರಗಳ ಬಳಕೆ ಆಗದೇ ಇರುವುದು, ಕೃಷಿ ಬೀಜ, ಗೊಬ್ಬರ, ಔಷಧಿಗಳು ಸಮರ್ಪಕವಾಗಿ ಇಲ್ಲದೇ ಇರುವುದು, ಉತ್ಪಾದನೆ ಪ್ರಮಾಣದಲ್ಲಿ ಕೊರತೆ, ಕೆಲವೊಮ್ಮೆ ಉತ್ಪಾದನೆಯಾದ ವಸ್ತುಗಳಿಗೆ ಸೂಕ್ತ ಬೆಲೆ ಸಿಗದೇ ಇರುವುದು, ದಲ್ಲಾಳಿಗಳ ಸಮಸ್ಯೆ, ದಾಸ್ತಾನುಗಳಿಗೆ ಮಳಿಗೆಗಳ ಕೊರತೆ, ಸಾರಿಗೆ ಮತ್ತು ಸಂಪರ್ಕಗಳ ಸಮಸ್ಯೆ ಈ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ನಾವು ಕಾಣುತ್ತೇವೆ. ಹಾಗೆಯೇ ಕೂಲಿಕಾರ್ಮಿಕರು, ರೈತರು ಮತ್ತು ಕಾರ್ಖಾನೆಗಳಲ್ಲಿ ದುಡಿಯುವವರ ಸಮಸ್ಯೆಗಳ ಪರಿಣಾಮದಿಂದ ನಮ್ಮ ದೇಶ ಆರ್ಥಿಕವಾಗಿ ಪ್ರಗತಿಯನ್ನು ಹೊಂದಲು ಆಗುತ್ತಿಲ್ಲ. ೨೦೦೮ನೇ ಇಸವಿಯಲ್ಲಿ ಪ್ರಪಂಚದಲ್ಲಿ ನಮ್ಮ ಆರ್ಥಿಕ ಬೆಳವಣಿಗೆಯ ದರ ಕೇವಲ ೮.೯% ಮಾತ್ರ ಇರುವುದನ್ನು ಕಾಣಬಹುದು. ಹಾಗೆಯೇ ಆರ್ಥಿಕವಾಗಿ ಹಿಂದೆ ಉಳಿಯಲು ಇನ್ನು ಕೆಲವೊಂದು ಕಾರಣಗಳನ್ನು ನೋಡುವುದಾದರೆ ನಮ್ಮಲ್ಲಿ ಇರುವಂತಹ ಜಾತಿ ಪದ್ಧತಿ, ವರ್ಗ ಪದ್ಧತಿ, ಧಾರ್ಮಿಕ ನಂಬಿಕೆಗಳು, ಮೂಢನಂಬಿಕೆಗಳು, ತಂತ್ರಜ್ಞಾನ ಮತ್ತು ರಾಜಕೀಯ ಕ್ಷೇತ್ರದಲ್ಲಿಯ ತೊಡಕುಗಳು, ಸರಕಾರದ ಯೋಜನೆಗಳು ಜಾರಿಯಾಗದಿರುವ ಸಮಸ್ಯೆ. ಈ ಎಲ್ಲ ಸಮಸ್ಯೆಗಳಿಂದಾಗಿ ನಮ್ಮ ದೇಶ ಎಲ್ಲ ರೀತಿಯಿಂದಲೂ ಹಿಂದೆ ಉಳಿದಿದೆ. ಮುಂದಿನ ದಿನಗಳಲ್ಲಿ ಈ ಎಲ್ಲ ಸಮಸ್ಯೆಗಳನ್ನು ನಿವಾರಿಸಿ ದೇಶವನ್ನು ಪ್ರಗತಿಯ ಪಥದಲ್ಲಿ ಕೊಂಡುಹೋಗುವಲ್ಲಿ ಸರಕಾರ, ಸರಕಾರೇತರ ಸಂಸ್ಥೆಗಳು, ಜನರು ಜವಾಬ್ದಾರಿಯಿಂದ ಸೇರಿ ಕೆಲಸವನ್ನು ಮಾಡಿದಾಗ ಮಾತ್ರ ಆರ್ಥಿಕವಾಗಿ ಬೆಳೆಯಲು ಅಥವಾ ಪ್ರಗತಿಯನ್ನು ಕಾಣಲು ಸಾಧ್ಯವಾಗಬಹುದಾಗಿದೆ. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಬಡತನ, ಅನಕ್ಷರತೆ ಹಾಗೂ ಅಸಮಾನತೆಯನ್ನು ನಿವಾರಿಸಲು ಹತ್ತು ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದ್ದು, ಇವುಗಳ ಮೂಲಕ ಹಾಗೂ ನಮ್ಮ ಮುಂದಿರುವ ಈ ಸಮಸ್ಯೆಗಳಿಂದ ಹೊರಗೆ ಬರಲು ನಾವೆಲ್ಲರೂ ಸೇರಿ ಮುನ್ನಡೆದಾಗ ಮಾತ್ರ ಅದು ಕಾರ್ಯರೂಪಕ್ಕೆ ಬರುವ ಸಾಧ್ಯತೆ ಇರುತ್ತದೆ.

ಯಾವುದೇ ದೇಶ ಪ್ರಗತಿಯನ್ನು ಕಾಣಬೇಕಾದರೆ ಅದರ ಅವಲೋಕನ ಗ್ರಾಮೀಣ ಪ್ರದೇಶದಿಂದ ಪ್ರಾರಂಭವಾಗಬೇಕು. ದೇಶದಲ್ಲಿ ಗ್ರಾಮಗಳು ಪ್ರಗತಿಯ ಹಾದಿಯಲ್ಲಿ ಇದ್ದಾಗ ಆ ದೇಶದ ಪ್ರಗತಿ ಆಗುತ್ತದೆ. ಭಾರತ ಜನಸಂಖ್ಯೆಯಲ್ಲಿ ಶೇ.೭೩ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದು ಇವರು ಆರ್ಥಿಕವಾಗಿ ಹಿಂದುಳಿದಿರುವುದು ಕಂಡುಬರುತ್ತದೆ. ಗ್ರಾಮೀಣ ಪ್ರದೇಶದಲ್ಲಿರುವ ೪೦% ಜನರು ಆಹಾರ, ವಸತಿ, ಬಟ್ಟೆ, ಆರೋಗ್ಯ, ಶಿಕ್ಷಣದಂತಹ ಮೂಲಭೂತ ಸಮಸ್ಯೆಗಳಿಂದ ಬಳಲುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಗುಡ್ಡಗಾಡು, ಪರ್ವತ ಪ್ರದೇಶಗಳಲ್ಲಿ, ಕಣಿವೆ ಪ್ರದೇಶಗಳಲ್ಲಿ, ದಟ್ಟ ಅರಣ್ಯಗಳಲ್ಲಿ, ನದಿತೀರ ಪ್ರದೇಶಗಳಲ್ಲಿ ನೆಲಸಿರುವ ಗುಡ್ಡಗಾಡು ಜನರಲ್ಲಿಯೂ ಇಂತಹ ಸಮಸ್ಯೆಗಳಿಗೆ ಏನೂ ಕೊರತೆ ಇಲ್ಲ. ಇವರೂ ಸಹ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಹಿಂದುಳಿದಿರುವುದು ನಮಗೆ ಕಂಡುಬರುತ್ತದೆ. ಮುಖ್ಯವಾಗಿ ಕೃಷಿಯನ್ನು ಅವಲಂಬಿಸಿರುವ ಗೌಡಾಲು ಸಮುದಾಯದವರು ಇತರೇ ಕೆಲಸಗಳು ಅಂದರೆ ಕೂಲಿ, ಕರಕುಶಲ ವಸ್ತುಗಳ ತಯಾರಿಕೆ, ಗುಡಿ ಕೈಗಾರಿಕೆ, ಹೈನುಗಾರಿಕೆ, ಅರಣ್ಯದ ವಸ್ತುಗಳ ಸಂಗ್ರಹಣೆ, ಸಣ್ಣಪುಟ್ಟ ವ್ಯಾಪಾರ ಮತ್ತು ಕೃಷಿಯನ್ನು ಅವಲಂಬಿಸಿರುವುದು ಹಾಗೂ ಕೆಲವರು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಕೆಲಸವನ್ನು ಮಾಡುತ್ತಿರುವುದು ಈ ಅಧ್ಯಯನದಿಂದ ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯದವರ ಆರ್ಥಿಕ ಸ್ಥಿತಿಯನ್ನು ಕುರಿತು ಅಧ್ಯಯನ ಮಾಡುವಾಗ ೧೯೭೪ರ ರಾಷ್ಟ್ರೀಯ ಉದ್ಯಾನವನ ನೀತಿಯ ಪ್ರಭಾವದಿಂದ ಅವರಲ್ಲಿ ಆದಂತಹ ಬದಲಾವಣೆಗಳು, ಈ ನೀತಿಯು ಅವರ ಮೇಲೆ ಬೀರಿರುವ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳು, ಈ ನೀತಿಯಿಂದ ಭೂಮಿ ಕಳೆದುಕೊಂಡಿರುವ ಪ್ರಮಾಣ, ಭೂಮಿ ಕಳೆದುಕೊಳ್ಳದೇ ಇರುವಂತಹವರ ಸಂಖ್ಯೆ, ಜೀವನಕ್ಕೆ ಇವರು ಮಾಡಿಕೊಂಡಿರುವ ಬದಲಿ ವ್ಯವಸ್ಥೆ, ಉಳಿತಾಯದ ಮೂಲಗಳು, ಉಳಿತಾಯ ಮಾಡುವ ಉದ್ದೇಶಗಳು, ಉಳಿತಾಯ ಮಾಡುತ್ತಿರುವವರ ವಿವರಗಳು, ಸಾಲದ ವಿವರಣೆ, ಯಾವ ರೀತಿಯ ಸಾಲ ಪಡೆಯುತ್ತಿದ್ದಾರೆ, ಯಾವ ಮೂಲಗಳಿಂದ ಸಾಲ ಪಡೆಯುತ್ತಿದ್ದಾರೆ, ಸಾಲ ಪಡೆಯಲು ಕಾರಣಗಳು, ಸಾಲ ಪಡೆದ ನಂತರ ಅದನ್ನು ಹಿಂತಿರುಗಿಸುತ್ತಿರುವ ಸ್ವರೂಪ, ಹಾಗೆಯೇ ಮಾಹಿತಿದಾರರು ಹೊಂದಿರುವ ಜಾನುವಾರುಗಳು ಹಾಗೂ ಅವುಗಳ ಸಂಖ್ಯೆಯ ಸ್ವರೂಪ, ಅವರು ದಿನನಿತ್ಯದ ಜೀವನದಲ್ಲಿ ಬಳಸುತ್ತಿರುವ ಗೃಹೋಪಯೋಗಿ ವಸ್ತುಗಳು ಮತ್ತು ಅವುಗಳ ಸ್ವರೂಪ ಅವುಗಳ ಪ್ರಮಾಣ, ವಾಹನಗಳ ಸ್ವರೂಪ ಈ ಎಲ್ಲ ಅಂಶಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಅದೇ ರೀತಿ ಗೌಡಾಲು ಬುಡಕಟ್ಟು ಸಮುದಾಯದವರ ರಾಜಕೀಯ ಸ್ಥಿತಿಗತಿ ತಿಳಿಯಲು ಅವರು ರಾಜಕೀಯದ ಬಗ್ಗೆ ಹೊಂದಿರುವ ನಿಲುವು, ಚುನಾವಣೆಯ ಬಗ್ಗೆ ಇವರ ಅಭಿಪ್ರಾಯ, ಚುನಾವಣೆಯಲ್ಲಿ ಭಾಗವಹಿಸುವವರು ಮತ್ತು ಭಾಗವಹಿಸದೇ ಇರುವವರು, ಮತದಾರರಾಗಿ, ಸಂಘಟಕರಾಗಿ, ಪಕ್ಷದ ಕಾರ್ಯಕರ್ತರಾಗಿ, ಸ್ಪರ್ಧಿಗಳಾಗಿ, ಪಕ್ಷದ ಸದಸ್ಯರಾಗಿ ಇವರ ಪಾತ್ರಗಳೇನು ಎಂಬುದರ ಬಗ್ಗೆಯೂ ಅಧ್ಯಯನ ಮಾಡಲಾಗಿದೆ. ಹಾಗೆಯೇ ಮಾಹಿತಿದಾರರು ಸದಸ್ಯರಾಗಿರುವ ಸಹಕಾರಿ ಸಂಘಗಳು, ಮಹಿಳಾ ಸಂಘಗಳು, ಯುವಕ ಸಂಘಗಳು, ಗಿರಿಜನ ಸಂಘ, ಹಿಡಿಕಟ್ಟುವವರ ಸಂಘ, ಗಿರಿಜನ ಕ್ಷೇಮಾಭಿವೃದ್ಧಿ ಸಂಘ, ಸ್ವಾತಂತ್ರ್ಯ ಹೋರಾಟಗಾರರ ಸಂಘ

ಗ್ರಾಮ ಪಂಚಾಯಿತಿ ಸಂಘ ಹೀಗೆ ಹಲವಾರು ಸಂಘಗಳಲ್ಲಿ ಇವರ ಪಾತ್ರವೇನು ಎಂಬುದರ ಕುರಿತು ಅಧ್ಯಯನ ಮಾಡಲಾಗಿದೆ. ಕೊನೆಯದಾಗಿ ಸರಕಾರದ ಕಡೆಯಿಂದ ಗೌಡಾಲು ಬುಡಕಟ್ಟು ಜನರಿಗೆ ದೊರೆತಿರುವ ಸವಲತ್ತುಗಳು ಉದಾಹರಣೆಗೆ ನಿವೇಶನಗಳು, ಸೋಲಾರ್, ಮನೆ, ಕೃಷಿ, ನೀರಾವರಿ, ಸಾರಿಗೆ ಮತ್ತು ಸಂಪರ್ಕ, ಕುಡಿಯುವ ನೀರು, ವಿದ್ಯುಚ್ಛಕ್ತಿ, ಪಡಿತರ ಚೀಟಿ, ಶೌಚಾಲಯ, ಹೊಲಿಗೆ ಯಂತ್ರಗಳ ಸೌಲಭ್ಯ, ಜೇನು ಪೆಟ್ಟಿಗೆ, ಕಂಪ್ಯೂಟರ್ ತರಬೇತಿ ಇನ್ನೂ ಮುಂತಾದ ಅಂಶಗಳನ್ನು ಕುರಿತು ಮಾಹಿತಿಯನ್ನು ಕ್ರೋಡೀಕರಿಸಲಾಗಿದೆ. ಸಮಾಜದಲ್ಲಿ ಅತಿ ಹಿಂದುಳಿದಿರುವ ಈ ಬುಡಕಟ್ಟು ಜನರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಕುರಿತು ಸಮಗ್ರವಾಗಿ ಸಂಶೋಧಿಸಲು ಈ ಮಾಹಿತಿಯು ಅನುಕೂಲಕರವಾಗಿದೆ.

### ೧೯೮೭ರ ರಾಷ್ಟ್ರೀಯ ಉದ್ಯಾನವನ ನೀತಿ ಮತ್ತು ಗೌಡಾಲು ಜನಾಂಗ

೧೯೮೭ರ ರಾಷ್ಟ್ರೀಯ ಉದ್ಯಾನವನ ನೀತಿಯು ಕೇಂದ್ರ ಸರ್ಕಾರದ ಕಾನೂನು ಆಗಿದೆ. ಈ ಕಾನೂನಿನ ಅಡಿಯಲ್ಲಿ ಯಾವ ಪ್ರದೇಶವನ್ನು ರಾಷ್ಟ್ರೀಯ ಉದ್ಯಾನವನ ಎಂದು ಘೋಷಿಸಲಾಗಿದೆಯೋ ಅಲ್ಲಿ ನೆಲೆಸಿರುವ ಜನರನ್ನು ಬೇರೆ ಕಡೆಗೆ ಸ್ಥಳಾಂತರಿಸಲಾಗುವುದು. ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ಇರುವ ಪ್ರಾಣಿಗಳಿಗೆ, ಮರಗಳಿಗೆ, ಪಕ್ಷಿಗಳಿಗೆ ಮತ್ತು ಅಲ್ಲಿಯ ಸಂಪತ್ತಿಗೆ ಯಾವುದೇ ಹಾನಿಯಾಗಬಾರದು ಎಂಬ ಕಾರಣದಿಂದ ಈ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ವಾಸವಾಗಿರುವ ಜನರಿಗೆ ಅವರು ಹೊಂದಿರುವ ಜಮೀನುಗಳನ್ನು ತೆರವುಗೊಳಿಸಿ ಬೇರೆ ಕಡೆಗೆ ಹೋಗಬೇಕು ಎಂದು ಸೂಚಿಸಿ, ಅದಕ್ಕಾಗಿ ಕಾನೂನನ್ನೂ ಜಾರಿಗೊಳಿಸಲಾಗಿದೆ. ಇದು ಬಹಳಷ್ಟು ಗೌಡಾಲು ಸಮುದಾಯದವರ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿದ್ದು, ಅದನ್ನು ಕುರಿತು ಈ ಕೆಳಗಿನ ಕೋಷ್ಟಕದ ಮೂಲಕ ಮಾಹಿತಿಯನ್ನು ಕ್ರೋಡೀಕರಿಸಿ ಅಧ್ಯಯನ ಮಾಡಲಾಗಿದೆ.

**ಕೋಷ್ಟಕ ೬.೦೧ ಗೌಡಾಲು ಜನಾಂಗದವರ ಮೇಲೆ ರಾಷ್ಟ್ರೀಯ ಉದ್ಯಾನವನ ನೀತಿಯ ಪರಿಣಾಮ**

| ಕಾನೂನಿನ ಪರಿಣಾಮ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಒಳ್ಳೆಯ ಪರಿಣಾಮ | ೦೬ | ೦೬.೦೦ |
| ವ್ಯತಿರಿಕ್ತ ಪರಿಣಾಮ | ೪೩ | ೪೩.೦೦ |
| ಅಭಿಪ್ರಾಯ ವ್ಯಕ್ತಪಡಿಸದೇ ಇರುವರು | ೫೧ | ೫೧.೦೦ |
| ಒಟ್ಟು | ೧೦೦ | ೧೦೦.೦೦ |
| **ಒಳ್ಳೆಯ ಪರಿಣಾಮಕ್ಕೆ ಒಳಗಾದವರು** | | |
| ಆರ್ಥಿಕ ಸುಧಾರಣೆ | ೦೧ | ೧೬.೬೬ |
| ಅರಣ್ಯ ಉತ್ಪನ್ನಗಳ ಸಂಗ್ರಹಣೆ | ೦೦ | ೦೦.೦೦ |
| ಸರಕಾರದ ಸವತ್ತುಗಳು | ೦೨ | ೩೩.೩೩ |
| ಭೂಮಿ ದೊರೆತಿರುವುದು | ೦೩ | ೫೦.೦೦ |
| ಜಾನುವಾರುಗಳನ್ನು ಸಾಕಲು | ೦೦ | ೦೦.೦೦ |
| ಕರಕುಶಲ ವಸ್ತುಗಳ ತಯಾರಿಕೆ | ೦೦ | ೦೦.೦೦ |
| ಒಟ್ಟು | ೦೬ | ೧೦೦.೦೦ |

**ವ್ಯತಿರಿಕ್ತ ಪರಿಣಾಮಕ್ಕೆ ಒಳಗಾದವರು**

| | | |
|---|---|---|
| ಆರ್ಥಿಕ ನಷ್ಟ | ೩೧ | ೦.೧೪ |
| ಕೃಷಿಕರಿಗೆ ತೊಂದರೆ | ೩೯ | ೦.೧೮ |
| ಅರಣ್ಯ ಬಿಡಲು ಒತ್ತಡ | ೨೭ | ೦.೧೨ |
| ಭೂಮಿ ಕಳೆದುಕೊಂಡಿರುವುದು | ೧೨ | ೦.೦೫ |
| ಜಾನುವಾರುಗಳನ್ನು ಸಾಕಲು ತೊಂದರೆ | ೨೪ | ೦.೧೧ |
| ಸರಕಾರಿ ಸವಲತ್ತುಗಳಿಗೆ ಕಡಿವಾಣ | ೩೩ | ೦.೧೫ |
| ಇತರೇ ತೊಂದರೆಗಳು | ೪೩ | ೦.೨೦ |
| **ಒಟ್ಟು** | **೨೦೯** | **೧೦೦.೦೦** |

ಈ ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಒಟ್ಟು ೧೦೦ ಜನ ಮಾಹಿತಿದಾರರಲ್ಲಿ ರಾಷ್ಟ್ರೀಯ ಉದ್ಯಾನವನ ನೀತಿಯು ೬ (ಶೇ.೦೬.೦೦) ಜನರ ಮೇಲೆ ಒಳ್ಳೆಯ ರೀತಿಯಲ್ಲಿ ಪ್ರಭಾವ ಬೀರಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ೪೩ (ಶೇ.೪೩.೦೦) ಜನ ಇದು ವ್ಯತಿರಿಕ್ತ ಪರಿಣಾಮ ಬೀರಿದೆ ಎಂದಿದ್ದಾರೆ. ೫೧ (ಶೇ.೫೧.೦೦)ರಷ್ಟು ಜನರು ರಾಷ್ಟ್ರೀಯ ಉದ್ಯಾನವನ ನೀತಿಗೆ ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸಿಲ್ಲ ಎಂಬುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಒಟ್ಟಾರೆ ರಾಷ್ಟ್ರೀಯ ಉದ್ಯಾನವನ ಕಾನೂನಿನಿಂದ ಅನುಕೂಲತೆಗಳಿಗಿಂತ ಅನನುಕೂಲತೆಗಳೇ ಹೆಚ್ಚು ಎಂಬ ಭಾವನೆ ಇರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಒಳ್ಳೆಯ ಪರಿಣಾಮವಾಗಿದೆ ಎಂದು ಶೇ.೬.೦೦ರಷ್ಟು ಜನ ಮಾಹಿತಿದಾರರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಒಳ್ಳೆಯ ಪರಿಣಾಮಗಳಲ್ಲಿ ೦೧(ಶೇ.೧೬.೬೬)ರಷ್ಟು ಜನ ಆರ್ಥಿಕ ಸುಧಾರಣೆಯಾಗಿದೆ ಎಂದಿದ್ದಾರೆ. ಅರಣ್ಯ ಉತ್ಪನ್ನಗಳ ಸಂಗ್ರಹಣೆಯ ಬಗ್ಗೆ ಯಾವುದೇ ರೀತಿಯ ಅಭಿಪ್ರಾಯ ವ್ಯಕ್ತಪಡಿಸಿರುವುದಿಲ್ಲ. ೦೨(ಶೇ.೩೩.೩೩) ಜನ ಸರಕಾರದ ಸವಲತ್ತುಗಳು ಅನುಕೂಲಕರವಾಗಿವೆ ಎಂಬ ವಿಚಾರವನ್ನು ತಿಳಿಸಿದ್ದಾರೆ. ೦೩(ಶೇ.೫೦.೦೦) ಜನ ಭೂಮಿ ದೊರಕಿದೆ ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಜಾನುವಾರುಗಳಿಗೆ ಅನುಕೂಲಕರವಾಗಿದೆ ಎಂದು ಯಾರೂ ಹೇಳಿಲ್ಲ. ಹಾಗೆಯೇ ಕರಕುಶಲ ವಸ್ತುಗಳ ತಯಾರಿಕೆಗೆ ಅನುಕೂಲಕರವಾಗಿದೆ ಎಂದೂ ಯಾರೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದಿಲ್ಲ. ಒಟ್ಟಾರೆಯಾಗಿ ಅತಿ ಹೆಚ್ಚು ಅಂದರೆ ೦೩(ಶೇ.೫೦) ಜನರು ಸರಕಾರದ ಸವಲತ್ತುಗಳು ದೊರೆತಿವೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ರಾಷ್ಟ್ರೀಯ ಉದ್ಯಾನವನ ನೀತಿಯಿಂದಾಗಿ ಕೆಟ್ಟ ಪರಿಣಾಮವಾಗಿದೆ ಎಂದು ಶೇ.೪೩ರಷ್ಟು ಜನರು ಹೇಳಿದ್ದಾರೆ. ಅವರಲ್ಲಿ ೩೧(ಶೇ.೦.೧೪)ರಷ್ಟು ಜನರು ಆರ್ಥಿಕ ನಷ್ಟವನ್ನು ಹೊಂದಿದ್ದಾರೆ ಎಂಬುದು ಕಂಡುಬರುತ್ತದೆ. ೩೯(ಶೇ.೦.೧೮) ಜನರು ಕೃಷಿ ಮಾಡುವವರಿಗೆ ತೊಂದರೆಯಾಗಿದೆ ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ. ೨೭(ಶೇ.೦.೧೨) ಜನ ಅರಣ್ಯ ಬಿಡಲು ಒತ್ತಾಯ ಮಾಡುತ್ತಿದ್ದಾರೆ ಎಂದು ತಮ್ಮ ಅಳಲನ್ನು ವ್ಯಕ್ತಪಡಿಸಿದ್ದಾರೆ. ೧೨(ಶೇ.೦.೦೫) ಜನ ಭೂಮಿ ಕಳೆದುಕೊಂಡಿದ್ದಾರೆ. ೨೪(ಶೇ.೧೧.೧೧) ಜನರು ಜಾನುವಾರು ಸಾಕಲು

ತೊಂದರೆಯಾಗುತ್ತಿದೆ ಎಂದರೆ, ೩೩(ಶೇ.೦.೧೫) ಜನರು ಸರಕಾರಿ ಸವಲತ್ತುಗಳಿಗೆ ಕಡಿವಾಣವಾಗಿದೆ ಎಂದು ಹೇಳಿದ್ದಾರೆ. ೪೩(ಶೇ.೦.೨೦) ಜನರು ಇತರೇ ತೊಂದರೆಗಳಿವೆ ಎಂಬುದಾಗಿ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಕೆಟ್ಟ ಪರಿಣಾಮವಾಗಿದೆ ಎಂದು ಒಟ್ಟು ೨೧೮ ಜನರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅದರಲ್ಲಿ ಅತಿ ಹೆಚ್ಚು ಅಂದರೆ ೪೩ ಜನರು ಇತರೆ ತೊಂದರೆಗಳು ಆಗುತ್ತಿವೆ ಎಂದಿದ್ದಾರೆ. ಇತರೆ ತೊಂದರೆ ಎಂದರೆ ರಾಷ್ಟ್ರೀಯ ಉದ್ಯಾನವನ ಪ್ರದೇಶದಲ್ಲಿ ನೆಲೆಸಿರುವ ಗೌಡಾಲು ಜನರಿಗೆ ಮಾನಸಿಕ ನೆಮ್ಮದಿ ಇಲ್ಲ. ಪ್ರತಿ ದಿನವೂ ಪೊಲಿಸರು ಇವರನ್ನು ಮಾನಸಿಕವಾಗಿ ಹಿಂಸಿಸುತ್ತಿದ್ದಾರೆ. ಅವರ ವೃತ್ತಿ, ಸಾರಿಗೆ ಸಂಪರ್ಕ, ಕಸುಬುಗಳು ಮುಂತಾದವುಗಳಿಗೆ ಸಂಬಂಧಿಸಿದಂತೆ ತೊಂದರೆ ನೀಡುತ್ತಿದ್ದಾರೆ ಎಂಬ ನೋವನ್ನು ವ್ಯಕ್ತಪಡಿಸಿದ್ದಾರೆ. ಕುದುರೆಮುಖ ವ್ಯಾಪ್ತಿಯಲ್ಲಿ ನೆಲೆಸಿರುವ ಕೆಲವು ಗೌಡಾಲು ಜನರು ಈ ಕಾನೂನಿನಿಂದ ಮನೆ, ತೋಟ, ಗದ್ದೆಯನ್ನು ಕಳೆದುಕೊಂಡು ಬೇರೆ ಕಡೆ ವಲಸೆ ಹೋಗಿ ನೆಲೆಸಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ರಾಷ್ಟ್ರೀಯ ಉದ್ಯಾನವನ ನೀತಿಯಿಂದಾಗಿ ಶೇ೧೨.೦೫ರಷ್ಟು ಜನರು ತಮ್ಮ ಭೂಮಿಯನ್ನು ಕಳೆದುಕೊಂಡಿದ್ದೇವೆ ಎಂದಿದ್ದಾರೆ.

ಮೇಲಿನ ಕೋಷ್ಟಕದಲ್ಲಿ ಕೆಟ್ಟ ಪರಿಣಾಮದ ಪ್ರಭಾವ ಆಗಿರುವ ಕೋಷ್ಟಕವನ್ನು ಗಮನಿಸಿದಾಗ ಕಂಡುಬರುವ ಅಂಶವೆಂದರೆ ಕೆಲವೊಂದು ಮಾಹಿತಿದಾರರು ಒಂದಕ್ಕಿಂತ ಹೆಚ್ಚು ತೊಂದರೆಗಳನ್ನು ಹೊಂದಿದ್ದಾರೆ. ಉದಾಹರಣೆಗೆ ಆರ್ಥಿಕ ನಷ್ಟ ಅನುಭವಿಸುತ್ತಿರುವವರು ಕೃಷಿ ಕ್ಷೇತ್ರದಲ್ಲಿಯೂ ತೊಂದರೆ ಅನುಭವಿಸುತ್ತಿದ್ದಾರೆ. ಹಾಗೆಯೇ ಅರಣ್ಯದ ತೊಂದರೆ ಹೊಂದಿರುವಂತಹವರು ಭೂಮಿಯನ್ನೂ ಕಳೆದುಕೊಂಡಿದ್ದಾರೆ. ಅತಿ ಹೆಚ್ಚು ಜನ ಇದರ ಹೊರತಾಗಿ ತಮಗೆ ಇತರೇ ತೊಂದರೆಗಳು ಆಗುತ್ತಿವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇತರೇ ತೊಂದರೆಗಳೆಂದರೆ ವಿದ್ಯುಚ್ಛಕ್ತಿಯ ಕಡಿತ, ಸಾರಿಗೆ ಸಂಪರ್ಕದ ತೊಂದರೆ, ಅರಣ್ಯ ಉತ್ಪನ್ನಗಳ ಸಂಗ್ರಹಣೆಗೆ ತೊಂದರೆ, ಪಡಿತರ ಚೀಟಿಯ ತೊಂದರೆ, ಮೂಲಭೂತ ಅವಶ್ಯಕತೆಗಳಾದ ವಸತಿ, ನೀರು, ಆಹಾರ, ಶಿಕ್ಷಣದ ತೊಂದರೆಯನ್ನು ಹೊಂದಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಕೊನೆಯದಾಗಿ ಶೇ.೫೧ ಜನರು ರಾಷ್ಟ್ರೀಯ ಉದ್ಯಾನವನ ನೀತಿಯ ಬಗ್ಗೆ ಯಾವುದೇ ರೀತಿಯಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಲು ಒಪ್ಪಿರುವುದಿಲ್ಲ. ಕಾರಣವೇನೆಂದರೆ ಈ ಕಾನೂನು ಮಲೆನಾಡು ಪ್ರಾಂತ್ಯದಲ್ಲಿ ತುಂಬಾ ಕಠಿಣವಾಗಿದ್ದು, ಇದರ ಬಗ್ಗೆ ಯಾವ ರೀತಿಯ ಉತ್ತರ ನೀಡಬೇಕು ಎಂಬದರ ಬಗ್ಗೆ ಜನರಲ್ಲಿ ಗೊಂದಲವಿರುವುದನ್ನು ನಾವು ಕಾಣಬಹುದು. ಇವರು ಮುಗ್ಧ ಜನರಾಗಿದ್ದು, ಸರಕಾರದ ಯಾವುದೇ ಕಾನೂನುಗಳು ಬಂದರೂ ಅದರ ಬಗ್ಗೆ ಇವರಿಗೆ ನಂಬಿಕೆ ಇಲ್ಲ. ಸರಕಾರದ ನಿಯಮಾವಳಿಗಳ ಬಗ್ಗೆ ಇವರಿಗೆ ವಿಶ್ವಾಸ ಇಲ್ಲ. ಯಾವ ಸಂದರ್ಭದಲ್ಲಿ ಏನು ಕಾನೂನು ಬರುತ್ತಿದೆ ಎಂಬುದೂ ಇವರಿಗೆ ಗೊತ್ತಿಲ್ಲ. ಹಾಗಾಗಿ ಇವರು ರಾಷ್ಟ್ರೀಯ ಉದ್ಯಾನವನ ಕಾನೂನಿನ ಬಗ್ಗೆ ಯಾವುದೇ ರೀತಿಯ ಹೇಳಿಕೆಯನ್ನು ನೀಡಲು ಮುಂದೆ ಬಂದಿಲ್ಲದಿರುವುದನ್ನು ಕಾಣಬಹುದಾಗಿದೆ.

## ೧೯೭೭ರ ರಾಷ್ಟ್ರೀಯ ಉದ್ಯಾನವನ ನೀತಿಯಿಂದ ಭೂಮಿ ಕಳೆದುಕೊಂಡವರು

೧೯೭೭ರ ರಾಷ್ಟ್ರೀಯ ಉದ್ಯಾನವನ ನೀತಿಯ ಪ್ರಭಾವದಿಂದಾಗಿ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಕೆಲವರು ಭೂಮಿಯನ್ನು ಕಳೆದುಕೊಂಡಿದ್ದಾರೆ. ಹಾಗೆಯೇ ಇನ್ನೂ ಕೆಲವರಿಗೆ ಈ ಕಾನೂನಿನಿಂದ ಯಾವುದೇ ರೀತಿಯಲ್ಲಿ ತೊಂದರೆಯಾಗಿರುವುದಿಲ್ಲ ಎಂಬ ಮಾಹಿತಿಯನ್ನು ಸಂಗ್ರಹಿಸಿ ಕೆಳಗಿನ ಕೋಷ್ಟಕದ ಮೂಲಕ ಸಾದರಪಡಿಸಲಾಗಿದೆ.

**ಕೋಷ್ಟಕ ೬.೦೨**

**ಭೂಮಿ ಕಳೆದುಕೊಂಡವರ ವಿವರ**

| ಭೂಮಿಯ ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಭೂಮಿ ಕಳೆದುಕೊಂಡವರು | ೧೫ | ೧೫.೦೦ |
| ಭೂಮಿ ಕಳೆದುಕೊಳ್ಳದೇ ಇರುವವರು | ೮೫ | ೮೫.೦೦ |
| ಒಟ್ಟು | ೧೦೦ | ೧೦೦.೦೦ |

**ಕಳೆದುಕೊಂಡ ಭೂಮಿಯ ಸ್ವರೂಪ**

| ಭೂಮಿಯ ಸ್ವರೂಪ | ಎಕರೆಗಳಲ್ಲಿ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|---|
| ನೀರಾವರಿ ಭೂಮಿ | ೦-೧ | ೦೩ | ೨೦.೦೦ |
| | ೨-೪ | ೦೨ | ೧೩.೩೩ |
| | ೫-೧೦ | - | - |
| ಕಾಡುಭೂಮಿ | ೦-೧ | ೦೫ | ೩೩.೩೩ |
| | ೨-೪ | ೦೨ | ೧೩.೩೩ |
| | ೫-೧೦ | - | - |
| ತೋಟ | ೦-೧ | ೦೨ | ೧೩.೩೩ |
| | ೨-೪ | ೦೧ | ೦೬.೬೬ |
| | ೫-೧೦ | - | - |
| ಸೈಟುಗಳು | ೦-೧ | - | - |
| | ೨-೪ | - | - |
| | ೫-೧೦ | - | - |
| ಒಟ್ಟು | | ೧೫ | ೧೦೦.೦೦ |

ಈ ಕೋಷ್ಟಕದಿಂದ ಕಂಡುಬರುವ ಸಂಗತಿ ಎಂದರೆ ೧೦೦ ಜನ ಮಾಹಿತಿದಾರರಲ್ಲಿ ೮೫ (ಶೇ.೮೫)ರಷ್ಟು ಜನ ರಾಷ್ಟ್ರೀಯ ಉದ್ಯಾನವನ ನೀತಿ ಬಂದ ನಂತರ ತಮ್ಮ ಯಾವುದೇ ರೀತಿಯ ಭೂಮಿಯನ್ನು ಕಳೆದುಕೊಂಡಿರುವುದಿಲ್ಲ. ಏಕೆಂದರೆ ಈ ಕಾನೂನು ಇವರ ಮೇಲೆ ಪ್ರಭಾವ ಬೀರುವುದಿಲ್ಲ. ಹಾಗೆಯೇ ೧೫

(ಶೆ.೧೫) ರಷ್ಟು ಮಾಹಿತಿದಾರರು ತಮ್ಮ ಭೂಮಿಯನ್ನು ಈ ಕಾನೂನಿನ ಕಾರಣದಿಂದಾಗಿ ಕಳೆದುಕೊಂಡಿರುವುದು ಕಂಡುಬರುತ್ತದೆ. ಕಳೆದುಕೊಂಡಿರುವ ಭೂಮಿಯ ವಿವಿಧ ಸ್ವರೂಪಗಳನ್ನು ಕ್ರೋಡಿಕರಿಸಲಾಗಿದ್ದು, ಅದನ್ನು ಈ ಕೆಳಗಿನಂತೆ ಕಂಡುಕೊಳ್ಳಬಹುದು.

ಭೂಮಿಯನ್ನು ಕಳೆದುಕೊಂಡವರಲ್ಲಿ ನೀರಾವರಿ ಭೂಮಿಯಲ್ಲಿ ೦-೧ ಎಕರೆಯಷ್ಟು ಭೂಮಿಯನ್ನು ೩(ಶೇ.೨೦) ಜನ ಕಳೆದುಕೊಂಡಿದ್ದರೆ. ೨-೪ ಎಕರೆ ಭೂಮಿಯನ್ನು ೦೨ (ಶೇ.೧೩.೩೩) ಜನ ಕಳೆದುಕೊಂಡಿದ್ದಾರೆ. ೫-೧೦ ಎಕರೆಯಷ್ಟು ಭೂಮಿಯನ್ನು ಯಾರೂ ಕಳೆದುಕೊಂಡಿರುವುದಿಲ್ಲ. ಹಾಗೆಯೇ ಕಾಡುಭೂಮಿಯಲ್ಲಿ ೦-೧ ಎಕರೆಯಷ್ಟು ಪ್ರದೇಶವನ್ನು ೫(ಶೇ.೩೩.೩೩) ಜನ ಕಳೆದುಕೊಂಡಿದ್ದಾರೆ. ೨-೪ ಎಕರೆಯಷ್ಟು ಭೂಮಿಯನ್ನು ೨(ಶೇ.೧೩.೩೩) ಜನ ಕಳೆದುಕೊಂಡಿದ್ದರೆ, ೫-೧೦ರಷ್ಟು ಎಕರೆ ಭೂಮಿಯನ್ನು ಯಾರೂ ಕಳೆದುಕೊಂಡಿರುವುದಿಲ್ಲ. ತೋಟ ಭೂಮಿಯಲ್ಲಿ ೦-೧ ಎಕರೆಯಷ್ಟು ಪ್ರದೇಶವನ್ನು ೨(ಶೇ.೧೩.೩೩) ಜನ ಕಳೆದುಕೊಂಡಿದ್ದರೆ, ೨-೪ ಎಕರೆಯಷ್ಟು ಭೂಮಿಯನ್ನು ೧(ಶೇ.೦೬.೬೬) ಜನ ಕಳೆದುಕೊಂಡಿದ್ದಾರೆ. ೫-೧೦ ಎಕರೆಯಷ್ಟು ಭೂಮಿಯನ್ನು ಯಾರೂ ಕಳೆದುಕೊಂಡಿರುವುದಿಲ್ಲ. ಕೊನೆಯದಾಗಿ ಸೈಟುಗಳನ್ನು ಯಾವ ಮಾಹಿತಿದಾರರೂ ಕಳೆದುಕೊಂಡಿರುವುದಿಲ್ಲ ಎಂಬುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಮೇಲಿನ ಕೋಷ್ಟಕದಿಂದ ನಮಗೆ ತಿಳಿದುಬರುವ ಸಂಗತಿ ಎಂದರೆ ೧೫% ರಷ್ಟು ಗೌಡಾಲು ಬುಡಕಟ್ಟಿನವರು ಭೂಮಿಯನ್ನು ಕಳೆದುಕೊಂಡಿದ್ದು, ಕಳೆದುಕೊಂಡವರಲ್ಲಿ ೦-೧ ಎಕರೆಯಷ್ಟು ಭೂಮಿಯನ್ನು ಕಳೆದುಕೊಂಡವರೇ ಹೆಚ್ಚಾಗಿದ್ದಾರೆ. ಹಾಗೆಯೇ ೫-೧೦ ಎಕರೆಯಷ್ಟು ಭೂಮಿಯನ್ನು ಯಾರೂ ಕಳೆದುಕೊಂಡಿರುವುದಿಲ್ಲ. ಜೊತೆಗೆ ಇಷ್ಟು ಪ್ರಮಾಣದ ಭೂಮಿಯನ್ನು ಹೊಂದಿದವರು ತುಂಬಾ ಕಡಿಮೆ. ಸೈಟುಗಳನ್ನು ಅತಿ ಕಡಿಮೆ ಜನಗಳು ಹೊಂದಿದ್ದು, ಇದನ್ನು ಯಾವ ಮಾಹಿತಿದಾರರೂ ಕಳೆದುಕೊಂಡಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ರಾಷ್ಟ್ರೀಯ ಉದ್ಯಾನವನ ಕಾನೂನು ಬಂದ ನಂತರ ಭೂಮಿಯನ್ನು ಕಳೆದುಕೊಂಡವರು ಶೇ.೧೫ರಷ್ಟು ಜನ. ಅವರಲ್ಲಿ ಕೆಲವರಿಗೆ ಸರಕಾರದಿಂದ ಪರಿಹಾರ ದೊರೆತಿದೆ. ಹೆಚ್ಚಿನವರಿಗೆ ಸರಕಾರದಿಂದ ಯಾವುದೇ ರೀತಿಯ ಸವಲತ್ತುಗಳು ದೊರೆತಿಲ್ಲ. ಆದ ಕಾರಣ ಇವರು ಜೀವನವನ್ನು ನಡೆಸಲು ಬದಲಿ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ.

### ಜೀವನಕ್ಕೆ ಬದಲಿ ವ್ಯವಸ್ಥೆ

ಭೂಮಿಯನ್ನು ಕಳೆದುಕೊಂಡ ಗೌಡಾಲು ಜನರು ತಮ್ಮ ಜೀವನ ನಡೆಸಲು ಇತರೆ ಜೀವನಾಧಾರಕ್ಕೆ ಸಹಕಾರಿಯಾಗುವ ಕೆಲಸಗಳನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಇವರಲ್ಲಿ ಕೆಲವರು ಕೂಲಿ ಕೆಲಸ, ವ್ಯಾಪಾರ ಮಾಡುತ್ತಿದ್ದರೆ, ಕೆಲವರು ಬೇರೆ ಕಡೆಗಳಿಗೆ ವಲಸೆ ಹೋಗಿದ್ದಾರೆ. ಕೆಲವರು ಬೇರೆಯವರ ಹೊಲದಲ್ಲಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಇನ್ನೂ ಕೆಲವರು ಏನೂ ಕೆಲಸವಿಲ್ಲದೆ ಜೀವನ ಸಾಗಿಸುತ್ತಿದ್ದಾರೆ. ಸ್ವಲ್ಪ ಜನ ಉಳಿದ ಭೂಮಿಯಲ್ಲಿಯೇ ಕೃಷಿಯನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇನ್ನೊಂದಷ್ಟು ಜನ ಖಾಸಗಿ ಕ್ಷೇತ್ರದಲ್ಲಿ ಕೆಲಸವನ್ನು ಮಾಡುತ್ತಿದ್ದರೆ, ಸ್ವಲ್ಪ ಜನರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ವ್ಯಾಪಾರ

ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇನ್ನೂ ಕೆಲವರು ಪಶುಸಂಗೋಪನೆಯಿಂದ ಜೀವನ ನಡೆಸುತ್ತಿದ್ದಾರೆ. ಕೆಲವರು ನಗರ ಪ್ರದೇಶಗಳಿಗೆ ಕೆಲಸಕ್ಕೆ ಹೋಗುತ್ತಿದ್ದಾರೆ. ಹೀಗೆ ಭೂಮಿಯನ್ನು ಕಳೆದುಕೊಂಡ ನಂತರ ವಿವಿಧ ಕೆಲಸಗಳಲ್ಲಿ ಇವರು ತೊಡಗಿದ್ದು, ಜೀವನೋಪಾಯಕ್ಕೆ ವಿವಿಧ ಮಾರ್ಗಗಳನ್ನು ಅವಲಂಬಿಸಿರುವುದು ಕಂಡುಬರುತ್ತದೆ.

ಹೀಗೆ ಗೌಡಾಲು ಬುಡಕಟ್ಟು ಸಮುದಾಯದವರ ಒಟ್ಟು ಅಭಿಪ್ರಾಯವನ್ನು ಸಂಗ್ರಹಿಸಿದಾಗ ಈ ಕಾನೂನು ಹೆಚ್ಚಿನ ಅನುಕೂಲವಾಗಿಲ್ಲ. ನೂರಾರು ವರ್ಷಗಳಿಂದ ಜೀವನ ನಡೆಸಿಕೊಂಡು ಬರುತ್ತಿರುವ ಈ ಬುಡಕಟ್ಟಿನವರು ಈ ಕಾನೂನಿನ ಒತ್ತಡಕ್ಕೆ ಒಳಗಾಗಿರುವುದಲ್ಲದೇ ಈಗ ಇವರು ಜೀವನವನ್ನು ನಡೆಸುವುದು ಸಹ ಕಷ್ಟದಾಯಕವಾಗಿದೆ. ಈ ಕಾನೂನು ಏನಾದರೂ ಕಠಿಣವಾಗಿ ಜಾರಿಗೆ ಬಂದರೆ ಸಾವಿರಾರು ಗೌಡಾಲು ಕುಟುಂಬಗಳು ಕಾಡನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಕಾಗುತ್ತದೆ. ಹಾಗೇನಾದರೂ ಹೋದರೆ ಈ ಜನರು ಹತ್ತು ಹಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಇವರು ಈ ತಂಪುಕಾಡಿನ ಪ್ರಕೃತಿಯ ರಕ್ಷಕರು. ಇವರಿಂದ ಪ್ರಕೃತಿಗೆ ಯಾವುದೇ ರೀತಿಯ ತೊಂದರೆ ಇಲ್ಲ. ಪ್ರಕೃತಿಯನ್ನು ದೇವರೆಂದು ನಂಬಿರುವ ಈ ಮುಗ್ಧ ಜನರಿಗೆ ಸರಕಾರವು ಅಲ್ಲಿಯೇ ವಾಸಿಸಲು ಅನುವು ಮಾಡಿಕೊಟ್ಟರೆ ಅವರಿಗೆ ಅನುಕೂಲಕರವಾಗುತ್ತದೆ ಎಂಬುದು ಗೌಡಾಲರ ಅಭಿಪ್ರಾಯವಾಗಿದೆ.

### ಉಳಿತಾಯದ ಬಗ್ಗೆ ಗೌಡಾಲು ಜನಾಂಗದವರ ನಿಲುವು

ಆರ್ಥಿಕವಾಗಿ ಅಷ್ಟೊಂದು ಸಬಲರಲ್ಲದೇ ಇರುವ ಗೌಡಾಲು ಜನರು ತಮ್ಮ ಮುಂದಿನ ಭವಿಷ್ಯದ ಬಗ್ಗೆ ಯೋಜನೆಗಳನ್ನು ಮಾಡುತ್ತಿದ್ದು, ಉಳಿತಾಯ ಮಾಡಬೇಕು ಎಂಬ ಯೋಚನೆಯನ್ನು ಹೊಂದಿದ್ದಾರೆ. ವಿವಾಹ ಮಾಡುವುದಕ್ಕಾಗಿ, ಮಕ್ಕಳ ವಿದ್ಯಾಭ್ಯಾಸಕ್ಕಾಗಿ, ಮಕ್ಕಳ ಮುಂದಿನ ಭವಿಷ್ಯಕ್ಕಾಗಿ, ಕೆಲವೊಂದು ಸಮಯದಲ್ಲಿ ಆರೋಗ್ಯದ ಸಲುವಾಗಿ, ಮನೆ ಕಟ್ಟಲು, ಭವಿಷ್ಯದ ದೃಷ್ಟಿಯಿಂದ ಹಬ್ಬ ಹರಿದಿನಗಳನ್ನು ಆಚರಿಸಲು, ವಾರ್ಷಿಕ ಚಟುವಟಿಕೆಗಳನ್ನು ಮಾಡಲು ಉಳಿತಾಯವನ್ನು ಮಾಡುತ್ತಿರುವುದು ಕಂಡುಬರುತ್ತದೆ. ಗೌಡಾಲು ಜನರಲ್ಲಿ ಶಿಕ್ಷಣ ಪಡೆದವರ ಸಂಖ್ಯೆಯು ಕಡಿಮೆ ಇದೆ. ಆದರೆ ಇವರಿಗೆ ಮುಂದಿನ ಜೀವನದ ಬಗ್ಗೆ ಸಾಮಾನ್ಯಜ್ಞಾನ ವಿರುವುದು ಕಂಡುಬರುತ್ತದೆ.

**ಕೋಷ್ಟಕ ೬.೦೩**

**ಗೌಡಾಲು ಜನರು ಉಳಿತಾಯ ಮಾಡುವ ಉದ್ದೇಶಗಳು**

| ಉದ್ದೇಶಗಳು | ಒಟ್ಟು | ಶೇಕಡಾವಾರು |
|---|---|---|
| ವಿವಾಹ ಮಾಡಲು | ೨೦ | ೨೦.೦೦ |
| ವಿದ್ಯಾಭ್ಯಾಸಕ್ಕಾಗಿ | ೦೯ | ೦೯.೦೦ |
| ಮನೆ ಕಟ್ಟಲು | ೧೦ | ೧೦.೦೦ |
| ಜಮೀನು ಖರೀದಿಸಲು | ೦೩ | ೦೩.೦೦ |
| ಅನಾರೋಗ್ಯದ ಸಂದರ್ಭಕ್ಕಾಗಿ | ೦೮ | ೦೮.೦೦ |

| ಹಬ್ಬ ಹರಿದಿನಗಳ ಆಚರಣೆಗೆ | ೦೩ | ೦೩.೦೦ |
|---|---|---|
| ಸಾಲ ತೀರಿಸಲು | ೦೭ | ೦೭.೦೦ |
| ಭವಿಷ್ಯದ ದೃಷ್ಟಿಯಿಂದ | ४೦ | ४೦.೦೦ |
| ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಗೌಡಾಲು ಜನಾಂಗದಲ್ಲಿ ೨೦(ಶೇ.೨೦) ಜನ ವಿವಾಹದ ದೃಷ್ಟಿಯಿಂದ ಉಳಿತಾಯ ಮಾಡುತ್ತಾರೆ. ೦೯(ಶೇ.೦೯)ರಷ್ಟು ಜನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಉಳಿತಾಯ ಮಾಡುತ್ತಿದ್ದಾರೆ. ೧೦ (ಶೇ.೧೦) ಜನ ಮನೆ ಕಟ್ಟಲು ಉಳಿತಾಯ ಮಾಡುತ್ತಿದ್ದರೆ, ೦೩ (ಶೇ.೦೩)ರಷ್ಟು ಜನ ಜಮೀನು ಖರೀದಿಸಲು ಉಳಿತಾಯ ಮಾಡುತ್ತಿದ್ದಾರೆ. ೦೮ (ಶೇ.೦೮) ಜನ ಅನಾರೋಗ್ಯದ ಸಂದರ್ಭದಲ್ಲಿ ಹಣದ ಅವಶ್ಯಕತೆ ಇರುತ್ತದೆ ಎಂದು ಉಳಿತಾಯ ಮಾಡಿದರೆ, ೦೩ (ಶೇ.೦೩) ಜನ ಹಬ್ಬ-ಹರಿದಿನಗಳನ್ನು ಆಚರಿಸಲು ಹಣ ಉಳಿತಾಯ ಮಾಡುತ್ತಿರುವುದು ಕಂಡುಬಂದಿದೆ. ಹಾಗೆಯೇ ೦೭ (ಶೇ.೦೭) ಜನ ಸಾಲವನ್ನು ತೀರಿಸುವ ಸಲುವಾಗಿ ಉಳಿತಾಯ ಮಾಡುತ್ತಿದ್ದಾರೆ. ಕೊನೆಯದಾಗಿ ४೦(ಶೇ.४೦)ರಷ್ಟು ಜನ ತಮ್ಮ ಮುಂದಿನ ಭವಿಷ್ಯಕ್ಕೆ ಒಳ್ಳೆಯದಾಗಲಿ ಎಂದು ಹಣ ಉಳಿತಾಯ ಮಾಡುತ್ತಿದ್ದಾರೆ ಎಂಬುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

ಅತಿ ಹೆಚ್ಚು ಅಂದರೆ ಶೇ.४೦ರಷ್ಟು ಜನ ತಮ್ಮ ಹಾಗೂ ತಮ್ಮ ಮಕ್ಕಳ ಮುಂದಿನ ಭವಿಷ್ಯ ಉತ್ತಮವಾಗಲಿ ಎಂಬ ಉದ್ದೇಶಕ್ಕಾಗಿ ಉಳಿತಾಯವನ್ನು ಮಾಡುತ್ತಿದ್ದಾರೆ. ಅತಿ ಕಡಿಮೆ ಅಂದರೆ ಶೇ.೦೩ರಷ್ಟು ಜನ ಹಬ್ಬ-ಹರಿದಿನಗಳನ್ನು ಆಚರಿಸುವ ಸಲುವಾಗಿ ಹಣವನ್ನು ಉಳಿತಾಯ ಮಾಡುತ್ತಿರುವುದು ಕಂಡುಬರುತ್ತದೆ. ಈ ಎಲ್ಲ ಅಂಶಗಳನ್ನು ಅವಲೋಕಿಸಿದಾಗ ಗೌಡಾಲು ಬುಡಕಟ್ಟು ಸಮುದಾಯದವರು ಉಳಿತಾಯ ಮಾಡುವ ಮನೋಭಾವನೆ ಹೊಂದಿರುವುದು ಕಂಡುಬರುತ್ತದೆ.

**ಕೋಷ್ಟಕ ೬.೦४**

**ಉಳಿತಾಯ ಮಾಡುತ್ತಿರುವ ಮೂಲಗಳು**

| ಸಂಸ್ಥೆಗಳು | ಒಟ್ಟು | ಶೇಕಡಾವಾರು |
|---|---|---|
| ಬ್ಯಾಂಕಿನಲ್ಲಿ | ೨೦ | ೨೦.೦೦ |
| ಅಂಚೆ ಕಛೇರಿ | ೦೯ | ೦೯.೦೦ |
| ಸಣ್ಣ ಉಳಿತಾಯ ಯೋಜನೆ | ೨೮ | ೨೮.೦೦ |
| ಮನೆಯಲ್ಲಿ ಉಳಿತಾಯ | ೧೫ | ೧೫.೦೦ |
| ಜೀವವಿಮಾ ನಿಧಿ | ೦೭ | ೦೭.೦೦ |
| ಚಿಟ್ ಫಂಡ್ | ೦೨ | ೦೨.೦೦ |
| ಸ್ವಯಂ ಸೇವಾ ಸಂಸ್ಥೆಗಳು | ೧೧ | ೧೧.೦೦ |
| ಮಹಿಳಾ ಸ್ವಸಹಾಯ ಸಂಘಗಳು | ೦೮ | ೦೮.೦೦ |
| ಒಟ್ಟು | ೧೦೦ | ೧೦೦.೦೦ |

ಮೇಲಿನ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಉಳಿತಾಯ ಮಾಡುವಂತಹ ಸಂಸ್ಥೆಗಳು ೨೦ (ಶೇ.೨೦) ಜನರು ಬ್ಯಾಂಕ್‌ಗಳಲ್ಲಿ ಉಳಿತಾಯ ಮಾಡುತ್ತಿದ್ದಾರೆ. ೦೯ (ಶೇ.೦೯)ಜನರು ಅಂಚೆ ಕಛೇರಿಗಳಲ್ಲಿ ಉಳಿತಾಯ ಮಾಡಿದರೆ, ೨೮ (ಶೇ.೨೮) ಜನರು ಸಣ್ಣ ಉಳಿತಾಯ ಯೋಜನೆಗಳ ಮೂಲಕ ಉಳಿತಾಯ ಮಾಡುತ್ತಿದ್ದಾರೆ. ಹಾಗೆಯೇ ೧೫ (ಶೇ.೧೫) ಜನ ಮನೆಯಲ್ಲಿ ಉಳಿತಾಯ ಮಾಡುತ್ತಿರುವುದು ಕಂಡುಬಂದಿದೆ. ೦೭ (ಶೇ.೦೭) ಜನ ಜೀವವಿಮೆಯ ಮೂಲಕ ಉಳಿತಾಯ ಮಾಡುತ್ತಿರುವುದು ತಿಳಿದುಬರುತ್ತದೆ. ೦೨(ಶೇ.೦೨) ಜನರು ಚಿಟ್ ಫಂಡ್‌ಗಳಲ್ಲಿ ಹಣ ತೊಡಗಿಸುವುದರ ಮೂಲಕ ಉಳಿತಾಯ ಮಾಡುತ್ತಿದ್ದರೆ, ೧೧(ಶೇ.೧೧) ಜನರು ಸ್ವಯಂ ಸೇವಾ ಸಂಘಗಳಲ್ಲಿ ಉಳಿತಾಯ ಮಾಡುತ್ತಿದ್ದಾರೆ. ಕೊನೆಯದಾಗಿ ೦೮ (ಶೇ.೦೮) ಜನರು ಮಹಿಳಾ ಸಂಘಗಳಲ್ಲಿ ಉಳಿತಾಯ ಮಾಡುತ್ತಿದ್ದಾರೆ ಎಂಬುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ.

ಗೌಡಾಲು ಬುಡಕಟ್ಟು ಜನರು ಹೆಚ್ಚಿನ ಉಳಿತಾಯವನ್ನು ಸಣ್ಣ ಉಳಿತಾಯ ಯೋಜನೆಗಳಲ್ಲಿ ಮಾಡುತ್ತಿದ್ದಾರೆ. ಇದನ್ನು ಹೊರತುಪಡಿಸಿದರೆ ಬ್ಯಾಂಕುಗಳಲ್ಲಿಯೂ ಹೆಚ್ಚು ಉಳಿತಾಯ ಮಾಡುತ್ತಿರುವುದು ಕಂಡುಬರುತ್ತದೆ. ಅತಿ ಕಡಿಮೆ ಎಂದರೆ ಶೇ.೦೨ರಷ್ಟು ಜನರು ಚಿಟ್ ಫಂಡ್‌ಗಳಲ್ಲಿ ಹಣ ತೊಡಗಿಸುವುದರ ಮೂಲಕ ಹಣ ಉಳಿತಾಯ ಮಾಡುತ್ತಿದ್ದಾರೆ ಎಂಬುದು ಸಂಗ್ರಹಿಸಿದ ಮಾಹಿತಿಗಳಿಂದ ತಿಳಿದುಬರುತ್ತದೆ.

**ಗೌಡಾಲು ಜನಾಂಗದ ಸಾಲದ ವಿವರ**

ಗೌಡಾಲು ಜನಾಂಗದಲ್ಲಿ ಜೀವನದ ಮಟ್ಟವು ಅವರು ಹೊಂದಿರುವ ಆರ್ಥಿಕ ಮಟ್ಟದ ಮೇಲೆ ಅವಲಂಬಿತವಾಗಿದೆ. ಇವರಲ್ಲಿ ಹೆಚ್ಚಿನವರು ಆರ್ಥಿಕವಾಗಿ ಹಿಂದುಳಿದಿದ್ದು, ಬಡತನದ ರೇಖೆಗಿಂತ ಕೆಳಗೆ ಇರುವುದನ್ನು ಕಾಣಬಹುದಾಗಿದೆ. ಆರ್ಥಿಕವಾಗಿ ಹಿಂದುಳಿದಿದ್ದು, ಬಡತನದ ರೇಖೆಗಿಂತ ಕೆಳಗೆ ಇರುವುದನ್ನು ಕಾಣಬಹುದಾಗಿದೆ. ಆರ್ಥಿಕವಾಗಿ ಹಿಂದುಳಿದ ಇವರ ಆದಾಯದ ಪ್ರಮಾಣವು ಕಡಿಮೆ ಇರುವ ಕಾರಣದಿಂದಾಗಿ ಹಲವಾರು ಸಮಸ್ಯೆಗಳನ್ನು ಹೊಂದಿದ್ದು, ಕೆಲವೊಂದು ಉದ್ದೇಶಗಳಿಗಾಗಿ ಸಾಲದ ಅವಶ್ಯಕತೆ ಇದ್ದು, ಈ ಸಾಲವು ಅವರ ಬೇಡಿಕೆಯನ್ನು ಈಡೇರಿಸಲು ಅನುಕೂಲಕರವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಕೆಲವು ಅಂಶಗಳನ್ನು ಕೆಳಗಿನ ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

**ಕೋಷ್ಟಕ ೬.೦೫**

**ಸಾಲ ಪಡೆದವರ ವಿವರ**

| ಸಾಲದ ವಿವರ | ಒಟ್ಟು | ಶೇಕಡಾವಾರು |
|---|---|---|
| ಸಾಲ ಮಾಡಿರುವವರು | ೫೬ | ೫೬.೦೦ |
| ಸಾಲ ಮಾಡದೇ ಇರುವವರು | ೪೪ | ೪೪.೦೦ |
| ಒಟ್ಟು | ೧೦೦ | ೧೦೦.೦೦ |

ಸಾಲ ಮಾಡಲು ಕಾರಣಗಳು

| | | |
|---|---|---|
| ವಿವಾಹದ ಖರ್ಚಿಗಾಗಿ | ೧೧ | ೦೫.೦೦ |
| ಮನೆ ಕಟ್ಟಲು/ಕೊಂಡುಕೊಳ್ಳಲು | ೧೯ | ೦೮.೬೩ |
| ಜಮೀನು/ಸೈಟು ಕೊಳ್ಳಲು | ೦೭ | ೦೩.೧೮ |
| ಮಕ್ಕಳ ವಿದ್ಯಾಭ್ಯಾಸಕ್ಕಾಗಿ | ೧೮ | ೦೮.೧೮ |
| ಅನಾರೋಗ್ಯದ ಕಾರಣಕ್ಕಾಗಿ | ೧೩ | ೦೫.೯೦ |
| ಹಬ್ಬ ಹರಿದಿನಗಳ ಆಚರಣೆಗಾಗಿ | ೧೦ | ೦೪.೫೪ |
| ಉತ್ತಮ ಕ್ರಿಯೆಗಳಿಗಾಗಿ | ೪೯ | ೨೨.೨೭ |
| ಕೃಷಿ ಅಭಿವೃದ್ಧಿಗಾಗಿ | ೪೨ | ೧೯.೦೯ |
| ವಾಹನ ಖರೀದಿಗಾಗಿ | ೦೪ | ೦೧.೮೧ |
| ಪಶು ಸಂಗೋಪನೆಗಾಗಿ | ೦೭ | ೦೩.೧೮ |
| ವ್ಯಾಪಾರ ವ್ಯವಹಾರಗಳಿಗಾಗಿ | ೧೭ | ೦೭.೭೨ |
| ದವಸ ಧಾನ್ಯ ತೆಗೆದುಕೊಳ್ಳುವುದಕ್ಕೆ | ೨೩ | ೧೦.೪೫ |
| ಒಟ್ಟು | ೨೨೦ | ೧೦೦.೦೦ |

ಮೇಲಿನ ಕೋಷ್ಟಕದಿಂದ ಕಂಡುಬರುವುದೇನೆಂದರೆ ಒಟ್ಟು ೫೬(ಶೇ.೫೬) ಮಾಹಿತಿದಾರರು ಬೇರೆ ಬೇರೆ ಕಾರಣಗಳಿಗಾಗಿ ಸಾಲವನ್ನು ತೆಗೆದುಕೊಳ್ಳುತ್ತಿದ್ದು, ಅವುಗಳ ವಿವರ ಹೀಗಿದೆ. ೧೧ (ಶೇ.೦೫.೦೦) ರಷ್ಟು ಜನರು ವಿವಾಹದ ಕರ್ಚಿಗಾಗಿ ಸಾಲ ಮಾಡುತ್ತಿದ್ದಾರೆ. ೧೯ (ಶೇ.೦೮.೬೩) ಜನರು ಮನೆ ಕಟ್ಟಲು, ೦೭(ಶೇ.೦೩.೧೮) ಜನರು ಜಮೀನು ಅಥವಾ ಸೈಟು ಕೊಳ್ಳಲು, ೧೮ (ಶೇ.೦೮.೧೮) ಜನರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ೧೩ (ಶೇ.೦೫.೯೦) ಜನ ಅನಾರೋಗ್ಯದ ಕಾರಣಕ್ಕಾಗಿ ೧೦ (ಶೇ.೦೪.೫೪) ಜನರು ಹಬ್ಬ ಹರಿದಿನಗಳನ್ನು ಆಚರಿಸಲು, ಹಾಗೂ ೪೯ (ಶೇ.೨೨.೨೭) ಜನ ಕುಟುಂಬದಲ್ಲಿ ಉತ್ತಮ ಕ್ರಿಯೆಗಳನ್ನು ಮಾಡಲು ಸಾಲ ಪಡೆಯುತ್ತಿದ್ದಾರೆ. ೪೨(ಶೇ.೧೯.೦೯) ಜನರು ಕೃಷಿಯ ಅಭಿವೃದ್ಧಿಗೋಸ್ಕರ, ೦೪ (ಶೇ.೦೧.೮೧) ಜನರು ವಾಹನ ಖರೀದಿಸಲು, ೦೭ (ಶೇ.೦೩.೧೮) ಜನರು ಪಶು ಸಂಗೋಪನೆ ಮಾಡಲು, ೧೭ (ಶೇ.೦೭.೭೨) ಜನ ವ್ಯಾಪಾರ-ವ್ಯವಹಾರಗಳಿಗಾಗಿ, ಕೊನೆಯದಾಗಿ ೨೩ (ಶೇ.೧೦.೪೫) ಜನರು ದವಸ ಧಾನ್ಯ ಕೊಂಡುಕೊಳ್ಳಲು ಸಾಲ ಪಡೆದಿರುವುದಾಗಿ ತಿಳಿಸಿರುತ್ತಾರೆ.

ಕೋಷ್ಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ ಕೆಲವು ತಿಳುವಳಿಕೆದಾರರು ಒಂದಕ್ಕಿಂತ ಹೆಚ್ಚಿನ ಕಾರಣಗಳಿಗಾಗಿ ಸಾಲವನ್ನು ಪಡೆಯುತ್ತಿದ್ದಾರೆ. ಆದ್ದರಿಂದ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ.

**ಸಮುದಾಯದವರು ಸಾಲ ತೆಗೆದುಕೊಳ್ಳುತ್ತಿರುವ ಮೂಲಗಳು**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಕೆಲವರು ಸಾಲವನ್ನು ಪಡೆಯುತ್ತಿದ್ದು, ಅವರು ಸಾಲವನ್ನು ಪಡೆಯಲು ಇರುವ ಹಲವಾರು ಕಾರಣಗಳ ಜೊತೆಯಲ್ಲಿ ಸಾಲವನ್ನು ತೆಗೆದುಕೊಳ್ಳುವ ಮೂಲಗಳನ್ನು ಕೆಳಗಿನ ಕೋಷ್ಟಕದಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ ೬.೦೬**

**ಸಾಲ ತೆಗೆದುಕೊಳ್ಳುವ ಮೂಲಗಳು**

| ಸಾಲದ ಮೂಲ | ಒಟ್ಟು | ಶೇಕಡಾವಾರು |
|---|---|---|
| ಬ್ಯಾಂಕುಗಳಿಂದ | ೩೪ | ೨೮.೫೭ |
| ಖಾಸಗಿ ಲೇವಾದೇವಿಗಾರರಿಂದ | ೧೧ | ೯.೨೪ |
| ಬಂಧುಗಳಿಂದ | ೦೯ | ೭.೫೬ |
| ಸ್ನೇಹಿತರಿಂದ | ೧೨ | ೧೦.೦೮ |
| ಸಹಕಾರಿ ಸಂಘಗಳಿಂದ | ೨೨ | ೧೮.೪೮ |
| ಕೆಲಸ ಮಾಡುತ್ತಿರುವ ಸಹಕಾರರಿಂದ | ೩೧ | ೨೬.೦೫ |
| **ಒಟ್ಟು** | ೧೧೯ | ೧೦೦.೦೦ |

ಮೇಲಿನ ಕೋಷ್ಟಕದಿಂದ ಕಂಡುಬರುವುದೇನೆಂದರೆ ೩೪ (ಶೇ.೨೮.೫೭) ಜನ ಬ್ಯಾಂಕುಗಳಿಂದ, ೧೧ (ಶೇ.೦೯.೨೪) ಜನ ಖಾಸಗಿ ಲೇವಾದೇವಿಗಾರರಿಂದ, ೦೯ (ಶೇ.೦೭.೫೬) ಜನ ತಮ್ಮ ಬಂಧುಗಳಿಂದ, ೧೨ (ಶೇ.೧೦.೦೮) ಜನ ತಮ್ಮ ಸ್ನೇಹಿತರಿಂದ ಸಾಲ ಪಡೆಯುತ್ತಾರೆ. ೨೨ (ಶೇ.೧೮.೪೮) ಜನ ಸಹಕಾರಿ ಸಂಘಗಳಿಂದ, ೩೧ (ಶೇ.೨೬.೦೫) ಜನ ತಾವು ಕೆಲಸಕ್ಕೆ ಸೇರಿರುವ ಮಾಲೀಕರಿಂದ ಸಾಲವನ್ನು ಪಡೆಯುತ್ತಿರುವುದು ಕಂಡುಬರುತ್ತದೆ.

ಈ ಕೋಷ್ಟಕದಿಂದ ಎಂದರೆ ಗೌಡಾಲು ಜನರಲ್ಲಿ ಅತಿ ಹೆಚ್ಚು ಜನ ಅಂದರೆ ಶೇ.೨೮.೫೭ ಜನರು ಬ್ಯಾಂಕುಗಳಿಂದಲೇ ಸಾಲವನ್ನು ಪಡೆಯುತ್ತಿರುವುದನ್ನು ಕಾಣಬಹುದು. ಹಾಗೆಯೇ ಕೆಲಸ ಮಾಡುತ್ತಿರುವ ಸಾಹುಕಾರರಿಂದಲೂ ಹಣ ಪಡೆಯುತ್ತಿದ್ದಾರೆ. ಕೆಲವೊಂದು ಮಾಹಿತಿದಾರರು ಒಂದಕ್ಕಿಂತ ಹೆಚ್ಚಿನ ಕಡೆಗಳಿಂದ ಸಾಲವನ್ನು ಪಡೆದಿರುವುದರಿಂದ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ.

**ಗೌಡಾಲು ಬುಡಕಟ್ಟು ಸಮುದಾಯದವರ ಜಾನುವಾರುಗಳ ವಿವರ**

ಈ ಬುಡಕಟ್ಟು ಸಮುದಾಯದವರು ಹೆಚ್ಚಾಗಿ ಗುಡ್ಡಗಾಡು ಮತ್ತು ಅರಣ್ಯ ಪ್ರದೇಶಗಳಲ್ಲಿ ನೆಲೆಸಿರುವುದರಿಂದ, ಇವರು ಸಹಜವಾಗಿ ಸಾಕುಪ್ರಾಣಿಗಳನ್ನು ಸಾಕುತ್ತಾರೆ. ಜಾನುವಾರುಗಳನ್ನು ಸಾಕುವುದರಿಂದ ಈ ಜನರ ಆರ್ಥಿಕ ಮಟ್ಟ ಸುಧಾರಿಸುತ್ತದೆ. ಮಾಂಸದ ರೂಪದಲ್ಲಿ ಆಹಾರಕ್ಕೆ ಬಳಸಲು ಕೆಲವೊಂದು ಪ್ರಾಣಿಗಳನ್ನು ಸಾಕುತ್ತಿದ್ದಾರೆ. ಕೆಲವರು ಜಾನುವಾರುಗಳು ತಮ್ಮ ಜೀವನದ ಅವಿಭಾಜ್ಯ ಅಂಗಗಳು ಎಂಬ ನಂಬಿಕೆಯನ್ನೂ ಹೊಂದಿದ್ದಾರೆ. ಕೆಲವರು ಜಾನುವಾರುಗಳೇ ಜೀವನ, ಅವುಗಳಿಂದಲೇ ತಮ್ಮ ಕುಟುಂಬದ ಬದುಕು ಸಾಗುತ್ತದೆ ಎಂಬ ನಿಲುವನ್ನು ಹೊಂದಿದ್ದಾರೆ. ಪಶುಪಾಲನೆಯಿಂದ, ಹೈನುಗಾರಿಕೆಯನ್ನು ಮಾಡುವುದರಿಂದ ಜೀವನವನ್ನು ಸಾಗಿಸಬಹುದು. ಜಾನುವಾರುಗಳ ಗೊಬ್ಬರದಿಂದ ಆರ್ಥಿಕ ಲಾಭವನ್ನು ಗಳಿಸಬಹುದು ಎಂಬ ಅಭಿಪ್ರಾಯವನ್ನು ಅವರು ಹೊಂದಿದ್ದಾರೆ.

ಕೆಳಗಿನ ಕೋಷ್ಟಕದಲ್ಲಿ ಗೌಡಾಲು ಬುಡಕಟ್ಟು ಸಮುದಾಯದವರು ಹೊಂದಿರುವ ಸಾಕುಪ್ರಾಣಿಗಳ ವಿವರವನ್ನು ತಿಳಿಯಬಹುದು.

**ಕೋಷ್ಟಕ ೬.೦೭**

**ಸಮುದಾಯ ಹೊಂದಿರುವ ಜಾನುವಾರುಗಳ ವಿವರ**

| ಜಾನುವಾರುಗಳ ಸಂಖ್ಯೆ | ಹಸುಗಳು | ಎತ್ತುಗಳು | ಎಮ್ಮೆಗಳು | ಕೋಣಗಳು | ಕೋಳಿಗಳು | ಮೊಲಗಳು | ಕುರಿಗಳು | ನಾಯಿಗಳು | ಬೆಕ್ಕುಗಳು | ಇತರ |
|---|---|---|---|---|---|---|---|---|---|---|
| ೧-೫ | ೮೯ | ೭೮ | ೨೧ | ೦೯ | ೫೧ | ೦೬ | ೦೨ | ೯೧ | ೪೯ | ೧೭ |
| ೬-೧೦ | ೧೭ | - | ೧೩ | - | ೨೬ | ೦೨ | - | ೦೩ | ೦೨ | ೦೩ |
| ೧೧-೧೫ | ೦೪ | - | - | - | ೦೪ | ೦೧ | - | - | - | ೦೧ |
| ೧೬-೨೦ | - | - | - | - | - | - | - | - | - | - |
| ೨೧+ | - | - | - | - | - | - | - | - | - | - |
| **ಒಟ್ಟು** | **೧೧೦** | **೭೮** | **೩೪** | **೦೯** | **೮೧** | **೦೯** | **೦೨** | **೯೪** | **೫೧** | **೨೧** |

ಮೇಲಿನ ಕೋಷ್ಟಕದಿಂದ ಕಂಡುಬರುವ ಸಂಗತಿ ಎಂದರೆ ಈ ಬುಡಕಟ್ಟಿನವರು ಹೊಂದಿರುವ ಜಾನುವಾರುಗಳಲ್ಲಿ ೧-೫ ಸಂಖ್ಯೆಯ ಜಾನುವಾರುಗಳನ್ನು ಹೊಂದಿರುವವರು ಪ್ರಮಾಣ ಇಂತಿದೆ. ಹಸುಗಳು (೮೯), ಎತ್ತುಗಳು (೭೮), ಎಮ್ಮೆಗಳು (೨೧), ಕೋಣಗಳು (೦೯), ಕೋಳಿಗಳು (೫೧), ಮೊಲಗಳು (೦೬), ಕುರಿಗಳು (೦೨), ನಾಯಿಗಳು (೯೧), ಬೆಕ್ಕುಗಳು (೪೯), ಇತರೆ (೧೭) ಜಾನುವಾರುಗಳನ್ನು ಹೊಂದಿರುವುದು ಕಂಡುಬರುತ್ತದೆ. ೬-೧೦ ಜಾನುವಾರುಗಳನ್ನು ಹೊಂದಿರುವವರ ಪ್ರಮಾಣ: ಹಸುಗಳು (೧೭), ಎತ್ತುಗಳು (-), ಎಮ್ಮೆಗಳು (೧೩) ಕೋಣಗಳು (-), ಕೋಳಿಗಳು (೨೬) ಮೊಲಗಳು (೦೨), ಕುರಿಗಳು (-), ನಾಯಿಗಳು (೦೩), ಬೆಕ್ಕುಗಳು (೦೨), ಇತರೆ ಪ್ರಾಣಿಗಳು (೦೩)ರಷ್ಟು ಹೊಂದಿದ್ದು, ೧೧-೧೫ ಪ್ರಾಣಿಗಳನ್ನು ಹೊಂದಿರುವವರ ಪ್ರಮಾಣ ಹಸುಗಳು (೦೪), ಕೋಳಿಗಳು (೦೪), ಮೊಲಗಳು (೦೧), ಇತರೆ (೦೧)ರಷ್ಟು ಹೊಂದಿದ್ದು, ೧೬-೨೦ ಹಾಗೂ ೨೧ಕ್ಕಿಂತ ಹೆಚ್ಚು ಪ್ರಾಣಿಗಳನ್ನು ಹೊಂದಿರುವವರ ಸಂಖ್ಯೆಯು ಇಲ್ಲದೇ ಇರುವುದು ಕಂಡುಬರುತ್ತದೆ.

ಮೇಲಿನ ಕೋಷ್ಟಕದಿಂದ ಕಂಡುಬರುವ ಸಂಗತಿ ಎಂದರೆ, ಬುಡಕಟ್ಟು ಜನರು ಜೀವನ ನಿರ್ವಹಣೆಯನ್ನು ಮಾಡಲು ಹೆಚ್ಚಾಗಿ ಹಸುಗಳನ್ನು ಎತ್ತುಗಳನ್ನು ಎಮ್ಮೆಗಳನ್ನು, ಕೋಳಿಗಳನ್ನು, ನಾಯಿಗಳನ್ನು ಸಾಕುತ್ತಿರುವುದು ಕಂಡುಬರುತ್ತದೆ.

**ಗೌಡಾಲು ಬುಡಕಟ್ಟು ಜನರ ಗೃಹೋಪಯೋಗಿ ವಸ್ತುಗಳ ವಿವರ**

ಮನುಷ್ಯನ ಜೀವನ ನಿರ್ವಹಣೆಗಾಗಿ ಅವನ ದಿನನಿತ್ಯದ ಜೀವನದಲ್ಲಿ ಬಹಳಷ್ಟು ವಸ್ತುಗಳ ಅವಶ್ಯಕತೆ ಇದ್ದು, ಅವುಗಳ ಮೂಲಕ ತನ್ನ ಬೇಡಿಕೆಯನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಹಾಗೆಯೇ ಗೌಡಾಲು ಬುಡಕಟ್ಟು ಜನರು ತಮ್ಮ ಕುಟುಂಬಗಳಲ್ಲಿ ದಿನನಿತ್ಯ ಅವಶ್ಯಕತೆ ಇರುವಂತಹ ವಸ್ತುಗಳನ್ನು ಬಳಸಿಕೊಂಡು

ಜೀವನವನ್ನು ಸಾಗಿಸುತ್ತಿರುವುದು ಕಂಡುಬರುತ್ತದೆ. ಈ ಸಂಶೋಧನೆಯಲ್ಲಿ ಗೌಡಾಲು ಜನರು ಹೊಂದಿರುವ ವಸ್ತುಗಳ ಆಧಾರದ ಮೇಲೆ ಅವರ ಆರ್ಥಿಕ ಮಟ್ಟ ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಈ ಜನರು ಹೊಂದಿರುವ ಗೃಹೋಪಯೋಗಿ ವಸ್ತುಗಳ ಬಗ್ಗೆ ವಿವರವಾಗಿ ಕೆಳಗಿನ ಕೋಷ್ಟಕದಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ ೬.೦೮**

**ಮಾಹಿತಿದಾರರು ಹೊಂದಿರುವ ಗೃಹೋಪಯೋಗಿ ವಸ್ತುಗಳ ವಿವರ**

| ವಸ್ತುಗಳ ವಿವರ | ಒಟ್ಟು | ಶೇಕಡಾವಾರು |
|---|---|---|
| ಗಡಿಯಾರ | ೭೮ | ೨೦.೯೧ |
| ರೇಡಿಯೋ | ೬೩ | ೧೬.೮೯ |
| ಟೇಪ್‌ರೆಕಾರ್ಡರ್/ವಿ.ಸಿ.ಡಿ. | ೫೧ | ೧೩.೬೭ |
| ವಾಟರ್ ಫಿಲ್ಟರ್ | ೦೨ | ೦.೫೩ |
| ಫ್ಯಾನ್ | ೦೫ | ೧.೩೪ |
| ಟಿ.ವಿ. (ಕಪ್ಪು-ಬಿಳುಪು) | ೦೨ | ೦.೫೩ |
| ಟಿ.ವಿ. (ಬಣ್ಣದ್ದು) | ೦೬ | ೧.೬೦ |
| ಫೋನ್ | ೨೩ | ೬.೧೬ |
| ಮಿಕ್ಸರ್ | ೧೬ | ೪.೨೮ |
| ಗ್ರೈಂಡರ್ | ೦೧ | ೦.೨೬ |
| ಇಸ್ತ್ರಿ ಪೆಟ್ಟಿಗೆ | ೩೧ | ೮.೩೧ |
| ಕುಕ್ಕರ್ | ೦೨ | ೦.೫೩ |
| ಗ್ಯಾಸ್ ಸ್ಟೌವ್ | ೦೫ | ೧.೩೪ |
| ಬಟ್ಟೆ ಹೊಲಿಯುವ ಯಂತ್ರ | ೨೬ | ೬.೯೭ |
| ರೆಫ್ರಿಜರೇಟರ್ | - | - |
| ವಾಷಿಂಗ್ ಮೆಷಿನ್ | - | - |
| ಸೋಲಾರ್ | ೪೧ | ೧೦.೯೯ |
| ಗೋಬರ್ ಗ್ಯಾಸ್ | ೧೭ | ೪.೫೫ |
| ವಿದ್ಯುತ್ ಜನರೇಟರ್ | ೦೪ | ೧.೦೭ |
| ಎ.ಸಿ. ವ್ಯವಸ್ಥೆ | - | - |
| ಒಟ್ಟು | ೩೭೩ | ೧೦೦.೦೦ |

ಮೇಲಿನ ಕೋಷ್ಟಕದಲ್ಲಿ ೭೮ (ಶೇ.೨೦.೯೧)ರಷ್ಟು ಮಾಹಿತಿದಾರರು ಗಡಿಯಾರವನ್ನು ಹೊಂದಿದ್ದಾರೆ. ೬೩ (ಶೇ.೧೬.೮೯) ಜನ ರೇಡಿಯೋವನ್ನು, ೫೧ (ಶೇ.೧೩.೬೭) ಜನರು ಟೇಪ್‌ರೆಕಾರ್ಡರ್ ವಿ.ಸಿ.ಡಿಯನ್ನು, ೦೨ (ಶೇ.೦.೫೩) ಜನ ವಾಟರ್ ಫಿಲ್ಟರ್ ಹೊಂದಿದ್ದಾರೆ. ೦೫ (ಶೇ.೧.೩೪) ಜನ ಫ್ಯಾನ್‌ಗಳನ್ನು ಬಳಸುತ್ತಿದ್ದರೆ, ೦೨ (ಶೇ.೦.೫೩) ಜನ ಕಪ್ಪು ಬಿಳುಪಿನ ಟಿ.ವಿಯನ್ನು ೦೬ (ಶೇ.೧.೬೦) ಜನ ಬಣ್ಣದ ಟಿ.ವಿಯನ್ನು

ಹೊಂದಿದ್ದಾರೆ. ೨೩ (ಶೇ.೬.೧೬) ಜನ ಮನೆಯಲ್ಲಿ ಫೋನ್‌ಗಳನ್ನು ಬಳಸುತ್ತಿದ್ದಾರೆ. ೧೬ (ಶೇ.೪.೨೮) ಜನರು ಮನೆಯಲ್ಲಿ ಮಿಕ್ಸರ್ ಹೊಂದಿದ್ದಾರೆ, ೦೧ (ಶೇ.೦.೨೬) ಜನ ಗ್ರೈಂಡರ್ ಹೊಂದಿದ್ದಾರೆ. ೩೧ (ಶೇ.೮.೩೧) ಜನರು ಇಸ್ತ್ರಿ ಪೆಟ್ಟಿಗೆ ಬಳಸುತ್ತಾರೆ. ೦೨ (ಶೇ.೦.೫೩) ಜನ ಮನೆಯಲ್ಲಿ ಕುಕ್ಕರ್ ಹೊಂದಿದ್ದಾರೆ. ೦೫ (ಶೇ.೧.೩೪) ಜನ ಗ್ಯಾಸ್ ಸ್ಟೌವ್ ಹೊಂದಿದ್ದರೆ, ೨೬ (ಶೇ.೬.೯೭) ಜನರು ಮನೆಯಲ್ಲಿ ಬಟ್ಟೆ ಹೊಲೆಯುವ ಯಂತ್ರ ಹೊಂದಿದ್ದಾರೆ. ೪೧ (ಶೇ.೧೦.೯೯) ಜನರು ಸೋಲಾರ್ ಹೊಂದಿದ್ದಾರೆ. ೧೭ (ಶೇ.೪.೫೫) ಜನರ ಮನೆಯಲ್ಲಿ ಗೋಬರ್ ಗ್ಯಾಸ್ ಇದೆ. ೦೪ (ಶೇ.೧.೦೭) ಜನ ಮನೆಯಲ್ಲಿ ವಿದ್ಯುತ್ ಜನರೇಟರ್ ಹೊಂದಿದ್ದಾರೆ. ಹಾಗೆಯೇ ಈ ಸಂಶೋಧನೆಯ ಪ್ರಕಾರ ಗೌಡಾಲು ಜನರು ವಾಷಿಂಗ್ ಮಷಿನ್, ರೆಫ್ರಿಜರೇಟರ್ ಮತ್ತು ಎ.ಸಿ ವ್ಯವಸ್ಥೆಯನ್ನು ಹೊಂದಿರುವುದಿಲ್ಲ. ಇವರು ಹೆಚ್ಚಾಗಿ ಗಡಿಯಾರ, ರೇಡಿಯೋ ಟೇಪ್‌ರೆಕಾರ್ಡರ್‌ಗಳಂತಹ ಸಾಮಾನ್ಯ ವಸ್ತುಗಳನ್ನು ಮಾತ್ರ ಹೊಂದಿದ್ದಾರೆ.

ಈ ಕೋಷ್ಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ ಕೆಲವು ಮಾಹಿತಿದಾರರು ಒಂದಕ್ಕಿಂತ ಹೆಚ್ಚಿನ ಗೃಹೋಪಯೋಗಿ ವಸ್ತುಗಳನ್ನು ಹೊಂದಿರುವ ಕಾರಣದಿಂದಾಗಿ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ.

**ಗೌಡಾಲು ಜನರು ಹೊಂದಿರುವ ವಾಹನಗಳ ವಿವರ**

ಮನುಷ್ಯನು ತನ್ನ ಬೇಡಿಕೆಯನ್ನು ಈಡೇರಿಸಿಕೊಳ್ಳಲು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಂಚರಿಸಲೇಬೇಕು. ಆಗ ಅವನು ಕಾಲು ನಡಿಗೆಯಿಂದ ಅಥವಾ ವಾಹನಗಳ ಸಹಾಯದಿಂದ ಸಂಚರಿಸಬೇಕಾಗುತ್ತದೆ. ಹೀಗೆ ನಿರ್ದಿಷ್ಟ ಕಾಲದಲ್ಲಿ ಒಂದು ಸ್ಥಳಕ್ಕೆ ತಲುಪಬೇಕಾದರೆ ಅಲ್ಲಿ ವಾಹನಗಳ ಅವಶ್ಯಕತೆ ಇರುವುದು ಕಂಡುಬರುತ್ತದೆ. ವಾಹನಗಳು ವಿವಿಧ ಸ್ವರೂಪವನ್ನು ಹೊಂದಿರಬಹುದು. ಉದಾಹರಣೆಗೆ ಸೈಕಲ್, ಮೋಟಾರ್ ಸೈಕಲ್, ರಿಕ್ಷಾ, ಕಾರು, ಬಸ್ಸು, ಲಾರಿ, ರೈಲು ಇನ್ನೂ ಮುಂತಾದವುಗಳು. ಈ ಗೌಡಾಲು ಜನಾಂಗದವರು ಹೊಂದಿರುವ ವಾಹನಗಳ ಬಗ್ಗೆ ಈ ಕೆಳಗಿನ ಕೋಷ್ಟಕದಲ್ಲಿ ಮಾಹಿತಿಯನ್ನು ಕ್ರೋಡೀಕರಿಸಲಾಗಿದ್ದು, ಇವುಗಳ ಮೂಲಕ ಗೌಡಾಲು ಜನರ ಜೀವನ ಮಟ್ಟ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಕಂಡುಕೊಳ್ಳಬಹುದು.

**ಕೋಷ್ಟಕ ೬.೦೯**

**ಸಮುದಾಯದವರು ಹೊಂದಿರುವ ವಾಹನಗಳ ವಿವರ**

| ವಾಹನಗಳ ವಿವರ | ಒಟ್ಟು | ಶೇಕಡಾವಾರು |
|---|---|---|
| ಸೈಕಲ್ | ೧೧ | ೧೧.೦೦ |
| ಮೋಟಾರ್ ಸೈಕಲ್ | ೦೬ | ೦೬.೦೦ |
| ಸ್ಕೂಟರ್ | ೦೧ | ೦೧.೦೦ |
| ಆಟೋರಿಕ್ಷಾ | ೦೧ | ೦೧.೦೦ |

| ಟ್ರ್ಯಾಕ್ಟರ್ | - | - |
|---|---|---|
| ಟಿಲ್ಲರ್ | ೦೨ | ೦೨.೦೦ |
| ಕಾರು | - | - |
| ಟೆಂಪೋ | - | - |
| ಲಾರಿ | - | - |
| ಬಸ್ಸು | - | - |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಶೇಕಡಾ ೧೧ ಜನ ಸೈಕಲ್ ಹೊಂದಿದ್ದರೆ, ಶೇ.೦೬ ಜನರು ಮೋಟಾರ್ ಸೈಕಲ್ ಹೊಂದಿದ್ದಾರೆ. ಶೇ.೦೧ ಜನ ಸ್ಕೂಟರ್ ಹೊಂದಿದ್ದರೆ, ಶೇ.೦೧ರಷ್ಟು ಜನ ಆಟೋ ರಿಕ್ಷಾ ಮತ್ತು ಶೇ.೦೨ ಜನ ಟಿಲ್ಲರ್ ಹೊಂದಿದ್ದಾರೆ ಎಂಬುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಹಾಗೆಯೇ ಟ್ರ್ಯಾಕ್ಟರ್, ಕಾರು, ಟೆಂಪೋ, ಲಾರಿ ಹಾಗೂ ಬಸ್ಸುಗಳನ್ನು ಯಾವ ಮಾಹಿತಿದಾರರೂ ಹೊಂದಿರುವುದಿಲ್ಲ.

ಕೋಷ್ಟಕದಲ್ಲಿ ಕಂಡುಬರುವ ಸಂಗತಿ ಎಂದರೆ ಗೌಡಾಲು ಜನರು ಆರ್ಥಿಕವಾಗಿ ಹಿಂದೆ ಉಳಿದಿದ್ದು, ಕೃಷಿ ಅವಲಂಬಿತರಾದ ಇವರು ಕೂಲಿ, ಸಣ್ಣ ಪುಟ್ಟ ವ್ಯಾಪಾರ ಮಾಡುತ್ತಿದ್ದು, ಗುಡ್ಡಗಾಡು, ದಟ್ಟ ಅರಣ್ಯಪ್ರದೇಶದಲ್ಲಿ ನೆಲೆಸಿರುವುದರಿಂದ ಇವರು ಸ್ವಂತ ವಾಹನವನ್ನು ಕೊಂಡುಕೊಳ್ಳುವ ಸಾಮರ್ಥ್ಯ ಹೊಂದಿರುವುದಿಲ್ಲ. ಕೆಲವೊಂದು ವಾಹನಗಳು ಇವರು ವಾಸಿಸುವ ಜಾಗದಲ್ಲಿ ನಡೆಸಲು ಸಾಧ್ಯವಿಲ್ಲ. ಏಕೆಂದರೆ ರಸ್ತೆಗಳೇ ಇಲ್ಲದಿರುವ ಜಾಗದಲ್ಲಿ ಬಹಳಷ್ಟು ಜನ ವಾಸವಾಗಿದ್ದಾರೆ. ಇವರಿಗೆ ವಾಹನಗಳ ಅವಶ್ಯಕತೆ ಇಲ್ಲ. ವಾಹನಗಳು ಇದ್ದರೂ ಸಹ ಅದನ್ನು ನಡೆಸಲು ಸರಿಯಾದ ರಸ್ತೆಗಳಿಲ್ಲ. ಹಾಗಾಗಿ ಇವರು ಹೊಂದಿರುವ ವಾಹನಗಳ ಸಂಖ್ಯೆಯು ತುಂಬಾ ಕಡಿಮೆ ಇರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ಗೌಡಾಲು ಬುಡಕಟ್ಟು ಸಮುದಾಯದವರ ವಲಸೆಯ ವಿವರ**

ವಲಸೆ ಎನ್ನುವುದು ಸಾರ್ವತ್ರಿಕವಾದ ಪ್ರಕ್ರಿಯೆಯಾಗಿದ್ದು, ಸಮಾಜದ ಪ್ರತಿಯೊಂದು ಸಮುದಾಯದಲ್ಲಿಯೂ ಕಂಡುಬರುತ್ತದೆ. ವಲಸೆ ಎಂದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಜನರು ಹೊರಡುವ ಚಲನೆ ಮನುಷ್ಯನು ತನ್ನ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಅಥವಾ ವೃತ್ತಿಗೆ ಸಂಬಂಧಿಸಿದಂತೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲನೆಯನ್ನು ಬಯಸುತ್ತಾನೆ. ಉದಾಹರಣೆಗೆ ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಗಳಿಗೆ ಚಲನೆಯಾಗಬಹುದು. ಅದೇ ರೀತಿ ನಗರ ಪ್ರದೇಶದಿಂದ ಗ್ರಾಮೀಣ ಪ್ರದೇಶಗಳಿಗೆ ಹೋಗಿ ನೆಲೆಸುವ ಚಲನೆಯಾಗಿರಬಹುದು ಅಥವಾ ರಾಷ್ಟ್ರೀಯ ವಲಸೆ, ಅಂತಾರಾಷ್ಟ್ರೀಯ ವಲಸೆಯಾಗಿರಬಹುದು.

ಈ ಬುಡಕಟ್ಟು ಸಮುದಾಯದಲ್ಲಿ ಶೇ.೦೪ರಷ್ಟು ಜನ ವಲಸೆ ಪ್ರವೃತ್ತಿಯನ್ನು ಹೊಂದಿದ್ದಾರೆ. ಕೆಲವರು ಉದ್ಯೋಗ ಹುಡುಕಿಕೊಂಡು ಹೋದರೆ, ಇನ್ನು ಕೆಲವರು ಶಿಕ್ಷಣ ಪಡೆಯುವ ಕಾರಣದಿಂದಾಗಿ ವಲಸೆ ಹೋಗಿ ಅಲ್ಲಿಯೇ ನೆಲೆಸಿದ್ದಾರೆ. ಇನ್ನು ಕೆಲವರು ನಗರ ಪ್ರದೇಶದಲ್ಲಿ ಉದ್ಯೋಗ ಹುಡುಕಿಕೊಂಡು ಹೋದವರು ತಿರುಗಿ ಬಾರದೆ ಅಲ್ಲಿಯೇ ನೆಲೆಸಿದ್ದಾರೆ. ಈ ಜನರು ಸಾಮಾನ್ಯವಾಗಿ ಉಡುಪಿ ಜಿಲ್ಲೆಯಿಂದ ಚಿಕ್ಕಮಗಳೂರು

ಜಿಲ್ಲೆಯ ಗುಡ್ಡಗಾಡು ಪ್ರದೇಶಗಳಿಗೆ ಬಂದು ನೆಲೆಸಿರುವರು ಎಂಬ ಅಭಿಪ್ರಾಯ ಇವರಲ್ಲಿದೆ. ಕೆಲವೊಂದು ಸಮಯದಲ್ಲಿ ಗುಡ್ಡದ ಮೇಲಿನವರು ಅಂದರೆ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯಲ್ಲಿಯ ಗೌಡಾಲು ಜನರಲ್ಲಿ ದಕ್ಷಿಣ ಕನ್ನಡಕ್ಕೆ ವಲಸೆ ಹೋಗಿ ಉದ್ಯೋಗ ಮುಗಿಸಿಕೊಂಡು ಮೂರ್‍ನಾಲ್ಕು ತಿಂಗಳು ಅಲ್ಲಿಯೇ ಇದ್ದು ಹಿಂತಿರುಗಿ ಬರುವಂತಹ ಪ್ರವೃತ್ತಿಯವರೂ ಇದ್ದಾರೆ. ಇನ್ನೂ ಕೆಲವರು ದಕ್ಷಿಣ ಕನ್ನಡದಿಂದ ಗುಡ್ಡದ ಮೇಲೆ ವಲಸೆ ಬಂದು ಕೆಲವೊಂದು ತಿಂಗಳುಗಳವರೆಗೆ ಇದ್ದು, ಕೆಲಸ ಮುಗಿಸಿ ನಂತರ ಪುನಃ ತಮ್ಮ ಸ್ಥಳಗಳಿಗೆ ಹೋಗುವ ಪ್ರವೃತ್ತಿಯನ್ನು ಹೊಂದಿದ್ದಾರೆ. ಹಾಗೆಯೇ ಮೂಡಿಗೆರೆ, ಎನ್.ಆರ್. ಪುರ, ಶೃಂಗೇರಿ, ಕೊಪ್ಪ ತಾಲ್ಲೂಕುಗಳಿಂದ ಕೆಲವೊಂದು ಗೌಡಾಲು ಕೂಲಿ ಕಾರ್ಮಿಕರು ಬೇರೆ ಕಡೆಗಳಲ್ಲಿ ಉದಾಹರಣೆಗೆ ಹೊಸನಗರ, ತೀರ್ಥಹಳ್ಳಿ ತಾಲ್ಲೂಕುಗಳಿಗೆ ಹೋಗಿ ಕೆಲವೊಂದು ತಿಂಗಳುಗಳವರೆಗೆ ಅಲ್ಲಿ ಕೆಲಸ ಮಾಡಿ, ಜೂನ್, ಜುಲೈ ತಿಂಗಳಲ್ಲಿ ಮತ್ತೆ ತಮ್ಮ ಸ್ಥಳಗಳಿಗೆ ಬಂದು ನೆಲಸುತ್ತಾರೆ. ಕಾಫಿ, ಅಡಿಕೆ ತೋಟಗಳಲ್ಲಿ ಗಾರೆ ಕೆಲಸದಲ್ಲಿ, ಮರದ ಕೆಲಸದಲ್ಲಿ, ರೋಡಿನ ಕೆಲಸದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

**೨.೫. ಕೃಷಿಯೇತರ ಚಟುವಟಿಕೆಗಳು**

ಭಾರತದಲ್ಲಿರುವ ಬುಡಕಟ್ಟುಗಳನ್ನು ಅಧ್ಯಯನ ಮಾಡಲು ಹೊರಟರೆ ಹೆಚ್ಚಿನ ಪ್ರಮಾಣದಲ್ಲಿ ಕೃಷಿ ಮಾಡಲು ಭೂಮಿಯಿಲ್ಲದೆ ಇರುವ ಸಮುದಾಯಗಳು ತಿಳುವಳಿಕೆಗೆ ಬರುತ್ತವೆ. ಆದ್ದರಿಂದ ಇಂದು ಕರ್ನಾಟಕದಲ್ಲಿರುವ ಪಶ್ಚಿಮ ಘಟ್ಟದ ಆಶ್ರಯದಲ್ಲಿ ಗಿರಿ ಕಂದರಗಳಲ್ಲಿ ವಾಸ ಮಾಡುತ್ತಿರುವ ಗಿರಿಜನರಲ್ಲಿ ಗೌಡಾಲು ಬುಡಕಟ್ಟು ಸಮುದಾಯವು ಕೂಡ ಅದರದೇ ಆದ ಕೃಷಿಯೇತರ ಬದುಕನ್ನು ತನ್ನ ಜೀವನದ ಸಾರ್ಥಕತೆಗಾಗಿ ಅವಲಂಬಿಸಿರುವುದು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗುತ್ತದೆ.

ಗೌಡಾಲು ಸಮುದಾಯವು ತನ್ನ ಬದುಕಿನ ದಾರಿಯಾಗಿ ಕೃಷಿಯನ್ನು ಬೆನ್ನುಹತ್ತಿದ್ದರೂ ಕೃಷಿಯ ಕೆಲಸ ಕಾರ್ಯಗಳಿಗೆ ಅನುಗುಣವಾದ ಪ್ರಾಣಿ ಶಕ್ತಿಗಳ ಬಳಕೆ ಅಗತ್ಯವಾದುದರಿಂದ ಜಾನುವಾರುಗಳ ಪಾಲನೆ ಪೋಷಣೆಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿರುವುದು ಕಂಡುಬರುತ್ತದೆ. ಪರಿಣಾಮವಾಗಿ ಇವರ ಬಹುಪಾಲು ಕೃಷಿ ಕೆಲಸಗಳು ಜಾನುವಾರುಗಳನ್ನೇ ಅವಲಂಬಿಸಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಈ ಹಿನ್ನೆಲೆಯಿಂದ ಇವರು ಜಾನುವಾರುಗಳನ್ನು ದೈವ ಸಮಾನವೆಂದು ಪರಿಗಣಿಸಿದ್ದಾರೆ. ಇವರಲ್ಲಿ ಸಾಕು ಪ್ರಾಣಿಗಳಲ್ಲಿ ಗೋವಿಗೆ ವಿಶೇಷವಾದ ಸ್ಥಾನವಿದೆ. ಅವರು ಗೋವನ್ನು ಪೂಜೆ ಮಾಡುತ್ತಾರೆ.

ಗೌಡಾಲುಗಳಿಗೆ ಗೋವಿನ ಸಗಣಿ, ಗಂಜಲು ಮತ್ತು ಹಾಲುಗಳು ಅಮೂಲ್ಯವಾದವುಗಳಾಗಿವೆ. ಇವರಲ್ಲಿ ಅಗತ್ಯಕ್ಕೆ ತಕ್ಕಂತೆ ಜಾನುವಾರುಗಳನ್ನು ಸಾಕುತ್ತಾರೆ. ದನ ಎಮ್ಮೆ ಕೋಣ ಕರು ಎಲ್ಲವನ್ನು ಒಂದೇ ಕೊಟ್ಟಿಗೆಯಲ್ಲಿ ಕಟ್ಟಿ ಸಾಕುತ್ತಿರುವುದು ಕಂಡುಬರುತ್ತದೆ. ಜಾನುವಾರುಗಳಿಗೆ ಅಂದರೆ ದನ, ಎಮ್ಮೆ ಉಳುಮೆ ಮಾಡುವ ಕೋಣ, ಎತ್ತುಗಳಿಗೆ ಮುರುಗನ ಬೇಯಿಸಿ ಕೊಡುತ್ತಾರೆ. ಸಾಮಾನ್ಯವಾಗಿ ಕತ್ತರಿಸಿದ ಸೊಪ್ಪು ಹಾಲು, ಕಲಗಚ್ಚು, ಅನ್ನ, ಗಂಜಿ ಹಲಸಿನ ಹಣ್ಣಿನ ಕೊಚ್ಚಿದ 'ಸ್ವಾಡೆ' ಮಿಶ್ರಣವನ್ನು ಹಂಡೆಯಲ್ಲಿ ತುಂಬಿ ಬೆಯಿಸಿ ತೌಡು ಉಪ್ಪು ಸೇರಿಸಿ ಮರದ ಬೋಗುಣಿಗೆ ಹಾಕಿ ತಿನ್ನಿಸುತ್ತಾರೆ. ಇವರು ಎಮ್ಮೆ ಗೋವುಗಳಿಂದ ಹಾಲನ್ನು ಪಡೆದು ತಾವು

ಉಪಯೋಗಿಸಿ ಉಳಿದ ಹಾಲನ್ನು ಮಾರಾಟ ಮಾಡುತ್ತಾರೆ. ಇದರಿಂದ ಹಣವನ್ನು ಶೇಕರಿಸಿಕೊಂಡು ಬದುಕನ್ನು ಸಾಗಿಸುತ್ತಾರೆ. ಅಲ್ಲದೆ ಕೃಷಿಗೆ ಬೇಕಾಗಿರುವ ಎತ್ತುಗಳನ್ನು ಸಾಕುವುದರಿಂದ ಇಡೀ ಕೃಷಿಯ ಬದುಕಿಗೆ ಅನುಕೂಲವಾಗಿದೆ. ಕ್ಷೇತ್ರಕಾರ್ಯದಲ್ಲಿ ''ಶ್ರೀನಿವಾಸಗೌಡ ಹೇಳಿದ ಪ್ರಕಾರ ಜಾನುವಾರುಗಳು ನಮ್ಮ ಆಸ್ತಿ. ಕೃಷಿಯನ್ನು ಮಾಡಲು ಎತ್ತುಗಳು ಮತ್ತು ಕೋಣಗಳು ಬೇಕೇ ಬೇಕು. ಕೃಷಿ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದವು ಜಾನುವಾರುಗಳು ಎನ್ನುತ್ತಾರೆ.''[೭] ಆದ್ದರಿಂದ ಇವರಲ್ಲಿ ಆರ್ಥಿಕ ಮೂಲವಾಗಿ ಕೃಷಿ ಅಷ್ಟೇ ಅಲ್ಲದೆ ಪಶುಸಂಗೋಪನೆಯು ಇವರ ಬದುಕಿಗೆ ಆಶ್ರಯವಾಗಿದೆ.

ಗೌಡಾಲುಗಳು ಕೋಳಿಗಳನ್ನು ಸಾಕುವ ಪರಿಪಾಟವನ್ನು ಬೆಳೆಸಿಕೊಂಡಿದ್ದಾರೆ. ಜಾನುವಾರುಗಳ ಕೊಟ್ಟಿಗೆ ಪಕ್ಕದಲ್ಲಿಯೇ ಅದಕ್ಕೆ ಅಂಟಿಕೊಂಡಂತೆ ಒಂದು ಗೂಡು ಮಾಡಿ ಅಲ್ಲಿ ಕೋಳಿ ಕೂಡಲು ಒಡ್ಡಿಗಳನ್ನು ನಿರ್ಮಿಸಿರುತ್ತಾರೆ. ಹಾವು ಮುಂಗಸಿ ಮುಂತಾದ ಪ್ರಾಣಿಗಳು ನುಸುಳಿ ಹೋಗದಂತೆ ಗೋಡೆ ಹಾಕಿ ಅದರ ಮೇಲೆ ಹಲಗೆ ಹೊದಿಸಿರುತ್ತಾರೆ. ಈ ರೀತಿ ಬೆಳೆಸಿದ ಕೋಳಿಗಳನ್ನು ಬೀಗರು ಬಂದಾಗ ಕುಯ್ದು ಸಾಂಬಾರ ಮಾಡುತ್ತಾರೆ. ಮತ್ತೆ ಕೆಲವು ಕೋಳಿಗಳನ್ನು ಅಲ್ಪಸ್ವಲ್ಪ ಹಣಕ್ಕೆ ಮಾರಾಟ ಮಾಡುತ್ತಾರೆ. ಇದರಿಂದಲೂ ತಮ್ಮ ಬದುಕನ್ನು ಸಾಗಿಸುವ ಹಿನ್ನೆಲೆಯಿಂದ ಕೃಷಿಯೇತರ ಚಟುವಟಿಕೆಯಾಗಿ ಕೂಡಿಸಿಕೊಂಡು ಬಂದಿರುವುದು ಇಂದಿನ ದಿನಮಾನಗಳಲ್ಲಿ ಕಂಡುಬರುತ್ತದೆ. ವಿಶೇಷವಾಗಿ ಇವರಲ್ಲಿ ಗಮನಿಸಲೇಬೇಕಾದ ಸಂಗತಿಯೆಂದರೆ ನಾಯಿ ಸಾಕಾಣಿಕೆ. ಇವರು ನಾಯಿಗಳನ್ನು ತುಂಬ ಪ್ರೀತಿಯಿಂದ ಸಾಕುತ್ತಾರೆ. ಈ ನಾಯಿಗಳು ಕಾಡಿನಲ್ಲಿ ವಾಸ ಮಾಡುವ ಬುಡಕಟ್ಟುಗಳ ಬದುಕಿಗೆ ಬಹಳ ಅಗತ್ಯ. ಯಾವುದೇ ಕಾಡು ಮೃಗಗಳು ಗೌಡಾಲು ಬುಡಕಟ್ಟಿನ ಜನರು ಪರಂಪರಾಗತವಾಗಿ ರೂಢಿಸಿಕೊಂಡು ಬಂದಿರುವ ಬೇಟೆಗೆ ಹಾಗೂ ಇವರ ರಕ್ಷಣೆಗೆ ಮುಖ್ಯ ನಾಯಿಗಳು ಪಾತ್ರವನ್ನು ವಹಿಸುತ್ತವೆ. ಇದರಿಂದಾಗಿ ಗೌಡಾಲು ಸಮುದಾಯದಲ್ಲಿ ಕೃಷಿಯೇತರ ಚಟುವಟಿಕೆಗಳೇ ಹೆಚ್ಚಾಗಿ ನಡೆಯುತ್ತವೆ ಎಂಬುದು ಕ್ಷೇತ್ರಕಾರ್ಯದಿಂದ ಮನವರಿಕೆಯಾಗಿದೆ.

ಗೌಡಾಲುಗಳು ತಮ್ಮ ಜೀವನದ ದಾರಿಯ ಉದ್ದಕ್ಕೂ ಬೇಟೆಯನ್ನು ಜೊತೆ ಜೊತೆಯಲ್ಲಿ ಮಾಡುತ್ತಲೇ ಬಂದಿದ್ದಾರೆ. ಇವರು ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುತ್ತಾರೆ ಬೇಟೆಯನ್ನು ಬೇಸರವಾದಾಗ, ಸಾಹಸವೇ ಸಾಧನವಾಗಿ ಮಾಡಿಕೊಂಡಿರುವುದು ತಿಳಿಯುತ್ತದೆ. ಆದ್ದರಿಂದ ಬೇಟೆಯನ್ನು ತಮ್ಮ ನೆಚ್ಚಿನ ಹವ್ಯಾಸವಾಗಿಸಿಕೊಂಡು ಬಂದಿದ್ದಾರೆ. ಪರಿಣಾಮವಾಗಿ ಇವರು ಆಹಾರಕ್ಕಾಗಿ ಮತ್ತು ಬೆಳೆ ರಕ್ಷಣೆಗಾಗಿ, ಚರ್ಮ ಮತ್ತು ಕೊಂಬುಗಳ ಸಂಗ್ರಹ ಮಾಡುತ್ತಾರೆ. ಹಾಗಾಗಿ ಪ್ರತಿಷ್ಠೆ ಕೀರ್ತಿ ಹೆಚ್ಚಿಸಿಕೊಳ್ಳುವ ಸಲುವಾಗಿ ವಿನೋದಕ್ಕಾಗಿ ಬೇಟೆಯಾಡುವ ಪದ್ಧತಿಯನ್ನು ಈಗಲೂ ಕಾಣಲಾಗುವುದು. ಇವರು ಹೆಚ್ಚಾಗಿ ಸಾಂಪ್ರದಾಯಿಕ ಬೇಟೆ ವಿಧಾನಗಳನ್ನೇ ಹೆಚ್ಚಾಗಿ ಅನುಸರಿಸುತ್ತಾರೆ. ಇಲ್ಲಿ ಪ್ರತಿಯೊಂದು ಪ್ರಾಣಿಯನ್ನು ಕೊಲ್ಲಲೂ ಬೇರೆ ಬೇರೆ ತಂತ್ರಗಳನ್ನು ಕಂಡುಕೊಂಡಿರುವುದರ ಜೊತೆಯಲ್ಲಿ ಇದಕ್ಕೆ ಬೇಕಾದ ಸಾಧನ ಸಲಕರಣೆಗಳ ಕುಮ್ಮಕ್ಕನ್ನು ಬಳಸಿಕೊಳ್ಳುತ್ತಾರೆ. ಇವರು ಬೇಟೆಯನ್ನು ಪ್ರಧಾನವಾಗಿ ವಿಭಾಗವಾಗಿ ವಿಭಜಿಸಿಕೊಂಡಿದ್ದಾರೆ. ೧. ಪ್ರಾಣಿ ಬೇಟೆ, ೨. ಮೀನು ಬೇಟೆ, ೩. ಜೇನು ಬೇಟೆ. ಈ ತೆರನಾದ ವಿಭಾಗಗಳನ್ನು ಮಾಡಿಕೊಂಡು ಬೇಟೆಯಾಡುವ

ಪದ್ಧತಿಯು ಇವರಲ್ಲಿ ಈಗಲೂ ಇದೆ. ಇವರಲ್ಲಿ ಪ್ರಮುಖ ಬೇಟೆಗಾರರು ಒಂದೆಡೆ ಸೇರಿ ಬೇಟೆಗೆ ದಿನ ಮತ್ತು ಸ್ಥಳವನ್ನು ಗೊತ್ತು ಮಾಡಿ ಆ ಸುತ್ತಿನ ಬೇಟೆಗಾರರೆಲ್ಲರಿಗೂ ತಿಳಿಸುವರು. ಆದರೆ ಬೇಟೆಗೆ ಹೊರಡುವ ದಿನ ಆಯಾಯ ಮನೆಯ ಹೆಂಗಸರು ಮುಂಜಾವಿನಲ್ಲೇ ಎದ್ದು ಬೇಟೆಗೆ ಹೊರಡುವವರಿಗೆ ಅಡುಗೆ ಸಿದ್ಧಗೊಳಿಸಿ ಬುತ್ತಿ ಕಟ್ಟಿಕೊಡುತ್ತಾರೆ. ಬೇಟೆಗಾರರು ಹೊತ್ತಿಗೆ ಮುಂಚೆ ಎದ್ದು ಬೇಟೆಯ ಉಡುಪು ಧರಿಸಿ, ಕೋವಿ ತೋಟಗಳನ್ನು ಅಣಿಗೊಳಿಸಿಕೊಳ್ಳುತ್ತಾರೆ. ಕೇಪಿನ ಕೋವಿ ಒಯ್ಯುವವರು ಚರೆ ಮಸಿ, ನಾರು, ಕೆಂಪುಗಳಿಂದ ಈಡಿ ತುಂಬಿ ಕೋವಿಗೆ ಗಂಧದ ಹೊಗೆಯನ್ನು ಕೊಟ್ಟು ಸಿದ್ಧಮಾಡಿಟ್ಟುಕೊಂಡಿರುತ್ತಾರೆ. ಕೋವಿಯನ್ನು ಹೆಗಲಿಗೇರಿಸಿ ಕಂಬಳಿ ಹೊದ್ದು ಕೋವಿ ಚೀಲಗಳನ್ನು ಬಗಲಿಗೆ ಹಾಕಿ ಕೈಯಲ್ಲಿ ಕತ್ತಿ ಹಿಡಿದು ತಮ್ಮ ದೈವಕ್ಕೆ ವಂದಿಸಿ ದಾರಿ ದಾರಿ ಶಕುನ ಗಮನಿಸಿ ನಾಯಿಗಳೊಂದಿಗೆ ಗೊತ್ತುಪಡಿಸಿದ ಜಾಗಕ್ಕೆ ಬಂದು ಸೇರುತ್ತಾರೆ. ನಂತರ ನಿರ್ದಿಷ್ಟಪಡಿಸಿದವರು ಒಂದು ಕತ್ತಿ ಹಿಡಿದು ಕಾಡಿನ ಉದ್ದಗಲಕ್ಕೂ ಹದಿನೈದು ಇಪ್ಪತ್ತು ಅಡಿಗಳಿಗೊಬ್ಬರಂತೆ ನಿಂತು ನಾಯಿಗಳನ್ನು 'ಚೂ' ಬಿಡುತ್ತಾ ಕೇಕೆ ಹಾಕುತ್ತಾ ಕೋಲು ಕಲ್ಲುಗಳಿಂದ ಪೊದೆ ಬಡಿದು ಸದ್ದು ಮಾಡುತ್ತಾ ಸೋವಿಕೊಂಡು ಹೋಗುತ್ತಾರೆ. ಇಲ್ಲಿ ನಾಯಿಗಳು ವಾಸನೆ ಬಲದಿಂದ ಪ್ರಾಣಿ ಇರುವ ಜಾಗವನ್ನು ಅರಿಸಿಕೊಂಡು ಹೋಗಿ ಪತ್ತೆ ಹಚ್ಚಿ ಬೊಗಳಲಾರಂಭಿಸುತ್ತವೆ. ಇದರಿಂದಾಗಿ ಪ್ರಾಣಿಗಳು ಬೆದರಿ ಪ್ರಾಣಭಯದಿಂದ ದಿಕ್ಕಾಪಾಲಾಗಿ ಓಡಲಾರಂಭಿಸುತ್ತವೆ. ಆದರೆ ಪ್ರಾಣಿಗಳು ಬೇರೆ ಕಡೆ ಹೋಗದಂತೆ ನೇಮಿಸಿದವರು ಅವುಗಳನ್ನು ನಿರ್ದಿಷ್ಟ ಪಡಿಸಿದ ಸ್ಥಳಕ್ಕೆ ತಿರುಗಿಸಿಕೊಂಡು ಬರುತ್ತಾರೆ. ನಂತರ ಆಯಕಟ್ಟಿನ ಸ್ಥಳದಲ್ಲಿ ಪ್ರಾಣಿಯ ಬರವಿಗಾಗಿ ಕಾದುಕುಳಿತವರು ಬಂದೂಕು ಹಿಡಿದು ಬಂದ ಪ್ರಾಣಿಯನ್ನು ಕೊಲ್ಲುತ್ತಾರೆ. ಈ ರೀತಿಯಾಗಿ ಪ್ರಾಣಿಯ ಬೇಟೆಯಾದ ಮೇಲೆ ಅದನ್ನು ತಮ್ಮ ಹಾಡಿಗೆ ತಂದು ಇಡೀ ಕುಲದವರೆಲ್ಲರು ಸೇರಿ ಪಾಲು ಹಾಕಿಕೊಂಡು ಗೌಡಾಲು ಬುಡಕಟ್ಟಿನ ಸಂಪ್ರದಾಯದಂತೆ ಪಾಲುಗಳನ್ನು ಹಂಚಿ ತಮ್ಮ ದೈವಕ್ಕೆ ಪೂಜೆ ಮಾಡಿದ ಮೇಲೆ ಎಲ್ಲರೂ ತುಂಡು ಹಂಚಿಕೊಂಡು ತಿನ್ನುವ ಪರಿಪಾಟವಿದೆ. ಆದ್ದರಿಂದ ಇಲ್ಲಿ ಮನವರಿಕೆಯಾಗುವುದೇನೆಂದರೆ, ಆದಿಮಾನವನ ಬದುಕು ಈಗಲೂ ತನ್ನ ಅಸ್ತಿತ್ವದ ಚಹರೆಯನ್ನು ಬುಡಕಟ್ಟುಗಳ ಬದುಕಿನಲ್ಲಿ ಇಟ್ಟುಕೊಂಡಿದೆ ಎಂಬುದು ಮುಖ್ಯವಾದ ಸಂಗತಿಯಾಗುತ್ತದೆ. ಇಲ್ಲಿ ನಾವೆಲ್ಲರೂ ಒಂದೇ ಎಂಬ ಭಾವನೆಯ ಬದುಕು ಇರುವುದು ಕಂಡುಬರುತ್ತದೆ. ಆದ್ದರಿಂದ ಗೌಡಾಲು ಸಮುದಾಯವು ಕೃಷಿಯೇತರ ಚಟುವಟಿಕೆಗಳನ್ನು ಬದುಕಿನಲ್ಲಿ ರೂಪಿಸಿಕೊಂಡು ಜೀವಿಸುತ್ತಿರುವುದು ಆಧುನಿಕತೆಯ ಬದುಕಿಗೆ ಆಶ್ಚರ್ಯವಾಗಿದೆ.

''ಗೌಡಾಲು ಸಮುದಾಯದ ತಿಳುವಳಿಕೆದಾರರಾದ ಮೆಣಸಿನಾಡ್ಕದ ಲಕ್ಷ್ಮಿಯವರು ಹೇಳಿರುವ ಹಿನ್ನೆಲೆಯಲ್ಲಿ ಇವರ ಕೃಷಿಯೇತರ ಚಟುವಟಿಕೆಗಳು ಇಲ್ಲಿ ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿವೆ. ಅದರಂತೆ ಇವರು ತಮ್ಮ ಬದುಕಿಗೆ ಪೂರಕವಾಗಿ ಬೇರೆ ಬೇರೆ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಇವರ ಬೇಸಾಯ ಮಳೆಗಳಿಗನುಗುಣವಾಗಿರುವುದರಿಂದ ಒಂದೊಂದು ಮಳೆಯಲ್ಲಿ ಒಂದೊಂದು ಬಗೆಯ ಕೆಲಸವನ್ನು ಮಾಡುತ್ತಿರುವುದು ಈ ಸಮುದಾಯದಲ್ಲಿ ಗೋಚರಿಸುತ್ತದೆ. ಅಂದರೆ ಹಾಡ್ಯ ಸವರುವುದು, ವರ್ಷಕ್ಕೆ ಬೇಕಾಗುವಷ್ಟು ಕಟ್ಟಿಗೆ ಕೂಡಿಟ್ಟುಕೊಳ್ಳುವುದು, ಬಚ್ಚಲು ಒಲೆಗೆ ಅಡ್ಡೆಗಳು, ಅಡಿಕೆ ಒಲೆ, ನೇಗಿಲು ನೊಳ್ಳಿ

ಕೊರಡು ಮುಂತಾದ ವ್ಯವಸಾಯ ಉಪಕರಣಗಳನ್ನು ಈ ಕೆಲಸದಲ್ಲಿ ಪರಿಣಿತರಾದವರು ತಯಾರಿಸಿಕೊಳ್ಳುತ್ತಾರೆ. ಉಳಿದವರೇ ಸೊಪ್ಪು ಸೆದೆಗಳನ್ನು ಗುಂಡಿಗೆ ಹಾಕಿ ಗೊಬ್ಬರ ತಯಾರಿಸುತ್ತಾರೆ. ಕೆಲವರು ಕಾಡಿನಿಂದ ಬೆತ್ತ ವಾಟೆ, ಬಿದಿರು ಗುರಗಿ ತರುತ್ತಾರೆ. ಮಹಿಳೆಯರು ಸೀಗೆಕಾಯಿ, ಅಂಟುವಾಳಕಾಯಿ, ಚಾಪೆ ಹುಲ್ಲು, ಪೊರಕೆ ಹುಲ್ಲು, ಕಿತ್ತಲೆ ಹಣ್ಣು, ಕಾಡು ಕಿತ್ತಲೆ ಸಂಗ್ರಹಿಸಿಕೊಂಡು ಬದುಕಿನ ಬವಣೆಯನ್ನು ನೀಗಿಸಿಕೊಳ್ಳುತ್ತಾ ಇದ್ದಾರೆ. ಅಡಿಕೆ ಕೊನೆಗಳಿಗೆ ಕೊಟ್ಟೆ ಕಟ್ಟುವುದಕ್ಕಾಗಿ ಅಡಿಕೆಯ ಸೋಗೆಯ ಎಳೆಗಳನ್ನು ಕತ್ತರಿಸಿ ಕೋಟೆಗಳನ್ನು ರಚಿಸುತ್ತಾರೆ. ಪುಂಡಿನಾರಿನ ಹಗ್ಗದ ಹುರಿ ಹೊಸೆಯುತ್ತಾರೆ. ವಾಟೆಯನ್ನು ಸೀಳಿ ಸಲಕು ಮಾಡಿ ಬೇಯಿಸಿದ ಅಡಿಕೆ ಹರಡುವ ತಟ್ಟೆಗಳನ್ನು, ಮುಚ್ಚುವ ಬುಟ್ಟಿಗಳನ್ನು, ಗೋಡೆ ಇರಗೋಣಿ, ಕೋಣೆಗಳ ಇತರೆ ಕಸಬುಗಳಲ್ಲಿ ಗೌಡಾಲು ನಿರತರಾಗಿದ್ದಾರೆ. ದನ ಎತ್ತುಗಳನ್ನು ಕೊಟ್ಟಿಗೆಯಲ್ಲಿ ಕಟ್ಟುವುದಕ್ಕೆ ಉಪಯೋಗಿಸುವ ಹೊರೆ, ಹಗ್ಗ, ನೇಗಿಲು, ಮಿಣಿ, ತರಗೆಲೆ ತುಂಬಲು ಉಪಯೋಗಿಸಲು ಜಲ್ಲೆ, ಹೆಡಿಗೆ, ತಟ್ಟೆ, ಕಣ್ಣಗಳನ್ನು ಸಿದ್ಧಮಾಡಿಕೊಳ್ಳುವ ಕರಕುಶಲ ಕೆಲಸವನ್ನು ಇವರು ತುಂಬ ಅಚ್ಚುಕಟ್ಟಾಗಿ ಮಾಡಿಕೊಂಡು ಬದುಕು ರೂಪಿಸಿಕೊಂಡ ಸಮುದಾಯವಾಗಿದೆ. ಗೌಡಾಲುಗಳಲ್ಲಿ ವಿಶೇಷತೆಯೆಂದರೆ ಆಧುನಿಕ ಬದುಕಿನ ರೂಪರೇಷೆಗಳ ಜೊತೆಗೆ ದೇಶೀಯ ಬದುಕಿನ ಶೈಲಿಯಲ್ಲಿ ಆರೋಗ್ಯದ ಜೀವನ ಮಾಡುತ್ತಿರುವುದು ಕಂಡುಬರುತ್ತದೆ. ಅಂದರೆ ಮಲಗಲು, ಕೂರಲು ಉಪಯೋಗಿಸುವ ಚಾಪೆಗಳನ್ನು ನೇಯುವುದು, ಕಸಗುಡಿಸಲು ಬಳಸುವ ಗಿಡಿ, ಮತ್ತು ಪಾತ್ರೆಗಳ ತಳಕ್ಕೆ ಇಡಲು ಸಿಂಬೆಗಳನ್ನು ಮಹಿಳೆಯರು ಮಾಡಿಕೊಳ್ಳುತ್ತಾರೆ.''[೬]

ಈ ಸಮುದಾಯದಲ್ಲಿ ಮಹಿಳೆಯರು ಅಡಿಕೆ ಕುಯಿಲು ಮುಗಿದ ಮೇಲೆ ತೋಟದಲ್ಲಿ ಉದುರಿ ಬಿದ್ದ ಅಡಿಕೆಕಾಯಿಗಳನ್ನು ಆಯ್ದು ಸುಲಿದು ಬೇಯಿಸಿ ಒಣಗಿಸಿ Lamp Societyಗೆ ಮಾರಾಟ ಮಾಡಿ ತಮ್ಮ ತಮ್ಮ ಸ್ವಂತ ಚಿಲ್ಲರೆ ಖರ್ಚನ್ನು ನೀಗಿಸಿಕೊಳ್ಳುತ್ತಾರೆ. ಮಳೆಗಾಲದ ದಿನಗಳಲ್ಲಿ ತಮ್ಮ ತಮ್ಮ ಮನೆಯ ಹತ್ತಿರ ಭಾಗದಲ್ಲಿ ಚಿಕ್ಕ ಚಿಕ್ಕ ಮಡಿಗಳನ್ನು ಮಾಡಿ ಕೊತ್ತಂಬರಿ, ಕೋಸು, ಸೊಪ್ಪು, ಬಸಳೆ, ತೊಂಡೆ, ತಿಂಗಳವರೆ, ಕುಂಬಳ ಬಳ್ಳಿ ಮುಂತಾದ ತರಕಾರಿ ಬೆಳೆಗಳನ್ನು ಬದುಕನ್ನು ಸಾಗಿಸುತ್ತಿರುವುದು ಕಂಡುಬರುತ್ತದೆ. ಇಲ್ಲಿ ಬುಡಕಟ್ಟುಗಳನ್ನು ಕುರಿತು ಅಧ್ಯಯನ ಮಾಡುವವರಿಗೆ ಮನವರಿಕೆಗೆ ಬರುವುದೇನೆಂದರೆ, ಆದಿಮಾನವನ ದಿನನಿತ್ಯದ ಬದುಕಿನಲ್ಲಿ ಯಾವ ರೀತಿಯಾಗಿ ಮಹಿಳೆಯು ಮುಖ್ಯ ಪಾತ್ರ ವಹಿಸಿದ್ದಾಳೋ ಅದೇ ರೀತಿಯಲ್ಲಿ ಗೌಡಾಲು ಸಮುದಾಯದ ಮಹಿಳೆಯರು ವಹಿಸಿರುವುದು ಕ್ಷೇತ್ರಕಾರ್ಯದಿಂದ ತಿಳಿಯುತ್ತದೆ. ಕರ್ನಾಟಕದ ಯಾವುದೇ ಬುಡಕಟ್ಟುಗಳ ಕುಟುಂಬಗಳಲ್ಲಿ ಹೆಣ್ಣಿಗೆ ಪ್ರಧಾನವಾದ ಸ್ಥಾನವನ್ನು ನೀಡಿರುವುದು ಪ್ರಸ್ತುತ ಕಾಲದಲ್ಲಿ ಕಂಡುಬರುತ್ತಿರುವುದು ಇಲ್ಲಿ ನೆನಪಿಗೆ ಬರಬೇಕಾಗಿದೆ. ಗೌಡಾಲು ಮಹಿಳೆಯರು ಪ್ರಾಚೀನ ಕಾಲದ ಹೆಣ್ಣಿನ ಸ್ಥಾನದ ಜವಾಬ್ದಾರಿಗಳನ್ನು ಉಳಿಸಿಕೊಂಡು ಬಂದಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿ ಮಹಿಳೆಯರ ಬದುಕಿನ ರೀತಿ ಗೋಚರಿಸುತ್ತದೆ. ಮಾನವನ ಸಾರ್ಥಕ ಬದುಕಾದ ಕೃಷಿಯನ್ನು ನಾವೇ ಪ್ರಾರಂಭಿಸಿದವರು ಎಂಬಂತೆ ಭಾಸವಾಗುತ್ತಿರುವುದಲ್ಲದೆ ಅದು ಚರಿತ್ರೆಯಿಂದ ತಿಳಿದ ನಿಜ ಸಂಗತಿಯಾಗಿದೆ. ಆದ್ದರಿಂದ ಗೌಡಾಲುಗಳು ಪುರುಷ ಮತ್ತು ಮಹಿಳೆಯರು ಎಂಬ ಭಿನ್ನಭೇದವಿಲ್ಲದೆ ಅವರದೇ ಆದ ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಗೌಡಾಲು ಬುಡಕಟ್ಟು ಸಮುದಾಯವು ಬಯಲು ಪ್ರದೇಶದ ಬುಡಕಟ್ಟುಗಳಿಗಿಂತ ಭಿನ್ನತೆಯಿಂದ ಜೀವನ ಸಾಗಿಸುತ್ತಿದೆ. ದಿನವಿಡಿ ಸಮಸ್ಯೆಗಳಲ್ಲಿಯೇ ಜೀವನ ಕಳೆಯುತ್ತಿದೆ. ಆದ್ದರಿಂದ ರಚನಾತ್ಮಕವಾದ ಕ್ಷೇತ್ರಕಾರ್ಯಗಳ ಮೂಲಕ ಬುಡಕಟ್ಟುಗಳ ಹೃದಯವನ್ನು ಮುಟ್ಟಿಸಬೇಕಾದ ಅನಿವಾರ್ಯತೆಯಿದೆ. ಏಕೆಂದರೆ ಅವರದೇ ಆದ ಬದುಕು ಅವರಿಗೆ ಸಮರ್ಪಕವಾಗಿ ಅನ್ನವನ್ನು ಕೊಡದೆ ಇರುವುದರಿಂದ ಹಾಗೂ ಸರ್ಕಾರದಿಂದ ಇವರ ಉಪಕಸಬುಗಳಿಗೆ ಸರಿಯಾಗಿ ಸೌಲಭ್ಯಗಳು ಸಿಗದೆ ಇರುವುದರಿಂದ ಸಿಕ್ಕರೂ ಬೆರಳೆಣಿಕೆಯಷ್ಟು ಸಿಕ್ಕಿರುವುದರಿಂದ ಅಭಿವೃದ್ಧಿಪರ ಬದುಕು ಇವರದಾಗಿಲ್ಲ ಎಂಬ ಮಾತು ಸತ್ಯವಾಗಿದೆ.

ಗೌಡಾಲು ವಾಸಿಸುವ ಪ್ರದೇಶಕ್ಕೆ ಅನುಗುಣವಾಗಿ ಬೆಳೆಯುವ ಈಚಲು ಮರ ಮತ್ತು ಬಗಿನಿ ಮರದಿಂದ ತಮಗೆ ಬೇಕಾಗುವ ಪಾನೀಯಗಳನ್ನು ಪಡೆಯುತ್ತಾರೆ. ಈಚಲು ಮರದ ಕೊಂಬೆ, ಬಗಿನಿ ಮರದ ಕೊಂಬೆಗಳನ್ನು ಸವರಿ ಅವುಗಳಿಗೆ ಒಂದೊಂದು ಗಡಿಗೆಯನ್ನು ಕಟ್ಟುತ್ತಾರೆ. ಈ ಗಡಿಗೆಗೆ ಒಂದೊಂದೇ ಹನಿ ರಸವತ್ತಾದ ಹಾಗೂ ಮಾನವನ ದೇಹಕ್ಕೆ ತಂಪನ್ನು ನೀಡುವ ರಸವು ಶೇಖರಣೆಯಾಗುತ್ತದೆ. ಈ ರೀತಿಯಾಗಿ ಶೇಖರಣೆಯಾಗಿರುವುದನ್ನು ಬೆಳಗಿನ ೬ ಗಂಟೆಯ ಒಳಗೆ ಕುಡಿದರೆ ಆರೋಗ್ಯಕ್ಕೆ ಉಪಯುಕ್ತವಾಗಿರುತ್ತದೆ. ಆದರೆ ೬ ಗಂಟೆಯ ನಂತರ ಕುಡಿದರೆ ಸ್ವಲ್ಪ ಹುಳಿ ಬರುತ್ತದೆ. ಈ ರೀತಿಯ ಉಪಕಸಬು ಗೌಡಾಲುಗಳಲ್ಲಿ ಇರುವುದು ಒಂದು ವಿಶೇಷವೇ ಸರಿ. ಇದಕ್ಕೆ ಗೌಡಾಲು ಸಮುದಾಯದವರು ಕಳ್ಳು ಕಟ್ಟುವುದು ಎನ್ನುತ್ತಾರೆ. ಆದರೆ ಈ ಪಾನೀಯಗಳನ್ನು ಮಾರಾಟ ಮಾಡದೇ ಪ್ರತಿಯೊಂದು ಮನೆಯಲ್ಲಿ ಶೇಖರಿಸಿ ಅವರವರೇ ಕುಡಿಯುವ ಪದ್ಧತಿಯಿದೆ. ಈ ಸಮುದಾಯ ತನ್ನದೇಯಾದ ವೈಶಿಷ್ಟತೆಯನ್ನು ಇಟ್ಟುಕೊಂಡು ಬಂದಿರುವ ಬುಡಕಟ್ಟಾಗಿದೆ.

''ಗೌಡಾಲು ಸಮುದಾಯವು ತನ್ನದೇ ಆದ ಸ್ಥಾನವನ್ನು ಇಟ್ಟುಕೊಂಡಿದೆ ಎಂಬುದಕ್ಕೆ ಹೆಂಡ ಸಾಕ್ಷಿಯಾಗಿ ನಿಲ್ಲುತ್ತದೆ. ಯಾವ ರೀತಿಯಾಗಿ ಕಳ್ಳು ಕುಡಿಯುವುದರಿಂದ ಕೆಲಸದ ಆಯಾಸ ನಿವಾರಣೆಯಾಗುತ್ತದೋ ಅದೇ ರೀತಿ ಅಕ್ಕಿ ಹೆಂಡ ಇವರಲ್ಲಿ ಅದರದೇ ಆದ ಮಹತ್ವವನ್ನು ಹೊಂದಿದೆ. ಈ ಬಗ್ಗೆ ತಿಳುವಳಿಕೆದಾರರನ್ನು ಕೇಳಿದಾಗ ಅವರೇ ಹೇಳುವಂತೆ ಭತ್ತವನ್ನು ಕುಡಿಮೊಳಕೆ ಬರುವವರೆಗೆ ನೀರಿನಲ್ಲಿ ನೆನಸಿಟ್ಟು ಮೊಳಕೆ ಕಾಣಿಸಿಕೊಂಡ ಮೇಲೆ ಸಗಣಿಯಿಂದ ಬಳಿದ ನೆಲದ ಮೇಲೆ ಮೊಳಕೆ ಒಡೆದ ಭತ್ತವನ್ನು ಹರಡಿ ಅದರ ಮೇಲೆ ಲಕ್ಕೀ ಸೊಪ್ಪನ್ನು ಮುಚ್ಚಿ ಮರದ ಕುಂಟೆಗಳನ್ನು ಹೇರುತ್ತಾರೆ. ಆ ನಂತರ ಸಂಪೂರ್ಣ ಮೊಳಕೆ ಬಂದ ಮೇಲೆ ಬಿಸಿಲಿನಲ್ಲಿ ಒಣ ಹಾಕಿ ಚೆನ್ನಾಗಿ ಒಣಗಿಸಿ ಒಳಕಲ್ಲಿನಲ್ಲಿ ಹಾಕಿ ಕುಟ್ಟಿ ಪುಡಿ ಮಾಡಿ ಮಣ್ಣಿನ ಹರವಿಯೊಳಗೆ ತುಂಬಿಸಿ ಅದರ ಬಾಯಿಯನ್ನು ಸಗಣಿಯಿಂದ ಮೆತ್ತಿ ಮುಚ್ಚುತ್ತಾರೆ. ಇಷ್ಟೆಲ್ಲಾ ಆದ ಮೇಲೆ ಅಕ್ಕಿ ಹೆಂಡ ಕುಡಿಯಬೇಕೆನ್ನಿಸಿದಾಗ ಅಗತ್ಯಕ್ಕೆ ಬೇಕಾದಷ್ಟು ಅಕ್ಕಿಯನ್ನು ಮೂರು ದಿನಗಳವರೆಗೆ ನಿರಿನಲ್ಲಿ ನೆನಹಾಕಿ ನಾಲ್ಕನೆಯ ದಿನ ಆ ಅಕ್ಕಿಯನ್ನು ಬೇಯಿಸುತ್ತಾರೆ ನಂತರ ಕಾಡಿನಿಂದ ತಂದ ಬುದುಗನ ತೊಗಟೆ ಮತ್ತು ಸಣ್ಣೆಲೆಸದ್ಗದಳ್ಳಿಯನ್ನು ನುಣ್ಣಗೆ ಜಜ್ಜಿದ ಹುಡಿಯನ್ನು ಆ ಅಕ್ಕಿಗೆ ಸೇರಿಸಿ ಮತ್ತೆ ಬೇಯಿಸಿ ಬಿಸಿಲಿಗೆ ಒಣ ಹಾಕುತ್ತಾರೆ. ಐದನೆಯ ದಿನ ಮೊಳಕೆ ಭತ್ತದ ಹಿಟ್ಟನ್ನು ಇದಕ್ಕೆ ಸೇರಿಸಿ, ಒಂದು ಹರವಿಯಲ್ಲಿ ತುಂಬಿ ಹರವಿಯ ಬಾಯಿಯನ್ನು ಮೆತ್ತುತ್ತಾರೆ ಐದು ದಿನ ಕಳೆದ ಮೇಲೆ ಹರವಿಯೊಳಗೆ ಬೂದ ಬೂದ ಶಬ್ದ ಕೇಳಿಸುತ್ತದೆ. ಆ ನಂತರ ಇದರೊಳಗಿದ್ದ ಹಿಟ್ಟನ್ನು ಹೊರತೆಗೆದು

ಸೋಸಿಕೊಂಡು ಅಗಲ ಬಾಯಿಯ ಪಾತ್ರೆಗೆ ತೆಳ್ಳನೆಯ ವಸ್ತ್ರ ಸುತ್ತಿ ಅದರ ಮೇಲೆ ಹಿಟ್ಟನ್ನು ಹಾಕಿ ಹಿಟ್ಟಿನ ಮೇಲೆ ಕಾದಾರಿದ ನೀರು ಸುರಿದಾಗ ಬೋಗಣಿಯ ತಳದಲ್ಲಿ ಶೇಖರಗೊಳ್ಳುವ ದ್ರವವೇ ಅಕ್ಕಿ ಹೆಂಡ. ಈ ರೀತಿ ತಯಾರಿಸಿದ ಹೆಂಡವನ್ನು ಕುಡಿಯಲು ಬಯಸುವವರು ಇನ್ನೊಂದು ಅಗಲ ಬಾಯಿ ಪಾತ್ರೆಗೆ ಸೋಸಿಕೊಂಡು ನೆನೆ ಹಾಕಿದ ಹಿಟ್ಟನ್ನು ಅದರ ಮೇಲೆ ಸುರಿದಿಡುತ್ತಾರೆ. ಈ ಪರಿಣಾಮವಾಗಿ ಬೆಳಗಾಗುವ ಹೊತ್ತಿಗೆ ಬೋಗಣಿಯ ತಳದಲ್ಲಿ ಹನಿ ಹೆಂಡ ಶೇಕರಗೊಂಡಿರುತ್ತದೆ. ಈ ರೀತಿ ಇವರು ಕೃಷಿಯೇತರ ಚಟುವಟಿಕೆಗಳಿಂದಲೇ ಸಂಪ್ರದಾಯ ಶೀಲರಾಗಿದ್ದಾರೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿಯುತ್ತದೆ. ಬುಡಕಟ್ಟುಗಳ ಅಧ್ಯಯನದ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಾಡಲೇಬೇಕಾದ ಹಾಗೂ ಬುಡಕಟ್ಟಿನ ಎಲ್ಲ ಲಕ್ಷಣಗಳನ್ನು ಹೊಂದಿರುವ ಬುಡಕಟ್ಟಾಗಿದೆ."[೯]

ಗೌಡಾಲು ಬುಡಕಟ್ಟು ತನ್ನ ಬದುಕಿನಲ್ಲಿ ಅಲ್ಪ ಸ್ವಲ್ಪ ವೈದ್ಯ ಪದ್ಧತಿಯನ್ನು ರೂಢಿಸಿಕೊಂಡು ಬಂದಿದೆ. ಸ್ವಂತ ಅನುಭವದ ಆಧಾರದ ಮೇಲೆ ಸಾಂಪ್ರದಾಯಿಕ ವಿಧಾನದಲ್ಲಿ ತಮಗೆ ಬಂದಿರುವ ರೋಗಗಳಿಂದ ಮುಕ್ತಿ ಹೊಂದಲು ತಾತ್ಕಾಲಿಕ ಚಿಕಿತ್ಸೆಯನ್ನು ಕಂಡುಕೊಂಡಿರುವ ಬುಡಕಟ್ಟಾಗಿದೆ. ಇದರಿಂದ ಮಾನವ ತನ್ನ ಬದುಕಿಗೆ ಅವಶ್ಯಕವಾದದ್ದನ್ನೆಲ್ಲಾ ತನ್ನ ನಿಸರ್ಗದಿಂದ ದೊರಕಿಸಿಕೊಂಡಿದಕ್ಕೆ ಸಾಕ್ಷಿಯಾಗಿ ಇವರು ಪಶ್ಚಿಮ ಘಟ್ಟದಲ್ಲಿ ಸಿಗುವ ಔಷದೀಯ ೧೦೦೦ ಸಸ್ಯಗಳ ಹೆಸರನ್ನು ನಿಂತಲ್ಲಿಯೇ ಹೇಳುವವರಾಗಿದ್ದಾರೆ. ಇವರು ಕಾಡುವಾಸಿಗಳಾಗಿ ಜೀವನ ಮಾಡುವವರಾದ್ದರಿಂದ ಆಧುನಿಕತೆಯ ಸಂಪರ್ಕ ಕಡಿಮೆಯಿರುವುದರಿಂದ ನಾಡಿಗೆ ಬರುವುದಕ್ಕೆ ಸಾಧ್ಯವಾಗದೆ ಕಾಡಿನಲ್ಲಿಯೇ ಸಿಗುವ ಆಯುರ್ವೇದ ಸಸ್ಯಗಳನ್ನು ಸಂಗ್ರಹಿಸಿಕೊಂಡು ತಮ್ಮದೇ ಆದ ವೈದ್ಯ ಪದ್ಧತಿಯನ್ನು ಪಾರಂಪರಿಕವಾಗಿ ಬೆಳೆಸಿಕೊಂಡು ಬಂದಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಪಶ್ಚಿಮ ಘಟ್ಟದಲ್ಲಿ ಪಾಶ್ಚಿಮಾತ್ಯರು ಬಂದು ಹೋದ ಮೇಲೆ ಇಲ್ಲಿರುವ ಗಿಡಮೂಲಿಕೆಗಳ ಸಸ್ಯ ರಾಶಿ ಕಾಲಿಯಾಗಿದ್ದರೂ ಉಳಿದ ಗಿಡಮೂಲಿಕೆಗಳ ಸಂಗ್ರದಿಂದ ಇವರು ತಮ್ಮ ಆರೋಗ್ಯವನ್ನು ಸುಧಾರಿಸಲು ಉಪಯೋಗಿಸುತ್ತಿರುವುದು ಮುಖ್ಯವಾಗಿದೆ. ಇಲ್ಲಿ ಗೌಡಾಲುಗಳು ಸಿಡುಬು, ದಡಾರ, ಪಿತ್ತರೋಗ, ಚರ್ಮರೋಗ, ಹೊಟ್ಟೆನೋವು, ಹಲ್ಲು ಬಿದ್ದು ಹೋದಾಗ, ಋತುಸ್ರಾವ, ಹೆಂಗೆ ಕಷ್ಟವಾದ ಕಾಲಕ್ಕೆ ಸರಿಯಾಗಿ ಮುಟ್ಟಾಗದಿದ್ದರೆ, ಹಾವು ಕಡಿದರೆ ಇಸಬು, ಉಗುರು ಸುತ್ತು, ಗಂಟಲು ನೋವು ಮುಂತಾದ ಕಾಯಿಲೆಗಳಿಗೆ ಕಾಡಿನಲ್ಲಿ ಸಿಗುವ ಆಯುರ್ವೇದಿ ಸಸ್ಯಗಳಾವುವು ಎಂಬುದನ್ನು ತಿಳಿದುಕೊಂಡವರಾಗಿ ಪ್ರತಿಯೊಂದು ರೋಗಕ್ಕೆ ಮದ್ದುಗಳನ್ನು ನೀಡುತ್ತಾರೆ. ಒಂದೊಂದು ರೋಗಕ್ಕೂ ಒಂದೊಂದು ಗಿಡದ ನಾರು ಬೇರುಗಳನ್ನು ಗುರುತಿಸಿ ಉಪಯೋಗಿಸಿಕೊಳ್ಳುವ ಜ್ಞಾನವನ್ನು ಹೊಂದಿರುವ ಇವರು ಇದೇ ಪ್ರಮಾಣದಲ್ಲಿ ಪ್ರಾಣಿಗಳಿಗೆ ಬೇಕಾಗುವ ಔಷಧಿ ವಸ್ತುಗಳನ್ನು ಬಳಸಿಕೊಳ್ಳುತ್ತಾರೆ. ಹಬ್ಬ ಹರಿದಿನಗಳಲ್ಲಿ ಸಾಮಾನ್ಯವಾಗಿ ಸ್ನಾನ ಮಾಡಿ ಔಷಧಿಗೆ ಸಂಬಂಧಿಸಿದ ಸಸ್ಯಗಳನ್ನು ತಂದರೆ ಅವುಗಳಿಗೆ ವಿಶೇಷವಾದ ಶಕ್ತಿಯಿದೆ ಎಂಬ ನಂಬಿಕೆಯಿದೆ. ಯಾವುದೇ ರೋಗ ಬಂದರೂ ಮೊದಲು ಚಿಕಿತ್ಸೆ ಹಾಡಿಯ ಹಿರಿಯರು ಮಾಡುತ್ತಾರೆ. ಆದ್ದರಿಂದ ಗೌಡಾಲು ಸಮುದಾಯವು ಕೃಷಿಯೇತರ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುವುದರಿಂದ ಕಾಡನ್ನು ಬಿಟ್ಟು ಬದುಕಲು ಸಾಧ್ಯವಾಗದೇ ಇರುವಂತಹ ಮನಸ್ಸಿನವರಾಗಿದ್ದಾರೆ. ಆದ್ದರಿಂದ ಈ ಬುಡಕಟ್ಟು ವಿಶಿಷ್ಟವಾದ ಸಮುದಾಯವಾಗಿದೆ.

### ೨.೬. ಅರಣ್ಯ ಉತ್ಪನ್ನಗಳು ಮತ್ತು ಸಂಗ್ರಹ

ಮಾನವನ ಬದುಕಿನಲ್ಲಿ ಯಾವ ರೀತಿಯಾಗಿ ಕುಟುಂಬವೇ ಮೊದಲ ಪಾಠಶಾಲೆಯಾಗಿದೆಯೋ ಅದೇ ರೀತಿಯಲ್ಲಿ ಆದಿಮಾನವನ ಜೀವನದಿಂದ ಯಾಂತ್ರಿಕ ಮಾನವನ ಜೀವನಕ್ಕೆ ಸಹಕಾರವನ್ನು ನೀಡುತ್ತಾ ಅವನಿಗೆ ಬೇಕಾದ ಬದುಕಿನ ಪರಿಕರಗಳನ್ನು ದೊರಕಿಸುತ್ತಾ ಬಂದಿರುವ ನಿಸರ್ಗವು ಮಾನವನ ಮೂಲ ನೆಲೆಯಾಗಿದೆ. ತನ್ನ ಒಡಲಿನಲ್ಲಿ ಎಲ್ಲವನ್ನು ಕರಗತಮಾಡಿಕೊಂಡು ಹೊರಗಷ್ಟೆ ಸುಂದರವಾಗಿ ಕಂಡರೂ ಅದರದೇ ಆದ ದುಃಖಗಳು ಈಗಲೂ ತಾಂಡವವಾಡುತ್ತಿವೆ ಎಂಬುದಂತೂ ನಿಜ ಸಂಗತಿ. ಇಷ್ಟಾದರೂ ಇತರೆ ಪ್ರಾಣಿಗಳಿಗೆ ಆಶ್ರಯವನ್ನು ನೀಡಿದಂತೆ ಮಾನವ ಪ್ರಾಣಿಗೆ ಆಶ್ರಯವನ್ನು ೨೧ನೇ ಶತಮಾನದ ಕಾಲದವರೆಗೆ ನೀಡಿರುವುದು ಅರಣ್ಯದ ಹೆಮ್ಮೆಯನ್ನು ಸಾರುವ ಬಗೆಯೇ ವಿನಾ ಬೇರೇನು ಅಲ್ಲ! ಆದ್ದರಿಂದ ಮಾನವನ ವಿಕಾಸಾತ್ಮಕ ಬದುಕಿಗೆ ಅರಣ್ಯವು ಬೆನ್ನೆಲುಬಾಗಿದೆ.

ಅರಣ್ಯ ಮಾನವನ ಬದುಕಿನ ಸಂಗಾತಿಯಾಗಿರುವುದು ತಿಳಿಯುತ್ತದೆ. ಯಾವ ರೀತಿಯಲ್ಲಿ ಎಂದು ಪ್ರಶ್ನೆಮಾಡಿಕೊಳ್ಳುತ್ತಾ ಹೊರಟರೆ ಪ್ರಾಚೀನ ಕಾಲದಲ್ಲಿ ಮಾನವನು ಅಲೆಮಾರಿಯಾಗಿ ಬದುಕಿನ ದಾರಿಯನ್ನು ಹುಡುಕುತ್ತ ಕಾಡು ನಾಡುಗಳ ವ್ಯತ್ಯಾಸ ಗೊತ್ತಿಲ್ಲದೆ ಹಾಗೂ ಬೆಂಕಿಯ ಉಪಯೋಗವಿಲ್ಲದೆ ಕಾಡಿನ ತೋಪುಗಳಲ್ಲಿ ಅರಣ್ಯದ ಗೆಡ್ಡೆಗೆಣಸುಗಳನ್ನು ಹುಡುಕಿಕೊಂಡು ತನ್ನ ಹಸುವನ್ನು ನೀಗಿಸಿಕೊಂಡು ಅವನದೇ ಆದ ಬದುಕಿನ ಶೈಲಿಯನ್ನು ರೂಪಿಸಿಕೊಂಡಿರುವುದಕ್ಕೆ ಅರಣ್ಯವೇ ಮುಖ್ಯವಾಗಿ ಗೋಚರಿಸುತ್ತದೆ. ಈ ಹಿನ್ನೆಲೆಯನ್ನು ನೆನಪಿಸಿಕೊಂಡರೆ ಅರಣ್ಯದ ಬಗ್ಗೆ ಯಾವುದೇ ರೀತಿಯ ಉಲ್ಲೇಖ ಮಾಡದೆ ಅರಣ್ಯದ ಉತ್ಪನ್ನಗಳ ಬಗ್ಗೆ ಚರ್ಚಿಸುವುದು ಸಮಂಜಸವಾಗಲಾರದು. ಹಾಗಾಗಿ ಕರ್ನಾಟಕವು ಹೆಸರಿಗೆ ತಕ್ಕಂತೆಯೇ ಮೌಲ್ಯಯುತವಾದ ಹಾಗೂ ಮಾನವನ ಮನಸ್ಸಿಗೆ ನೆಮ್ಮದಿಯುತ ದುಡಿಮೆಯನ್ನು ನೀಡುವ ತಾಣವಾಗಿದೆ ಅರಣ್ಯ.

ಕರ್ನಾಟಕದಲ್ಲಿ ದಾಂಡೇಲಿಯಿಂದ ನಾಗರಹೊಳೆಯವರೆಗೆ ಪಶ್ಚಿಮ ಘಟ್ಟಗಳಲ್ಲಿರುವ ಅರಣ್ಯದ ಸಾಲುಗಳು ಆಕಾಶವನ್ನು ಮುಟ್ಟಿರುವಂತೆ ಗೋಚರಿಸುತ್ತಿವೆ ಎಂದರೆ ಇದರ ಮಹತ್ವವು ಮಾನವ ಸಮಾಜದ ಮೇಲೆ ಎಷ್ಟು ಪ್ರಭಾವ ಬೀರಿದೆಯೆಂಬುದು ಮುಖ್ಯವಾಗುತ್ತದೆ. ಆಕಾಶದಷ್ಟೇ ವಿಶಾಲತೆಯನ್ನು ಹೊಂದಿರುವ ಅರಣ್ಯದೊಳಗೆ ಬುಡಕಟ್ಟು ಸಮುದಾಯಗಳು ಹುದುಗಿಕೊಂಡಿರುವುದರಿಂದ ಆಕಾಶಕ್ಕಿಂತಲೂ ಕಾಡೇ ದೊಡ್ಡದು. ಏಕೆಂದರೆ ಕಾಡು ತಮ್ಮನ್ನೆಲ್ಲಾ ಸಾಕುವ ತಾಯಿ ಎಂಬ ಮಾತುಗಳನ್ನು ಹೇಳುತ್ತಾರೆ. ಈ ಪರಿಣಾಮವಾಗಿ ಅರಣ್ಯವು ಎಷ್ಟರ ಮಟ್ಟಿಗೆ ಬುಡಕಟ್ಟು ಸಮುದಾಯಗಳಿಗೆ ಬದುಕನ್ನು ರೂಪಿಸುತ್ತಿದೆ ಎಂಬುದನ್ನು ಕುರಿತು ಚರ್ಚಿಸಬೇಕಾಗಿದೆ.

ಕರ್ನಾಟಕದ ಭೌಗೋಳಿಕ ಕ್ಷೇತ್ರ ೧೯೧೭೯೧ ಚದರ ಕಿಲೋಮೀಟರ್ ಇದ್ದು ಇದರಲ್ಲಿ ೩೭೯೧ ಚದರ ಕಿಲೋಮೀಟರ್ ಅರಣ್ಯ ಪ್ರದೇಶವಿದೆ. ಆದರೆ ಅಭಿವೃದ್ಧಿ ಮತ್ತು ನಾಗರಿಕತೆಯೆಂಬ ವಿಚಾರಗಳಿಂದಾಗಿ ಅರಣ್ಯವು ನಾಶವಾಗುತ್ತದೆ. ಅರಣ್ಯವೆನ್ನುವುದು ಮಾನವ ಜನಾಂಗದ ಬೆನ್ನೆಲುಬು ಎನ್ನುವ ವಿಷಯವನ್ನು ಇಂದಿನ ಸರ್ಕಾರಗಳು ಮರೆತಿರುವುದು ಕಾಡಿನೊಳಗೆ ಪ್ರವೇಶಿಸಿದಾಗ ತಿಳಿಯುತ್ತದೆ. ಕೃಷಿ ಪ್ರಧಾನವಾದ ಭಾರತದ ದೇಶದಲ್ಲಿ

ಸಾಮಾನ್ಯ ರೈತನ ದಿನನಿತ್ಯದ ಬೇಡಿಕೆಯಾದ ಮೂಲ ಉತ್ಪಾದನೆ ಘಟಕವೇ ಅರಣ್ಯ ಎಂಬುದನ್ನು ಮರೆತಿರುವ ಸರ್ಕಾರವಾಗಲಿ ಅಥವಾ ಅರಣ್ಯ ಅಧಿಕಾರಿಗಳಾಗಲಿ ಮೊದಲು ಅರಣ್ಯವು ಉಳಿಯಬೇಕಾದರೆ ಯಾರು ಕಾರಣರು, ಎಂಬುದನ್ನು ತಮ್ಮ ಮನಸುಗಳಲ್ಲಿ ಅಂತರಾವಲೋಕನ ಮಾಡಿಕೊಳ್ಳಬೇಕಾಗಿದೆ. ಏಕೆಂದರೆ ನಾಡಿನಾದ್ಯಂತ ಇರುವ ಅರಣ್ಯಗಳು ವಿಭಿನ್ನ ಬಗೆಯ ಸಸ್ಯ ಸಂಪತ್ತು ಹಾಗೂ ವನ್ಯಜೀವಿಗಳಿಗಷ್ಟೇ ಅಲ್ಲದೆ ಸಮೃದ್ಧಿಯಾದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಸಮುದಾಯಗಳಿಗೂ ವಾಸಸ್ಥಾನಗಳಾಗಿವೆ.''[೧೮] ಆದ್ದರಿಂದ ಬುಡಕಟ್ಟು ಸಮುದಾಯಗಳ ಜೀವನಾಡಿ ಹಾಗೂ ಜೀವನಾಧಾರವೂ ಆಗಿರುವ ಅರಣ್ಯವು ಮುಖ್ಯವಾಗಿ ಕೇಂದ್ರೀಯ ಸ್ಥಾನವನ್ನು ಇಟ್ಟುಕೊಂಡಿದೆ. ಅಲ್ಲದೇ ಪ್ರಕೃತಿಯ ಮಡಿಲಲ್ಲಿ ಜೀವನ ನಿರ್ವಹಣೆ ಮಾಡುತ್ತಿರುವ ಸಮುದಾಯಗಳ ಜೀವನಶೈಲಿ, ವೃತ್ತಿ ಪ್ರವೃತ್ತಿಗಳು ಹಾಗೂ ಮೌಲ್ಯಾಚರಣೆಗಳು ಕಾಡಿನ ಜೊತೆ ಜೊತೆಯಲ್ಲಿ ಸಾಗಿಬರುವಂತಹದ್ದಾಗಿದೆ. ಇತ್ತೀಚಿನ ದಶಕಗಳಲ್ಲಿ ಗೌಡಾಲು ಸಮುದಾಯ ಮತ್ತು ಇತರ ಸಮುದಾಯಗಳ ಬದುಕಿನ ಸ್ವರೂಪದಲ್ಲಿ ಆದ ಬದಲಾವಣೆಯನ್ನು ಅವಲೋಕಿಸಬಹುದಾಗಿದೆ. ಇಲ್ಲಿ ಗೌಡಾಲು ಸಮುದಾಯ ಹೊಸದನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳಲಾಗದ, ಹಳೆಯದನ್ನು ಬಿಡಲಾಗದ ಅತಂತ್ರ ಸ್ಥಿತಿಯಲ್ಲಿ ನೆಲೆ ನಿಂತಿರುವುದು ದುರಂತವೇ ಸರಿ.

ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ನಾಡಿನ ಹಾಗೂ ಕಾಡಿನ ಮೂಲ ನಿವಾಸಿಗಳೆಂದೇ ಗುರುತಿಸಲ್ಪಡುವ ಗೌಡಾಲುಗಳು ತಮ್ಮ ದೈನಂದಿನ ಅವಶ್ಯಕತೆಗಳನ್ನು ಪೂರೈಕೆಗಾಗಿ ಅರಣ್ಯವನ್ನು ಅವಲಂಬಿಸಿದ್ದರೂ ಅದನ್ನು ನಾಶಮಾಡುವಂತಿಲ್ಲ. ಇವರು ಪ್ರಕೃತಿಯನ್ನು ಆರಾಧಿಸಿ ಪಾಲಿಸಿದವರಾಗಿದ್ದಾರೆ. ಅರಣ್ಯದ ಆಧಾರಗಳಾದ ನೆಲ-ಜಲ, ಸಸ್ಯ ಹಾಗೂ ಪ್ರಾಣಿ ಸಂಪತ್ತುಗಳನ್ನು ರಕ್ಷಿಸಿ ಅವುಗಳನ್ನು ವೃದ್ಧಿಸುವಂಥ ಸಾಂಸ್ಕೃತಿಕ ಹಾಗೂ ಆರ್ಥಿಕ ಬದುಕನ್ನು ರೂಪಿಸಿಕೊಂಡ ಈ ಸಮುದಾಯ ಅರಣ್ಯ ಸಂಪತ್ತಿನ ರಕ್ಷಣೆಗಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟಿದ್ದಾರೆ. ಈ ಹಿನ್ನೆಲೆಯಿಂದ ತಮ್ಮ ಸುತ್ತ-ಮುತ್ತಣ ಪರಿಸರದಲ್ಲಿ ಗೋಚರವಾಗುವ ಹಾಗೂ ದಿನನಿತ್ಯ ತಮ್ಮೊಡನೆ ಒಡನಾಟದಲ್ಲಿರುವ ಪ್ರಾಣಿ ಪಕ್ಷಿಗಳಿಗೆ ಮತ್ತು ತಮಗೆ ಆಹಾರವನ್ನು ಔಷಧವನ್ನು ನೀಡುವ ಗಿಡಮೂಲಿಕೆಗಳಿಗೆ ಅರಣ್ಯದಲ್ಲಿರುವ ಗೌಡಾಲು ದೈವತ್ವದ ಸ್ಥಾನವನ್ನು ನೀಡಿ ಗೌರವವನ್ನು ಕೊಟ್ಟಿದೆ.

ಕಾಡಿನ ಭೂಮಿಯಿಂದ ತಮ್ಮ ದಿನ ಬಳಕೆಯ ಆಹಾರ ಧಾನ್ಯಗಳನ್ನು ಬೆಳೆಯುತ್ತಿದ್ದರೂ ಭೂಮಿಯ ಫಲವತ್ತತೆ ಮೀಸಲು ಬಿಡುತ್ತಿಲ್ಲ. ಇವರಲ್ಲಿ ಖಾಸಗಿ ಅಥವಾ ವೈಯಕ್ತಿಕ ಆಸ್ತಿಯ ಪರಿಕಲ್ಪನೆ ಮೊದಲಿನಿಂದಲೂ ಇರಲಿಲ್ಲ. ಪರಿಣಾಮವಾಗಿ ಭೂದಾಖಲೆ ಅಥವಾ ಭೂ ಹಕ್ಕುಗಳ ಅವಶ್ಯಕತೆಯು ಕಂಡುಬಂದಿರಲಿಲ್ಲವಾಗಿದೆ. ಆದರೆ ಇತ್ತೀಚಿನ ಬದಲಾದ ಸಾಮಾಜಿಕ ವ್ಯವಸ್ಥೆಗೆ ಅನುಗುಣವಾಗಿ ತುಂಡು ತುಂಡು ಭೂಮಿಯನ್ನು ಹಸನು ಮಾಡಿಕೊಂಡಿದ್ದರೂ ಈ ಭೂಮಿಗಳಿಗೆ ಯಾವುದೇ ಭೂದಾಖಲೆಗಳಿಲ್ಲದೆ ಇರುವುದರಿಂದ ಬುಡಕಟ್ಟು ಸಮುದಾಯ ಅವನತಿಯ ಅಂಚನ್ನು ತಲುಪಿದೆ. ಅರಣ್ಯಗಳ ಮೇಲೆ ಭಾರತದಲ್ಲಿ ವಸಾಹತುಶಾಹಿ ಶಕ್ತಿಗಳ ನಿಯಂತ್ರಣ ಹೆಚ್ಚುತ್ತಾ ಹೋದ ಹಾಗೆ, ಅರಣ್ಯದ ಸಾಮುದಾಯಿಕ ಒಡೆತನದ ಪರಿಕಲ್ಪನೆಯನ್ನು ತಿರಸ್ಕರಿಸಿದ ವಸಾಹತುಶಾಹಿ ಶಕ್ತಿಗಳು, ಅರಣ್ಯ ರಕ್ಷಣಾ ಕಾಯಿದೆಗಳನ್ನು ರಚಿಸುವ ಮೂಲಕ ಕಾಡಿನ ಮೇಲೆ ತಮ್ಮ

ನಿಯಂತ್ರಣವನ್ನು ಹೆಚ್ಚಿಸುತ್ತಾ ಬಂದಿವೆ. ಆದ್ದರಿಂದ ಸಮುದಾಯದ ಆಸ್ತಿಯಾಗಿದ್ದ ಅರಣ್ಯ ಭೂಮಿ ಸರ್ಕಾರದ ಆಸ್ತಿಯಾಗಿ ಮಾರ್ಪಟ್ಟಿದೆ.

ಅರಣ್ಯದ ಮೇಲೆ ಸರ್ಕಾರಗಳ ಹಿಡಿತ ಹೆಚ್ಚುತ್ತಾ ಹೋದಂತೆಲ್ಲಾ ಕೇವಲ ಜೀವನ ನಿರ್ವಹಣೆಗಷ್ಟೇ ಅಲ್ಲದೆ ತಮ್ಮ ಇಡೀ ಸಾಂಸ್ಕೃತಿಕ ಬದುಕಿನ ಆಧಾರವೆಂದು ಪರಿಗಣಿಸಿದ್ದ ಗೌಡಾಲು ಸಮುದಾಯ ಅರಣ್ಯದ ಮೇಲಿನ ಹಕ್ಕುಗಳು ಅವನ್ನು ಕೈ ಬಿಡುತ್ತಾ ಬಂದಿವೆ. ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳನ್ನು ಒದಗಿಸಲು ಮರಗಳನ್ನು ಕಡಿಯುವುದು, ಗಣಿಗಾರಿಕೆ, ಅಣೆಕಟ್ಟುಗಳ ನಿರ್ಮಾಣ, ಅರಣ್ಯ ಭೂಮಿಯನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸಿರುವುದು, ಬೃಹತ್ ಕಾಫಿ ಅಥವಾ ಟೀ ಎಸ್ಟೇಟುಗಳ ನಿರ್ಮಾಣಕ್ಕಾಗಿ ಅರಣ್ಯ ಭೂಮಿ ಒತ್ತುವರಿ ಇವೇ ಮುಂತಾದ ಕಾರಣಗಳಿಗಾಗಿ ಅರಣ್ಯ ಪ್ರದೇಶಗಳ ಆಕ್ರಮಣ ಮತ್ತು ನಾಶ ಅವ್ಯಾಹತವಾಗಿ ನಡೆಯುತ್ತ ಬಂದಿರುವುದು ದುರಂತವೇ ಸರಿ. ಇಲ್ಲಿ ಕಾಲಕ್ರಮೇಣ ಗುತ್ತಿಗೆದಾರರು ಮಧ್ಯವರ್ತಿಗಳು ಖಾಸಗಿ ಕಂಪನಿಗಳು, ಬಂಡವಾಳದಾರರು, ಉದ್ಯಮಪತಿಗಳು, ಅಧಿಕಾರಶಾಹಿ ರಾಜಕಾರಣಿಗಳು ಹಾಗೂ ಇತರ ಪ್ರಭಾವಶಾಲಿ ವ್ಯಕ್ತಿಗಳು ಅಥವಾ ವ್ಯವಸ್ಥೆಗಳು ಅರಣ್ಯದ ಒಡೆತನವನ್ನು ತಮ್ಮದಾಗಿಸಿಕೊಂಡು ಸ್ವಾವಲಂಬಿಗಳಾಗಿದ್ದ ಗೌಡಾಲು ಸಮುದಾಯವನ್ನು ಪರಾವಲಂಬಿತನದ ಬದುಕಿಗೆ ತಳ್ಳಲ್ಪಟ್ಟಿದ್ದೇ ಅಲ್ಲದೆ ತಮ್ಮ ಮೂಲ ನೆಲೆಗಳಾದ ಅರಣ್ಯ ಭೂಮಿಯಿಂದ ಹೊರಹಾಕಲ್ಪಡುತ್ತಿವೆ. ಅಭಿವೃದ್ಧಿಯ ಹೆಸರಿನಲ್ಲಿ ಇವರ ಬದುಕಿನ ಅಗತ್ಯಗಳನ್ನು ಹಾಗೂ ವಾಸ್ತವ್ಯಗಳನ್ನು ಅನುಲಕ್ಷಿಸಿ, ಗೌಡಾಲು ಸಮುದಾಯವನ್ನು ಅತಂತ್ರ ಪರಿಸ್ಥಿತಿಯಲ್ಲಿ ಇಂದು ತಳ್ಳಲಾಗಿದೆ.

ಗೌಡಾಲು ವಾಸಿಸುವ ಪಶ್ಚಿಮಘಟ್ಟಗಳ ಸರಹದ್ದು ತಮ್ಮ ಜೀವ ವೈವಿಧ್ಯಕ್ಕೆ ಹೆಸರಾಗಿವೆ. ಪ್ರಕೃತಿಯ ಸಮಸ್ತ ಸೊಬಗನ್ನು ತಮ್ಮೊಳಗೆ ಅಡಗಿಸಿಕೊಂಡಿರುವ ಈ ಅರಣ್ಯವು ವಿಶಿಷ್ಟ ಬಗೆಯ ಸಸ್ಯ ಹಾಗೂ ಪ್ರಾಣಿ ಸಂಪತ್ತಿಗಷ್ಟೇ ಅಲ್ಲದೆ ವಿವಿಧ ಸಾಂಸ್ಕೃತಿಕ ನೆಲೆಗಳಿಂದ ಸಮುದಾಯಗಳಿಗೆ ವಾಸಸ್ಥಾನವಾಗಿರುವುದು ಗಮನಾರ್ಹವಾದ ಸಂಗತಿ. ಪ್ರಾಚೀನ ಕಾಲದಲ್ಲಿಯೇ ನಾಡಿನಿಂದ ಕಾಡಿಗೆ ಬಂದಿರುವುದರ ಬಗ್ಗೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೇಳಿರುವಂತೆ ಈ ಕಾಡಿಗೆ ವಲಸೆ ಬಂದವರಾಗಿದ್ದಾರೆ. ಇವರ ಸಾಮಾಜಿಕ ಸಾಂಸ್ಕೃತಿಕ ಆರ್ಥಿಕ ಜೀವನವು ಅರಣ್ಯದೊಡನೆ ಸಂಬಂಧವನ್ನು ಗಾಢವಾಗಿ ಹೊಂದಿದೆ. ಪರಿಣಾಮವಾಗಿ ಒಡೆತನ ನಿಯಂತ್ರಣಗಳ ಸ್ವರೂಪದಲ್ಲಿರುವ ಬದಲಾವಣೆಗಳು ಈ ಸಮುದಾಯಗಳ ಜೀವನಶೈಲಿಯ ಮೇಲೆ ವಿಶಿಷ್ಟವಾದ ಪರಿಣಾಮನ್ನು ಬೀರಿವೆ.

ಗೌಡಾಲು ಕುದುರೆಮುಖ ಗಣಿಗಾರಿಕೆಯು ತಂದ ನೋವುಗಳನ್ನು ಹಾಗೂ ರಾಷ್ಟ್ರೀಯ ಉದ್ಯಾನವನ ತಂದಿರುವ ನೋವುಗಳನ್ನು ಅನುಭವಿಸುತ್ತಾ ನಿನ್ನೆ ನಾಳೆಗಳ ನಡುವೆ ಅರ್ಥಪೂರ್ಣವಾದ ಸಂಬಂಧವನ್ನು ಕಲ್ಪಿಸಲು ಸಾಧ್ಯವಾಗದೆ ಅನೇಕ ಸಂದಿಗ್ಧಗಳನ್ನು ಸವಾಲುಗಳನ್ನು ಎದುರಿಸುತ್ತಿದೆ. ಇಲ್ಲಿಯೇ ನೆಲೆ ನಿಂತು ಜೀವಿಸುತ್ತಿದ್ದರೂ ಇದುವರೆವಿಗೂ ಈ ಸಮುದಾಯ ಸರ್ಕಾರದ ಸೌಲಭ್ಯಗಳಿಂದ ಬಹುದೂರವಿದೆ. ಅರಣ್ಯದ ಮಕ್ಕಳು ಎಂದರೆ ಇವರೇ ಎನ್ನುವಷ್ಟರ ಮಟ್ಟಿಗೆ ಅರಣ್ಯದೊಡನೆ ತಮ್ಮ ಅಸ್ತಿತ್ವವನ್ನು ಹೊಂದಿದವರಾಗಿದ್ದಾರೆ. ಗೌಡಾಲುಗಳದ್ದು ಸಂಪ್ರದಾಯಬದ್ಧ ಸಮಾಜ. ಅರಣ್ಯದಲ್ಲಿರುವ ಗಿಡಮರಗಳು ಹಾಗೂ ಪ್ರಾಣಿಗಳೊಡನೆ ಇವರು ಹೊಂದಿರುವ

ಸಂಬಂಧ ಈ ಸಮುದಾಯದ ಧಾರ್ಮಿಕ ನಂಬಿಕೆಗಳು ಹಾಗೂ ಆಚರಣೆಗಳಿಂದ ನಿಕಟವಾಗಿ ಪ್ರಭಾವಿತವಾಗಿದೆ. ತಮ್ಮ ಜೀವನ ನಿರ್ವಹಣೆಗೆ ಅರಣ್ಯವನ್ನೇ ನಂಬಿದೆ. ತಮ್ಮ ದಿನನಿತ್ಯದ ಅಗತ್ಯಗಳ ಪೂರೈಕೆಗಾಗಿ ಅರಣ್ಯದಲ್ಲಿರುವ ಸಸ್ಯ ಹಾಗೂ ಪ್ರಾಣಿ ಸಂಕುಲಗಳನ್ನು ಅವಲಂಬಿಸಿದ್ದರೂ ಮನಸೋ ಇಚ್ಛೇ ಬೇಟೆಯನ್ನಾಡುವುದಾಗಲಿ, ಮರಗಳನ್ನು ಕಡಿಯುವುದಾಗಲಿ ಗೌಡಾಲುಗಳಿಗೆ ನಿಷೇಧ. ವಾಸಸ್ಥಾನಗಳ ನಿರ್ಮಾಣಕ್ಕೆ, ನೀರು ಕಾಯಿಸಲು ಅಥವಾ ಅಡುಗೆ ಬೇಯಿಸಲು ಕೆಲ ಬಗೆಯ ಮರಗಳನ್ನು ಬಳಸುತ್ತಾರೆ. ಇಲ್ಲಿ ವಿಶೇಷತೆಯೆಂದರೆ ಮರಗಳನ್ನು ಕಡಿಯುವಾಗಲೂ ಸಂಬಂಧಿಸಿದ ದೇವತೆಗಳಿಗೆ ಪೂಜೆಯನ್ನು ಸಲ್ಲಿಸಿದ ಮೇಲೆಯೇ ಕೊಡಲಿಯನ್ನು ಪ್ರಯೋಗಿಸುತ್ತಾರೆ. ಮರಗಳಿಂದ ಹಣ್ಣು ಹಂಪಲುಗಳನ್ನು ಕೊಯ್ದರೂ ಪ್ರತಿ ಮರದಲ್ಲೂ ಕೆಲ ಫಲಗಳನ್ನಾದರೂ ಹಾಗೆಯೇ ಉಳಿಸುತ್ತಾರೆ. ಏಕೆಂದರೆ ಫಲ ಕೊಡುವ ವೃಕ್ಷವನ್ನು ಸಂಪೂಣವಾಗಿ ಬರಿದು ಮಾಡಿದರೆ ಅದು ಮತ್ತೊಮ್ಮೆ ಫಲ ಬಿಡುವುದಿಲ್ಲ ಎಂಬುದು ಇವರ ಭಾವನೆಯಾಗಿದೆ. ಇಲ್ಲಿ ಅರಣ್ಯವನ್ನು ಬಳಸಿದರೂ ಅದು ಮತ್ತಷ್ಟು ವೃದ್ಧಿಯಾಗುವಂಥ ರೀತಿಯಲ್ಲಿ ಬಳಸಬೇಕೆ ಹೊರತು, ಅರಣ್ಯ ಬರಡಾಗಲು ಎಂದಿಗೂ ಇವರು ಆಸ್ಪದ ನೀಡದವರಾಗಿದ್ದಾರೆ. ಆದ್ದರಿಂದ ಅರಣ್ಯವನ್ನು ಕುರಿತ ಈ ತೆರನಾದ ದೈವೀ ಭಾವನೆ ಎಲ್ಲ ಅರಣ್ಯವಾಸಿ ಬುಡಕಟ್ಟು ಸಮುದಾಯಗಳಲ್ಲೂ ಜೀವಂತವಾಗಿದೆ.

''ಇಂದು ಗೌಡಾಲು ಸಮುದಾಯದ ಪರಿಸ್ಥಿತಿ ಬದಲಾಗಿದೆ. ಹೊಸ ಹೊಸ ಅರಣ್ಯ ಕಾಯಿದೆಗಳು ಅಸ್ತಿತ್ವಕ್ಕೆ ಬಂದ ಹಾಗೆಲ್ಲ ಅರಣ್ಯದ ಮೇಲೆ ತಮಗಿದ್ದ ಹಕ್ಕುಗಳನ್ನು ಕಳೆದುಕೊಳ್ಳುತ್ತಾ ಬಂದಿದೆ. ಅರಣ್ಯ ಸಂರಕ್ಷಣೆಯ ಹೆಸರಿನಲ್ಲಿ ಕುಮ್ರಿ ಬೇಸಾಯದ ಮೇಲೆ ಸರ್ಕಾರ ನಿಷೇಧವನ್ನು ವಿಧಿಸಿದೆ. ಬೆಳೆದು ತಿನ್ನುವ ಹಂತದಿಂದ ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸದಂತೆ ಮಾಡಿದೆ. ನಗದು ಹಣದ ಅಭಾವ ಒಂದೆಡೆ, ಆಧುನಿಕ ಮಾರುಕಟ್ಟೆಯ ವ್ಯವಹಾರಗಳನ್ನು ಕುರಿತ ಅಜ್ಞಾನ ಮತ್ತೊಂದೆಡೆ ಅರಣ್ಯದಲ್ಲಿ ವಾಸಿಸುವ ಗೌಡಾಲು ಜೀವನ ಇಂದು ಬಡತನ ಮತ್ತು ಅನಿಶ್ಚಿತತೆಗಳ ನಡುವೆ ತೂಗುಯ್ಯಾಲೆಯಾಡುತ್ತಿದೆ.''[೧೧]

ಗೌಡಾಲುಗಳು ಕಾಡಿನ ಪರಿಸರದಲ್ಲಿ ಬದುಕುವವರಾಗಿರುವುದರಿಂದ ತಮ್ಮದೇ ಆದ ಸಾಮಾಜಿಕ ಜೀವನ, ಪಶುಪಾಲನೆ, ವೈದ್ಯ, ಹಾಡು ಕುಣಿತ ಕೃಷಿಯನ್ನು ರೂಢಿಸಿಕೊಂಡಿರುವುದಲ್ಲದೆ ಅರಣ್ಯ ಹಾಗೂ ಗುಡ್ಡಗಾಡುಗಳನ್ನು ತಮ್ಮ ನೆಲೆಯಾಗಿಸಿಕೊಂಡು ಕಾಡಿನಲ್ಲಿ ಜೇನು, ಅಂಟುವಾಳಕಾಯಿ, ಹುಳಿ ಬಿದಿರು, ಬೆತ್ತ, ಕಾಡು ಕಿತ್ತಳೆ, ರಾಮ ಪತ್ರ, ಮುರುಗನ ಹುಳಿ, ಹಲಸು, ಅನಾನಸ್, ಏಲಕ್ಕಿ, ಮೆಣಸು, ಚಕ್ಕೆ, ಲವಂಗ, ಕಾಫಿ, ಟೀ, ಗಿಡ ಮೂಲಿಕೆಗಳ ಸಂಗ್ರಹ, ಬಗಿನಿ ಹೆಂಡದ ಶೇಖರಣೆ, ಅಡಿಕೆ ಮರದ ವಾಟುವಾಳ, ತಟ್ಟೆಗಳ ತಯಾರಿಕೆ, ದನಕರುಗಳಿಗೆ ದಾಬು ಹಗ್ಗ ಮಾಡುವುದು, ಬೆಟ್ಟದ ಜೇನು ಸಂಗ್ರಹಿಸುವುದು, ತೋಟದಲ್ಲಿ ದಾಸವಾಳ ಹೂವಿನ ಗಿಡಗಳನ್ನು ಸಾಕುವುದು. ಸಂಪಿಗೆ, ಕೋಲು ಸಂಪಿಗೆ, ನಾಗ ಸಂಪಿಗೆ, ಹಬ್ಬರಿಗೆ, ಜಾಜಿ, ಜೂಜಿ, ಕೆರೆಯಲ್ಲಿಯ ತಾವರೆ, ಬೆಟ್ಟದ ಶುರ್ಕ್ಯ, ಹೊನ್ನೆ, ಸುರಹೊನ್ನೆ, ಹೊನಲು, ಸೀತೆ ಹೊಳೆದಂಡೆಯ ಕೇದಗೆ ಮುಂತಾದವನ್ನು ಸಂಗ್ರಹಿಸಿ ದೇವರಿಗೂ ತಮಗೂ ಅನುಕೂಲವಾಗಲೆಂದು ಗೌಡಾಲು ಮಹಿಳೆಯರು ಕಾಡಿನಿಂದ ಸಂಗ್ರಹಿಸುವುದಲ್ಲದೆ Lamp Societyಗೆ ಮಾರಾಟ ಮಾಡಿ ಬಂದ ಹಣದಿಂದ ಜೀವನವನ್ನು ಸಾಗಿಸುವ ಬುಡಕಟ್ಟು ಸಮುದಾಯವಾಗಿದೆ.

ಗೌಡಾಲು ಬುಡಕಟ್ಟಿನ ಹೆಣ್ಣು ಮಕ್ಕಳು ಮತ್ತು ಸ್ತ್ರೀಯರನ್ನು ಭೇಟಿಮಾಡಲು ಬಾಳೆಹೊನ್ನೂರಿನ ಕಡ್ಲೆಮಕ್ಕೆ, ಎನ್. ಆರ್. ಪುರದ ಪಕ್ಕದಲ್ಲಿರುವ ಎಂ.ಸಿ. ಹಳ್ಳಿ, ಎನ್.ಆರ್. ಪುರದ ಬಾಳೆಹಿತ್ತಲ ಕುಟುಂಬಗಳಲ್ಲಿರುವ ಸ್ತ್ರೀಯರನ್ನು ಸಂದರ್ಶನದ ಸಮಯದಲ್ಲಿ ಅರಣ್ಯ ಉತ್ಪನ್ನಗಳನ್ನು ಕುರಿತು ಕೇಳಿದಾಗ ''ಮೊದಲು ಕಾಡಿನ ಉತ್ಪನ್ನಗಳನ್ನು ನಾವು ಸಂಗ್ರಹಿಸಿಕೊಂಡು ನೆಮ್ಮದಿಯ ಬದುಕನ್ನು ಸಾಗಿಸುತ್ತಿದ್ದೆವು ಆದರೆ ಇಂದಿನ ಸರ್ಕಾರದ ನೀತಿಯಿಂದಾಗಿ ನಮ್ಮ ಜೀವನ ಶೋಚನೀಯವಾಗಿದೆ'' ಎಂದರು ಇದರಿಂದ ತಿಳಿಯುವುದೇನೆಂದರೆ ನಮ್ಮ ಸರ್ಕಾರದ ಯಾವುದೇ ಸೌಲಭ್ಯಗಳನ್ನು ಕೊಡುವುದಿರಲಿ ಇವರನ್ನು ಇವರ ಪಾಡಿಗೆ ಬದುಕಲು ಬಿಡುತ್ತಿಲ್ಲ ಎಂಬ ಮಾತು ನಿಜವಾಗಿದೆ. ಈ ಭಾಗದ ತುಂಗ ಮತ್ತು ಭದ್ರಾ ನದಿಗಳ ಬಗ್ಗೆ ಆಗಲಿ ಮತ್ತು ಕಾಡಿನ ಬಗ್ಗೆ ಆಗಲಿ ಇವರಲ್ಲಿ ಅಪಾರವಾದ ನಂಬಿಕೆಯಿದೆ. ಕಾಡು ಇದ್ದರೆ ನಾಡು, ಎಲ್ಲವು ಕಾಡಿನಿಂದಲೇ ಎಂಬುದನ್ನು ಅರಿತವರಾಗಿದ್ದಾರೆ ಹಾಗೂ ಅದರಂತೆಯೇ ಬದುಕನ್ನು ರೂಪಿಸಿಕೊಂಡಿದ್ದಾರೆ.

ಗೌಡಾಲುಗಳು ಶೃಂಗೇರಿ ತಾಲೂಕಿನ ಹಾದಿ ಎಂಬ ಹಾಡಿ ಹಾಗೂ ಮೊದಲ ಬೈಲು ಊರುಗಳಲ್ಲಿ ಈಗಲೂ ಬಿದಿರಿನಿಂದ ಬೆತ್ತಗಳಿಂದ ಬುಟ್ಟಿಗಳನ್ನು ತಯಾರಿಸುವ ಪರಿಪಾಟವನ್ನು ಬೆಳೆಸಿಕೊಂಡಿದ್ದಾರೆ. ಇವರು ಮೂಲತಃ ಕಾಡಿನಲ್ಲಿ ಅಲೆದಾಡುತ್ತಾ ಗೆಡ್ಡೆ ಗೆಣಸುಗಳನ್ನು, ಹಣ್ಣುಗಳನ್ನು ಸಂಗ್ರಹಿಸಿಕೊಂಡು ಅವರದೇ ಆದ ಸಾಂಸ್ಕೃತಿಕ ಲೋಪವನ್ನು ಕಟ್ಟಿಕೊಂಡು ಬದುಕನ್ನು ಸಾಗಿಸಿಕೊಂಡಿದ್ದರಿಂದ ಇವರಿಗೆ ಕಾಡನ್ನು ಬಿಟ್ಟು ಬದುಕಲು ಸಾಧ್ಯವಾಗದ ಸ್ಥಿತಿಯಲ್ಲಿ ಇರುವುದನ್ನು ಯಾವುದೇ ಸರ್ಕಾರವು ಇಂದಿನ ದಿನಮಾನಗಳಲ್ಲಿ ಆಲೋಚಿಸಬೇಕಾಗಿದೆ.

ಇವರು ಕಾಡಿನಲ್ಲಿ ಸಿಗುವ ಕಚ್ಚಾ ಸಾಮಗ್ರಿಗಳನ್ನು ಸಂಗ್ರಹಿಸಿ ಬಿದಿರಿನಿಂದ ಅನೇಕ ಸಾಮಗ್ರಿಗಳನ್ನು ನಿರ್ಮಾಣ ಮಾಡಿಕೊಳ್ಳುವುದಲ್ಲದೆ. ವಾಟೆಯಂತಹ ಇನ್ನೊಂದು ರೂಪಿನ ಬಿದಿರಿನಿಂದ ವಿಭಿನ್ನವಾದ ಸಾಮಾನುಗಳನ್ನು ತಯಾರಿಸಿ ವಿಶಿಷ್ಟವಾದ ಬದುಕನ್ನು ಸಾಗಿಸುವವರಾಗಿದ್ದಾರೆ. ಆದ್ದರಿಂದ ಕಾಡಿನ ಪ್ರತಿಯೊಂದು ಸಸ್ಯದ ಜ್ಞಾನ ಇವರಿಗಿದೆ. ಕಾಡಿನ ಮೈಸಿರಿಗೆ ಅನುಗುಣವಾದ ಬದುಕು ಇವರದ್ದಾಗಿದೆ. ಹಾಗಾಗಿ ಸುಮಾರು ವರ್ಷಗಳಿಂದ ಕಾಡಿನ ಉತ್ಪನ್ನ ಅವಲಂಬಿಸಿ ಬದುಕುತ್ತಿದ್ದ ಗೌಡಾಲುಗಳನ್ನು ಉದ್ಯಾನವನದ ನೆಪದಲ್ಲಿ ಕಾಡಿನಿಂದ ಒಕ್ಕಲೆಬ್ಬಿಸುವ ಪರಿ ಎಷ್ಟರ ಮಟ್ಟಿಗೆ ಸರಿ ಎಂಬುದನ್ನು ಚರ್ಚಿಸುತ್ತಾ ಹೊರಟರೆ ಆಯ್ದು ತಿನ್ನುವ ಕೋಳಿಯ ಕತ್ತನ್ನು ಹಿಸಿಕಿದಂತೆ ಗೌಡಾಲುಗಳ ಕತ್ತನ್ನು ಹಿಸುಕುತ್ತಿರುವ ಸರ್ಕಾರ ಆಲೋಚಿಸಲೇಬೇಕಾಗಿದೆ. ೧೯೮೭ರಲ್ಲಿ ಸರ್ಕಾರ ಪಶ್ಚಿಮ ಘಟ್ಟದ ಕುದುರೆಮುಖದ ಸುತ್ತ ಮುತ್ತಲ ಕಾಡನ್ನು ರಾಷ್ಟ್ರೀಯ ಉದ್ಯಾನವೆಂದು ಘೋಷಿಸಿದೆ. ಆದ್ದರಿಂದ ಇಲ್ಲಿ ಕುದುರೆಮುಖ ಗಣಿಗಾರಿಕೆ ಸೃಷ್ಟಿಸಿದ ಸಮಸ್ಯೆಗಳಷ್ಟೇ ಭೀಕರವಾದ ಸಮಸ್ಯೆಗಳನ್ನು ರಾಷ್ಟ್ರೀಯ ಉದ್ಯಾನ ಸೃಷ್ಟಿಸಿರುವುದನ್ನು ನೋಡಬಹುದು. ರಾಷ್ಟ್ರೀಯ ಉದ್ಯಾನ ವಿರೋಧಿಯ ಸಂಬಂಧವಾಗಿ ಅನೇಕ ಹೋರಾಟಗಳಾದವು. ಇದಕ್ಕೆ ಸಂಬಂಧಿಸಿದಂತೆ ಚಿಕ್ಕಮಗಳೂರು ಜಿಲ್ಲಾ ಆದಿವಾಸಿ ಗಿರಿಜನ ಹಿತರಕ್ಷಣ ಸಮಿತಿ, ಕರ್ನಾಟಕ ವಿಮೋಚನ ರಂಗ, ಮತ್ತು ರಾಷ್ಟ್ರೀಯ ಉದ್ಯಾನ ವಿರೋಧಿ ಒಕ್ಕೂಟಗಳೆಲ್ಲವು ಸೇರಿ ಹೋರಾಟ ಮಾಡಿವೆ. ಗೌಡಾಲು ಸಮುದಾಯದ ಹೋರಾಟಗಾರರಾದ ಪರಮೇಶ್ ಇಡೀ ಗೌಡಾಲು ಸಮುದಾಯವನ್ನು ಒಟ್ಟಾಗಿ ಹೋರಾಟ ಮಾಡಲು ಪ್ರೋತ್ಸಾಹಿಸಿದ್ದಾರೆ. ಪ್ರತಿಯೊಂದು ಗೌಡಾಲು ಹಳ್ಳಿಗಳಾದ ಮೆಣಸಿನಾಡ್ಕ,

ಉಡುತ್ತಾಳ, ಅಡಿಕೇಸು, ಮೆಗೂರು, ಬುಕ್ಕಡಿ ಬೈಲ್, ಮಕ್ಕಿಮನೆ, ಮುಂಡಸಾರು, ನೆಮ್ಮಾರು, ಮುದ್ಲೆಬೈಲು, ಹುಲ್ಲುಗರಡಿ, ಕೆರೆಹಟ್ಟೆ, ಹಾದಿ, ಮೇಗೂರುಗಳಂತ ಹಾಡಿಗಳಿಗೆ ಹೋಗಿ ಸ್ತ್ರೀಯರು ಪುರುಷರು ಎನ್ನದೆ ಸಂಘಟನೆ ಮಾಡಿ ಕುದುರೆಮುಖ ರಾಷ್ಟ್ರೀಯ ಉದ್ಯಾನ ವಿರೋಧಿ ಸಮಿತಿಯ ಕಾರ್ಯದರ್ಶಿಯಾಗಿ ಶೃಂಗೇರಿಯ ಪರಿಸರವಾದಿ ಹಾಗೂ ಹೋರಾಟಗಾರರಾದ ಕಲ್ಕುಳಿ ವಿಠಲ್ ಹೆಗಡೆಯವರ ನೇತೃತ್ವದಲ್ಲಿ ೭ ವರ್ಷಗಳಿಂದ ಕಾಡು ಉಳಿಯಬೇಕು. ಕಾಡಿನಲ್ಲಿ ವಾಸಿಸುವ ಬುಡಕಟ್ಟುಗಳು ಇಲ್ಲಿಯೇ ಉಳಿಯಬೇಕು ರಾಷ್ಟ್ರೀಯ ಉದ್ಯಾನ ಯೋಜನೆ ನಿಲ್ಲಬೇಕು ಎಂಬ ನಿಲುವುಗಳನ್ನು ಇಟ್ಟುಕೊಂಡು ಹೋರಾಟ ಮಾಡುತ್ತಾ ಬಂದಿದ್ದಾರೆ.

''ಕಲ್ಕುಳಿ ವಿಠಲ್ ಹೆಗಡೆಯವರ ಪ್ರಕಾರ ಕುದುರೆಮುಖ ರಾಷ್ಟ್ರೀಯ ಉದ್ಯಾನ ಯೋಜನೆ ದಕ್ಷಿಣ ಕನ್ನಡ, ಚಿಕ್ಕಮಗಳೂರು, ಉಡುಪಿ, ಈ ಮೂರು ಜಿಲ್ಲೆಯಲ್ಲಿ ಸುಮಾರು ೧,೬೩,೦೦೦ (ಒಂದು ಲಕ್ಷದ ಅರವತ್ತೂರು ಸಾವಿರ) ಎಕರೆ ಭೂ ಪ್ರದೇಶವನ್ನು ಒಳಗೊಂಡಿದೆ. ಕೊಪ್ಪದ ೪ ಗ್ರಾಮಗಳು, ಶೃಂಗೇರಿಯ ೧೬ ಗ್ರಾಮಗಳು ಮೂಡಿಗೆರೆಯ ೩ ಗ್ರಾಮಗಳು ಈ ಯೋಜನೆಯ ತೆಕ್ಕೆಗೆ ಸೇರಿವೆ. ಅಲ್ಲದೆ ಈ ಪ್ರದೇಶದಲ್ಲಿ ೪ ಸಾವಿರಕ್ಕೂ ಹೆಚ್ಚು ಕುಟುಂಬಗಳು ೨೦ ಸಾವಿರಕ್ಕೂ ಹೆಚ್ಚು ಬುಡಕಟ್ಟು ಜನರಾದ ಗೌಡಾಲು ಸಮುದಾಯ ಇದರೊಳಗೆ ಸೇರಿಹೋಗಿವೆ. ಆದರೆ ಸರ್ಕಾರ ಇವರಿಗೆ ಕಾಡನ್ನು ಬಿಟ್ಟು ಹೋಗುವಂತೆ ನೋಟಿಸು ಕೊಟ್ಟು ಎತ್ತಂಗಡಿ ಮಾಡಲು ಹೊರಟಿರುವುದು ಸಾಮ್ರಾಜ್ಯಶಾಹಿಯ ದರ್ಪವನ್ನು ತೋರಿದಂತಾಗಿದೆ ಎಂದಿದ್ದಾರೆ. ಆದ್ದರಿಂದ ಕಾಡಿನಿಂದ ಬದುಕನ್ನು ರೂಪಿಸಿಕೊಂಡು ಕಾಡನ್ನು ರಕ್ಷಣೆ ಮಾಡುತ್ತಾ ಬಂದಿರುವ ಸಮುದಾಯಗಳಿಂದ ಕಳ್ಳತನ ಮಾಡಲು ಸಾಧ್ಯವಾಗದೆ ಇರುವುದರಿಂದ ಇಲ್ಲಿರುವ ಬುಡಕಟ್ಟುಗಳನ್ನು ಎತ್ತಂಗಡಿ ಮಾಡಿ ಕಳ್ಳತನಕ್ಕೆ ಸರಿದಾರಿಯನ್ನು ಹುಡುಕುತ್ತಿದ್ದಾರೆ ಎಂದು ಮಾಹಿತಿಯನ್ನು ಕೊಟ್ಟಿರುವುದನ್ನು ಗಮನಿಸಿದರೆ ಗೌಡಾಲುಗಳು ನುಂಗಲಾರದ ಯಾತನೆಯನ್ನು ಸಹಿಸಿಕೊಂಡಿದ್ದಾರೆ.''[೨]

ಚಿಕ್ಕಮಗಳೂರು ಜಿಲ್ಲೆ ಪರಿಸರದ ದೃಷ್ಟಿಯಿಂದ ಎಷ್ಟು ಮಹತ್ವವನ್ನು ಪಡೆದಿದೆ ಎಂಬ ಜ್ಞಾನವಿಲ್ಲದೆ ಅರಣ್ಯ ಅಧಿಕಾರಿಗಳು ಅವರ ಇಚ್ಛೆಯಂತೆಯೇ ಅರಣ್ಯವನ್ನು ಉಪಯೋಗಿಸುತ್ತಿರುವುದಲ್ಲದೆ ಅರಣ್ಯವನ್ನು ಪ್ರಾಚೀನ ಕಾಲದಿಂದಲೂ ರಕ್ಷಣೆ ಮಾಡುತ್ತಾ ಅದರ ಪ್ರತಿಯೊಂದು ಮಜಲುಗಳು ಗೊತ್ತಿರುವ ಬುಡಕಟ್ಟು ಸಮುದಾಯಗಳನ್ನು ಕಾಡಿನಿಂದ ಹೊರ ಹಾಕುವುದಲ್ಲದೆ ಅಮಾಯಕ ಬುಡಕಟ್ಟು ಮಹಿಳೆಯರನ್ನು ತುಚ್ಛವಾಗಿ ಕಂಡಿರುವುದನ್ನು ನೋಡಿದರೆ ತಲಾತಲಾಂತರವಾಗಿ ಸಮಾಜದ ಅಭಿವೃದ್ಧಿಗೆ ಪುರುಷನಷ್ಟೇ ಶ್ರಮವನ್ನು ಹಾಕಿರುವ ಅಮಾಯಕ ಮಹಿಳೆಯರ ಸ್ಥಿತಿಯು ಮುಂದಿನ ದಿನಮಾನಗಳಲ್ಲಿ ಏನಾಗಬೇಕು ಎಂಬುದು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗುತ್ತದೆ. ಆದ್ದರಿಂದ ಯಾರು ಕಾಡನ್ನು ನಾಶ ಮಾಡುತ್ತಾರೆ ಎಂಬುದನ್ನು ಸರ್ಕಾರ ಮೊದಲು ಅರ್ಥ ಮಾಡಿಕೊಳ್ಳಬೇಕಾಗಿದೆ. ಇಲ್ಲಿ ಪರಿಸರ ಎಂದಾಕ್ಷಣ ಥಟ್ಟನೆ ನಮಗೆ ಹೊಳೆಯುವುದು ನಿಸರ್ಗ. ಆದ್ದರಿಂದ ಬುಡಕಟ್ಟು ಸಮಾಜಕ್ಕೆ ದೈವದತ್ತ ಕೊಡುಗೆಯೆಂದರೆ ನಿಸರ್ಗವಾಗಿದೆ. ನಿಸರ್ಗದೊಂದಿಗೆ ನಮ್ಮ ಸಂಬಂಧ ಅಮೂಲ್ಯವಾದುದು. ಹಾಗಾಗಿ ಈ ಸಂಬಂಧ ಸಾಮರಸ್ಯ ಅಸಹನೀಯವಾಗುತ್ತದೆ. ಆದರೆ ನಾವು ಆಧುನೀಕರಣದ ಅಲೆಯಲ್ಲಿ ತೇಲಿಕೊಂಡು ನಿಸರ್ಗದ ಸಾಮರಸ್ಯದ ಬದುಕನ್ನು ಮರೆತು ವರ್ತಿಸುತ್ತಿದ್ದೇವೆ

ಎಂಬ ಜ್ಞಾನ ಎಲ್ಲರಿಗೂ ಬರಬೇಕಾಗಿದೆ. ಈ ಹಿನ್ನೆಲೆಯಿಂದ ಮನವರಿಕೆಯಾಗುವುದೆಂದರೆ ವಿಶ್ವಾದ್ಯಂತ ಪರಿಸರದ ಕಾಳಜಿ ಬಗೆಗೆ ಜಾಗೃತಿ ಆರಂಭವಾಗಿ ಕೆಲವು ದಶಕಗಳೇ ಕಳೆದರೂ ನಿಸರ್ಗ ಮಾತ್ರ ಯಥಾಪ್ರಕಾರ ಕಲುಷಿತಗೊಳ್ಳುತ್ತಲೇ ಇರುವುದು ನಿಜ ಸಂಗತಿಯಾಗಿದೆ. ಹೀಗಿರುವಾಗ ಚಿಕ್ಕಮಗಳೂರು ಜಿಲ್ಲೆಯನ್ನು ಗ್ರಹಿಸುವ ಪರಿಯೂ ಕೂಡ ಬದಲಾಗಬೇಕಾಗಿದೆ. ಇಲ್ಲಿ ನಿಸರ್ಗದ ದೃಷ್ಟಿಯಿಂದ ಗಮನಿಸಬೇಕಾಗಿದ್ದೇನೆಂದರೆ ಗೌಡಾಲು ಸಮುದಾಯ ಹೇಳುವಂತೆ ಕೆಂಜಿಗೆಗಳ ಸಂಖ್ಯೆ ಕಾಡು ಪ್ರಾಣಿಗಳ ಸಂಖ್ಯೆ ಹಾಗೂ ಬೆಲೆ ಬಾಳುವ ಮರಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಏಡಿ, ನೀರು, ಕಾಡು ಎಲ್ಲವೂ ವಿರಳವಾಗಿರುವುದಲ್ಲದೆ ಕಾಡುವಾಸಿಗಳ ಬದುಕು ದಿಕ್ಕು ತೋಚದಾಗಿ ಜಮೀನ್ದಾರಿಕೆಯ ವ್ಯವಸ್ಥೆ ಬಲಿಷ್ಠಗೊಳ್ಳುತ್ತಿದೆ. ಹಾಗಾಗಿ ಈ ಭಾಗದ ಕೆಳವರ್ಗದವರ ಸ್ಥಿತಿಯೂ ಕೆಳಮಟ್ಟದ ವೃತ್ತಿಗಳನ್ನು ಅವಲಂಬಿಸಲೇಬೇಕಾದ ವಾತಾವರಣ ಯಾರಿಗೂ ಗೊತ್ತಿಲ್ಲದಂತೆ ಇರುವುದು ಶೋಚನೀಯವಾದ ಸಂಗತಿಯಾಗಿದೆ.

ಗೌಡಾಲು ಬುಡಕಟ್ಟು ಸಂಗ್ರಹಿಸುವ ಅರಣ್ಯ ಉತ್ಪನ್ನಗಳಿಂದ ಹಿಡಿದು ಅವರ ಬದುಕಿನ ಪ್ರತಿಯೊಂದು ಮಜಲುಗಳಿಗೆ ಒಂದಲ್ಲಾ ಒಂದು ರೀತಿಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಹೊಡೆತ ಬಿದ್ದಿರುವುದು ದುರಂತವೇ ಸರಿ. ಗಿರಿಜನರು ಮತ್ತು ಸಾಂಪ್ರದಾಯಿಕ ಅರಣ್ಯ ನಿವಾಸಿಗಳ ಹಕ್ಕು ಗುರುತಿಸುವ ೨೦೦೬ ಮತ್ತು ೨೦೦೭ರ ಪರಿಶಿಷ್ಟ ಬುಡಕಟ್ಟು ಮತ್ತು ಇನ್ನಿತರೆ ಪರಂಪರಾಗತ ಅರಣ್ಯ ನಿವಾಸಿಗಳ ಕಾಯ್ದೆ ಜಾರಿಗೆ ಬಂದಿರುವುದು ಗಮನಿಸಿದರೆ ಬೇರೆಲ್ಲ ಕಾಯ್ದೆಯಂತೆ ಸದ್ದಿಲ್ಲದೆ ಜಾರಿಗೆ ಬಂದಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಕಾಯ್ದೆಗಳು ಕೆಲ ಗಂಭೀರ ವಿಷಯಗಳನ್ನೊಳಗೊಂಡು ಮೇಲ್ನೋಟಕ್ಕೆ ಜನಪರ ಮತ್ತು ಪರಿಸರಕ್ಕೆ ಪೂರಕವಾಗಿದೆ ಎನಿಸಿದರೂ ಒಳಗೆಲ್ಲಾ ಹುಳುಕುಗಳು ತುಂಬಿವೆ. ಇಲ್ಲಿ ಕಾಡನ್ನು ಬುಡಕಟ್ಟುಗಳಿಂದ ಪ್ರತ್ಯೇಕವಾಗಿಸಿ ಅದೊಂದೇ ಅಮೂಲ್ಯ ವಸ್ತು ಎಂಬಂತೆ ನೋಡುವ ವಿದೇಶಿ ಪರಿಸರ ಸಂಸ್ಥೆಗಳ ಕೃಪಾಪೋಷಿತ ಪರಿಸರವಾದಿಗಳು ಈ ಕಾಯ್ದೆಯನ್ನು ಪರಿಸರ ವಿರೋಧಿ ಎಂದು ರಾಷ್ಟ್ರ ಮಟ್ಟದಲ್ಲಿ ಬಿಂಬಿಸುತ್ತಿದ್ದಾರೆ. ಶತಶತಮಾನಗಳಿಂದ ಅರಣ್ಯದೊಂದಿಗೆ ಬೆರೆತು ಬದುಕುತ್ತಿರುವ ಬುಡಕಟ್ಟು ಸಮುದಾಯಗಳನ್ನು ಅವರದೇ ಆದ ಬದುಕಿನ ಶೈಲಿಯಲ್ಲಿ ಜೀವಿಸಲು ಬಿಡದೆ ಹಾಗೂ ನಿರ್ದಿಷ್ಟವಾದ ಬದುಕಿನ ದಾರಿಯನ್ನು ತೋರಿಸದೇ ಅರಣ್ಯದಲ್ಲಿ ಇರಲು ಅವಕಾಶ ನೀಡದೆ ಇರುವುದು ಈ ಕಾಯ್ದೆಗಳ ಹೆಗ್ಗಳಿಕೆಯಾಗಿದೆ. ಆದರೆ ಇಂದು ಒಂದಿಷ್ಟು ಕಾಡು ಉಳಿದಿದೆ ಎಂದಾದರೆ ಅದಕ್ಕೆ ಬುಡಕಟ್ಟುಗಳೇ ಕಾರಣ ಎಂಬುದನ್ನು ಮರೆತ ಸರ್ಕಾರ ಎಲ್ಲೆಲ್ಲಿ ಬುಡಕಟ್ಟುಗಳು ವಾಸವಾಗಿದ್ದಾರೋ ಅಲ್ಲಿಂದ ಕಾಡನ್ನು ರಕ್ಷಣೆಯ ನೆಪದಲ್ಲಿ ಬೀದಿಪಾಲು ಮಾಡಿದ್ದಾರೋ ಅಲ್ಲೆಲ್ಲಾ ಕಾಡು ನಾಶವಾಗಿದೆ. ಅಲ್ಲದೆ ವನ್ಯ ಸಂಪತ್ತು ಅಳಿವಿನಂಚಿಗೆ ಬಂದಿದೆ. ಕುದುರೆಮುಖ ಪರ್ವತ ಶ್ರೇಣಿಗಳಲ್ಲಿ ಕಾಡು ಉಳಿದಿರುವುದಕ್ಕೆ ಈ ಭಾಗದಲ್ಲಿ ವಾಸವಾಗಿರುವ ಗೌಡಾಲು ಗಿರಿಜನರೇ ಕಾರಣ. ಏಕೆಂದರೆ ಇವರು ಕಾನುದೈವ ಎಂದು ಕಾಡನ್ನು ಪೂಜಿಸಿಕೊಂಡು ಬಂದಿರುವುದರಿಂದ ಕಾಡಿಗೆ ದೇವರ ಸ್ಥಾನವನ್ನು ಕೊಟ್ಟಿದ್ದಾರೆ. ಆದರೆ ಇವರು ಬ್ರಿಟಿಷರಂತೆ ಎಸ್ಟೇಟ್‌ಗಳನ್ನು ಮಾಡಿ ಕಾಫಿ ಟೀ ಬೆಳೆದವರಲ್ಲ. ಆದರೆ ಬಂಡವಾಳಶಾಹಿಗಳು ಇಲ್ಲಿಯ ಅರಣ್ಯ ಸಂಪತ್ತನ್ನು ಲೂಟಿ ಮಾಡಿರುವುದಲ್ಲದೆ ಅರಣ್ಯ ಮತ್ತು ಬುಡಕಟ್ಟುಗಳ ನಡುವಿನ ಸಂಬಂಧವನ್ನು ಹಾಳುಮಾಡಿರುವುದು

ಮುಖ್ಯವಾಗಿದೆ. ಬ್ರಿಟಿಷರು ಹಾಗೂ ಈ ದೇಶದ ಬಂಡವಾಳಶಾಹಿಗಳು, ಎಸ್ಟೇಟ್ ಸಂಸ್ಕೃತಿ ಪರಿಚಯಿಸಿ ಲಕ್ಷಾಂತರ ಹೆಕ್ಟೇರ್ ಕಾಡನ್ನು ನಾಶ ಮಾಡಿ ತಮಗೆ ಬೇಕಾದ ಕಾಫಿ, ಟೀ, ಏಲಕ್ಕಿ ಹಾಗೂ ರಬ್ಬರ್ ಬೆಳೆದು ಬೆಲೆ ಬಾಳುವ ಮರಗಳನ್ನು ಕಡಿದು ಸಾಗಿಸಿರುವುದಲ್ಲದೆ ತಮ್ಮ ಮೋಜಿನ ಶಿಕಾರಿಗೆ ಜಾಗವಿಲ್ಲವಾಗುತ್ತದೆ ಎಂದು ಕೆಲ ಅರಣ್ಯ ಪ್ರದೇಶವನ್ನು ಮೀಸಲಾಗಿ ಮಾಡಿಕೊಂಡಿದ್ದಾರೆ.

ಸ್ವಾತಂತ್ರ್ಯಾ ನಂತರ ಬಂದ ಸರ್ಕಾರ ಕೂಡ ಅರಣ್ಯದ ಬಗ್ಗೆ ಬ್ರಿಟಿಷರ ಮನೋಭಾವನೆಯ ಧೋರಣೆಯನ್ನು ಮುಂದುವರಿಸಿದೆ. ಕಾಡು ಕಡಿಯಲೆಂದೇ ಬ್ರಿಟಿಷರು ರಚಿಸಿದ್ದ ಅರಣ್ಯ ಇಲಾಖೆಯನ್ನು ಅದೇ ಉದ್ದೇಶಕ್ಕಾಗಿ ಮುಂದುವರಿಸಿದೆ. ಜೊತೆಗೆ ಅಣೆಕಟ್ಟು, ಗಣಿಗಾರಿಕೆ, ರೈಲ್ವೆ ಸ್ಲೀಪರ್ ಹೀಗೆ ಸಿಕ್ಕ ಸಿಕ್ಕ ಕಾರಣಕ್ಕೆಲ್ಲಾ ಅರಣ್ಯವನ್ನು ಲೂಟಿ ಮಾಡುತ್ತಲೇ ಬರಲಾಗಿದೆ. ಆದ್ದರಿಂದ ಅರಣ್ಯ ನಿವಾಸಿಗಳ ಬದುಕು ದುಸ್ತರವಾದುದನ್ನು ಯಾರೂ ಗಮನಿಸದೆ ಪರಿಸರ ವಿರೋಧಿ ಯೋಜನೆಗಳಿಗಾಗಿ ಲಕ್ಷಾಂತರ ಬುಡಕಟ್ಟುಗಳ ಜನರನ್ನು ಸ್ಥಳಾಂತರ ಮಾಡಿರುವುದರಿಂದ ಗೌಡಾಲು ಬುಡಕಟ್ಟಿನ ಸ್ಥಿತಿಯು ಶೋಚನೀಯವಾಗಿದೆ. ಈ ಹಿನ್ನೆಲೆಯಿಂದ ಚಿಕ್ಕಮಗಳೂರು ಜಿಲ್ಲೆಯ ಕಾಡಿನೊಳಗೆ ಹೋದರೆ ಬ್ರಿಟಿಷರು ಹಾಗೂ ಅವರ ಪ್ರೇರಣೆಯಿಂದ ಸರ್ಕಾರಗಳು ನಡೆಸಿದ ಅರಣ್ಯ ಲೂಟಿಯಿಂದ ಭಾರಿ ಪ್ರಮಾಣದಲ್ಲಿ ಕಾಡು ನಾಶವಾಗಿರುವುದು ಗೊತ್ತಾಗುತ್ತದೆ. ಈ ರೀತಿ ಅರಣ್ಯ ನಾಶವಾಗಿರುವುದು ಭಾರತದಲ್ಲಿ ಅಷ್ಟೇ ಅಲ್ಲದೆ ಪ್ರಪಂಚದ ಯಾವುದೇ ಕಾಡುಗಳ ಪರಿಸ್ಥಿತಿ ಈಗ ಹಾಗಿದೆ. ಇಲ್ಲಿ ಯಾವಾಗ ವಿದೇಶಿಯರಿಗೆ ಕಾಡಿನ ಮಹತ್ವವು ಅರ್ಥವಾಯಿತೋ ಆಗ ಅವರ ಕಣ್ಣಿಗೆ ಬಿದ್ದಿದ್ದೇ ಹೇರಳ ಪ್ರಮಾಣದಲ್ಲಿ ಮಳೆಕಾಡುಗಳನ್ನು ಹೊಂದಿರುವ ಭಾರತ ಮತ್ತು ಇದೇ ರೀತಿಯ ತೃತೀಯ ದೇಶಗಳು. ಅನಂತರ ಅರಣ್ಯ ಉಳಿಸುವ ಲಾಭಿ ಆರಂಭವಾಯಿತು. ಭಾರತದಲ್ಲಿ ಮರ ಕಡಿಯಲು ಪರವಾನಿಗೆ ನೀಡುವ ಕೆಲಸ ಮಾಡಿಕೊಂಡಿದ್ದ ಅರಣ್ಯ ಇಲಾಖೆ ಇದ್ದಕ್ಕಿದ್ದ ಹಾಗೆ ಅರಣ್ಯ ಉಳಿಸುವ ಇಲಾಖೆಯಾಗಿ ಮಾರ್ಪಟ್ಟಿದೆ. ಈ ಪರಿಣಾಮವಾಗಿ ಅರಣ್ಯ ಕಾಯಿದೆಗಳು, ಜಾರಿಗೆ ಬಂದಿವೆ. ಅದರಂತೆ ರಾಷ್ಟ್ರೀಯ ಉದ್ಯಾನ ಮೀಸಲು ಅರಣ್ಯ. ಅಭಯಾರಣ್ಯ, ಜೈವಿಕ ಉದ್ಯಾನ ಹೆಸರುಗಳಲ್ಲಿ ಅರಣ್ಯವನ್ನು ಬುಡಕಟ್ಟು ಸಮುದಾಯಗಳಿಂದ ಕಸಿದುಕೊಂಡು ಅರಣ್ಯದೊಂದಿಗೆ ಬದುಕುವ ಗೌಡಾಲುಗಳಂತಹ ಪರಿಸರ ಪ್ರೇಮಿ ಬುಡಕಟ್ಟುಗಳನ್ನು ಪರಿಸರ ವಿನಾಶಕರೆಂದು ಬೊಟ್ಟು ಮಾಡಿ ತೋರಿಸಿ ಕಾಡಿನೊಂದಿಗೆ ಯಾವುದೇ ಸಮುದಾಯಗಳು ಬದುಕಲು ಸಾಧ್ಯವೇ ಇಲ್ಲವೆಂಬ ಪಾಶ್ಚಿಮಾತ್ಯರ ವಾದವನ್ನು ಜಾರಿಗೆ ತರಲಾಗಿದೆ. ಯಾವಾಗ ಜನರು 'ನಮ್ಮ ಹಾಡಿ' ಎಂದು ಕರೆಯುತ್ತಿದ್ದ ಸ್ಥಳಗಳು ಸರ್ಕಾರಿ ಲೆಕ್ಕದ 'ಫಾರೆಸ್ಟ್'ಗಳಾದವೋ ಅಂದಿನಿಂದ ಸಮುದಾಯಗಳಿಗೆ ಕಾಡಿನ ಮೇಲೆ ಜವಾಬ್ದಾರಿಯೇ ಕಡಿಮೆಯಾಗುತ್ತಿದೆ. ನಮ್ಮ ದೇಶದಲ್ಲಿಯೇ ೪೯ ರಾಷ್ಟ್ರೀಯ ಉದ್ಯಾನ ಹಾಗೂ ಎಂಬತ್ತು ಹೆಚ್ಚು ಅಭಯಾರಣ್ಯಗಳಿಗಾಗಿ ಲಕ್ಷಾಂತರ ಅರಣ್ಯವಾಸಿಗಳಾದ ಬುಡಕಟ್ಟು ಸಮುದಾಯಗಳನ್ನು ಬಲಾತ್ಕಾರವಾಗಿ ಎತ್ತಂಗಡಿ ಮಾಡಲಾಗಿದೆ. ಆದ್ದರಿಂದ ಅನೇಕ ರೀತಿಯ ಸಾಮಾಜಿಕ ಬಿಕ್ಕಟ್ಟುಗಳಿಗೆ ಕಾರಣವಾಗಿದೆ.

''ಜೈವಿಕ ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಇಲ್ಲಿರುವ ಅಂದರೆ ಮಳೆಕಾಡು ಪ್ರದೇಶದ ಜೀವ ವೈವಿಧ್ಯತೆಯು ಅಮೂಲ್ಯವೆಂದು ಮನವರಿಕೆಯಾಗುತ್ತಿದ್ದಂತೆಯೇ ಈ ರಾಷ್ಟ್ರೀಯ ಉದ್ಯಾನ ಅಭಯಾರಣ್ಯಗಳ ಮೇಲಿನ

ಸಾಮ್ರಾಜ್ಯಶಾಹಿಗಳ ಪ್ರೀತಿ ಹೆಚ್ಚುತ್ತಲೇ ಹೋಗಿದೆ. ಅಮೆರಿಕ ಮತ್ತು ಇತರೆ ಸಾಮ್ರಾಜ್ಯಶಾಹಿಗಳ ಸಂಚನ್ನು ನಮ್ಮ ದೇಶದಲ್ಲಿ ಜಾರಿಗೆ ತರಲು ಕೆಲ ವಿದೇಶಿ ಕೃಪಾಪೋಷಿತ ಪರಿಸರ ಮತ್ತು ವನ್ಯಜೀವಿ ಸಂಘಟನೆಗಳಾದ N.G.Oಗಳು ಮತ್ತು ವ್ಯಕ್ತಿಗಳು ಹೊರಟಿದ್ದಾರೆ. ಇವರಿಗೆ ಅಲ್ಲಿಂದ ಹಣದ ಹೊಳೆಯೇ ಹರಿದು ಬರುತ್ತಿರುವುದರಿಂದ N.G.Oಗಳು ಮತ್ತು ವ್ಯಕ್ತಿಗಳು ಸರ್ಕಾರದ ಉನ್ನತಾಧಿಕಾರಿಗಳ ಹಾಗೂ ನ್ಯಾಯಾಂಗದ ಮೇಲೆ ಪ್ರಭಾವ ಬೀರಿ ಸಾಮ್ರಾಜ್ಯಶಾಹಿಗಳ ಅಣತಿಯಂತೆ ಕಾನೂನು ರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ. ೧೯೮೦ರಲ್ಲಿ ಅರಣ್ಯ ಸುರಕ್ಷಣಾ ಕಾಯ್ದೆ ಜಾರಿಗೆ ಬಂದಿದೆ. ಇದರ ಪರಿಣಾಮದಿಂದ ೧೯೮೮ರಲ್ಲಿ ಅರಣ್ಯ ನೀತಿ ರೂಪಿಸಲಾಗಿದೆ. ಇದರ ಉದ್ದೇಶವೇನೆಂದರೆ ಒಂದು ಹೆಕ್ಟೇರ್ ಪ್ರದೇಶದಲ್ಲಿ ೨೫ ಮರ ಅಥವಾ ಗಿಡಗಳಿದ್ದರೆ 'ಅರಣ್ಯ'ವೆಂದು ಬಾಲಿಶವಾಗಿ ವಿಶ್ಲೇಷಿಸಲಾಗಿದೆ. ಸರ್ಕಾರ ೧೯೯೫ರಲ್ಲಿ ಗೋವರ್ಧಮಮ್ ತಿರುಮಲಪಾದ್ ಎಂಬುವವರು ಅರಣ್ಯ ರಕ್ಷಣೆಗೆ ಸುಪ್ರೀಂಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿಯ ಅರ್ಜಿಯನ್ನು ಸಲ್ಲಿಸಿದ್ದರು. ಆದರೆ ಈ ಅರ್ಜಿಯ ವಿಚಾರಣೆ ನಡೆಸಿದ ನ್ಯಾಯಾಲಯವು ತೆಗೆದುಕೊಂಡ ತೀರ್ಮಾನವನ್ನು ಗಮನಿಸಿದರೆ ಅರಣ್ಯ ಪ್ರದೇಶ, ಒತ್ತುವರಿ ಪರಿಗಣಿತ ಅರಣ್ಯದ ವ್ಯವಸ್ಥೆಗೆ ಹೊಸ ವ್ಯಾಖ್ಯಾನ ಬರೆದುದಲ್ಲದೆ ಅರಣ್ಯದಲ್ಲಿ ಅರಣ್ಯೇತರ ಚಟುವಟಿಕೆ ನಿಷೇಧಿಸಿತು. ಇದರ ಪರಿಣಾಮವಾಗಿ ಬುಡಕಟ್ಟು ಸಮುದಾಯಗಳನ್ನು ಸಂಪೂರ್ಣವಾಗಿ ಅರಣ್ಯದಿಂದ ಹೊರ ಹಾಕುವಂತೆ ಸೂಚಿಸಿದ್ದರಿಂದಾಗಿ ಗೌಡಾಲುಗಳಂತ ಬುಡಕಟ್ಟುಗಳಿಗೆ ಈಗಲೂ ಅರಣ್ಯದಲ್ಲಿ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲು ಅಡ್ಡಿಯಾದುದಲ್ಲದೆ ಕಾಡಿನಿಂದ ಹೊರ ಹಾಕುವಂತೆ ಆದುದು ದುರಂತದ ಸಂಗತಿ ಮೊದಲಿನಿಂದ ಕಾಡಿನಲ್ಲಿಯೇ ವಾಸವಾಗುತ್ತಾ ಬಂದಿರುವ ಗೌಡಾಲುಗಳಿಗೆ ಹಾಗೂ ಅವರ ಬದುಕಿಗೆ ಬರಸಿಡಿಲು ಬಡಿದಂತಾಗಿದೆ.

ಕರ್ನಾಟಕದಲ್ಲಿ ೬,೧೨,೫೫೪ ಕುಟುಂಬಗಳು ಸರಿಯಾದ ದಾಖಲೆ ಹೊಂದದೆ ೬,೦೧,೨೪೫ ಹೆಕ್ಟೇರ್ ಅರಣ್ಯ ಪ್ರದೇಶದಲ್ಲಿ ಬದುಕುತ್ತಿವೆ ಎಂದು ಸರ್ಕಾರ ನ್ಯಾಯಾಲಯಕ್ಕೆ ಹೇಳಿಕೆ ನೀಡಿದೆ. ಅಂದರೆ ಇವರೆಲ್ಲ ಅತಿಕ್ರಮಣ ಮಾಡಿದ್ದಾರೆ ಎಂದು ಸರ್ಕಾರ ಪರೋಕ್ಷವಾಗಿ ಹೇಳಿದ್ದನ್ನು ಈಗಲೂ ಗೌಡಾಲುಗಳು ಹೇಳುತ್ತಾರೆ. ಅಲ್ಲದೆ ಈ ರೀತಿಯ ಮಾಹಿತಿಯು ಸರ್ಕಾರದ ಹಳೆಯ ಸಮೀಕ್ಷೆಯಾಗಿದೆ. ಈ ಪರಿಣಾಮವಾಗಿ ಇಲ್ಲಿರುವ ಬುಡಕಟ್ಟುಗಳನ್ನು ಕಾಡಿನಿಂದ ತೆರವುಗೊಳಿಸುವುದಾಗಿ ನ್ಯಾಯಾಲಯಕ್ಕೆ ಸರ್ಕಾರದ ಅಧಿಕಾರಿಗಳು ಮುಚ್ಚಳಿಕೆಯನ್ನು ಬರೆದುಕೊಟ್ಟಿದ್ದಾರೆ. ಹೀಗಾಗಿಯೇ ಚಿಕ್ಕಮಗಳೂರು ಜಿಲ್ಲೆಯ ತತ್ಕೊಳ, ಸಾರಗೋಡುವಿನಲ್ಲಿ ಬಲಾತ್ಕಾರವಾಗಿ ಬುಡಕಟ್ಟುಗಳನ್ನು ಒಕ್ಕಲೆಬ್ಬಿಸಲಾಗಿದೆ. ಅಲ್ಲದೆ ಇವರು ಕಟ್ಟಿಕೊಂಡಿದ್ದ ಮನೆ, ಬೆಳೆದ ಬೆಳೆಗಳನ್ನು ಇವರ ಕಣ್ಣೆದುರೇ ನಾಶ ಮಾಡಿ ಇವರ ಬದುಕನ್ನೇ ನಾಶ ಮಾಡಲಾಗಿದೆ. ಸರ್ಕಾರದ ಮನೋಭಾವನೆಯು ಬುಡಕಟ್ಟುಗಳ ಮೇಲೆ ನಿಷ್ಪಕ್ಷಪಾತವಾಗಿದೆ. ಅಂದರೆ ಅರಣ್ಯ ಅತಿಕ್ರಮಣ ಮಾಡಿದವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆ ನ್ಯಾಯಾಲಯ ಅರಣ್ಯ ಇಲಾಖೆಗೆ ಆದೇಶಿಸಿದೆ ಮತ್ತು ವರದಿಯನ್ನು ತನಗೆ ಸಲ್ಲಿಸುವಂತೆ ಸೂಚಿಸಿದೆ. ತಪ್ಪಿದಲ್ಲಿ ಹೆಕ್ಟೇರ್ ಒಂದಕ್ಕೆ ಸ್ಥಳೀಯ ಅರಣ್ಯ ಪಾಲಕ ನೂರು ರೂ. ದಂಡವನ್ನು ತನ್ನ ಸ್ವಂತ ಹಣದಲ್ಲಿ ಕಟ್ಟಬೇಕು ಎಂದು ಹೇಳಿದೆ ತಪ್ಪಿದಲ್ಲಿ ಒಪ್ಪಿಸಿದ ಕೆಲಸವನ್ನು ಸರಿಯಾಗಿ ನಿಭಾಯಿಸದೇ

ಇದ್ದರೆ ರಾಜ್ಯ ಸರ್ಕಾರ ಈ ತಪ್ಪಿಗೆ ಒಂದು ಹೆಕ್ಟೇರ್‌ಗೆ ಒಂದು ಸಾವಿರ ರೂ, ದಂಡ ಕಟ್ಟಬೇಕಾಗುತ್ತದೆ. ಹೆಚ್ಚು ಕಡಿಮೆ ಕರ್ನಾಟಕ ಸರ್ಕಾರ ನೂರು ಕೋಟಿ ರೂಪಾಯಿಗಳ ದಂಡ ಕಟ್ಟಬೇಕಾದ ಸ್ಥಿತಿಯಲ್ಲಿದೆ. ನ್ಯಾಯಾಲಯದ ಆದೇಶವನ್ನು ಜಾರಿಗೆ ತಂದರೆ ಪಶ್ಚಿಮಘಟ್ಟ ಪ್ರದೇಶದಲ್ಲಿ ಬುಡಕಟ್ಟುಗಳು ವಾಸ ಮಾಡುವಂತಿಲ್ಲ. ರಾಜ್ಯದಲ್ಲಿಯೇ ಅತಿ ಚಿಕ್ಕ ತಾಲೂಕುಗಳಲ್ಲಿ ಒಂದಾದ ಶೃಂಗೇರಿ ತಾಲೂಕು ಒಟ್ಟು ೧,೦೯,೧೨೪ ಎಕರೆ ಹೊಂದಿದೆ. ಇದರಲ್ಲಿ ೫೨೭೯ ಎಕರೆ ಪ್ರದೇಶವನ್ನು ರಾಷ್ಟ್ರೀಯ ಉದ್ಯಾನ ಎಂದು ಘೋಷಿಸಲಾಗಿದೆ. ಉಳಿದ ೫೬,೬೨೫ ಎಕರೆಯಲ್ಲಿ ೨೭,೮೭೯ ಎಕರೆ ಪ್ರದೇಶವನ್ನು ಅರಣ್ಯ ಪ್ರದೇಶ ಎಂದು ಘೋಷಿಸಲಾಗಿದೆ. ಈ ತಾಲೂಕಿನಲ್ಲಿ ೩೫ ಸಾವಿರಕ್ಕಿಂತ ಹೆಚ್ಚು ಜನರಿದ್ದು ಅವರೆಲ್ಲ ಕೊನೆಗುಳಿದ ೨೮,೭೪೬ ಎಕರೆ ಪ್ರದೇಶದಲ್ಲಿಯೇ ಇರಬೇಕಾದ ಸನ್ನಿವೇಶವಿದೆ. ಇಷ್ಟೇ ಜಾಗದಲ್ಲಿ ಜಮೀನಿರಬೇಕು, ಸರ್ಕಾರದ ಕಟ್ಟಡ, ಶಾಲೆ, ರಸ್ತೆಗಳು ನಿರ್ಮಾಣವಾಗಬೇಕು ಎಂಬ ನಿಯಮವಿದೆ. ಆದ್ದರಿಂದ ಸರ್ಕಾರದ ತೀರ್ಮಾನಗಳು ಜನರ ಹಿತವನ್ನು ಕಾಪಾಡುವಂತೆ ಇರದೇ ಇಡೀ ಸಮುದಾಯಗಳ ಬದುಕನ್ನು ನಾಶ ಮಾಡುವಂತೆ ಇರುವುದು ಎಷ್ಟರ ಮಟ್ಟಿಗೆ ಸರಿ ಎಂಬುದನ್ನು ಆಲೋಚಿಸಬೇಕಾಗಿದೆ. ಸರ್ಕಾರದ ಅರಣ್ಯ ಇಲಾಖೆಯ ಆದೇಶ ಬಂದ ಮೇಲೆ ಅರಣ್ಯ ಇಲಾಖೆಯವರಿಗೆ ಹೊಸದಾದ ಅಸ್ತ್ರ ಸಿಕ್ಕಂತಾಗಿದೆ. ಏಕೆಂದರೆ ಇದನ್ನು ಆಧಾರವಾಗಿಟ್ಟುಕೊಂಡು ಅರಣ್ಯ ಪ್ರದೇಶದಲ್ಲಿ ದಾಖಲೆ ಇಲ್ಲದೆ ಕೃಷಿ ಮಾಡುತ್ತಿರುವವರಿಗೆ ಭಾರಿ ದಂಡ ವಿಧಿಸಲಾಗುತ್ತಿದೆ. ಇದಕ್ಕೆ ಸಾಕ್ಷಿಯಾಗಿ ೦.೯೭ ಎಕರೆ ಜಮೀನು ಹೊಂದಿದ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕ್ಕಿನ ಸಂಸ್ಥೆಯ ಗೌಡಾಲು ಅಣ್ಣು ಬಿನ್ ಮುಂಬಯ್ಯಿಗೆ ಒಟ್ಟು ೬,೧೫,೩೧೭ ರೂ. ದಂಡ ವಿಧಿಸಿದ್ದಾರೆ. ಇದೇ ಊರಿನ ೯ ಎಕರೆ ೩೭ ಗುಂಟೆ ಜಮೀನು ಹೊಂದಿದ ಗುರುವ ಬಿನ್ ದೊಂಬಯ್ಯಗೆ ೪೬ ಲಕ್ಷ ದಂಡ ವಿಧಿಸಲಾಗಿದೆ. ಈ ರೀತಿಯಾಗಿ ಭಾರಿ ದಂಡ ಹಾಕಿ ಅರಣ್ಯವಾಸಿಗಳನ್ನು ಒಕ್ಕಲೆಬ್ಬಿಸುತ್ತಿರುವ ಸರ್ಕಾರವಾಗಲಿ ಅಥವಾ ಅಧಿಕಾರಿಗಳಾಗಲಿ ಯಾರಿಗೆ ಬೇಕು ಎಂಬುದು ಗೌಡಾಲುಗಳು ಅಭಿಪ್ರಾಯ ಪಡುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಆರಂಭಿಸಿದವರು ಗಿರಿಜನರು ಎಂಬುದನ್ನು ಸರ್ಕಾರ ಮರೆತಿರುವಂತೆ ಕಾಣುತ್ತಿದೆ. ಪ್ರಭುತ್ವದ ಎಲ್ಲ ದೌರ್ಜನ್ಯಗಳನ್ನು ತೀರಾ ಅಗತ್ಯವೆನ್ನಿಸಿದಾಗ ಪ್ರಶ್ನಿಸಿಕೊಂಡೇ ಬುಡಕಟ್ಟುಗಳು ಬಂದಿರುವುದು ಗಮನಾರ್ಹವಾದ ಸಂಗತಿ. ಏಕೆಂದರೆ ಮಲೆನಾಡು ಭಾಗದ ಬುಡಕಟ್ಟುಗಳಿಗೆ ಹೋರಾಟದ ಇತಿಹಾಸವಿದೆ. ಆದ್ದರಿಂದ ಅಲ್ಲಲ್ಲಿ ಹೋರಾಟ ಉಗ್ರರೂಪ ಪಡೆದಿದೆ. ಒಟ್ಟು ೧೫ ರಾಜ್ಯಗಳಲ್ಲಿ ಮಾವೋವಾದಿಗಳು ಪ್ರಾಬಲ್ಯವನ್ನು ಹೆಚ್ಚಿಸಿಕೊಂಡಿರುವುದು ತಿಳಿಯುತ್ತದೆ. ಈ ಎಲ್ಲ ಹಿನ್ನೆಲೆಯಿಂದ ಸರ್ಕಾರ ಇದ್ದಕ್ಕಿದ್ದ ಹಾಗೆ ತನ್ನ ನಿಲುವಿನಲ್ಲಿ ಬದಲಾವಣೆ ಮಾಡಿಕೊಂಡು ಅರಣ್ಯದಲ್ಲಿ ಬದುಕುತ್ತಿರುವ ಗೌಡಾಲುಗಳಿಗೆ ಅರಣ್ಯದಲ್ಲಿಯೇ ಬದುಕಲು ಅವಕಾಶ ನೀಡ ಹೊರಟಿರುವುದು ಆಶ್ಚರ್ಯಕರ ಬೆಳವಣಿಗೆ ಎನ್ನಿಸಿದರೂ ಇದು ಬುಡಕಟ್ಟುಗಳು ಸತತವಾಗಿ ಹೋರಾಟ ನಡೆಸಿಕೊಂಡು ಬಂದಿರುವುದರ ಫಲವಾಗಿದೆ.”[೧೩]

ಗೌಡಾಲು ಬುಡಕಟ್ಟಿನ ಅಧ್ಯಯನ ದೃಷ್ಟಿಯಿಂದ ಅರಣ್ಯ ಕಾಯಿದೆಯಲ್ಲಿ ಏನಿದೆ ಎಂಬುದನ್ನು ಕುರಿತು ಚರ್ಚಿಸಬೇಕಾಗಿದೆ ೨೦೦೬ರ ಪರಿಶಿಷ್ಟ ಬುಡಕಟ್ಟು ಮತ್ತು ಇನ್ನಿತರ ಪರಂಪರಾಗತ ಅರಣ್ಯ ನಿವಾಸಿಗಳ

ಕಾಯ್ದೆಯಲ್ಲಿ ೨೦೦೫ ಡಿಸೆಂಬರ್ ೧೩ಕ್ಕಿಂತ ಮುಂಚಿತವಾಗಿ ಅರಣ್ಯದೊಳಗೆ ಬದುಕುತ್ತಿರುವ ಗಿರಿಜನರಿಗೆ ಮತ್ತು ಮೂರು ತಲೆಮಾರಿನಿಂದ ಬದುಕುತ್ತಿರುವ ಸಾಂಪ್ರದಾಯಿಕ ಅರಣ್ಯವಾಸಿಗಳಿಗೆ ಇಲ್ಲಿಯೇ ಬದುಕಲು ಅವಕಾಶ ಕಲ್ಪಿಸಬೇಕು ಎಂದಿದೆ. ಇವರ ನಾಲ್ಕು ಹೆಕ್ಟೇರಿನಷ್ಟು (೧೦ ಎಕರೆ) ಜಮೀನನ್ನು ಅಧಿಕೃತಗೊಳಿಸಬಹುದು. ಪರಿಗಣಿತ ಅರಣ್ಯಗಳಾದ ರಾಷ್ಟ್ರೀಯ ಉದ್ಯಾನ, ಅಭಯಾರಣ್ಯ, ರಕ್ಷಿತಾರಣ್ಯ ಮತ್ತು ಎಲ್ಲ ರೀತಿಯ ಅರಣ್ಯಗಳಲ್ಲಿ ಜನ ವಾಸಿಸಬಹುದು ಎಂದಿದೆ. ಈ ಅರಣ್ಯದಲ್ಲಿ ಬದುಕುವ ಜನರ ಮೂಲಭೂತ ಅವಶ್ಯಕತೆಯಾದ ರಸ್ತೆ, ನೀರು, ಶಾಲೆ, ಕಿರು ನೀರಾವರಿ, ನ್ಯಾಯಬೆಲೆ ಅಂಗಡಿ, ಮಳೆ ನೀರು ಕೊಯ್ಲು ಚಾನಲ್, ವಿದ್ಯುತ್, ಆಸ್ಪತ್ರೆಗಳಿಗೆ ಅಂದರೆ ಸಾರ್ವಜನಿಕ ಉದ್ದೇಶಗಳಿಗೆ ಎರಡೂವರೆ ಹೆಕ್ಟೇರ್ ಅರಣ್ಯವನ್ನು ಬಳಸಬಹುದು. ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಬಹುದು. ಆದರೆ ಅರಣ್ಯ ನಾಶ, ಹೆಂಡ ಇಳಿಸುವುದು, ಬೇಟೆಯಾಡುವುದು ಮಾಡುವಂತಿಲ್ಲ. ಪರಿಸರದೊಂದಿಗೆ ಸಹಬಾಳ್ವೆ ನಡೆಸಲು ಎಲ್ಲ ಹಕ್ಕುಗಳನ್ನು ನೀಡಲಾಗಿದೆ. ಈ ಎಲ್ಲ ಹಕ್ಕುಗಳ ಉಸ್ತುವಾರಿ ಜವಾಬ್ದಾರಿಯನ್ನು ಗ್ರಾಮ ಸಮಿತಿಯ ಸ್ವಾಯತ್ತತೆಗೆ ನೀಡಲಾಗಿದೆ. ಇದರ ಉಸ್ತುವಾರಿಗೆ ತಾಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದ ಸಮಿತಿಗಳಿರುತ್ತವೆ. ಈ ಸಮಿತಿಗಳಲ್ಲಿ ಅರಣ್ಯ ಇಲಾಖೆ, ಕಂದಾಯ ಇಲಾಖೆ, ಗಿರಿಜನ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳು, ಜನಪ್ರತಿನಿಧಿಗಳು ಇರುತ್ತಾರೆ ಎಂದಿದೆ. ಇದು ನಿಜವಾದರೂ ಈ ಅಧಿಕಾರವನ್ನು ಬಲಗೈಯಲ್ಲಿ ಕೊಟ್ಟು, ಎಡಗೈಯಲ್ಲಿ ಕಸಿದುಕೊಂಡಿದೆ. ಅಂದರೆ ಮೇಲ್ನೋಟಕ್ಕೆ ಈ ಕಾಯಿದೆ ಜನಪರವಾಗಿದೆ, ಪರಿಸರ ಪೂರಕವಾಗಿದೆ. ಅರಣ್ಯದಲ್ಲಿ ಜೀವಸಂಕುಲಕ್ಕೆ ಸೇರಿದ ಮನುಷ್ಯ ಜೀವಿ ಇರಲೇಬಾರದು ಎಂದು ವಾದಿಸುವ ವಿದೇಶಿ ಪರಿಣತ ಪರಿಸರವಾದಿಗಳ ವಾದವನ್ನು ಈ ಕಾಯ್ದೆಯು ಧಿಕ್ಕರಿಸಿದೆಯಾದರೂ ಕೊನೆಗೆ ತನ್ನ ಜುಟ್ಟನ್ನು ಅವರ ಕೈಗೇ ನೀಡಿರುವುದು ಇಲ್ಲಿ ಮುಖ್ಯವಾಗಿದೆ.

ಈ ವಿನಾಶದ ಅಂಚಿನಲ್ಲಿರುವ ಅಪರೂಪದ ಜೀವಿಗಳ ಸಂರಕ್ಷಣೆಯನ್ನು ಮಾಡಲಾಗದೆ. ಅನಾಹುತವಾಗುವ ಸಂದರ್ಭದಲ್ಲಿ ಬುಡಕಟ್ಟುಗಳನ್ನು ಪುನರ್ ವಸತಿಗೊಳಿಸಬಹುದಾಗಿದೆ. ವನ್ಯ ಜೀವಿಗಳ ಸಂರಕ್ಷಣೆಯ ದೃಷ್ಟಿಯಿಂದ ಈ ಕಾಯ್ದೆಯನ್ನು ಪುನರ್ ವ್ಯಾಖ್ಯಾನಗೊಳಿಸಬಹುದು ಹಾಗೂ ಪುನಾ ರಚಿಸಬಹುದು ಎಂದು ಕಾಯ್ದೆಯಲ್ಲಿ ಹೇಳಲಾಗಿದೆ. ಆದ್ದರಿಂದ ಇದನ್ನು ಬಳಸಿಕೊಂಡು ಅಧಿಕಾರಿಗಳು, ಬಂಡವಾಳಶಾಹಿಗಳು ಬುಡಕಟ್ಟುಗಳ ಮೇಲೆ ಗೂಬೆ ಕೂರಿಸಿ ಇವರನ್ನು ಒಕ್ಕಲೆಬ್ಬಿಸುವ ತಂತ್ರ ರೂಪಿಸದೇ ಇರುತ್ತಾರೆಯೇ! ಕುದುರೆಮುಖ ಪರ್ವತ ಶ್ರೇಣಿಗಳಲ್ಲಿ 'ಸಿಂಗಳೀಕ' ಎಂಬ ಒಂದು ಜಾತಿಯ ಮಂಗಗಳಿವೆ. ಇವುಗಳನ್ನು ಗಿರಿಜನರು ಎಂದೂ ತಿಂದವರಲ್ಲ. ಆದರೆ ಈ ಮಂಗ ಅಪರೂಪದ ಜಾತಿಯವು. ಇವು ವಿನಾಶದಂಚಿಗೆ ಬಂದಿವೆ. ಆದ್ದರಿಂದ ಕುದುರೆಮುಖ ರಾಷ್ಟ್ರೀಯ ಉದ್ಯಾನವಾಗಲೇಬೇಕು ಎಂದು ವಿದೇಶಿ ದುಡ್ಡು ತಿನ್ನುವವರು ವಾದಿಸುತ್ತಿರುವುದು ಎಷ್ಟರ ಮಟ್ಟಿಗೆ ಸರಿ. ಈ ಜಾತಿಯ ಮಂಗಗಳನ್ನು ಬೇಟೆಯಾಡುವ, ತಿನ್ನುವ ಸಂಪ್ರದಾಯವೇ ಈ ಭಾಗದ ಗಿರಿಜನರಲ್ಲಿ ಇಲ್ಲ ಎಂಬ ಸಾಮಾನ್ಯ ಜ್ಞಾನವೂ ಅವರಿಗಿಲ್ಲ. ಇದೆಲ್ಲ ಅವರಿಗೆ ಬೇಕಾಗಿಲ್ಲ. ಆದರೆ ಬಂಡವಾಳಶಾಹಿಗಳಿಗೆ ಪ್ರಭುತ್ವಕ್ಕೆ ಬೇಕಾಗಿರುವುದು ಅರಣ್ಯ ಉಳಿಸುವ ನೆಪದಲ್ಲಿ ಕೋಟ್ಯಂತರ ರೂಪಾಯಿಗಳನ್ನು ವಿದೇಶದಿಂದ ನೆರವು ಪಡೆಯುವುದು ಅಷ್ಟೇ ಆಗಿದೆ. ಚಿಕ್ಕಮಗಳೂರು ಜಿಲ್ಲೆಗೆ ಟೈಗರ್ ಪ್ರಾಜೆಕ್ಟನ್ನು ಜಾರಿಗೆ

ತರುವ ಯತ್ನ ನಡೆದಿದೆ. ಇದೊಂದು ವಿದೇಶಿ ಹಣ ತಿನ್ನುವ ಸಂಸ್ಥೆಗಳ ಮೋಸದ ಜಾಲ. ಹುಲಿಗಳು ಎಲ್ಲಿ ಬದುಕುತ್ತಿವೆ, ಹೇಗೆ ಬದುಕುತ್ತಿವೆ ಎಂಬ ಸರಿಯಾದ ಜ್ಞಾನವಿಲ್ಲದ ಅಧಿಕಾರಿಗಳು ವಿರಳವಾಗಿ ಹುಲಿಗಳಿರುವ ಕುದುರೆಮುಖ ಪರ್ವತ ಶ್ರೇಣಿಗಳಲ್ಲಿ ಹುಲಿಗಳನ್ನು ಪ್ರಾಣಿ ಸಂಗ್ರಹಾಲಯದಲ್ಲಿ ಸಾಕಿದಂತೆ ಸಾಕಲು ಹೊರಟಿದ್ದಾರೆ. ಇದಕ್ಕಾಗಿ ಕಾಡಿನ ಮಧ್ಯದಲ್ಲಿ ಕಾಡು ಕಾಯುತ್ತಾ ಬದುಕುತ್ತಿರುವ ಬುಡಕಟ್ಟುಗಳನ್ನು ಊರು ಸೇರಿಸಿ ಗೌಡಾಲಿನಂತಹ ಸಮುದಾಯಗಳ ಬದುಕನ್ನು ನಾಶಮಾಡ ಹೊರಟಿದ್ದಾರೆ.

ಕುದುರೆಮುಖ ಪರ್ವತ ಶ್ರೇಣಿಗಳಲ್ಲಿರುವ ಗಿರಿಜನರನ್ನು ಈ ಹುಲಿ ಸಾಕುವವರು ಬದುಕಲು ಬಿಟ್ಟಾರೆಯೇ ಎಂಬುದು ಆಲೋಚಿಸಬೇಕಾದ ಸಂಗತಿಯಾಗಿದೆ. ಗೌಡಾಲುಗಳಂತ ಗಿರಿಜನರಿಗೆ ಈ ಕಾಯ್ದೆಯಿಂದ ಯಾವ ಪ್ರಯೋಜನವು ಆಗುವಂತೆ ಕಾಣುತ್ತಿಲ್ಲ. ಇವರ ಸಮಸ್ಯೆಗಳಿಗೆ ಈ ಕಾಯ್ದೆ ನಿರುತ್ತರವಾಗಿದೆ. ಈ ಭಾಗದಲ್ಲಿರುವ ಪ್ರಾಣಿ ಅಪರೂಪದ್ದೇ, ಇದಕ್ಕೆ ಜನರಿಂದ ಯಾವ ರೀತಿಯೆಲ್ಲ ತೊಂದರೆಯಾಗಿದೆ, ಅದನ್ನು ಉಳಿಸಲು ಏನು ಮಾಡಬೇಕು ಬಗ್ಗೆ ತೀರ್ಮಾನ ತೆಗೆದುಕೊಳ್ಳುವವರು ಯಾರು ಎಂಬುದನ್ನು ಕಾಯ್ದೆ ಸ್ಪಷ್ಟಪಡಿಸಿಲ್ಲ. ಈ ನಿರ್ಧಾರ ತೆಗೆದುಕೊಳ್ಳುವ ಹಕ್ಕನ್ನು ಗ್ರಾಮಸಮಿತಿಗೆ ನೀಡಬೇಕಿತ್ತು. ಆದರೆ ಈ ಬಗ್ಗೆ ಉಲ್ಲೇಖವಿಲ್ಲದೆ ಅರಣ್ಯ ಇಲಾಖೆಗೆ ಹೆಚ್ಚಿನ ಅಧಿಕಾರ ದೊರೆತಂತಾಗಿದೆ. ಆದ್ದರಿಂದ ವನ್ಯಜೀವಿ ಸಂರಕ್ಷಣಾ ಕಾಯ್ದೆಯನ್ನು ಮುಂದಿಟ್ಟುಕೊಂಡು ಕಿರುಕುಳ ನೀಡಲು ಅವಕಾಶವಿದೆ. ಪರಿಣಾಮವಾಗಿ ಅರಣ್ಯದೊಳಗೆ ಬದುಕುವ ಬುಡಕಟ್ಟುಗಳು ಮತ್ತು ಸಾಂಪ್ರದಾಯಿಕ ಅರಣ್ಯ ನಿವಾಸಿಗಳು ಸಾಮಾನು ಉತ್ಪನ್ನಗಳನ್ನು ಸೈಕಲ್, ಕೈಗಾಡಿ ಮತ್ತು ತಲೆಹೊರೆಯ ಮೂಲಕ ಮಾತ್ರ ಸಾಗಿಸಬೇಕೆಂದು ಈ ಕಾಯ್ದೆ ನಿರ್ಬಂಧ ಹೇರಿದೆ. ಆದರೆ ಅರಣ್ಯ ಇಲಾಖೆಯ ಜೀಪು, ನಕ್ಸಲರ ಬೇಟೆಗೆ ಬರುವ ಪೊಲೀಸರ ವಾಹನಗಳು ಓಡಾಡಬಹುದು. ಬುಡಕಟ್ಟುಗಳು ಮಾತ್ರ ಮಾನವ ಶ್ರಮದಿಂದಲೇ ಸಾಮಾನುಗಳನ್ನು ಸಾಗಿಸಬೇಕು ಎಂದು ಹೇಳುವ ಸರ್ಕಾರ ಮತ್ತು ಅಧಿಕಾರಿಗಳು ಸೇರಿ ಜಾರಿಗೆ ತರುವ ಕಾನೂನುಗಳು ನಮಗೆ ಬೇಕೆ ಎಂದು ಗೌಡಾಲುಗಳು ಪ್ರಶ್ನೆ ಹಾಕುತ್ತಾರೆ. ಆದ್ದರಿಂದ ಗೌಡಾಲುಗಳ ಬದುಕು ಈ ಕಾಯ್ದೆಯ ಗಾಳಿಗೆ ಸಿಕ್ಕು ಅಲೆಮಾರಿಯಾಗಿ ಜೀವಿಸುವಂತಾಗಿದೆ.

ಚಿಕ್ಕಮಗಳೂರು ಜಿಲ್ಲೆಯ ಕಾಡಿನ ಸೂಕ್ಷ್ಮ ಪ್ರದೇಶದಲ್ಲಿ 'ಇಕೋ ಟೂರಿಸಂ' ಹೆಸರಿನಲ್ಲಿ ಪ್ರವಾಸಿಗರ ಅದರಲ್ಲೂ ವಿದೇಶಿ ಪ್ರವಾಸಿಗರ ಮೋಜಿಗೆ ಅವಕಾಶ ಮಾಡಿಕೊಟ್ಟಿದ್ದಾರೆ. ಸಂಶೋಧನೆಯ ಹೆಸರಿನಲ್ಲಿ ಜೀವ ಸಂಪನ್ಮೂಲವನ್ನು ಲೂಟಿ ಮಾಡುವವರಿಗೆ ಅರಣ್ಯದಲ್ಲಿಯೇ ಎಲ್ಲ ರೀತಿಯ ಸೌಕರ್ಯ ಒದಗಿಸಲಾಗುತ್ತಿದೆ. ಆದರೆ ಕಾಡನ್ನು ನಂಬಿಯೇ ಬದುಕುತ್ತಿರುವವರು ಸಾಗಾಣಿಕೆ ವಾಹನ ಬಳಸಿದರೆ ಕಾಡು ನಾಶವಾಗುವುದೂ ಇಲ್ಲ. ವನ್ಯಜೀವಿಗಳು ಅಳಿಯುವುದೂ ಇಲ್ಲ ಎಂಬುದು ಈ ಕಾಯ್ದೆ ರೂಪಿಸಿದವರ ತಲೆಗೆ ಹೋದಂತಿಲ್ಲ. ಈ ಕಾಯ್ದೆಯಲ್ಲಿರುವ ಮತ್ತೊಂದು ದೊಡ್ಡ ದೋಷವೆಂದರೆ, ಗಿರಿಜನರು, ಸಣ್ಣ ರೈತರು ಮೂರು ತಲೆಮಾರುಗಳಿಂದ ಅರಣ್ಯ ಪ್ರದೇಶದಲ್ಲಿ ಬದುಕುತ್ತಿದ್ದರೆ ಮಾತ್ರ ಅವರಿಗೆ ಭೂಮಿ ಅನುಭವಿಸುವ ಹಕ್ಕಿದೆ ಎಂದು ಸ್ಪಷ್ಟವಾಗಿ ಹೇಳಿರುವುದು. ಹೆಚ್ಚಿನ ಜನ ಅರಣ್ಯ ಪ್ರದೇಶದಲ್ಲಿ ಬದುಕುತ್ತಿದ್ದಾರೆಯಾದರೂ ಒಂದೇ ಜಾಗದಲ್ಲಿ ಬದುಕುತ್ತಿಲ್ಲವಾದ್ದರಿಂದ ಈ ಕಾಯ್ದೆಯಿಂದ ಅರಣ್ಯವಾಸಿಗಳ ಸಮಸ್ಯೆಗಳನ್ನು ಸರ್ಕಾರ ಸಮಗ್ರವಾಗಿ

ನೋಡಿಲ್ಲ ಎಂಬುದನ್ನು ಎತ್ತಿತೋರಿಸಿದೆ. ಇಂದು ಪ್ರಪಂಚ ಪರಿಸರ ಬಿಕ್ಕಟ್ಟನ್ನು ಎದುರಿಸುತ್ತಿದೆ. ಭೂ ತಾಪಮಾನ ಹೆಚ್ಚುತ್ತಿರುವುದರಿಂದ ಅರಣ್ಯ ಉಳಿಸಲೇಬೇಕಾದ ಅನಿವಾರ್ಯತೆ ಬಂದೊದಗಿದೆ. ಆದರೆ ಅಮೆರಿಕ ಮತ್ತು ಇತರ ಸಾಮ್ರಾಜ್ಯಶಾಹಿ ದೇಶಗಳು ಹೇಳುತ್ತಿರುವಂತೆ ಪಶ್ಚಿಮ ಘಟ್ಟದಲ್ಲಿ ಮತ್ತೆಲ್ಲೋ ಫ್ರಿಜ್‌ನಲ್ಲಿ ಇಟ್ಟಂತೆ ಒಂದಿಷ್ಟು ಕಾಡು ಉಳಿದರೆ ಸಾಲದು. ಭೂಮಿಯ ಉದ್ದಗಲದಲ್ಲೂ ಕಾಡು ಇರಬೇಕು. ಅದರೊಂದಿಗೆ ಬೆರೆತು ಬದುಕುವ ಸಂಸ್ಕೃತಿ ನಮ್ಮದಾಗಬೇಕು. ಆ ನಿಟ್ಟಿನಲ್ಲಿ ಜನಪರವಾದ ಪರಿಸರ ಆಂದೋಲನವನ್ನು ನಾವು ಕಟ್ಟಬೇಕಾಗಿರುವುದು ಇಂದು ಅನಿವಾರ್ಯವಾಗಿದೆ ಎನ್ನುವುದು ಸಾರ್ವತ್ರೀಕರಿಸಬೇಕಾಗಿದೆ.

**೨.೭. ಪ್ರಸ್ತುತ ಕೂಲಿ ಕಾರ್ಮಿಕರಾಗಿ**

ಭಾರತೀಯ ಸಂಸ್ಕೃತಿ ಹಲವು ಶತಮಾನಗಳ ಐತಿಹಾಸಿಕ ಹಾಗೂ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿನ ಸಂಘರ್ಷಗಳ ಫಲವಾಗಿದೆ. ಈ ಹಿನ್ನೆಲೆಯಲ್ಲಿ ಆರ್ಥಿಕ, ಸಾಮಾಜಿಕ ಬದಲಾವಣೆಗಳು ಮತ್ತು ರಾಜಕೀಯದ ಘರ್ಷಣೆಗಳಿಂದ ಒಂದು ರೀತಿಯ ವೈಶಿಷ್ಟ್ಯಪೂರ್ಣವಾದ ಸಂಸ್ಕೃತಿ ರೂಪಗೊಂಡ ಭಾರತದಲ್ಲಿ ಹಲವಾರು ಲಕ್ಷಣಗಳಿಂದ ಕೂಡಿದ ಗೌಡಾಲು ಸಮುದಾಯ ತನ್ನದೇ ಆದ ಬದುಕಿನ ದಾರಿಯಲ್ಲಿ ನೆಲೆ ನಿಂತಿದೆ. ಆದ್ದರಿಂದ ಭಾರತದಲ್ಲಿರುವ ಜನಜೀವನ ಮತ್ತು ನಿಸರ್ಗದ ನಡುವೆ ಕಂಡುಬರುವ ಹೊಂದಾಣಿಕೆ ಅಪೂರ್ವವಾದುದಾಗಿದೆ. ಬುಡಕಟ್ಟುಗಳು ಪ್ರಾಣಿ, ಪಕ್ಷಿ, ಮರ, ಬೆಟ್ಟ, ಪರ್ವತ, ನದಿ, ಸಾಗರ, ನಿಸರ್ಗದ ಯಾವುದೇ ವಸ್ತುಗಳಲ್ಲಿಯೂ ಬದುಕನ್ನು ಕಾಣುವ ಏಕತೆಯ ಸಂಕೇತವಾದ ಜೀವನ ಪದ್ಧತಿಯನ್ನು ರೂಪಿಸಿಕೊಂಡವರಾಗಿದ್ದಾರೆ. ಚಿಕ್ಕಮಗಳೂರು ಜಿಲ್ಲೆಯು ದಟ್ಟವಾದ ಕಾಡಿನಿಂದ ಕೂಡಿರುವುದರಿಂದ ಇಲ್ಲಿ ನಡೆಯುವ ಅನ್ಯಾಯ, ಅಸಮಾನತೆ, ಊಳಿಗಮಾನ್ಯ ಪದ್ಧತಿಗಳು ಪೇಟೆಯಲ್ಲಿ ವಾಸ ಮಾಡುವವರಿಗೆ ಅಷ್ಟಾಗಿ ತಿಳಿಯುವುದಿಲ್ಲ. ಆದರೆ ಕಾಡುಮೇಡಿನ ನಡುವೆ ದೂರದೂರದಲ್ಲಿ ಇರುವ ಒಂಟಿ ಮನೆಗಳು ಮಲೆನಾಡಿನ ಕಣಿವೆಯ ತಗ್ಗು ಪ್ರದೇಶಗಳಲ್ಲಿ ಬೆರಳೆಣಿಕೆಯಷ್ಟಿವೆ. ಈ ಮನೆಗಳಿಗೆ ಒಂದೊಂದಕ್ಕೂ ಒಂದೊಂದು ಹೆಸರು ಇದೆ. ವರ್ಷದ ಬಹುತೇಕ ಸಮಯ ಜಿಟಿಜಿಟಿ ಮಳೆ, ಕಾಲುಕಾಲಿಗೆ ತೊಡರುವ ಜಿಗಣೆ, ರಸ್ತೆಯಿಲ್ಲ, ಬರೀ ಕಾಲು ದಾರಿ, ರಸ್ತೆ ಮಾಡಲು ಅರಣ್ಯ ಕಾಯ್ದೆಯ ಅಡ್ಡಿ ಏನಿದ್ದರೂ ಕಷ್ಟಗಳಲ್ಲಿಯೇ ಜೀವನವನ್ನು ಮಾಡುತ್ತಿರುವ ಗೌಡಾಲು ಭೂಮಾಲೀಕರ ತೋಟ, ಗದ್ದೆಗಳ ಆಶ್ರಯದಿಂದ ಬದುಕನ್ನು ಕಾಣುವಂತಾಗಿದೆ. ಆದರೆ ಈ ದೇಶದ ಬಂಡವಾಳಶಾಹಿಗಳು, ಭೂಮಾಲೀಕರು ಪ್ರಜಾಪ್ರಭುತ್ವದ ಅರಿವನ್ನು ತಿಳಿಯದೆ ಪ್ರಜಾಪ್ರಭುತ್ವದ ಬೇರುಗಳನ್ನು ಸಡಿಲಗೊಳಿಸುತ್ತಿರುವುದಲ್ಲದೆ, ದಮನಿತ ಧ್ವನಿಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುವುದು ದುರಂತವೇ ಸರಿ. ಆದ್ದರಿಂದ ಕಾಡಿನ ಪರಿಸರದಲ್ಲಿ ಯಾವುದೇ ಪ್ರಾಥಮಿಕ ಸೌಲಭ್ಯಗಳಿಲ್ಲದೆ ಪರರ ಹಿತಕ್ಕಾಗಿ ದಿನವಿಡೀ ಬೇರೊಬ್ಬರ ಹೊಲ ಗದ್ದೆಗಳಲ್ಲಿ ದುಡಿಯುವ ಗೌಡಾಲುಗಳು ಅನೇಕ ಸಮಸ್ಯೆಗಳಿಂದ ಬಳಲುತ್ತಿದ್ದಾರೆ.

ಗೌಡಾಲು ಸಮುದಾಯಕ್ಕೆ ಸರ್ಕಾರದಿಂದ ಯಾವುದೇ ಸೌಲಭ್ಯಗಳು ಸರಿಯಾಗಿ ತಲುಪದೇ ಇರುವುದರಿಂದ ಇವರು ಮಾಡುವ ತುಂಡು ತುಂಡು ಭೂಮಿಗೆ ಸರ್ಕಾರ ಪರವಾನಿಗಿ ನೀಡದೆ, ಈಗಲೂ ಇನ್ನೊಬ್ಬರ ಕೆಲಸ ಅಂದರೆ ಬಿಟ್ಟಿ ಕೆಲಸಕ್ಕೆ ಎಡೆ ಮಾಡಿಕೊಟ್ಟಿರುವುದರಿಂದ ನಮ್ಮ ಸಮಾಜ ಹಿಂದಿನ ಊಳಿಗಮಾನ್ಯ ಜೀವನ

ಪದ್ಧತಿಗೆ ಮತ್ತೆ ಜಾರಿಕೊಳ್ಳುವ ಸ್ಥಿತಿ ಸ್ಪಷ್ಟವಾಗಿ ಗೋಚರವಾಗುತ್ತಿದೆ. ಅಲ್ಲದೆ ರಾಷ್ಟ್ರದ ಮತ್ತು ರಾಜ್ಯದ ಸವಲತ್ತುಗಳನ್ನು ಕ್ರಮಕ್ರಮವಾಗಿ ಅಪ್ರಸ್ತುತ ಮಾಡುವ ಮೂಲಕ ದುರ್ಬಲ ವರ್ಗಗಳ ಬದುಕನ್ನು ಮತ್ತಷ್ಟು ಘೋರ ಕಷ್ಟಕ್ಕೆ ಈಡುಮಾಡುವ ಹುನ್ನಾರ ಕಂಡುಬರುತ್ತದೆ. ಹಾಗಾಗಿ ಗೌಡಾಲುಗಳು ಚಿಕ್ಕಮಗಳೂರು ಜಿಲ್ಲೆಯಲ್ಲಿ ಆರ್ಥಿಕ ಸಂಕಷ್ಟದಲ್ಲಿದ್ದಾರೆ. ಒಂದು ಕಾಲದಲ್ಲಿ ಯಾವುದೇ ಭಯವಿಲ್ಲದೆ ಕಾಡಿನಲ್ಲಿ ಸ್ವತಂತ್ರವಾಗಿ ಓಡಾಡುತ್ತ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿಕೊಂಡು ಬದುಕುತ್ತಿದ್ದವರಿಗೆ ಅರಣ್ಯ ಕಾಯ್ದೆ, ಸರ್ಕಾರದ ಯೋಜನೆಗಳು ಹಾಗೂ ಸಾಮ್ರಾಜ್ಯಶಾಹಿಯ ಧೋರಣೆಗಳ ಪರಿಣಾಮವಾಗಿ ತಮ್ಮದಾಗಿದ್ದ ಅರಣ್ಯದಲ್ಲಿ ಬದುಕಲು ಭೂಮಾಲೀಕರು ಮಾಡಿದ ನಿಯಮಗಳಿಗೆ ಅನುಗುಣವಾದ ದುಡಿಮೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಆದರೆ ಪ್ರಭುತ್ವವು ಜನಸಾಮಾನ್ಯರ ದುಃಖಗಳನ್ನು ಅರ್ಥ ಮಾಡಿಕೊಳ್ಳದೆ ತಮ್ಮ ಮನಸ್ಸಿಗೆ ಬಂದಂತೆ ಇಂದಿನ ದಿನಮಾನಗಳಲ್ಲಿ ಅದು ಕಾಡಿನ ಸಂಸ್ಕೃತಿಯಲ್ಲಿ ಬದುಕನ್ನು ಕಂಡುಕೊಂಡವರ ಮೇಲೆ ಯಾವುದೇ ಮುಲಾಜು ನೋಡದೆ ಹಲವಾರು ನಿಯಮಗಳನ್ನು ಬಲವಂತವಾಗಿ ಅಮಾಯಕ ಗೌಡಾಲುಗಳ ಮೇಲೆ ಹೇರಿ ದಿನವಿಡೀ ದುಡಿಸಿಕೊಳ್ಳುತ್ತಿದ್ದಾರೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಎಸ್ಟೇಟ್ ಸಂಸ್ಕೃತಿಯು ಇದೆ. ಎಸ್ಟೇಟಿನ ಮಾಲೀಕರು ದೊಡ್ಡ ದೊಡ್ಡ ಪೇಟೆಗಳಲ್ಲಿ ತಮ್ಮ ವಾಸದ ನೆಲೆಯನ್ನು ಮಾಡಿಕೊಂಡಿದ್ದಾರೆ. ಇವರು ತಮ್ಮ ವಿದೇಶಗಳಲ್ಲಿ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಿ ಇವರ ಎಸ್ಟೇಟ್‌ಗಳಲ್ಲಿ ಗೌಡಾಲು ಸಮುದಾಯದವರಿಂದ ದಿನಗೂಲಿ ದುಡಿಸಿಕೊಳ್ಳುವುದಲ್ಲದೆ ಎಸ್ಟೇಟನ್ನು ನೋಡಿಕೊಳ್ಳುವುದಕ್ಕೆ ಕೂಲಿಯ ಆಳುಗಳಾಗಿ ಮಾಡಿಕೊಂಡಿದ್ದಾರೆ. ಈ ಪರಿಣಾಮದಿಂದ ಈ ಬುಡಕಟ್ಟು ಸಮುದಾಯ ಕಾಫಿ, ಟೀ, ಅಡಿಕೆ, ಬಾಳೆ ತೋಟಗಳಲ್ಲಿ ಮಳೆ, ಚಳಿ ಎನ್ನದೇ ದಿನದ ಕೂಲಿಯನ್ನು ಮಾಡಿ ಅವರು ಕೊಟ್ಟ ಹಣದಿಂದ ತಮ್ಮ ಬದುಕಿನ ಬವಣೆಯನ್ನು ನೀಗಿಸಿಕೊಳ್ಳುತ್ತಿದ್ದಾರೆ. ಕಳಸದಲ್ಲಿ ಗೌಡಾಲು ತಿಳುವಳಿಕೆದಾರರು ಕೊಟ್ಟ ಮಾಹಿತಿಯ ಪ್ರಕಾರ ಮೊದಲು ದಿನಗೂಲಿ ಪುರುಷರಿಗೆ ೩೦ ರಿಂದ ೬೦ ರೂಪಾಯಿಗಳು ಇತ್ತು. ಸ್ತ್ರೀಯರಿಗೆ ೧೩ರಿಂದ ೩೦ ರೂಪಾಯಿಗಳು ಕೊಡುತ್ತಿದ್ದರು. ಆದರೆ ಗೌಡಾಲು ಹಂತ ಹಂತವಾಗಿ ಆದಿವಾಸಿ ಹಿತರಕ್ಷಣ ಸಮಿತಿಯಂತಹ ಸಂಘಗಳನ್ನು ಎಲ್ಲ ತಾಲೂಕುಗಳಲ್ಲಿ ಮಾಡಿಕೊಂಡು ತಮಗೆ ಆಗುವ ತೊಂದರೆಗಳನ್ನು ಮುಂದೆ ಇಟ್ಟುಕೊಂಡು ಪ್ರತಿಭಟನೆ ಮಾಡುತ್ತಾ ಬಂದಿದ್ದಾರೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ನಕ್ಸಲ್ ಹೋರಾಟವು ತಮ್ಮ ಹೋರಾಟದ ಸ್ಥಳವನ್ನು ಗುರುತಿಸಿಕೊಂಡು ಸಾಮಾಜಿಕ ನ್ಯಾಯದ ಬಗ್ಗೆ ಸರ್ಕಾರಕ್ಕೆ ಮನವರಿಕೆ ಮಾಡಿರುವುದರಿಂದ ಪುರುಷರಿಗೆ ೧೦೦ ರೂಪಾಯಿ ಸ್ತ್ರೀಯರಿಗೆ ೮೫ ರೂಪಾಯಿಗಳನ್ನು ಕೊಡುತ್ತಿದ್ದಾರೆ ಎಂದು ಅವರ ಬದುಕಿನ ಚಿತ್ರಣವನ್ನು ಮುಂದಿಟ್ಟರು. ಇದರಿಂದ ಪಶ್ಚಿಮಘಟ್ಟಗಳ ಕಂದರಗಳಲ್ಲಿ ಬದುಕನ್ನು ಮಾಡಿಕೊಂಡು ಬಂದಿರುವ ಬುಡಕಟ್ಟುಗಳು ತಮ್ಮ ದಿನನಿತ್ಯದಲ್ಲಿ ಏನೆಲ್ಲ ಸಮಸ್ಯೆಗಳಿಂದ ಬಳಲುತ್ತಿದ್ದಾರೆ ಎಂಬುದನ್ನು ಆಲೋಚಿಸಲೇಬೇಕಾಗಿದೆ. ಕಾಫಿ ಈ ಭಾಗದ ಪ್ರಮುಖ ವಾಣಿಜ್ಯ ಬೆಳೆಗಳಲ್ಲೊಂದು. ಇದು ವ್ಯಾವಹಾರಿಕವಾಗಿ ಸೃಷ್ಟಿಸಿದ ಅವಾಂತರಗಳು ಅಷ್ಟಿಷ್ಟಲ್ಲ. ಆದರೆ ಕೆಲವರನ್ನು ದಿಢೀರ್ ಶ್ರೀಮಂತರನ್ನಾಗಿ ಮಾಡಿದರೆ ಇನ್ನೂ ಕೆಲವರನ್ನು ದಿವಾಳಿ ಎಬ್ಬಿಸಿದೆ. ಕಾಫಿ ತೋಟದಲ್ಲಿ ಕೆಲಸ

ಮಾಡುವ ಕೂಲಿಕಾರರು ಮತ್ತು ಬುಡಕಟ್ಟು ಕೂಲಿಕಾರರ ಸ್ಥಿತಿ ಶೋಚನೀಯವಾಗಿದೆ. ಈ ಹಿನ್ನೆಲೆಯಿಂದ ಮಲೆನಾಡಿನ ದಟ್ಟ ಕಾಡಿನ ವೈವಿಧ್ಯ ಸಸ್ಯಲೋಕ ಮಾಯವಾಗುತ್ತಿರುವುದು ಕೂಡ ದುರಂತವಾಗಿದೆ. ಆದ್ದರಿಂದ ಚಿಕ್ಕಮಗಳೂರು ಜಿಲ್ಲೆಯ ನಿಜ ಚಿತ್ರಣವನ್ನು ಅರ್ಥ ಮಾಡಿಕೊಳ್ಳುವುದು ಅಷ್ಟು ಸುಲಭದ ಮಾತಲ್ಲವೆನ್ನುವುದನ್ನು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಸಾಮಾಜಿಕ ಸ್ತರವಿನ್ಯಾಸವಿದೆ. ಇದಕ್ಕೆ ಸಾಕ್ಷಿಯಾಗಿ ಇಡೀ ಜಿಲ್ಲೆಯಲ್ಲಿ ಗೌಡಾಲು ಬುಡಕಟ್ಟಿನವರು ಅಯ್ಯಪ್ಪಸ್ವಾಮಿಯ ಮಾಲೆಯನ್ನು ಹಾಕುವಂತಹ ವಾತಾವರಣ ನಿರ್ಮಾಣವಾಗಿದೆ. ಇದರಿಂದಾದ ಪರಿಣಾಮವೇನೆಂದರೆ ಬುಡಕಟ್ಟಿನವರು ಮಾಲೆ ಹಾಕಿಕೊಂಡು ಜಮೀನ್ದಾರರ ಗದ್ದೆ ತೋಟಗಳಲ್ಲಿ ಕೂಲಿ ಕೆಲಸಕ್ಕೆ ಹೋದರೆ ಯಾರೂ ಕೂಡ ಕರೆದು ಕೆಲಸ ಕೊಡದೆ ಇರುವುದು ಕಂಡುಬರುತ್ತದೆ. ಏಕೆಂದರೆ ಗೌಡಾಲುಗಳನ್ನು ಒಂದು ಪಕ್ಷ ಕೆಲಸಕ್ಕೆ ಕರೆದುಕೊಂಡರೆ ಸ್ವಾಮಿ ಎಂದು ಕರೆಯಬೇಕಾಗುತ್ತದೆ. ಅಲ್ಲದೆ ಈ ರೀತಿ ಕರೆಯುವುದರಿಂದ ನಮ್ಮ ಸಾಮಾಜಿಕ ಸ್ಥಾನಮಾನಕ್ಕೆ ಧಕ್ಕೆ ಬರುತ್ತದೆ ಎಂದು ಭಾವಿಸಿ ಇಲ್ಲಿಯ ಕೆಳ ಸಮುದಾಯಗಳು ಯಾವುದೇ ರಂಗಗಳಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಬಾರದು ಎಂಬ ಮನೋಭಾವನೆಯುಳ್ಳವರಾಗಿರುವುದರಿಂದ ಗೌಡಾಲುಗಳು ಆರ್ಥಿಕವಾಗಿ ಸಬಲೀಕರಣವಾಗಲು ಸಾಧ್ಯವಿಲ್ಲ. ಇದರಿಂದಾಗಿ ಅಯ್ಯಪ್ಪಸ್ವಾಮಿಯ ಪೂಜೆ ಮುಗಿಯುವವರೆಗೆ ತೋಟ, ಗದ್ದೆಗಳಲ್ಲಿ ಕೆಲಸಕ್ಕೆ ಕರೆಯದೆ ಬುಡಕಟ್ಟುಗಳ ಹೊಟ್ಟೆಗೆ ನೀರಾಕಿರುವುದನ್ನು ಕಾಣಲಾಗುವುದು. ಅಲ್ಲದೆ ಕೆಳಸ್ತರದವರು ಆರ್ಥಿಕವಾಗಿ ಶೋಚನೀಯ ಬದುಕನ್ನು ಅನುಭವಿಸಬೇಕಾಗಿದೆ.

ಆದ್ದರಿಂದ ಜೀವನೋಪಾಯಕ್ಕಾಗಿ ಶ್ರಮವನ್ನು ಹೊರತುಪಡಿಸಿ ಬೇರೇನೂ ಇಲ್ಲದ ಗೌಡಾಲುಗಳು ಕೃಷಿ ಕಾರ್ಮಿಕರಾಗಿ ಭೂಮಾಲೀಕರ ತೋಟ ಗದ್ದೆಗಳಲ್ಲಿ ದುಡಿಯುತ್ತಿದ್ದಾರೆ. ಹಾಗಾಗಿ ಇವರು ಪಡೆಯುವ ಆದಾಯದ ಬಹುಪಾಲು ಭೂಮಿಯಲ್ಲಿ ದುಡಿಯುವ ಮೂಲಕ ಕೂಲಿ ರೂಪದಲ್ಲಿ ಗಳಿಸುತ್ತಾರೆ. ಇಲ್ಲಿ ಕೂಲಿಯು ಅವರ ಶ್ರಮದ ಮೇಲೆ ನಿಂತಿರುತ್ತದೆ. ಏಕೆಂದರೆ ಹೆಚ್ಚಿನ ಪ್ರಮಾಣದಲ್ಲಿ ಕೃಷಿ ಭೂಮಿಯನ್ನು ಗೌಡಾಲುಗಳು ಹೊಂದಿಲ್ಲದೆ ಇರುವುದರಿಂದ ಭೂಮಾಲೀಕರ ಜಮೀನುಗಳಲ್ಲಿ ದುಡಿದು ತಮ್ಮ ಬದುಕಿನ ನಿರ್ವಹಣೆಯನ್ನು ಮಾಡಿಕೊಳ್ಳುವ ಸ್ಥಿತಿಯಿದೆ.

ಗೌಡಾಲುಗಳಲ್ಲಿ ಲಿಂಗ ತಾರತಮ್ಯವಿಲ್ಲದೆ ಪುರುಷರು ಮತ್ತು ಸ್ತ್ರೀಯರು ಭೂಮಾಲೀಕರ ಜಮೀನುಗಳಲ್ಲಿ ಕೂಲಿಗಾಗಿ ದುಡಿಯಲು ಹೋಗುತ್ತಾರೆ. ಇವರು ಪಡೆಯುವ ವೇತನದಲ್ಲಿ ತಾರತಮ್ಯವನ್ನು ಕಾಣಬಹುದು. ಹೆಣ್ಣಿಗೆ ಕಡಿಮೆ ಕೂಲಿಯಿದ್ದರೆ, ಗಂಡಿಗೆ ಹೆಚ್ಚಿನ ಕೂಲಿಯನ್ನು ಕೊಡುತ್ತಾರೆ. ಸಾಮಾನ್ಯವಾಗಿ ೮೫ ರೂಪಾಯಿಗಳು ಹೆಣ್ಣಿಗೆ ಇದ್ದರೆ ಗಂಡಿಗೆ ೧೦೦ ರೂಪಾಯಿಗಳನ್ನು ಕೊಡುತ್ತಾರೆ. ಈ ರೀತಿಯಲ್ಲಿ ತಾರತಮ್ಯವಿದೆ ಎಂದಾಗ ಮಹಿಳೆಯರಿಗಿಂತ ಪುರುಷರೇ ಹೆಚ್ಚು ಬಲಿಷ್ಠರಾಗಿರುತ್ತಾರೆ ಎನ್ನುತ್ತಾರೆ. ಆದ್ದರಿಂದ ಮಹಿಳೆಯರು ನಾಟಿ ಮಾಡುವುದು, ಹೊರೆ ಹೊರುವುದು, ಅಡಿಕೆಯನ್ನು ಸುಲಿಯುವುದು, ಭತ್ತವನ್ನು ಕುಯ್ಲು ಮಾಡುವುದು, ತೋಟಗಳಿಗೆ ಮಣ್ಣನ್ನು ಪುಟ್ಟಿಯಲ್ಲಿ ಹಾಕಿಕೊಂಡು ತಲೆಮೇಲೆ ಹೊತ್ತು ಅಡಿಕೆಯ ಗಿಡಗಳಿಗೆ ಹಾಕುವುದು,

ಕಾಫಿ ಬೀಜಗಳನ್ನು ಬಿಡಿಸುವುದು, ತೋಟಗಳನ್ನು ಸ್ವಚ್ಛಗೊಳಿಸುವುದು. ಗದ್ದೆಯಲ್ಲಿ ನಾಟಿಯ ಒಳಗೆ ಇರುವ ಕಳೆಯನ್ನು ಕೀಳುವುದು ಮುಂತಾದ ಕಾರ್ಯಗಳನ್ನು ಮಾಡಿಯೇ ತಮ್ಮ ಜೀವನವನ್ನು ಸಾಗಿಸುವವರಾಗಿದ್ದಾರೆ.

ಗೌಡಾಲುಗಳಲ್ಲಿ ಪುರುಷರು ದಿನದ ಕೂಲಿಗಾಗಿ ಭೂಮಾಲೀಕರ ಗದ್ದೆ ಮತ್ತು ತೋಟಗಳಲ್ಲಿ ಕೂಲಿ ಮಾಡುತ್ತಿದ್ದಾರೆ. ಅಂದರೆ ಭೂಮಿ ಅಗೆಯುವುದು, ಭೂಮಿ ಉಳುವುದು, ಭಾರದ ಚೀಲಗಳನ್ನು ಹೊರುವುದು, ಅಡಿಕೆ ಮರವನ್ನು ಹತ್ತಿ ಅಡಿಕೆ ಕೊನೆಗಳನ್ನು ಇಳಿಸುವುದು, ಗದ್ದೆಯಲ್ಲಿ ರೊಳ್ಳೆ ಹೊಡೆಯುವುದು, ಕಾಫಿಯ ಬೀಜದ ಚೀಲಗಳನ್ನು ಹೊರುವುದು, ಔಷಧಿಯನ್ನು ಸಿಂಪಡಿಸುವುದು, ಗದ್ದೆ ಮತ್ತು ತೋಟಗಳಿಗೆ ನೀರನ್ನು ಬಿಡುವುದು, ತೋಟಗಳಿಗೆ ಕೊಟ್ಟಿಗೆ ಗೊಬ್ಬರ ಮತ್ತು ಮಣ್ಣು ಹೇರಿಕೊಂಡು ಬಂದು ಅಡಿಕೆ, ಬಾಳೆ, ತೆಂಗಿನ ಮರಗಳಿಗೆ ಹಾಕುವುದು, ಕಬ್ಬು, ಭತ್ತ, ಗೋಡಂಬಿ, ಹಲಸಿನ ಹಣ್ಣು, ಮುಂತಾದ ಕೆಲಸಗಳಿಗೆ ಈ ಭಾಗದ ಭೂಮಾಲೀಕರು ದಿನಗೂಲಿ ಕಾರ್ಮಿಕರಾಗಿ ದುಡಿಸಿಕೊಳ್ಳುತ್ತಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಇಲ್ಲಿ ವಿಶೇಷವಾಗಿ ಚರ್ಚಿಸಬೇಕಾಗಿರುವುದೇನೆಂದರೆ ಯಾವುದೇ ಫಸಲು ಬಂದಂತಹ ಸಮಯದಲ್ಲಿ ಗೌಡಾಲುಗಳಿಗೆ ದಿನಸಿತ್ಯದ ಕೂಲಿಗಿಂತಲೂ ಅಧಿಕ ಪ್ರಮಾಣದಲ್ಲಿ ಕೂಲಿಯನ್ನು ಕೊಡುವ ಪರಿಪಾಟವಿದೆ. ಆದರೆ ಭೂಮಾಲೀಕರು ಹೆಚ್ಚುವರಿ ಕೆಲಸವನ್ನು ಮಾಡಿಸಿಕೊಳ್ಳುತ್ತಾರೆ. ಇನ್ನೂ ಕೆಲವು ವೇಳೆ ಬಯಲು ಪ್ರದೇಶದ ತಳಸಮುದಾಯದವರನ್ನು ಭೂಮಾಲೀಕರು ಕರೆದುಕೊಂಡು ಬಂದು ಚಿಕ್ಕಮಗಳೂರಿನ ಮೂಲನಿವಾಸಿಗಳಾದ ಗೌಡಾಲುಗಳು ದುಡಿಯಲು ಕೆಲಸವಿಲ್ಲದಂತೆ ಮಾಡಿದ ಇತಿಹಾಸವಿದೆ. ಇದರ ಪರಿಣಾಮವೆಂದರೆ ಭೂಮಾಲೀಕರು ಕೊಟ್ಟ ಕೂಲಿಗೆ ಸರಿಯಾಗಿ ಒಪ್ಪಿಕೊಂಡು ಗೌಡಾಲುಗಳು ಮುಂದೆ ತಾವು ಹೇಳಿದಂತೆ ದುಡಿಯಬೇಕು. ಇದು ಮುಂದೆ ಆರ್ಥಿಕವಾಗಿ ನಿಯಂತ್ರಿಸುವ ಪರಿಪಾಟವಾಗುವುದಲ್ಲದೆ ಗೌಡಾಲುಗಳನ್ನು ಆಳುಗಳೆಂದೇ ಕರೆದುಕೊಂಡು ಈಗಲೂ ಕೆಲವು ಬಿಟ್ಟಿ ಕೆಲಸವನ್ನು ಮಾಡುತ್ತಿರುವುದು ಕಂಡುಬರುತ್ತಾರೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಗೌಡಾಲುಗಳು ಆರ್ಥಿಕವಾಗಿ ಬಲಿಷ್ಠರಾಗಿರದೇ ಇರುವುದರಿಂದ ಎಸ್ಟೇಟ್ ಮಾಲೀಕರು ಮತ್ತು ಭೂಮಾಲೀಕರುಗಳು ಮುಂಗಡವಾಗಿ ಹಣವನ್ನು ಕೊಟ್ಟಿರುವುದು ಇದೆ. ಇವರು ಪಡೆದ ಸಾಲ ಮತ್ತೆ ಬಡ್ಡಿಯನ್ನು ತೀರಿಸುವವರೆಗೆ ಅವರ ನಿಯಮ ಮತ್ತು ನಿರ್ಬಂಧಗಳಿಗೆ ಅನುಗುಣವಾಗಿ ದುಡಿಯಬೇಕಾದ ಸನ್ನಿವೇಶವಿರುವುದು ಇಂದಿನ ದಿನಮಾನಗಳಲ್ಲಿ ಗಮನಾರ್ಹವಾದುದಾಗಿದೆ. ಕಾಡಿನಲ್ಲಿ ದೊರೆಯುವ ಅರಣ್ಯ ಉತ್ಪನ್ನಗಳಾದ ಅಡವೆಕಾಯಿ, ನೆಲ್ಲಿಕಾಯಿ, ಸೀಗೆಕಾಯಿ, ಮಾಗಳಿಬೇರು, ಅಂಟುವಾಳಕಾಯಿ ಮುಂತಾದವುಗಳ ಸಂಗ್ರಹಣೆಗಾಗಿ ಕಾರ್ಮಿಕರಾಗಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಇದು ಕೂಡ ಕೂಲಿಯನ್ನು ತೆಗೆದುಕೊಂಡು ಕೆಲಸ ಮಾಡುವ ಪರಿಪಾಟವಾಗಿದೆ. ಈ ರೀತಿಯ ಕೂಲಿ ಕೆಲಸವನ್ನು ಮಧ್ಯಸ್ಥಿಕೆದಾರರು ಮಾಡಿಸುತ್ತಾರೆ. ಆದ್ದರಿಂದ ಗೌಡಾಲುಗಳು ಕಾಡಿನಲ್ಲಿ ವಾಸವಾಗಿರುವುದರಿಂದ ಶುಂಠಿ, ಕೋಸುವಿನಂತಹ ತರಕಾರಿ ಬೆಳೆಗಳನ್ನು ಹರಿಯಲು ಕೂಲಿಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತದೆ. ಈ ರೀತಿಯಾಗಿ ಮಾಡುವ ಪ್ರತಿಯೊಂದು ಕೆಲಸದಲ್ಲಿ ಹೆಚ್ಚಿನ ಲಾಭ ಭೂಮಾಲೀಕರಿಗೆ ಸಲ್ಲುತ್ತದೆ ವಿನಾ ಗೌಡಾಲುಗಳಿಗಲ್ಲ ಎಂಬುದು ಇಲ್ಲಿ ಮುಖ್ಯವಾಗಿದೆ. ಆದ್ದರಿಂದ ಗೌಡಾಲು ಸಮುದಾಯವು ಹೆಚ್ಚಿನ

ಪ್ರಮಾಣದಲ್ಲಿ ಕೂಲಿ ಮಾಡಿಯೇ ಬದುಕನ್ನು ಸಾಗಿಸುವ ಸ್ಥಿತಿಯಲ್ಲಿದೆ. ಇವರು ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ ಆರ್ಥಿಕ ಸಬಲೀಕರಣ ಸಾಧ್ಯವಾಗದೆ ಇರುವುದು ಕಂಡುಬರುತ್ತದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಗೌಡಾಲುಗಳು ಕನ್ನಡ ಭಾಷೆಯನ್ನು ಸ್ವಚ್ಛವಾಗಿ ಮಾತಾಡುವವರಾಗಿದ್ದಾರೆ. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರವವರು ಕೊಂಕಣಿ ಮತ್ತು ತುಳು ಭಾಷೆಯನ್ನು ಮಾತಾಡುತ್ತಾರೆ. ಇದು ಅಧ್ಯಯನದ ಸಂದರ್ಭದಲ್ಲಿ ತಿಳಿವಳಿಕೆದಾರರು ಕೊಟ್ಟ ಮಾಹಿತಿಯಾಗಿದೆ. ಜನಸಂಖ್ಯೆಯ ದೃಷ್ಟಿಯಿಂದ ಇವರು ೧೫೦೦೦ರಿಂದ ೨೦,೦೦೦ರವರೆಗೆ ಇರುವುದು ಕಂಡುಬರುತ್ತದೆ. ಜನಸಂಖ್ಯೆಯಲ್ಲಿ ಹೆಚ್ಚಿನ ಪ್ರಮಾಣ ಕೂಲಿಯೇ ಮುಖ್ಯ ಆರ್ಥಿಕತೆಯ ಮೂಲವಾಗಿದೆ. ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ಇವರು ತಮ್ಮ ಬದುಕಿನುದ್ದಕ್ಕೂ ಗೋವುಗಳನ್ನು ಸಾಕಿಕೊಂಡು ಬಂದಿರುವುದರಿಂದ ಎಮ್ಮೆಗಳು ಹಾಗೂ ಹಸುಗಳು ಅವರ ಜೊತೆಗೆ ಇರಲೇಬೇಕು ಎನ್ನುತ್ತಾರೆ. ಇಲ್ಲಿಯ ಕೂಲಿಯನ್ನು ಮಹಿಳೆಯರಷ್ಟೇ ಮಾಡಬೇಕು ಎಂಬ ನಿರ್ಬಂಧವೇನೂ ಇಲ್ಲ. ದಿನದ ಕೂಲಿಯನ್ನು ಮಹಿಳೆಯರು ಮತ್ತು ಪುರುಷರು ಸರಿಸಮಾನವಾಗಿ ಮಾಡುತ್ತಾರೆ. ಕೂಲಿ ಮಾಡಿಬಂದ ಹಣದಿಂದ ತಮ್ಮ ಬದುಕಿನ ಬವಣೆಯನ್ನು ನೀಗಿಸಿಕೊಳ್ಳುತ್ತಾರೆ. ತಮ್ಮ ಕುಟುಂಬದಲ್ಲಿಯೂ ಮಹಿಳೆ ಮತ್ತು ಪುರುಷರು ಎಂಬ ತಾರತಮ್ಯವಿಲ್ಲದೆ ಇರುವುದು ಇಂದಿನ ಆಧುನಿಕ ಲೋಕಕ್ಕೆ ಆಶ್ಚರ್ಯವನ್ನುಂಟು ಮಾಡುವಂತಹ ಸಾಮಾಜಿಕ ಸಂರಚನೆಯು ಇವರಲ್ಲಿದೆ.

ಚಿಕ್ಕಮಗಳೂರು ಜಿಲ್ಲೆಯು ಪಶ್ಚಿಮಘಟ್ಟದಿಂದ ಆವೃತವಾಗಿರುವ ಹಚ್ಚ ಹಸಿರಿನ ಮಲೆನಾಡು ಪ್ರದೇಶವಾಗಿರುವುದರಿಂದ ಗೌಡಾಲು ಸಮುದಾಯದ ಮಹಿಳೆಯರು ಮತ್ತು ಪುರುಷರು ದಿನಗೂಲಿಗಾಗಿ ಹೋಗುವ ಕಾಡಿನಲ್ಲಿ ಅನೇಕ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ. ಮಲೆನಾಡು ಮಳೆಗಾಲದಲ್ಲಿ ಮೈ ತುಂಬಿ ತನ್ನ ಹಸಿರಿನಿಂದ ಕೈ ಬೀಸಿ ಕರೆಯುತ್ತಿರುತ್ತದೆ. ಆದ್ದರಿಂದ ಮಲೆನಾಡು ನೋಡುವಂತವರಿಗೆ ಹಾಗೂ ಭೂಮಾಲೀಕರಿಗೆ, ಬಂಡವಾಳಗಾರರಿಗೆ, ವಿದೇಶಿ ಕಂಪನಿಯವರಿಗೆ ಮಾತ್ರ ಸುಂದರವಾಗಿ ಕಾಣುವುದಾಗಿದೆ. ಇಲ್ಲಿಯೇ ವಾಸ ಮಾಡುತ್ತಿರುವ ಹಾಗೂ ಭೂಮಾಲೀಕರ ಸಂಕೋಲೆಯಲ್ಲಿ ಬದುಕು ಸಾಗಿಸುತ್ತಿರುವ ಗೌಡಾಲುಗಳ ಜೀವನ ಹಲವು ಸಮಸ್ಯೆಗಳಿಂದ ಕೂಡಿದೆ. ಇಲ್ಲಿ ಜಿಗಣೆಗಳ ಕಾಟ, ಕಾಡುಪ್ರಾಣಿಗಳ ಕಾಟ, ಅರಣ್ಯ ಅಧಿಕಾರಿಗಳ ಕಾಟದಿಂದ ಗೌಡಾಲುಗಳ ಮಹಿಳೆಯರ ಮಾನಭಂಗ ಹಾಗೂ ಸರ್ಕಾರ ದಿನದಿಂದ ದಿನಕ್ಕೆ ರೂಪಿಸುವ ಅರಣ್ಯ ಕಾಯ್ದೆಗಳು ಇವರನ್ನು ದಿನವಿಡೀ ಮನಸಿನಲ್ಲಿ ಕಾಡುತ್ತಿರುವ ಸಮಸ್ಯೆಯಾಗಿಯೇ ಉಳಿದಿವೆ. ಇದಕ್ಕೆ ಪರಿಹಾರವನ್ನು ಒದಗಿಸಿಕೊಟ್ಟಿಲ್ಲ. ಕುದುರೆಮುಖದ ಹತ್ತಿರ ಗೌಡಾಲು ಮಹಿಳೆಯರು ದಿನಗೂಲಿಗೆ ಹೋಗಿದ್ದಾಗ ಅದರಲ್ಲಿ ಒಡೆತನದ ಅದೀನದಲ್ಲಿದ್ದ ಕುಟುಂಬದ ಹೆಣ್ಣು ಹುಡುಗಿಯನ್ನು ಅಪಹರಿಸಿ ಅಶ್ಲೀಲ ಚಿತ್ರಗಳನ್ನು ತೆಗೆದುಕೊಂಡು ಹೋಗುವಂತಹ ಶ್ರೀಮಂತರು ದಿನಗೂಲಿ ಹೆಣ್ಣು ಮಕ್ಕಳಿಗೆ ಸಮಸ್ಯೆಯಷ್ಟೇ ಅಲ್ಲ ಭಯವನ್ನುಂಟು ಮಾಡುವವರಾಗಿದ್ದಾರೆ. ಆದ್ದರಿಂದ ಚಿಕ್ಕಮಗಳೂರು ಜಿಲ್ಲೆಯ ಗೌಡಾಲುಗಳು ಅವರದೇ ಆದ ಸಂಕಷ್ಟಗಳನ್ನು ನುಂಗಿಕೊಂಡು ಬದುಕಬೇಕಾಗಿದೆ.

ಗೌಡಾಲುಗಳು ಆರ್ಥಿಕವಾಗಿ ಹೀನಾಯ ಸ್ಥಿತಿಯಲ್ಲಿರುವುದರಿಂದ ತಮ್ಮ ಮಕ್ಕಳನ್ನು ಅದರಲ್ಲೂ ವಯಸ್ಸಿಗೆ ಬಂದ ೧೮ರಿಂದ ೨೫ ವರ್ಷದ ಹುಡುಗಿಯರನ್ನು ಅರ್ಧಂಬರ್ಧ ವಿದ್ಯಾಭ್ಯಾಸ ಮಾಡಿಸಿ ಮುಂದೆ ಓದಿಸಲು

ಹಣವಿಲ್ಲದೆ ಅರೆಹೊಟ್ಟೆ, ಅರೆಬಟ್ಟೆ, ಅರೆ ಶಿಕ್ಷಣದಿಂದ ಬೇಸರವಾಗಿ ಪೇಟೆಯ ಶ್ರೀಮಂತರ ಮನೆಗಳಿಗೆ ಮನೆಯ ಕೆಲಸಕ್ಕೆ ಕಳುಹಿಸಿದ್ದಾರೆ. ಗೌಡಾಲುಗಳು ತಾವು ವಾಸಿಸುವ ಪ್ರದೇಶದಲ್ಲಿ ಕೃಷಿಯ ದಿನಗೂಲಿಯಾಗಿ ಕೆಲಸ ಮಾಡುವುದಲ್ಲದೆ ಶ್ರೀಮಂತರ ಮನೆಯಲ್ಲಿ ಮುಸುರೆ ತೊಳೆದು ಬದುಕುತ್ತಿದ್ದಾರೆ. ಹಣವಂತರಿಗೆ ಈ ರಾಜ್ಯದ ಬುಡಕಟ್ಟು ಸಮುದಾಯಗಳ ಅಂತರಾಳದ ಮನಸ್ಸು ಅರ್ಥವಾಗುವುದು ಕಷ್ಟ. ಹೀಗಾಗಿ ಇಂದು ಗೌಡಾಲುಗಳು ಸಂಕಷ್ಟದಲ್ಲಿರುವುದು ಗಮನಾರ್ಹವಾಗಿದೆ.

**ಅಡಿಟಿಪ್ಪಣಿಗಳು**

೧. Cauvery R., Sudha Nayak U.K., Girija M., Meenakshi R. (2007), Research Methodology, p.49.

೨. ಅನಂತರಾಮು ಕೆ., (೨೦೦೬), ಸುವರ್ಣ ಕರ್ನಾಟಕ ದರ್ಶನ (೫೦ ಸಂವತ್ಸರಗಳು) ಪು. ೩೬-೩೭.

೩. Ibid, p.29-30.

೪. Ibid, p.60.

೫. ಡಾ. ಕೆ.ಎಂ. ಮೈತ್ರಿ, ಡಾ. ಚಲುವರಾಜು (೨೦೦೬), ಬುಡಕಟ್ಟು ಅಧ್ಯಯನ, ಸಂಪುಟ-೩, ಸಂಚಿಕೆ-೨, ಜುಲೈ-ಡಿಸೆಂಬರ್ ೨೦೦೬, ಪು. ೧೩೩.

೬. Population Scheduled Tribes in Karnataka (15.06.2003)

೭. Ceusus of India Vol-XI, (1961).

೮. Tribal Population Cenusus, (1991).

೯. Sing K.S., The Scheduled Tribles, p.361.

೧೦. ಮುಖೇಣಿ ಎಂ.ಎ., ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ (ಸಂಪುಟ-೦೩)

೧೧. ಡಾ. ಮೈತ್ರಿ, ಕೆ.ಎಂ., (೨೦೦೨), ಬುಡಕಟ್ಟು ಕುಲಕಸುಬು; ಪು. ೭೮

೧೨. Gezetterian - Chikmagalore

೧೩. ಡಾ.ಮೇತ್ರಿ.ಕೆ.ಎಂ., (೨೦೦೨), ಬುಡಕಟ್ಟು ಕುಲಕಸುಬುಗಳು, ಪು.೭೮.

೧೪. ಕೆಂಪೇಗೌಡ, ವಯಸ್ಸು ೬೩, ಮೆಣಸಿನ ಹಾಡ್ಯ, ಕೊಪ್ಪ ತಾಲ್ಲೂಕು.

೧೫. ಡಾ.ಮೇತ್ರಿ.ಕೆ.ಎಂ., (೨೦೦೨), ಬುಡಕಟ್ಟು ಕುಲಕಸುಬುಗಳು, ಪು.೭೯

೧೬. ಡಾ.ಹಿ.ಚಿ.ಬೋರಲಿಂಗಯ್ಯ ಮತ್ತು ಪ್ರಭಾಕರ.ಎ.ಎಸ್., (೨೦೦೪) ಪು.೭೯

೧೭. ಶೇಷಗೌಡ ವಯಸ್ಸು ೨೧, ಅಕ್ಕಿಮನೆ, ಶೃಂಗೇರಿ ತಾಲ್ಲೂಕು.

೧೮. Vidyarti and Raj, (1977), The trebes of South india; P.163-164

೧೯. ಡಾ. ಬೋರಲಿಂಗಯ್ಯ ಹಿ.ಚಿ. ಮತ್ತು ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಧ್ಯಯನ-೨, ಪು.೭೯

* * *

## ಅಧ್ಯಾಯ ಮೂರು

# ಗೌಡಾಲು ಸಮುದಾಯದ ಸಾಂಸ್ಕೃತಿಕ ಚಟುವಟಿಕೆಗಳು

೩.೧. ದೇವರು, ನಂಬಿಕೆಗಳು ಮತ್ತು ವಿಧಿ-ನಿಷೇಧಗಳು

೩.೨. ಸಾಂಸ್ಕೃತಿಕ ನಾಯಕರು

೩.೩. ಹಬ್ಬ-ಆಚರಣೆಗಳು

## ಅಧ್ಯಾಯ ಮೂರು

## ಗೌಡಾಲು ಸಮುದಾಯದ ಸಾಂಸ್ಕೃತಿಕ ಚಟುವಟಿಕೆಗಳು

ಭಾರತದಾದ್ಯಂತ ವಾಸಿಸುವ ಸಮುದಾಯಗಳು ಜಗತ್ತಿನ ಇತರೆ ಸಮುದಾಯಗಳಿಗಿಂತ ಭಿನ್ನವಾದವು ಮತ್ತು ವಿಶಿಷ್ಟ ಸಂಸ್ಕೃತಿ ಮತ್ತು ಪರಂಪರೆಯನ್ನುಳ್ಳವುಗಳಾಗಿವೆ. ಇಂತಹ ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವುದು ಮುಖ್ಯವಾಗಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಗೌಡಾಲು ಸಮುದಾಯದ ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತು ಚರ್ಚಿಸುವುದು ಅವಶ್ಯಕತೆಯಿದೆ.

ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳನ್ನು ಕುರಿತು ಮಾತನಾಡುವಾಗ ೫೦ ಬುಡಕಟ್ಟುಗಳಲ್ಲದೆ ಇತರೆ ಸಮುದಾಯಗಳೂ ತಮ್ಮದೇ ಆದ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವುದು ಗಮನಾರ್ಹವಾದುದು. ಆದ್ದರಿಂದ ಕೆಲವು ಸಮುದಾಯಗಳ ಸಂಸ್ಕೃತಿ, ಸ್ಥಿತಿಗತಿ ಮತ್ತು ಸಾಮಾಜಿಕ ಸಂಚಲನೆ, ಪರಿವರ್ತನೆಯನ್ನು ದಾಖಲಿಸದೆ ನಿರ್ಲಕ್ಷಿತ ಸಮುದಾಯಗಳಾಗಿಯೇ ಉಳಿದಿವೆ. ಇತ್ತೀಚೆಗೆ ಅವಗಾಹನೆಗೆ ಒಳಗಾದ ಸಮುದಾಯಗಳ ಅಧ್ಯಯನ ಮತ್ತು ದಾಖಲಾತಿ ಕಾರ್ಯ ಸರ್ಕಾರದ ವತಿಯಿಂದ ಮತ್ತು ವಿದ್ವಾಂಸರಿಂದ ನಡೆಯುತ್ತಿರುವುದು ಗಮನಿಸಬೇಕಾದ ವಿಷಯವಾಗಿದೆ.

ಕರ್ನಾಟಕದ ಸಮುದಾಯಗಳು ಇತ್ತೀಚೆಗೆ ಗುರುತಿಸುವಿಕೆಗಾಗಿ ಚಳವಳಿಗಳ ರೂಪದಲ್ಲಿ ಸಾಮಾಜಿಕ ಸೂಚನೆಯನ್ನು ಹೊಂದುತ್ತಿವೆ. ಕೆಲವು ಸಮುದಾಯಗಳು ಹೊಸದಾಗಿ ಗುರುತಿಸುವಿಕೆಯ ಹುಡುಕಾಟದಲ್ಲಿ ತೊಡಗಿದರೆ, ಇನ್ನು ಕೆಲವು ಸಮುದಾಯಗಳು ಗುರುತಿಸುವಿಕೆಯ ಬಿಕ್ಕಟ್ಟಿನಲ್ಲಿ ಸಿಲುಕಿವೆ. ಸಾಮಾಜಿಕವಾಗಿ ದುರ್ಬಲವಾಗಿರುವ ಸಮುದಾಯಗಳು ಅಂಚಿನ ಗುಂಪುಗಳಾಗಿ ಮಾರ್ಪಟ್ಟಿವೆ. ಈ ಸಮುದಾಯಗಳು ಅತ್ತ ತನ್ನ ಪರಂಪರೆ ಮತ್ತು ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ, ಇತ್ತ ಆಧುನಿಕ ಸಮಾಜದ ಸಂಸ್ಕೃತಿಯನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದೆ ತೊಳಲಾಟದಲ್ಲಿ ಸಿಲುಕಿವೆ. ಇಂತಹ ಅಂಚಿನ ಸಮುದಾಯಗಳಲ್ಲಿ ಗೌಡಾಲು ಸಮುದಾಯವು ತನ್ನ ಸ್ಥಾನವನ್ನು ಗುರುತಿಸಿಕೊಂಡಿದೆ.

ಈ ಸಮುದಾಯವು ಅರಣ್ಯದಲ್ಲಿ ವಾಸಮಾಡುತ್ತಿರುವ ಬುಡಕಟ್ಟಾಗಿರುವುದರಿಂದ ತನ್ನ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದೆ. ಆದ್ದರಿಂದಲೇ ಈ ಸಮುದಾಯದ ಇತಿಹಾಸ ಮತ್ತು ಸಂಸ್ಕೃತಿ ಬೇರೆ ಸಮುದಾಯಗಳಿಗಿಂತ ಭಿನ್ನವೂ ವಿಶಿಷ್ಟವೂ ಆಗಿದೆ.

ಭಾರತದ ಚರಿತ್ರೆಯನ್ನು ಅವಲೋಕಿಸಿದಾಗ ವೇದ ಪುರಾಣಗಳ ಕಾಲದಿಂದಲೂ ಚಾಲ್ತಿಯಲ್ಲಿರುವ ಜಾತಿ ವ್ಯವಸ್ಥೆಯ ಜೊತೆಗೆ ನಾಡಿನಿಂದ ದೂರವಿರುವ ಹಾಗೂ ಪ್ರತ್ಯೇಕವಾದ ಗುಡ್ಡಗಾಡು, ಇಳಿಜಾರು, ಕಣಿವೆ,

ಕಂದರಗಳಲ್ಲಿ ವಾಸಿಸುವ ಬುಡಕಟ್ಟುಗಳು ಸಾಕಷ್ಟು ಸಂಖ್ಯೆಯಲ್ಲಿರುದು ಕಂಡುಬರುತ್ತದೆ. ಇವರಿಗೆ ಅವರದೇ ಆದ ವಿಶಿಷ್ಟ ಸಂಸ್ಕೃತಿಯ ಘಟಕಗಳಿವೆ. ಈ ಹಿನ್ನೆಲೆಯಲ್ಲಿ ನಂಬಿಕೆಗಳು, ಸಂಪ್ರದಾಯಗಳು, ಸಾಹಿತ್ಯ ಸಂಗೀತ, ನೃತ್ಯ, ಕಲೆ ಮೊದಲಾದ ಅಂಶಗಳಿಂದ ಭಾರತದ ಸಂಸ್ಕೃತಿಯನ್ನು ಸಂಕೀರ್ಣಗೊಳಿಸಿವೆ. ಆದರೆ ಶಿಷ್ಟ ಜನರು ಭಾರತೀಯ ಸಮಾಜದ ಸಂಸ್ಕೃತಿಯ ಬಗೆಗೆ ವಿಚಾರ ಮಾಡುವಾಗ ಜಾತಿಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಬುಡಕಟ್ಟುಗಳ ಸಂಸ್ಕೃತಿಯನ್ನು ಕಡೆಗಣಿಸಿರುವುದು ಕಂಡುಬರುತ್ತದೆ. ಆದ್ದರಿಂದ ಇಂದಿನ ದಿನಮಾನಗಳಲ್ಲಿ ಬುಡಕಟ್ಟುಗಳ ಸಂಸ್ಕೃತಿಯನ್ನು ಕುರಿತು ದೀರ್ಘವಾದ ಅಧ್ಯಯನಗಳು ನಡೆಯಬೇಕಾದ ಅನಿವಾರ್ಯತೆಯಿದೆ. ಹಾಗಾಗಿ ಪ್ರಸ್ತುತ ಗೌಡಾಲುಗಳ ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತು ಆಲೋಚಿಸುವುದು ಅವಶ್ಯಕ.

ಗೌಡಾಲು ಸಮುದಾಯವು ತನ್ನದೇ ಆದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಉಳಿಸಿಕೊಂಡಿದೆ. ಏಕೆಂದರೆ ಸಂಸ್ಕೃತಿ ಎನ್ನುವುದು ಯಾರೊಬ್ಬರ ಆಸ್ತಿ ಅಲ್ಲ. ಅದು ಅವರವರ ಬದುಕಿಗೆ ಅನುಗುಣವಾಗಿ ರೂಪಿಸಿಕೊಂಡ ಕ್ರಿಯೆಯಾಗಿದೆ. ಆದ್ದರಿಂದ ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಸಂಸ್ಕೃತಿಯು ಆದಿಮಾನವನಿಂದ ತಾಂತ್ರಿಕ ಮಾನವನವರೆಗೆ ಜೊತೆ ಜೊತೆಯಲ್ಲಿ ಸಾಗಿ ಬಂದಿರುವುದನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ. ಹೀಗಾಗಿ ಸಮಾಜಶಾಸ್ತ್ರದ ಚಿಂತಕರಾದ ಟೈಲರ್ ಅವರು ಸಂಸ್ಕೃತಿಯ ಬಗೆಗೆ ಕೊಟ್ಟಿರುವ ವ್ಯಾಖ್ಯೆಯನ್ನು ಗಮನಿಸಬಹುದು. ''ಜ್ಞಾನ, ನಂಬಿಕೆ, ಕಲೆ, ನೈತಿಕ ನಿಯಮಗಳು, ಕಾನೂನು ಪದ್ಧತಿ ಮತ್ತು ಮಾನವನು ತನ್ನ ಸಮಾಜದ ಸದಸ್ಯನಾಗಿ ಪಡೆದುಕೊಂಡಿರುವ ಇತರ ಎಲ್ಲ ಸಾಮರ್ಥ್ಯಗಳನ್ನು ಒಳಗೊಂಡಿರುವ ಅಖಂಡವಾದ ಸಂಕೀರ್ಣ ವ್ಯವಸ್ಥೆಯೇ ಸಂಸ್ಕೃತಿ ಎಂದಿದ್ದಾರೆ.''[೨] ಆದ್ದರಿಂದ ಟೈಲರ್ ಅವರು ಹೇಳಿದ ವಾಖ್ಯಾಗೆ ಯಾವುದೇ ಚ್ಯುತಿ ಬರದಂತೆ ಗೌಡಾಲು ಸಮುದಾಯದ ಬದುಕು ರೂಪಗೊಂಡಿರುವುದು ನಿಜ ಸಂಗತಿಯಾಗಿದೆ. ಈ ಸಮುದಾಯದಲ್ಲಿ ಮಾನವನ ಮೂಲ ಸಂಸ್ಕೃತಿಯು ಗೋಚರಿಸುತ್ತದೆ. ಅಲ್ಲದೆ ಇಲ್ಲಿ ನಡೆಯುವ ಪ್ರತಿಯೊಂದು ಆಚರಣೆಗಳಲ್ಲಿ ಅನ್ಯೋನ್ಯ ಸಂಬಂಧಗಳಿರುವುದರಿಂದ ಪ್ರಾಥಮಿಕ ಸಂಬಂಧಗಳು ತಮ್ಮ ಸ್ಥಾನವನ್ನು ಉಳಿಸಿಕೊಂಡಿರುವುದು ಗೌಡಾಲುಗಳ ಬದುಕಿನ ಪ್ರತಿಯೊಂದು ತುಣುಕಿನಲ್ಲಿ ಗೋಚರಿಸುತ್ತದೆ. ಇಲ್ಲಿ ಸಮುದಾಯದ ಆಂತರಂಗದಲ್ಲಿ ಸಂಸ್ಕೃತಿಯು ತನಗೆ ತಾನೇ ಅನುವಂಶೀಯತೆಯ ರೂಪದಲ್ಲಿ ಬೆಳೆದು ಬಂದಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಸಮುದಾಯದ ಭೌತಿಕ ಚಟುವಟಿಕೆಗಳಲ್ಲಿ ಸಂಸ್ಕೃತಿಯು ಎದ್ದು ಕಾಣುತ್ತದೆ. ಇವರು ಆಚರಿಸುವ ಪ್ರತಿಯೊಂದು ಹಬ್ಬ, ದೈವಾರಾಧನೆ, ಮಗುವಿನ ಹುಟ್ಟು, ನಾಮಕರಣ, ಋತುಮತಿ, ಮದುವೆ ಸಾವಿನ ಆಚರಣೆಗಳಲ್ಲಿ ಪಾರಂಪರಿಕವಾಗಿ ಸಾಗಿಕೊಂಡು ಬಂದಿರುವ ಸಂಸ್ಕೃತಿಯು ಬುಡಕಟ್ಟಿನ ಜೀವಂತ ಬದುಕಿಗೆ ಸಾಕ್ಷಿಯಾಗಿದೆ. ಆದ್ದರಿಂದ ಒಂದು ಬುಡಕಟ್ಟಿನ ಸಂಸ್ಕೃತಿಯ ಅಧ್ಯಯನವೆಂದರೆ ಆ ಬುಡಕಟ್ಟು ರೂಪಿಸಿಕೊಂಡು ಬಂದಿರುವ ಜೀವನ ಕ್ರಮವಾಗಿರುತ್ತದೆ. ಕರ್ನಾಟಕದಲ್ಲಿ ಈಗಿರುವ ೫೦ ಬುಡಕಟ್ಟುಗಳಲ್ಲಿ ಗೌಡಾಲು ಕೂಡ ಒಂದಾಗಿರುವುದರಿಂದ ಇದು ಒಂದು ವಿಶಿಷ್ಟವಾದ ಸಮುದಾಯವಾಗಿದೆ. ಇವರು ಅವಲಂಬಿಸಿರುವ ವೃತ್ತಿ, ಕುಲಕಸಬು ಹವ್ಯಾಸಿಗಳಲ್ಲಿ ಅನನ್ಯವಾದ ಸಂಸ್ಕೃತಿ ಮತ್ತು ಪರಂಪರೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಸ್ತ್ರೀ-ಪುರುಷರೆಲ್ಲರೂ ಒಂದು ಕಾಲದಲ್ಲಿ ಕಸೆಯನ್ನು ಹಾಕಿಕೊಂಡು ಕಾಡಿನಲ್ಲಿ

ಅಲೆಮಾರಿಯಾಗಿ ಜೀವಿಸುತ್ತಿದ್ದರು. ಈಗಲೂ ಹಿರಿಯ ಪುರುಷರು ಅರ್ಧಂಬರ್ಧ ಬಟ್ಟೆಯನ್ನು ಹಾಕಿಕೊಂಡು ಬುಟ್ಟಿಯನ್ನು ಹೆಣೆಯುತ್ತಿರುತ್ತಾರೆ. ಈಗಲೂ ಗೌಡಾಲುಗಳನ್ನು ಗ್ರಾಮ್ಯ ಭಾಷೆಯಲ್ಲಿ ಗೌಡ್ಲುಗಳೆಂದೇ ಕರೆಯುವುದನ್ನು ಗಮನಿಸಿದರೆ ಹೆಸರೇ ಸಾಂಸ್ಕೃತಿಕತೆಯ ಹಿನ್ನೆಲೆಯಿಂದ ಕೂಡಿದೆ ಎಂದು ತಿಳಿಯುತ್ತದೆ. ಇವರ ಆಚಾರ ವಿಚಾರ, ವೇಷಭೂಷಣ, ಆಹಾರ ಪದ್ಧತಿ, ಮನೆ ನಿರ್ಮಾಣ, ಭಾಷೆ ಮುಂತಾದವುಗಳಲ್ಲಿ ಪ್ರತ್ಯೇಕತೆಯನ್ನು ಕಾಯ್ದುಕೊಂಡು ಬಂದಿರುವ ಇವರು ಕಾಡಿನಲ್ಲಿ ಗೋವುಗಳನ್ನು ಸಾಕಿಕೊಂಡಿರುವುದಲ್ಲದೆ ಕಾಡಿನಲ್ಲಿ ದೊರೆಯುವ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿಕೊಂಡು ಬದುಕನ್ನು ಕಟ್ಟಿಕೊಂಡಿದ್ದಾರೆ.

ಪಶ್ಚಿಮಘಟ್ಟದ ಇಳಿಜಾರುಗಳಲ್ಲಿ ಬದುಕುವ ಗೌಡಾಲು ತನ್ನದೇ ಆದ ಸಂಪ್ರದಾಯಾಚರಣೆಗಳನ್ನು ರೂಡಿಸಿಕೊಂಡು ತಮ್ಮ ಜೀವನ ಚಕ್ರದ ಬಹುಮುಖ್ಯ ಘಟ್ಟಗಳಲ್ಲಿ ವಿಶಿಷ್ಟವಾದ ಗೌಡಾಲು ಸಮುದಾಯ ವಿಶಿಷ್ಟವಾದ ಸಂಪ್ರಾದಾಯಾಚರಣೆಗಳನ್ನು ಮಾಡುತ್ತ ಜಾತ್ರೆ, ಉತ್ಸವ, ಹಾಗೂ ಕಲಶೇಶ್ವರನ ಬಿಟ್ಟಿಕೆಲಸ ಕೌಟುಂಬಿಕ ವ್ಯವಸ್ಥೆ, ಒಳಾಡಳಿತ ವ್ಯವಸ್ಥೆ ಕೃಷಿಯ ಆಚರಣೆ ಸಂಪ್ರದಾಯದ ಅಂಟಿಗೆ ಪಂಟಿಗೆ ಹಾಡುಗಳು, ಹಳ್ಳಿ ಹಬ್ಬಗಳೆಲ್ಲವೂ ಗೌಡಾಲುಗಳ ಸಾಂಸ್ಕೃತಿಕ ಚಟುವಟಿಕೆಗಳನ್ನು ಗಟ್ಟಿಯಾಗಿ ನಿಲ್ಲಿಸುತ್ತವೆ. ಇವು ಒಂದು ಬುಡಕಟ್ಟು ಸಮುದಾಯ ಆಧುನಿಕ ಸಮಾಜದಿಂದ ದೂರವಿದ್ದು ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕು ಸಾಗಿಸಲು ಮಾಡಿಕೊಂಡಿರುವ ಏರ್ಪಾಟುಗಳು. ಇವು ಭಾರತೀಯ ಸಂಸ್ಕೃತಿಯನ್ನು ವಿಶಿಷ್ಟವಾಗಿ ಪ್ರತಿಬಿಂಬಿಸುತ್ತವೆ. ಇವುಗಳಲ್ಲಿ ಸಾಂಸ್ಕೃತಿಕವಾಗಿ ಶ್ರೀಮಂತಿಕೆಯನ್ನು ಹೊಂದಿರುವ ಗೌಡಾಲುಗಳು ಇಂದು ಸಂಘರ್ಷಾತ್ಮಕ ಬದುಕನ್ನು ಮಾಡುತ್ತಿರುವುದು ಗಮನಾರ್ಹವಾದುದಾಗಿದೆ.

ಗೌಡಾಲು ಸಮುದಾಯವು ಸಾಂಸ್ಕೃತಿಕವಾಗಿ ಅನೇಕ ಕಟ್ಟುಪಾಡುಗಳನ್ನು ತನ್ನ ಒಡಲಿನಲ್ಲಿ ಇಟ್ಟುಕೊಂಡಿದೆ. ಒಂದು ಪ್ರದೇಶದಲ್ಲಿ ಬಾಳುವೆಯನ್ನು ನಡೆಸುವ ಇವರು ಇಡೀ ಕುಲದ ಯಜಮಾನ  ಹೇಳಿದಂತೆ ನಡೆಯುವುದಲ್ಲದೆ, ಸಾಮಾಜಿಕವಾಗಿ ಐಕ್ಯತೆಯನ್ನು ಸೃಷ್ಟಿ ಮಾಡುವ ಸಾಂಸ್ಕೃತಿಕ ಆಚರಣೆಗಳು ಬುಡಕಟ್ಟಿನ ಸಾಮಾಜಿಕ ವ್ಯವಸ್ಥೆಯ ಭದ್ರತೆಯನ್ನು ಗಟ್ಟಿಗೊಳಿಸಿವೆ. ಹಾಡಿಯ ಮುಖಂಡ ಇಲ್ಲಿ ನ್ಯಾಯವನ್ನು ತೀರ್ಮಾನ ಮಾಡುತ್ತಾನೆ. ಇಡೀ ಸಮುದಾಯದ ಶ್ರೇಯಸ್ಸು ಇವರ ಜವಾಬ್ದಾರಿಯಾಗಿರುವುದರಿಂದ ಹಬ್ಬ, ದೈವತ್ವ, ಮದುವೆ, ದೇವತೆಗೆ ಸಂಬಂಧಿಸಿದ ಆಚರಣೆಗಳಲ್ಲಿ ಮುಂಚೂಣಿಯ ವ್ಯಕ್ತಿಯಾಗಿರುತ್ತಾನೆ. ಆದ್ದರಿಂದ ಒಂದು ಬುಡಕಟ್ಟಿನ ಸಾಂಸ್ಕೃತಿಕ ಆಚರಣೆಗಳು ಬದುಕಿಗೆ ಬಂದು ರೂಪಕೊಟ್ಟು ಬೆಳೆಸುವಲ್ಲಿ ಮುಂದುವರಿದ ಸಮಾಜದ ಬೆಳವಣಿಗೆಗೆ ಅನುಗುಣವಾದ ಜೀವನ ನಡೆಸುವಲ್ಲಿ ಮುಖ್ಯವಾಗಿರುತ್ತವೆ. ಬುಡಕಟ್ಟು ಎಂಬುದು ಸಂಪ್ರದಾಯಗಳು, ಆಚರಣೆಗಳು, ನಂಬಿಕೆಗಳಿಂದ ಕೂಡಿದ ವೈಜ್ಞಾನಿಕ ಜ್ಞಾನವನ್ನು ಅವರಿಗೆ ಅರಿವಿಲ್ಲದೆ ಇಡೀ ಸಮುದಾಯದ ಆರೋಗ್ಯಕರ ಬೆಳವಣಿಗೆಯಾಗಿರುತ್ತದೆ. ಇಲ್ಲಿ ಭಾರತೀಯ ಗ್ರಾಮೀಣ ಸಂಸ್ಕೃತಿಯನ್ನು ಪ್ರತಿನಿಧಿಸುವ ಸಾಂಸ್ಕೃತಿಕ ಚಟುವಟಿಕೆಗಳಿರುತ್ತವೆ. ಬುಡಕಟ್ಟಿನ ಬದುಕಿನ ಬಗ್ಗೆ ಸದಾ ಎಚ್ಚರವನ್ನು ಉಂಟುಮಾಡುವ ಹಾಗೂ ಪೂರ್ವಜರು ಆಚರಿಸಿಕೊಂಡು ಬಂದ ರೀತಿಯಲ್ಲಿಯೇ ಯಾವುದೇ ಚ್ಯುತಿ ಬರದಂತೆ ಸಮುದಾಯದ ಸಂಸ್ಕೃತಿಗೆ ಪೂರಕವಾದ, ಸಮುದಾಯವನ್ನು ನಿಯಂತ್ರಿಸುವ ಮತ್ತು ಅದನ್ನು ಸರಿಯಾದ

ದಾರಿಯಲ್ಲಿ ಕೊಂಡೊಯ್ಯುವ ಶಕ್ತಿ ಸಾಂಸ್ಕೃತಿಕ ಚಟುವಟಿಕೆಗಳಿಗಿರುತ್ತವೆ. ಆದರೆ ಗೌಡಾಲುಗಳ ಸಾಂಸ್ಕೃತಿಕ ಚಟುವಟಿಕೆಗಳು ಪ್ರಾಚೀನ ಕಾಲದಲ್ಲಿ ಇದ್ದ ವ್ಯವಸ್ಥೆಯಲ್ಲಿಯೇ ಮುಂದುವರಿಯದೆ ಇರುವುದು ಕಂಡುಬರುತ್ತದೆ. ಭಾರತಕ್ಕೆ ಯಾವಾಗ ವಿದೇಶಿಯರು ಬಂದರೋ ಅಂದಿನಿಂದಲೇ ಸಮುದಾಯಗಳ ಸಾಂಸ್ಕೃತಿಕ ಚಟುವಟಿಕೆಗಳಿಗೆ ಹೊಡೆತ ಬಿದ್ದಿರುವುದನ್ನ ಗಮನಿಸಬಹುದು. ಏಕೆಂದರೆ ವಿದೇಶಿಯರು ಭಾರತದಲ್ಲಿ ಆಳ್ವಿಕೆ ಮಾಡುವಾಗ ಇಲ್ಲಿಯ ಸಂಪತ್ತನ್ನು ಕೊಳ್ಳೆ ಹೊಡೆದಿರುವುದಲ್ಲದೆ ಬುಡಕಟ್ಟು ಸಮಾಜದ ಮೇಲೆ ಗಾಢವಾದ ಪ್ರಭಾವ ಬೀರಿರುವುದು ನಿಜ ಸಂಗತಿಯಾಗಿದೆ. ಕಾಡಿನ ಪರಿಸರದಲ್ಲಿ ಅವರದೇ ಆದ ಮನರಂಜನೆಯ ಆಚರಣೆಗಳು, ಮದುವೆ, ಋತುಮತಿ, ಜನನ, ಸಾವು ಹಾಗೂ ಸೋಬಾನೆ ಪದ ಮತ್ತು ಬೀಸುವ ಪದ, ಕುಟ್ಟುವ ಪದಗಳು, ನೃತ್ಯಗಳೆಲ್ಲವೂ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ ಬಂದಿರುವುದು ಗೌಡಾಲುಗಳಲ್ಲಿ ಕಾಣಿಸುತ್ತದೆ. ಆದ್ದರಿಂದ ಈ ಸಮುದಾಯ ವಿದೇಶಿಯರ ಜೀವನ ಶೈಲಿಗೆ ಆಕರ್ಷಿತವಾಗಿದ್ದರೂ ಇಂದಿನ ದಿನಮಾನಗಳಲ್ಲಿ ಪ್ರಭಾವಿತ ಭೂಮಾಲೀಕರ ಸಾಮಾಜಿಕ ಬದುಕಿನ ಜೊತೆಯಲ್ಲಿ ತನ್ನ ವಿಶಿಷ್ಟತೆಯ ಸಾಂಸ್ಕೃತಿಕ ಆಚರಣೆಗಳನ್ನು ತನ್ನಲ್ಲಿ ಕಾಪಾಡಿಕೊಂಡು ಬಂದಿದೆ.

ಸಮಾಜದಲ್ಲಿ ಮಾನವ ಸಮುದಾಯಗಳು ತಮ್ಮ ಜೀವನ ಕ್ರಮವನ್ನು ನಡೆಸಲು ವ್ಯವಸ್ಥಿತವಾದ ಸಾಮಾಜಿಕ ಚೌಕಟ್ಟಿನ ಅಡಿಯನ್ನು ರೂಪಿಸಿಕೊಂಡು ಅದರ ಅಡಿಯಲ್ಲಿ ತಮ್ಮ ಜೀವನ ವಿಧಾನವನ್ನು ಮುಂದುವರೆಸಿಕೊಂಡು ಹೋಗುತ್ತವೆ. ಈ ಸಾಮಾಜಿಕ ಮೂಲ ಪ್ರಕ್ರಿಯೆಗಳಲ್ಲಿ ದಿನನಿತ್ಯ ಬದುಕಿನಲ್ಲಿ ಕಂಡುಬರುವ ಅವರ ಸಾಂಸ್ಕೃತಿಕ, ಧಾರ್ಮಿಕ, ಸಾಂಪ್ರದಾಯಿಕ ಕಲೆ ಆರಾಧನೆ, ಕ್ರೀಡೆಗಳು, ಹಬ್ಬ-ಹರಿದಿನಗಳು, ರೂಢಿ ಸಂಪ್ರದಾಯಗಳು, ಆಚಾರ-ವಿಚಾರ, ಸಾಮಾಜಿಕ ಮೌಲ್ಯಗಳು ಈ ಎಲ್ಲ ಅಂಶಗಳನ್ನು ರೂಢಿಸಿಕೊಂಡು ಅದರ ಅಡಿಯಲ್ಲಿ ತಮ್ಮ ಜೀವನವನ್ನು ನಡೆಸುತ್ತಿರುತ್ತಾರೆ. ''ಸಂಸ್ಕೃತಿ ಎಂದರೆ, ಜೀವನ ವಿಧಾನ ಅಥವಾ ಜೀವನ ಕ್ರಮವಾಗಿದ್ದು, ಮಾನವನು ನಿಗದಿತ ಕಾಲದಲ್ಲಿ, ನಿರ್ದಿಷ್ಟ ಪ್ರದೇಶದಲ್ಲಿ ಯಾವ ರೀತಿಯ ಜೀವನ ಕ್ರಮವನ್ನು ಹೊಂದಿದ್ದಾನೆ ಎಂಬುದನ್ನು ಸೂಚಿಸುತ್ತದೆ. ಭಾರತವು ವೈವಿಧ್ಯಮಯ ಸಂಸ್ಕೃತಿಗಳನ್ನು ಹೊಂದಿರುವಂತೆ ಇದರ ಪ್ರತಿಯೊಂದು ರಾಜ್ಯದಲ್ಲಿಯೂ ವಿವಿಧ ಪ್ರಕಾರದ ಸಂಸ್ಕೃತಿಗಳನ್ನು ನಾವು ಕಾಣಬಹುದು. ಅವುಗಳಲ್ಲಿ ಕರ್ನಾಟಕವು ಒಂದಾಗಿದೆ. ಅನೇಕ ರೀತಿಯ ಜಾನಪದ ಕಲೆಗಳು ಹಾಗೂ ಆರಾಧನೆಗಳು ಇಲ್ಲಿದೆ. ಇವು ವೈವಿಧ್ಯತೆ ಹಾಗೂ ಸಂಖ್ಯೆ ಇವೆರಡರ ದೃಷ್ಟಿಯಿಂದ ದಕ್ಷಿಣ ಭಾರತದಲ್ಲಿಯೇ ಅತಿಹೆಚ್ಚು ಪ್ರಾಮುಖ್ಯತೆ ಪಡೆದಿರುವುದನ್ನು ನಾವು ಕಂಡುಕೊಳ್ಳಬಹುದು. ದಕ್ಷಿಣ ಕರ್ನಾಟಕದ ಸಂಸ್ಕೃತಿಯನ್ನು ಐತಿಹಾಸಿಕವಾಗಿ ನೋಡುವುದಾದರೆ ಇದು ಹಲವಾರು ಧರ್ಮ, ಪರಂಪರೆಗಳ ತಾಣವಾಗಿದೆ. ಇದರ ಸಾಂಸ್ಕೃತಿಕ ಪರಂಪರೆ ಮತ್ತು ಭೌಗೋಳಿಕ ಹಿನ್ನೆಲೆಯು ಇಲ್ಲಿಯ ವೈವಿಧ್ಯಮಯವಾದ ಕಲೆ ಮತ್ತು ಸಂಸ್ಕೃತಿಗೆ ಕಾರಣವಾಗಿದೆ. ಕರ್ನಾಟಕದೊಳಗೆ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಸಿರುವ ಬುಡಕಟ್ಟು ಸಮುದಾಯದವರ ಕಲೆ ಮತ್ತು ಸಂಸ್ಕೃತಿಯು ಇದರಿಂದ ಹೊರತಾಗಿಲ್ಲ ಎಂಬುದು ಕಂಡುಬರುತ್ತದೆ.''[9] ಈ ಬುಡಕಟ್ಟು ಸಮುದಾಯಗಳು ವಿವಿಧ ಸಂಸ್ಕೃತಿ, ಧಾರ್ಮಿಕ ಆಚರಣೆಗಳನ್ನು, ಆರಾಧನ ಪದ್ಧತಿಗಳನ್ನು ಹೊಂದಿರುವುದು ಕಂಡುಬರುತ್ತದೆ.

''ಇವರು ತಮ್ಮದೇ ಆದ ಕುಲ ಸಂಬಂಧ, ರಕ್ತ ಸಂಬಂಧ, ಕುಲ ದೇವತಾ ಚಿಹ್ನೆ, ಹಬ್ಬ ಹರಿದಿನ, ಶವ ಸಂಸ್ಕಾರ ಪದ್ಧತಿಗಳು, ಲೋಕರೂಢಿ, ವಿವಾಹ, ಕೌಟುಂಬಿಕ ವ್ಯವಸ್ಥೆ, ಧಾರ್ಮಿಕ ಆಚರಣೆಗಳನ್ನು ಹೊಂದಿರುತ್ತಾರೆ.''[೩]

ಗೌಡಲು ಬುಡಕಟ್ಟು ಸಮುದಾಯದವರು ತಮ್ಮ ಕಲೆ ಮತ್ತು ಸಂಸ್ಕೃತಿಯ ಸಂಪತ್ತನ್ನು ಹೊಂದಿರುವುದರಲ್ಲಿ ಇತರೆ ಸಮುದಾಯಗಳಿಗಿಂತ ಯಾವುದೇ ರೀತಿಯಲ್ಲಿ ಕಡಿಮೆ ಇಲ್ಲ ಎಂಬುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ. ಇವರಲ್ಲಿ ಇರುವ ಸಾಂಸ್ಕೃತಿಕ ಮತ್ತು ಧಾರ್ಮಿಕ ಜೀವನವನ್ನು ಅವಲೋಕಿಸಿದಾಗ ಇವರ ಸಂಪ್ರದಾಯಗಳು, ರೂಢಿ, ಪದ್ಧತಿಗಳು, ವೈವಿಧ್ಯಮಯವಾಗಿರುವುದು ಕಂಡುಬರುತ್ತದೆ. ಇವರ ಜನಪದ ಸಂಸ್ಕಾರಗಳು, ನಾಮಕರಣದ ಸಂಸ್ಕಾರಗಳು, ಕೂದಲು ತೆಗೆಯುವ ಅಥವಾ ಕಿವಿಚುಚ್ಚುವ ಸಂಸ್ಕಾರಗಳು, ಋತುಮತಿಶಾಸ್ತ್ರ, ನಿಶ್ಚಿತಾರ್ಥ, ಮದುವೆ, ಮದುವೆಯಲ್ಲಿನ ಪದ್ಧತಿಗಳು, ಸೀಮಂತ ಅಥವಾ ಬಯಕೆಶಾಸ್ತ್ರ, ಮಗುವನ್ನು ತೊಟ್ಟಿಲಿನಲ್ಲಿ ಹಾಕುವ ಸಂಪ್ರದಾಯಗಳು, ಉತ್ತರ ಕ್ರಿಯೆ ಅಥವಾ ಶವಸಂಸ್ಕಾರ ವಿಧಾನ, ತಮ್ಮದೇ ಆದ ಜಾತಿ, ವರ್ಗ, ಸಾಮಾಜಿಕ ಸ್ತರವಿನ್ಯಾಸಗಳನ್ನು ಹೊಂದಿವೆ. ಹಾಗೆಯೇ ಇವರು ಹಬ್ಬಗಳನ್ನು ಆಚರಿಸುವ ವಿಧಾನಗಳು, ಆ ಹಬ್ಬಗಳ ಹಿನ್ನೆಲೆ, ದೇವರುಗಳ ನಂಬಿಕೆಯನ್ನು ಗಮನಿಸಬಹುದು. ವಿವಿಧ ದೇವರುಗಳ ಪೂಜೆ, ಪ್ರಕೃತಿ ಆರಾಧನೆ. ಮೂರ್ತಿ ಪೂಜೆ, ಪೂರ್ವಜರ ಪೂಜೆ ಹೀಗೆ ವಿವಿಧ ದೇವಾನುದೇವತೆಗಳ ಮೇಲಿನ ನಂಬಿಕೆ, ಭೂತದ ಆರಾಧನೆ, ಮಾರಿಯ ಗಡಿ, ಭೂತದ ಗಡಿ, ಕುಲೆಗಳ ಮೇಲಿನ ನಂಬಿಕೆ, ಕುಲೆಗಳಿಗೆ ವಿವಾಹ ಮಾಡುವ ವಿಧಾನ, ಹಿಂದಿನ ಮತ್ತು ಇಂದಿನ ಸಂಪ್ರದಾಯಗಳ ನಡುವಿನ ಸಂಬಂಧ, 'ಆಚರಣೆಯ ಪದ್ಧತಿಗಳು', ಪಂಜುರ್ಲಿ, ಗುಳಿಗ, ಕಲ್‌ಕುಟ್ಟಿ, ಮಾರಿ, ಜಾಡೆ, ರಾವುಭೂತ, ಭರ್ಮ, ನಾಗ, ನಂದಿ ಇವುಗಳಲ್ಲಿ ಇವರು ಹೊಂದಿರುವ ನಂಬಿಕೆಯನ್ನು ಗಮನಿಸಬಹುದು. ಹಬ್ಬಗಳಲ್ಲಿ ದೀಪಾವಳಿ, ಯುಗಾದಿ, ನಾಗರ ಪಂಚಮಿ, ಕದಿರುಹಬ್ಬ, ಆಟಿಅಮಾವಾಸ್ಯೆ, ಹರಕೆ ಹಬ್ಬ, ನವರಾತ್ರಿ, ಭೂಮಿ ಪೂಜೆ, ಇವುಗಳ ಆಚರಣಾಕ್ರಮಗಳ ಕುರಿತು ವಿವಿಧ ರೀತಿಯ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಮಾಹಿತಿದಾರರು ಆಡುವ ವಿವಿಧ ಆಟಗಳಾದ ಪಗಡೆ, ಚನ್ನೆಮಣೆ ಲಗೋರಿ, ಜೋಕಾಲಿ, ಕುಂಟಾಬಿಲ್ಲೆ, ಕಾರ್ಡ್ಸ್, ಕಣ್ಣಾಮುಚ್ಚಾಲೆ, ಚಿನ್ನಿದಾಂಡು, ಕಾಯಿ ಆಟ, ಕ್ರಿಕೆಟ್, ವಾಲಿಬಾಲ್, ಚಂಡಿನ ಆಟ ಹೀಗೆ ವಿವಿಧ ಆಟಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಇವರು ಹೊಂದಿರುವ ಧಾರ್ಮಿಕ ಕೇಂದ್ರಗಳು, ಇಲ್ಲಿ ಇವರು ಮಾಡುವ ಚಟುವಟಿಕೆ, ಜಾತ್ರೆಯ ಬಗ್ಗೆ ಇವರಲ್ಲಿ ಇರುವ ನಂಬಿಕೆ, ಜಾತ್ರೆಯ ಸಂದರ್ಭದಲ್ಲಿ ಇವರು ಮಾಡುವ ಕೆಲಸಗಳು, ಜಾತ್ರೆಯಲ್ಲಿ ಇವರ ಪಾತ್ರ ಇವುಗಳನ್ನು ಕುರಿತು ಮಾಹಿತಿ ಸಂಗ್ರಹಿಸಲಾಗಿದೆ.

ದೀಪಾವಳಿಯ ಸಂದರ್ಭದಲ್ಲಿ ಇವರು ಆಚರಿಸು ಅಂಟಿಗೆ-ಪಂಟಿಗೆ ಸಂಪ್ರದಾಯಗಳು, ಜಾನಪದ ಕಲೆಗಳು, ಕೋಲಾಟ, ಹಲ್ಲಿ ಕುಣಿತ, ಲಾವಣಿಗಳನ್ನು ಕುರಿತು ವಿವಿಧ ರೀತಿಯ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ. ಇವರಲ್ಲಿ ಕಂಡುಬರುವ ಹರಕೆ ಪದ್ಧತಿ, ಇದರ ಬಗ್ಗೆ ಇವರಲ್ಲಿ ಇರುವ ನಂಬಿಕೆ ವಿಶಿಷ್ಟವಾಗಿದೆ. ಅದನ್ನು ಇಂದಿಗೂ ತಮ್ಮ ಜೀವನದ ಅಂಗವಾಗಿ ಅನುಸರಿಸಿಕೊಂಡು ಬಂದಿದ್ದಾರೆ ಎಂಬ ಅಂಶವನ್ನು ಇಲ್ಲಿ

ಅಧ್ಯಯನ ಮಾಡಲಾಗಿದೆ. ಹರಕೆಯಲ್ಲಿ ನೀಡುವ ಬಲಿ ಪದ್ಧತಿಯನ್ನೂ ಅಧ್ಯಯನ ಮಾಡಲಾಗಿದೆ. ಜೊತೆಗೆ ಈ ಬುಡಕಟ್ಟು ಸಮುದಾಯದವರಲ್ಲಿ ಅಡಕವಾಗಿರುವ ಜನಪದ ಹಾಡುಗಳು, ಕಥೆಗಳು, ಜನಪದ ಕಲೆಯನ್ನು ಕುರಿತು ಮಾಹಿತಿಯನ್ನು ಕಂಡುಕೊಳ್ಳಲಾಗಿದೆ. ಕೌಟುಂಬಿಕ ಸಂಸ್ಕಾರಗಳು, ಆಹಾರ, ಉಡುಗೆ ತೊಡುಗೆ, ರಕ್ತ ಸಂಬಂಧ ಹಾಗೂ ಇವರಲ್ಲಿರುವ ಒಳಸಮುದಾಯಗಳ ಬಗ್ಗೆ ವಿಚಾರಗಳನ್ನು ಸಂಗ್ರಹಿಸಲಾಗಿದೆ. ಇವರ ಭಾಷೆ, ಸಾಹಿತ್ಯ, ಕ್ರೀಡೆಗಳು, ಒಗಟುಗಳನ್ನು ಕುರಿತು ವಿಷಯ ಸಂಗ್ರಹಿಸಲಾಗಿದೆ. ಇವರು ಹೊಂದಿರುವ ಕೌಟುಂಬಿಕ ಹೆಸರು, ಪ್ರತಿಯೊಂದು ಮನೆಗೂ ಇರುವ ನಾಮಗಳು, ಶಿಕ್ಷಣ, ಈ ಎಲ್ಲ ವಿಷಯಗಳಿಗೆ ಈ ಅಧ್ಯಯನದಲ್ಲಿ ಹೆಚ್ಚು ಒತ್ತನ್ನು ನೀಡಲಾಗಿದೆ. ಈ ಸಮುದಾಯದವರು ವಿವಿಧ ಕಾಯಿಲೆಗಳಿಗೆ ಗಿಡಮೂಲಿಕೆಗಳಿಂದ ಔಷಧಿಗಳನ್ನು ನೀಡುವುದು ಕಂಡುಬರುತ್ತದೆ. ಉದಾಹರಣೆಗೆ ನೆಗಡಿ, ಕೆಮ್ಮು, ವಾಂತಿ-ಬೇಧಿ, ಜ್ವರ, ಹೊಟ್ಟೆನೋವು, ಹಲ್ಲುನೋವು, ಸಿದ್ಧಿಗಾಯ, ತಲೆನೋವು, ಪಿತ್ತಾಂಗದ ಸಮಸ್ಯೆ, ಕಣ್ಣುಬೇನೆ, ಕಿವಿ, ಕಾಲು, ಮೂಳೆ, ಚರ್ಮದ ಕಾಯಿಲೆಗಳಿಗೂ ಔಷಧಿ ನೀಡುತ್ತಾರೆ. ಹಾವು ಕಡಿದರೆ, ಸಕ್ಕರೆ ಕಾಯಿಲೆ ಹೀಗೆ ಇನ್ನೂ ಹಲವು ಕಾಯಿಲೆಗಳಿಗೆ ಔಷಧಿಯನ್ನು ಕೊಡುವ ಜ್ಞಾನವನ್ನು ಈ ಜನಾಂಗದವರು ಹೊಂದಿರುವುದು ಒಂದು ವಿಶೇಷವಾಗಿದೆ. ಇದೆಲ್ಲ ಈ ಗೌಡಾಲು ಬುಡಕಟ್ಟು ಸಮುದಾಯದವರು ಸಮಾಜಕ್ಕೆ ನೀಡಿರುವ ಮಹತ್ತರವಾದ ಕೊಡುಗೆಯಾಗಿದೆ. ಇವುಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಿ ಮಾಹಿತಿಗಳನ್ನು ಕಂಡುಕೊಳ್ಳಲಾಗಿದೆ. ಈ ಬುಡಕಟ್ಟು ಜನಾಂಗದವರು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ ಹಾಗೂ ಜೀವನ ಕ್ರಮವನ್ನು ಹೊಂದಿರುವುದರ ಮೂಲಕ ಒಟ್ಟು ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ಈ ಅಧ್ಯಾಯದಲ್ಲಿ ಗೌಡಾಲು ಬುಡಕಟ್ಟು ಜನರ ಜೀವನಕ್ರಮ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಸ್ಕಾರಗಳು, ಹಬ್ಬ ಹರಿದಿನಗಳು, ಕೌಟುಂಬಿಕ ಸಂಸ್ಕಾರಗಳ ಬಗೆಗೆ ವಿವರಣೆಗಳನ್ನು ಕೊಡಲಾಗಿದೆ. ಮುಖ್ಯವಾಗಿ ಈ ಕ್ಷೇತ್ರಗಳಲ್ಲಿ ಪರಿಣತರಾದ ಸಂಶೋಧಕರ, ಲೇಖಕರ ಅನೇಕ ವಿಚಾರಗಳನ್ನು ಉದಾಹರಿಸುವುದರ ಮೂಲಕ ಅಧ್ಯಯನ ಕ್ಷೇತ್ರದಲ್ಲಿ ಕಂಡುಕೊಂಡ ಅಂಶಗಳನ್ನು ನಿರೂಪಿಸಲಾಗಿದೆ. ಜೊತೆಗೆ ಆರಾಧನೆ, ಆಚರಣೆ, ದಿನನಿತ್ಯದ ಚಟುವಟಿಕೆಗಳು, ಕ್ರೀಡೆಗಳು ಹಿಂದೆ ಏನಿದ್ದವು? ಈಗ ಅವುಗಳಲ್ಲಿ ಯಾವ ರೀತಿಯ ಬದಲಾವಣೆಗಳು ಆಗುತ್ತಿವೆ ಎಂಬುದನ್ನು ಕಂಡುಕೊಂಡು ಪ್ರತಿಯೊಂದು ಅಂಶಗಳನ್ನೂ ವಿವರಣೆಯೊಂದಿಗೆ ಅಧ್ಯಯನ ಮಾಡಲಾಗಿದೆ.

### ದೈವಿಕ ನಂಬಿಕೆ (ಭೂತದ ನಂಬಿಕೆ)

''ದೈವ ಅಥವಾ ದೇವರು ಒಂದು ಸಮಾಜದ ವೈಚಾರಿಕ ವಿಕಾಸದ ಜೊತೆ ಜೊತೆಯಲ್ಲೇ ಬೆಳೆದು ಬಂದ ಸಮಾಜದ ಒಂದು ಅವಿಭಾಜ್ಯ ಅಂಗ. ಸಮಾಜ ಮತ್ತು ದೇವರು ಇವೆರಡನ್ನೂ ಪ್ರತ್ಯೇಕಿಸಿ ನೋಡುವುದು ಅಸಾಧ್ಯದ ಮಾತು.''[೪]

ಗೌಡಾಲು ಬುಡಕಟ್ಟು ಸಮುದಾಯದವರು ಧಾರ್ಮಿಕವಾಗಿ ನಂಬಿಕೆಯನ್ನು ಹೊಂದಿದ್ದು, ಮೂರ್ತಿಪೂಜೆ, ಪ್ರಕೃತಿ ಪೂಜೆ ಮತ್ತು ಆತ್ಮಗಳ ಪೂಜೆಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಹಲವಾರು ಹಬ್ಬ-ಹರಿದಿನಗಳಲ್ಲಿ ದೇವರುಗಳನ್ನು ಪೂಜಿಸುತ್ತಿರುವುದು ಈ ಕೆಳಗಿನ ಕೋಷ್ಟಕದ ಮೂಲಕ ದೃಢೀಕರಿಸಿ ತಿಳಿಸಲಾಗಿದೆ.

ಕೋಷ್ಟಕ ೫.೦೧

ಗೌಡಾಲು ಸಮುದಾಯದವರು ಆರಾಧಿಸುವ ದೈವಗಳ ವಿವರ

| ವಿವರ (ಆರಾಧಿಸುವ ದೈವಶಕ್ತಿ) | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಪಂಜುರ್ಲಿ | ೮೦ | ೧೩.೮೪ |
| ಗುಳಿಗ | ೮೫ | ೧೪.೭೦ |
| ವರ್ತೆ | ೭೦ | ೧೨.೧೧ |
| ಕಲ್‌ಕುಟ್ಟಿ | ೪೦ | ೦೬.೯೨ |
| ಮಾರಿ | ೩೦ | ೦೫.೧೯ |
| ಜಟುಗ | ೪೨ | ೦೭.೨೬ |
| ಜಾಡೆ | ೩೨ | ೦೫.೫೩ |
| ರಾವುಭೂತ | ೪೧ | ೦೭.೦೯ |
| ಬರ್ಮೆ | ೩೯ | ೦೬.೭೪ |
| ನಾಗ | ೪೯ | ೦೮.೪೭ |
| ನಂದಿ | ೫೯ | ೧೦.೨೦ |
| ಕೋಡಮಣಿತ್ತಾಯ | ೧೧ | ೦೧.೯೦ |
| ಒಟ್ಟು | ೫೭೮ | ೧೦೦.೦೦ |

ಈ ಮೇಲಿನ ಕೋಷ್ಟಕವನ್ನು ಗಮನಿಸಿದಾಗ ನಮಗೆ ಕಂಡುಬರುವ ಸಂಗತಿ ಎಂದರೆ ಪಂಜುರ್ಲಿಯನ್ನು ಆರಾಧಿಸುವ ಒಟ್ಟು ಜನರು ೮೦(ಶೇ.೧೩.೮೪)ರಷ್ಟಿದ್ದಾರೆ. ೮೫(ಶೇ.೧೪.೭೦)ರಷ್ಟು ಜನ ಗುಳಿಗವನ್ನು ಪೂಜಿಸುವುದು ಕಂಡುಬರುತ್ತದೆ. ಹಾಗೆಯೇ ೭೦(ಶೇ.೧೨.೧೧) ಜನ ವರ್ತೆಯನ್ನು, ೪೦(ಶೇ.೦೬.೯೨) ಜನ ಕಲ್‌ಕುಟ್ಟಿಯನ್ನು, ೩೦ (ಶೇ೦೫.೧೯) ಜನ ಮಾರಿಯನ್ನು, ೪೨ (ಶೇ.೦೭.೨೬) ಜನ ಜಟುಗವನ್ನು, ೩೨ (ಶೇ.೦೫.೫೩) ಜನ ಜಾಡೆಯನ್ನು, ೪೧ (ಶೇ.೦೭.೦೯) ಜನ ರಾವುಭೂತವನ್ನು, ೩೯ (ಶೇ.೦೬.೭೪) ಜನ ಬರ್ಮನನ್ನು, ೪೯ (ಶೇ.೦೮.೪೭) ಜನ ನಾಗದೇವರನ್ನು, ೫೯ (ಶೇ.೧೦.೨೦) ಜನ ನಂದಿಯನ್ನು, ೧೧ (ಶೇ.೦೧.೯೦) ಜನ ಕೋಡಮಣಿತ್ತಾಯ ಎಂಬ ವಿವಿಧ ದೇವರುಗಳನ್ನು ಆರಾಧಿಸುತ್ತಿರುವುದು ಕಂಡುಬರುತ್ತದೆ. ಇಲ್ಲಿ ಅತಿ ಹೆಚ್ಚು ಜನ ಗುಳಿಗ, ಪಂಜುರ್ಲಿ, ವರ್ತೆ ನಂದಿಯನ್ನು ಪೂಜಿಸುತ್ತಾರೆ.

ಈ ಮೇಲಿನ ಕೋಷ್ಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ, ಕೆಲವರು ಒಂದಕ್ಕಿಂತ ಹೆಚ್ಚಿನ ದೇವರನ್ನು ಪೂಜಿಸುತ್ತಿರುವ ಕಾರಣದಿಂದಾಗಿ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ. ಉದಾಹರಣೆಗೆ ಪಂಜುರ್ಲಿ ಆರಾಧಿಸುವವರು ಗುಳಿಗವನ್ನೂ ಆರಾಧಿಸುತ್ತಿದ್ದಾರೆ. ಹಾಗೆಯೇ ಗುಳಿಗಳನ್ನು ಆರಾಧಿಸುವವರು ಪಂಜುರ್ಲಿ, ವರ್ತೆ, ನಂದಿ, ರಾವುಭೂತ ಇನ್ನೂ ಹಲವಾರು ದೇವರುಗಳನ್ನು ಆರಾಧಿಸುತ್ತಿರುವುದು ಈ ಅಧ್ಯಯನದಿಂದ ಕಂಡುಬರುತ್ತದೆ.

ಗೌಡಾಲು ಜನರು ಈ ಸಂಸ್ಕೃತಿಯನ್ನು ವಂಶಪಾರ್ಯವಾಗಿ ಉಳಿಸಿಕೊಂಡು ಬಂದಿದ್ದಾರೆ. ಸಾಮಾನ್ಯವಾಗಿ ಬುಡಕಟ್ಟು ಜನರು ಒಂದು ದೇಶದ ಮೂಲ ನಿವಾಸಿಗಳಾಗಿರುತ್ತಾರೆ. ಇವರು ಸಂಸ್ಕೃತಿಯನ್ನು ಪ್ರತ್ಯೇಕವಾಗಿಯೇ

ಉಳಿಸಿಕೊಂಡು ಬಂದಿರುತ್ತಾರೆ. ಇವರು ತಮ್ಮದೇ ಆದ ಜೀವನ ಶೈಲಿ, ಕುಲಸಂಬಂಧ, ರಕ್ತ ಸಂಬಂಧ ಹೊಂದಿದ್ದು, ದೈವಿಕ ಆರಾಧನೆಯನ್ನೂ ಹೊಂದಿರುತ್ತಾರೆ.

''ಬುಡಕಟ್ಟುಗಳು ಸರ್ವ ಚೇತನವಾದಿಗಳು. ಪ್ರಕೃತಿಯ ಕ್ರೂರವಾದ ಅಥವ ಹಾನಿಕಾರಕವಾದ ಪ್ರಾಣಿಗಳನ್ನು ದೈವವೆಂದು ನಂಬಿದ್ದಾರೆ. ಅವುಗಳಲ್ಲಿ ಹಾವು, ಸಿಂಹ, ಹುಲಿ, ಕೋಣಗಳನ್ನು ದೈವಗಳನ್ನಾಗಿಸಿಕೊಂಡು, ತಮಗೆ ಉಪಯುಕ್ತವಾದ ಕುರಿ, ದನ, ಹಾಲು, ನೀರು, ಬೇವು, ಭಂಡಾರ, ಸೂರ್ಯ, ಚಂದ್ರ ಇತ್ಯಾದಿಗಳನ್ನು ದೈವಗಳೆಂದು ನಂಬಿ ಆರಾಧಿಸುತ್ತಾ ಬಂದಿದ್ದಾರೆ.''[3]

ದೈವಾರಾಧನೆ ಎಲ್ಲ ಮಾನವ ಜನಾಂಗದಲ್ಲಿಯೂ ಕಂಡುಬರುತ್ತದೆ. ಮಾನವನ ಉಗಮದೊಂದಿಗೆ ದೈವಾರಾಧನೆಯೂ ಹುಟ್ಟಿಕೊಂಡಿದೆ. ಮೊದಲಿಗೆ ಪ್ರಕೃತಿ ವೈಚಿತ್ರ್ಯಗಳು ಅವನಲ್ಲಿ ಭಯಭಕ್ತಿಯನ್ನು ಹುಟ್ಟಿಸಿದ್ದವು. ತನ್ನ ಜೀವನವನ್ನು ಯಾವುದೋ ಕಾಣದ ಕೈ ನಿಯಂತ್ರಿಸುತ್ತಿದೆ ಎಂದು ಅವನು ಭಾವಿಸಿದ್ದನು. ತನ್ನ ಮಾನಸಿಕ ನೆಮ್ಮದಿ ಮತ್ತು ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಆತ ಅಗೋಚರ ಶಕ್ತಿಯನ್ನು ಅವಲಂಬಿಸಿದ ಮತ್ತು ಆ ಶಕ್ತಿಯನ್ನು ಸಂಪ್ರೀತಗೊಳಿಸುವ ಯತ್ನದಲ್ಲಿ ತೊಡಗಿ ತನಗೆ ದೊರಕಿದ ವಸ್ತು ವಿಶೇಷಗಳನ್ನು ಸಮರ್ಪಣ ಭಾವದಿಂದ ಆ ಶಕ್ತಿಗೆ ಅರ್ಪಿಸುತ್ತಾ ಬಂದ. ಹೀಗೆ ಅವರಲ್ಲಿ ದೈವಾರಾಧನೆ ಬೆಳೆದು ಬಂದಿತು ಎನ್ನಬಹುದು.

ಬುಡಕಟ್ಟು ಸಮುದಾಯದವರು ಸಹ ಮೂರ್ತಿಪೂಜೆ, ಪ್ರಕೃತಿಪೂಜೆ ಮತ್ತು ಪಿತೃಗಳ ಪೂಜೆ ಅಂದರೆ ಅವರು ತೀರಿಕೊಂಡ ನಂತರವೂ ಅವರ ಆತ್ಮದ ಬಗ್ಗೆ ನಂಬಿಕೆ ಇದ್ದು, ಅದನ್ನು ಪೂಜೆ ಮಾಡುವುದು ಕಂಡುಬರುತ್ತದೆ. ಗೌಡಾಲು ಬುಡಕಟ್ಟು ಜನರು ಧಾರ್ಮಿಕವಾಗಿ ಹಲವಾರು ದೇವರುಗಳನ್ನು ಆರಾಧಿಸುತ್ತಿದ್ದು, ದೈವಾರಾಧನೆಯು ಪ್ರದೇಶದಿಂದ ಪ್ರದೇಶಕ್ಕೆ ಸ್ವಲ್ಪ ಪ್ರಮಾಣದಲ್ಲಿ ಭಿನ್ನವಾಗಿರುವುದು ಕಂಡುಬರುತ್ತದೆ. ಇವರು ಆರಾಧಿಸುವ ದೇವರುಗಳೆಂದರೆ ಶಿವ, ವಿಷ್ಣು. ಹಾಗೆಯೇ ದೈವಗಳೆಂದರೆ ಗುಳಿಗ, ಪಂಜುರ್ಲಿ, ವರ್ತೆ, ಕಲ್‌ಕುಟ್ಕೆ, ಚೌಡಿ, ಮಾರಿ, ಭೂತ, ಜಾಡೆ, ಬರ್ಮ, ನಾಗ, ನಂದಿ, ಒಂಟಿ ಜಟುಗದಲ್ಲಿ ಅರಮನೆ ಜಟುಗ ಮತ್ತು ರಾಜ ಜಟುಗ, ದೂಮಾವತಿ, ಚೌಡಿಯಲ್ಲಿ-ರಣಚೌಡಿ ಸೂರಮನೆ ಚೌಡಿ, ಅಡಕೇಡ ಚೌಡಿ, ಭೂತದಲ್ಲಿ ಉರಿಭೂತ, ಜೋಡಿಭೂತ. ಹೀಗೆ ಹಲವಾರು ದೈವಗಳನ್ನು ಆರಾಧಿಸುತ್ತಾರೆ. ಇವುಗಳ ಹೆಸರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಭಿನ್ನವಾಗಿವೆ.

ಈ ದೈವಗಳಿಗೆ ಸಂಬಂಧಿಸಿದಂತೆ ಹಿಂದಿನಿಂದಲೂ ಮೂರ್ತಿಗಳು ಇರಲಿಲ್ಲ. ಬದಲಿಗೆ ಕತ್ತಿ, ಹರಿ ಅಥವಾ ಹರಿಕತ್ತಿ (ಕೈಯಲ್ಲಿ ಹಿಡಿದುಕೊಳ್ಳುವ ರಕ್ಷಕ ಸಾಧನ), ಬೆತ್ತ (ಜೋಡು ಬೆತ್ತಗಳು), ಗಗ್ರ (ದೇವರುಗಳ ಆಯುಧಗಳು). ಇವುಗಳನ್ನು ಇಟ್ಟು, ಈ ಸಾಧನಗಳಿಗೆ ದೈವ ಎಂಬುದಾಗಿ ನಂಬಿ ಅವುಗಳನ್ನು ಆರಾಧಿಸುತ್ತಿದ್ದರು. ಆದರೆ ಸಮಾಜ ಬದಲಾದಂತೆ ಈ ಎಲ್ಲ ದೈವಗಳಿಗೆ ಒಂದೊಂದು ಮೂರ್ತಿ ಸ್ವರೂಪ ಕೊಡಲಾಗಿದೆ. ಕೆಲವೊಂದು ಕಡೆಗಳಲ್ಲಿ ಮಣ್ಣಿನಿಂದ, ಮರದಿಂದ, ಕಂಚಿನಿಂದ, ಕಬ್ಬಿಣದಿಂದ, ತಾಮ್ರ ಮತ್ತು ಹಿತ್ತಾಳೆಗಳಿಂದ, ಕೆಲವರು ಬಂಗಾರದ ಲೇಪನಕೊಟ್ಟು ಮೂರ್ತಿಯ ರೂಪವನ್ನು ನೀಡಿದ್ದಾರೆ. ಕೆಲವರು ಕಲ್ಲುಗಳಿಗೆ ಈ ದೈವಗಳ ರೂಪ ಕೊಟ್ಟಿರುತ್ತಾರೆ. ಒಟ್ಟಾರೆಯಾಗಿ ಈ ಎಲ್ಲ ದೈವಗಳು ಬರಲು ಮುಖ್ಯಕಾರಣವೇನೆಂದರೆ ಇವು ಈ ಬುಡಕಟ್ಟು

ಸಮುದಾಯದವರ ರಕ್ಷಕರು ಎಂಬ ನಂಬಿಕೆ ಇವರಲ್ಲಿ ಇದ್ದು, ವ್ಯಕ್ತಿ, ಕುಟುಂಬ, ಸಮಾಜ, ಗ್ರಾಮ ಸಮುದಾಯ, ಪ್ರಾಣಿಗಳ ರಕ್ಷಣೆ, ಬೆಳೆಯ ರಕ್ಷಣೆ, ಆರೋಗ್ಯ ಮತ್ತು ಮಳೆ ಬೆಳೆಯ ಪ್ರಗತಿಯು ಆಗಬೇಕಾದರೆ ಈ ದೈವಗಳ ಆರಾಧನೆ ಆಗಬೇಕು ಎಂಬ ನಂಬಿಕೆ ಇವರಲ್ಲಿ ಇದೆ. ಹಾಗಾಗಿ ಈ ಗೌಡಾಲು ಬುಡಕಟ್ಟು ಜನರು ದೈವಗಳನ್ನು ಆರಾಧಿಸುತ್ತಾರೆ. ದೈವಗಳನ್ನು ವರುಷಕ್ಕೊಮ್ಮೆ ಸುಗ್ಗಿಯ ಕಾಲದಲ್ಲಿ, ತೊಂದರೆಗಳು ಬಂದಾಗ, ಹಬ್ಬಗಳ ಸಮಯದಲ್ಲಿ ಆರಾಧಿಸಿದರೆ, ಇನ್ನೂ ಕೆಲವರು ದಿನನಿತ್ಯ ಇವುಗಳನ್ನು ಆರಾಧಿಸುತ್ತಿರುವುದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ಒಂಟಿ ಮತ್ತು ಪಂಜುರ್ಲಿ**

ಒಂಟಿ ದೈವಗಳು ಮನೆಯ ದೈವಗಳಾಗಿವೆ. ಇವು ಮನೆಯ ಸದಸ್ಯರನ್ನು, ಮನೆಯನ್ನು, ಪ್ರಾಣಿ ಪಕ್ಷಿಗಳನ್ನು, ರಕ್ಷಿಸುತ್ತವೆ ಹಾಗೂ ಮಳೆ ಮತ್ತು ಬೆಳೆ ಸರಿಯಾಗಿ ಆಗುವಂತೆ ಮತ್ತು ಕಾಯಿಲೆ ಕಸಾಲೆಗಳು ಬಾರದಂತೆ ತಡೆಯುತ್ತವೆ. ಕುಟುಂಬದ ಸದಸ್ಯರಿಗೆ ಏನಾದರೂ ಅನಾಹುತವಾಗುವುದಾದರೆ ಈ ದೈವಗಳು ರಕ್ಷಿಸುತ್ತವೆ ಎಂಬ ನಂಬಿಕೆ ಈ ಬುಡಕಟ್ಟು ಸಮುದಾಯದವರಲ್ಲಿ ಇದೆ. ದೈವಗಳಿಗೆ ಹಬ್ಬಗಳ ಸಂದರ್ಭದಲ್ಲಿ, ಅಥವಾ ವಿಶೇಷ ಸಂದರ್ಭದಲ್ಲಿ ಪೂಜಿಸಿದರೆ, ಕೆಲವರು ದಿನನಿತ್ಯ ಪೂಜೆಯನ್ನು ಮಾಡುತ್ತಾರೆ. ದೈವಗಳು ಗುರಿಕಾರರ ಸ್ವರೂಪ ಎಂಬ ನಂಬಿಕೆ ಇವರಲ್ಲಿ ಇದೆ. ಹಿರಿಯರು ತೀರಿಕೊಂಡರು ಈ ದೈವಗಳಾಗಿ ಕುಟುಂಬವನ್ನು ರಕ್ಷಿಸುತ್ತಿರುತ್ತಾರೆ ಎಂಬ ದೃಢಭಾವನೆ ಇವರಲ್ಲಿ ಇದೆ. ಹಾಗೆಯೇ ಕುಟುಂಬದ ಇತರೆ ಸದಸ್ಯರ ಮೈಮೇಲೆ ಹಿರಿಯರ ರೂಪದಲ್ಲಿ ಬಂದು ಕುಟುಂಬದಲ್ಲಿ ಏನಾದರೂ ತಪ್ಪುಗಳಾದರೆ ಅಥವಾ ಸದಸ್ಯರಿಂದ ತಪ್ಪುಗಳು ನಡೆದರೆ ಈ ದೈವಗಳು ಹೇಳುತ್ತವೆ. ಹಾಗೆಯೇ ಪರಿಹಾರವನ್ನು ತಿಳಿಸುತ್ತವೆ. ಇದನ್ನು ಕಂಡುಕೊಂಡು ಕುಟುಂಬದ ಸದಸ್ಯರು ಪರಿಹಾರ ಕಾರ್ಯವನ್ನು ಮಾಡುತ್ತಾರೆ.

**ಜಟುಗ**

ಜಟುಗ ಸಾಮಾನ್ಯವಾಗಿ ಗ್ರಾಮದೇವತೆಯಾಗಿರುತ್ತದೆ. ಈ ದೈವವು ಅನಾಚಾರಗಳು, ಅಪರಾಧಗಳು, ಅಧರ್ಮ ನಡೆಯದಂತೆ ನೋಡಿಕೊಳ್ಳಲು ಹಾಗೂ ಶೋಷಣೆ, ದೌರ್ಜನ್ಯದಿಂದ ಜನರನ್ನು ರಕ್ಷಿಸಲು ಇರುವ ದೈವವಾಗಿದೆ. ಹಾಗೆಯೇ ಕಾಯಿಲೆ ಬಾರದಂತೆ ಗ್ರಾಮವನ್ನು ರಕ್ಷಿಸುತ್ತದೆ. ಪ್ರಾಣಿ, ಪಕ್ಷಿ, ಮನುಷ್ಯನಿಗೆ ತೊಂದರೆ ಆಗದ ರೀತಿಯಲ್ಲಿ ಈ ದೈವ ರಕ್ಷಿಸುತ್ತದೆ. ಈಶ್ವರನ ಅಂಗರಕ್ಷಕರಾಗಿ ಬಂದ ೪ ಜನ ಸೇವಕರು ಈಶ್ವರನ ಜೊತೆಯಲ್ಲಿ ಭೂಲೋಕಕ್ಕೆ ಬಂದು, ಶಿವನ ಜೊತೆಯಲ್ಲಿ ಮರಳದೆ ಭೂಮಿಯಲ್ಲಿಯೇ ಉಳಿದಿದ್ದು, ಅವರೇ ಮುಂದೆ ದೈವಗಳಾಗಿ ಒಂಟಿಯ ರೂಪದಲ್ಲಿ ಬಂದಿದ್ದಾರೆ ಎಂಬುದು ಮಾಹಿತಿದಾರರ ಅಭಿಪ್ರಾಯವಾಗಿದೆ. ಒಟ್ಟಾರೆ ಈ ದೈವವನ್ನು ಹಬ್ಬಗಳ ಸಂದರ್ಭದಲ್ಲಿ ಕೆಲವು ವಿಶೇಷ ಕಾರ್ಯಗಳಲ್ಲಿ ಅಥವಾ ವಾರ್ಷಿಕ ಹಬ್ಬಗಳ ಆಚರಣೆಯ ಸಂದರ್ಭದಲ್ಲಿ ಆರಾಧಿಸುತ್ತಾರೆ. ಹರಕೆ ಮಾಡಿಕೊಂಡವರು ಕೋಳಿ, ಕುರಿ, ಹಂದಿಯನ್ನು ವರ್ಷಕ್ಕೊಮ್ಮೆ ಬಲಿಕೊಟ್ಟು ಆರಾಧಿಸುತ್ತಾರೆ.

**ಅರಮನೆ ಜಟಗ**

ಇದು ಅರಮನೆಯನ್ನು ರಕ್ಷಿಸುತ್ತದೆ. ಅರಮನೆ ಎಂದರೆ ಕುಟುಂಬ, ಗ್ರಾಮ, ಸಮಾಜ ಅಥವಾ ಒಂದು ಭೌಗೋಳಿಕ ಪ್ರದೇಶ ಎಂಬ ಅರ್ಥವನ್ನು ಹೊಂದಿದೆ. ಇದು ಗ್ರಾಮ ದೇವತೆಯಾಗಿದ್ದು, ಇಡೀ ಗ್ರಾಮದ ಜನರಿಗೆ ಯಾವುದೇ ತೊಂದರೆ ಬಾರದೇ ಇರುವ ರೀತಿಯಲ್ಲಿ ರಕ್ಷಿಸುತ್ತದೆ. ಇದಕ್ಕೆ ವರ್ಷಕ್ಕೊಮ್ಮೆ ಕೋಳಿ, ಕುರಿ ಹಂದಿಯನ್ನು ಬಲಿ ಕೊಡುತ್ತಾರೆ. ಬಲಿ ಇಲ್ಲವಾದರೆ ಪೂಜೆ ನಡೆಯುತ್ತಿರುತ್ತದೆ.

**ಮಾರಿ**

ಇದು ಒಂದು ದೈವದ ರೂಪವಾಗಿದ್ದು, ವರ್ಷಕ್ಕೊಮ್ಮೆ, ಎರಡು ಮೂರು ಅಥವಾ ಐದು ವರ್ಷಕ್ಕೊಮ್ಮೆ ಜಾತ್ರೆ ಇರುತ್ತದೆ. ಇದು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಮಾರಿ ಗ್ರಾಮವನ್ನು ರಕ್ಷಿಸುತ್ತದೆ. ಜಾನುವಾರುಗಳಿಗೆ, ಮನುಷ್ಯನಿಗೆ ಯಾವುದೇ ತೊಂದರೆಗಳು ಬಾರದ ಹಾಗೆ ತಡೆಯುತ್ತದೆ. ಮಳೆ, ಬೆಳೆ, ಸರಿಯಾಗಿ ಆಗಲು ಈ ದೈವದ ರಕ್ಷಣೆಯು ಅವಶ್ಯಕವಾಗಿದೆ. ಹಿಂದೆ ಮಾರಿ ಜಾತ್ರೆ ಅಥವಾ ಹಬ್ಬಕ್ಕೆ ಕೋಣವನ್ನು ಬಲಿ ಕೊಡುತ್ತಿದ್ದರು. ಈಗ ಕೋಣವನ್ನು ಬಲಿ ಕೊಡದೆ ಅದರ ರಕ್ತವನ್ನು ಅರ್ಪಿಸುತ್ತಾರೆ. ಕೆಲವೊಂದು ಕಡೆಗಳಲ್ಲಿ ಮಾರಿ ಹಬ್ಬ ಅಥವಾ ಜಾತ್ರೆಯಲ್ಲಿ ಕೋಳಿ, ಕುರಿ, ಹಂದಿಯನ್ನು ಬಲಿ ಕೊಡುತ್ತಾರೆ. ಸಂಬಂಧಿಕರನ್ನು ಕರೆಸಿ, ಊಟವನ್ನು ಮಾಡಿಸುತ್ತಾರೆ. ಮಾರಿ ಎಂದರೆ ಇದು ಮಲಯಾಳಿ ಭೂತ(ದೈವ)ವಾಗಿದೆ ಎಂದು ತಿಳಿದುಬರುತ್ತದೆ.

**ಭೂತ**

ಬುಡಕಟ್ಟು ಜನರು ತಮ್ಮ ಜೀವನದ ಪ್ರತಿಯೊಂದು ವಿಷಯದಲ್ಲಿಯೂ ಸಾಮಾನ್ಯವಾಗಿ ನಂಬಿಕೆಗಳನ್ನು ಸೃಷ್ಟಿಕೊಂಡರು. ``ಭೂತಗಳು, ಶಕ್ತಿಗಳು ಅಸ್ತಿತ್ವದಲ್ಲಿವೆ. ಅವು ಜನರಂತೆಯೇ ಇರುತ್ತವೆ. ಆದರೆ ಜನರಿಗಿಂತ ಹೆಚ್ಚು ಶಕ್ತಿಶಾಲಿಯಾದವು. ಈ ಭೂತಗಳೇ ಮಿಂಚು, ಗುಡುಗು ಉಂಟುಮಾಡುವುದು, ಗಾಳಿ ಬೀಸುವಂತೆ ಮಾಡುವುದು, ಬೇಟೆಯಲ್ಲಿ ಸಹಾಯ ಮಾಡುವುದು, ಇಲ್ಲವೇ ಅಡ್ಡಿಯುಂಟು ಮಾಡುವುದು, ಜನರ ಮಧ್ಯೆ ರೋಗ ರುಜಿನಗಳನ್ನು ಹರಡುವುದು ಎಂಬುದಾಗಿ ಭಾವಿಸಿದರು.'' ``ಪಾತಾಳ, ಮಧ್ಯಲೋಕ, ದೇವಲೋಕ ಎಂದು ಮೂರು ಲೋಕಗಳು ಇವೆ. ಭೂತಗಳು ಇರುವುದು ಪಾತಾಳದಲ್ಲಿ. ಗಟ್ಟದ ಮೇಲೆ ಒಬ್ಬ ಗದ್ದೆ ಮಾಡುತ್ತಿರುವಾಗ ಗದ್ದೆಯ ಅಡಿಯಿಂದ ಭೂತ ಮೇಲಕ್ಕೆ ಬಂತಂತೆ.''[೬]

ಗೌಡಾಲು ಬುಡಕಟ್ಟು ಜನರ ಆರಾಧನೆಯ ಇನ್ನೊಂದು ದೈವ ಸ್ವರೂಪವೆಂದರೆ ಅದು ಭೂತ. ಸಾಮಾನ್ಯವಾಗಿ ಎಲ್ಲ ಗ್ರಾಮಗಳಲ್ಲಿಯೂ ಭೂತಗಳು ಇರುತ್ತವೆ. ಜಡಭೂತ, ರಾವುಭೂತ, ಹೊಸಭೂತ ಹೀಗೆ ಬೇರೆ ಬೇರೆ ಹೆಸರುಗಳಿಂದ ಇವುಗಳನ್ನು ಗುರುತಿಸುತ್ತಾರೆ. ಭೂತವು ಮರದ ಕೆಳಗೆ ಕಲ್ಲಿನ ರೂಪದಲ್ಲಿ ಪ್ರತಿಷ್ಠಾಪನೆಯಾಗಿರಬಹುದು ಅಥವಾ ಊರ ಹೊರಗೆ ಭೂತದ ಗುಡಿ ಇರಬಹುದು. ಈ ಭೂತಗಳು ಗ್ರಾಮವನ್ನು ರಕ್ಷಿಸುತ್ತವೆ. ಮನುಷ್ಯ, ಪ್ರಾಣಿ, ಪಕ್ಷಿಯನ್ನು ರಕ್ಷಿಸುತ್ತವೆ. ಗ್ರಾಮಕ್ಕೆ ಯಾವುದೇ ತೊಂದರೆಗಳು ಬಾರದ ಹಾಗೆ ರಕ್ಷಿಸುತ್ತವೆ ಎಂಬ ನಂಬಿಕೆ ಇದೆ. ಭೂತದ ಆರಾಧನೆಯನ್ನು `ಹರಕೆ'ಯಿಂದ ಮಾಡುತ್ತಾರೆ. ಭೂತ

ಎಂದರೆ 'ದೈವ' ಎಂಬ ಅರ್ಥವನ್ನು ಹೊಂದಿದೆ. ಭೂತದ ಆರಾಧನೆಯನ್ನು ಸಾಮಾನ್ಯವಾಗಿ ಕಾರ್ತಿಕ ಮಾಸದಲ್ಲಿ, ಸುಗ್ಗಿಯ ಸಂದರ್ಭದಲ್ಲಿ, ದೀಪಾವಳಿಯ ಸಂದರ್ಭದಲ್ಲಿ ಮಾಡುತ್ತಾರೆ. ಆಗ ಕೋಳಿ, ಕುರಿ, ಹಂದಿಯನ್ನು ಬಲಿ ಕೊಟ್ಟು ಆರಾಧಿಸುವ ಸಂಪ್ರದಾಯವು ಇವರಲ್ಲಿ ಇರುವುದು ಕಂಡುಬರುತ್ತದೆ. ಭೂತದ ಆರಾಧನೆ ಅಥವಾ ಹರಕೆಯ ಸಂದರ್ಭದಲ್ಲಿ ಕೆಲವು ಕಡೆ ಗಣ(ದರ್ಶನ)ವು ಬರುವುದು ಕಂಡುಬರುತ್ತದೆ. ಭೂತ ದೈವವನ್ನು ಕೆಲವರು ಮನೆಯಲ್ಲಿಯೇ ಆರಾಧಿಸುತ್ತಾರೆ. ಕೆಲವೊಂದು ಕಡೆ ಭೂತದ ಗುಡಿಗಳಿದ್ದರೆ ಕೆಲವು ಕಡೆ ಭೂತದ ಮನೆಗಳಿರುವುದು ಕಂಡುಬರುತ್ತದೆ.

### ಚೌಡಿ

ಚೌಡಿ ಕೆಲವೊಂದು ಕಡೆಗಳಲ್ಲಿ ದೊಡ್ಡ ದೈವವಾಗಿದೆ. ಇದಕ್ಕೆ ಚೌಡಿಯ ಕಲ್ಲು ಪ್ರತಿಷ್ಠಾಪನೆ ಮಾಡುತ್ತಾರೆ. ಕೆಲವೊಂದು ಕಡೆ ಚೌಡಿಯ ಗುಡಿ ಇರುತ್ತದೆ. ಕೆಲವೊಂದು ಕಡೆಗಳಲ್ಲಿ ಮರದ ಕೆಳಗೆ ಚೌಡಿ ದೈವವನ್ನು ಪ್ರತಿಷ್ಠಾಪಿಸಿರುತ್ತಾರೆ. ಕೆಲವರು ಮನೆಯಲ್ಲಿಯೇ ಆರಾಧಿಸುತ್ತಾರೆ. ಕೆಲವರು ಚೌಡಿಯ ಬನವನ್ನು ಸ್ಥಾಪಿಸುತ್ತಾರೆ. ಚೌಡಿಗೆ ವರ್ಷದಲ್ಲಿ ಒಮ್ಮೆ ಸುಗ್ಗಿ ಕಾಲದಲ್ಲಿ, ದೀಪಾವಳಿ ಮತ್ತು ಯುಗಾದಿಯ ಸಂದರ್ಭದಲ್ಲಿ, ಕೆಲವರು ಪ್ರತಿದಿನ ಮನೆಯಲ್ಲಿ ಪೂಜಿಸುತ್ತಾರೆ. ಹಾಲು, ಹಣ್ಣು, ಕಾಯಿ, ಕುಂಕುಮ, ಕರ್ಪೂರ, ಊದುಬತ್ತಿ ಮತ್ತು ಹೂ ಪೂಜೆಯ ವಸ್ತುಗಳಾಗಿವೆ. ಕೆಲವರು ಚೌಡಿಗೆ ಹರಕೆಯನ್ನು ಮಾಡಿಕೊಳ್ಳುತ್ತಾರೆ. ಆಗ ಕುರಿ, ಕೋಳಿ, ಹಂದಿಯನ್ನು ಬಲಿಯಾಗಿ ಕೊಡುತ್ತಾರೆ. ಚೌಡಿಯು ಗ್ರಾಮದ ರಕ್ಷಣೆಯನ್ನು ಮಾಡುತ್ತದೆ. ಆರೋಗ್ಯ, ಧಾನ್ಯಗಳ ಇಳುವರಿ, ಪ್ರಾಣಿ, ಪಕ್ಷಿಗಳ ರಕ್ಷಣೆ ಇತರೆ ಯಾವುದೇ ರೀತಿಯ ತೊಂದರೆಗಳು, ಕಾಯಿಲೆ ಕಸಾಲೆಗಳು ಬಾರದ ರೀತಿಯಲ್ಲಿ ಚೌಡಿ ದೈವ ರಕ್ಷಿಸುತ್ತದೆ ಎಂಬ ನಂಬಿಕೆ ಹೊಂದಿರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ. ಕೆಲವರು ಚೌಡಿಕಟ್ಟೆಯಲ್ಲಿ ದೀಪೋತ್ಸವವನ್ನು ಆಚರಿಸುತ್ತಾರೆ. ಒಟ್ಟಾರೆಯಾಗಿ ಚೌಡಿಯು ಒಂದು ಪ್ರಭಾವಿ ದೈವವಾಗಿದೆ ಎಂದು ತಿಳಿದುಬರುತ್ತದೆ.

### ದೂಮಾವತಿ ಮತ್ತು ರಾಜದೈವ

ಈ ದೈವಗಳು ಎಲ್ಲ ದೈವಗಳಿಗಿಂತಲೂ ಪ್ರಧಾನವಾಗಿವೆ. ಇವುಗಳನ್ನು ಸಾಮಾನ್ಯವಾಗಿ ಮೇಲುಜಾತಿಯವರು ಆರಾಧಿಸುತ್ತಿದ್ದರು. ಕ್ರಮೇಣವಾಗಿ ಇತರೆ ಅಸ್ಪೃಶ್ಯ ಜಾತಿಯವರೂ ಇದನ್ನು ಆರಾಧಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ದೈವದ ಆರಾಧನೆಯಲ್ಲಿ ಮಡಿವಂತಿಕೆಯು ಮುಖ್ಯವಾದದ್ದು. ಇವು ಇಡೀ ಜನ ಸಮುದಾಯಗಳ, ಗ್ರಾಮಗಳ, ಜನರ ರಕ್ಷಣೆಯನ್ನು ಮಾಡುತ್ತವೆ ಎಂಬ ನಂಬಿಕೆ ಜನರಲ್ಲಿ ಇದೆ. ಗಣ(ದರ್ಶನ)ವಾಗಿ ಬಂದಾಗ ಎಲ್ಲಾ ಗೌಡಾಲು ಬುಡಕಟ್ಟು ಜನರ ಮೇಲೂ ದರ್ಶನವಾಗುತ್ತಿರುವುದು ಕಂಡುಬರುತ್ತದೆ. ಜನರು ತಮ್ಮ ಹರಕೆಯನ್ನು ಈ ಸಂದರ್ಭದಲ್ಲಿ ಈಡೇರಿಸಿಕೊಳ್ಳುತ್ತಾರೆ.

### ಬ್ರಹ್ಮ

ಬ್ರಹ್ಮವು ಸಾಮಾನ್ಯವಾಗಿ ಚೌಡಿ ಇದ್ದ ವ್ಯಾಪ್ತಿಯಲ್ಲಿಯೇ ಇರುತ್ತದೆ. ಕೆಲವರು ಇದನ್ನು ಪ್ರತಿಷ್ಠಾಪನೆ ಮಾಡುತ್ತಾರೆ. ಬ್ರಹ್ಮವು ಮರದ ಕೆಳಗೆ ಸಾಮಾನ್ಯವಾಗಿ ಇರುತ್ತದೆ. ಬ್ರಹ್ಮನನ್ನು ಆರಾಧಿಸುವಾಗ ಹಾಲು,

ಹಣ್ಣು, ಹೂವುಗಳನ್ನು ಉಪಯೋಗಿಸುತ್ತಾರೆ. ಬೇರೆ ದೈವಗಳ ಹಾಗೆ ಇದಕ್ಕೆ ಕೋಳಿ, ಕುರಿ, ಹಂದಿಯ ಬಲಿಯನ್ನು ಕೊಡುವುದಿಲ್ಲ. ಎಲ್ಲ ಗ್ರಾಮಗಳಲ್ಲಿ ಬ್ರಹ್ಮದೈವವಿರುತ್ತದೆ. ಇದರ ಮುಖ್ಯ ಕಾರ್ಯವೆಂದರೆ ಗ್ರಾಮದ ರಕ್ಷಣೆಯಾಗಿರುತ್ತದೆ.

**ಜಕಣಿ**

ಈ ದೈವವು ಜನರ ಮತ್ತು ಗ್ರಾಮದ ರಕ್ಷಣೆಯನ್ನು ಮಾಡುತ್ತದೆ. ಹಾಗೆಯೇ ಜಕಣಿ ದೈವದ ಮುಖ್ಯ ಕೆಲಸ ಸತ್ತಿರುವವರಿಗೆ ಮದುವೆ ಮಾಡಿಸುವುದು. ಅಂದರೆ, ವಿವಾಹವಾಗದೇ ಸತ್ತರೆ ಅವರು ಕುಲೆಗಳಾಗಿ ಅಥವಾ ಪ್ರೇತಗಳಾಗಿ ಅಲೆಯುತ್ತಿದ್ದು, ಆ ಪ್ರೇತಗಳು ಕುಟುಂಬದ ಸದಸ್ಯರಿಗೆ ತೊಂದರೆ ಕೊಡುತ್ತವೆಯಂತೆ. ಇಂತಹ ಪ್ರೇತಗಳನ್ನು ಹುಡುಕಿ ಮದುವೆ ಮಾಡಿಸುತ್ತಾರೆ. ಆ ಸಂದರ್ಭದಲ್ಲಿ ಜಕಣಿಯು ಇಂತಹ ವಿವಾಹವನ್ನು ಮಾಡುತ್ತದೆ.

ಹೀಗೆ ಗೌಡಾಲು ಬುಡಕಟ್ಟು ಸಮುದಾಯದವರು ಹಲವಾರು ದೈವಗಳ ಆರಾಧಕರಾಗಿದ್ದು, ಈ ಮೇಲಿನ ದೈವಗಳ ಜೊತೆಯಲ್ಲಿ ಇನ್ನೂ ಹಲವಾರು ದೇವರುಗಳನ್ನು ಆರಾಧಿಸುತ್ತಿದ್ದಾರೆ. ಈಶ್ವರ, ಕೃಷ್ಣ, ರಾಮ, ಲಕ್ಷ್ಮೀ, ಸರಸ್ವತಿ, ಪಾರ್ವತಿ, ಬ್ರಹ್ಮ, ವಿಷ್ಣು, ಗಣೇಶ ಇನ್ನೂ ಮುಂತಾದ ದೇವರುಗಳನ್ನು ಆರಾಧಿಸುತ್ತಿರುವುದು ಕಂಡುಬರುತ್ತದೆ. ಇವುಗಳ ಜೊತೆಯಲ್ಲಿ ಬುಡಕಟ್ಟು ಜನರು ನೆಲೆಸಿರುವ ಕ್ಷೇತ್ರಗಳಲ್ಲಿ ಇರುವ ಇತರೆ ದೈವಗಳನ್ನೂ ಆರಾಧಿಸುತ್ತಿರುವುದು ಕಂಡುಬರುತ್ತದೆ.

**ಕುಲೆ ಆರಾಧನೆ (ಪ್ರೇತ ಆರಾಧನೆ)**

ಗೌಡಾಲು ಬುಡಕಟ್ಟು ಸಮುದಾಯದವರು ಸತ್ತ ನಂತರ ಮನುಷ್ಯನ ಜೀವ ಅಥವಾ ಆತ್ಮ ಅಸ್ತಿತ್ವದಲ್ಲಿರುತ್ತದೆ ಎಂಬ ನಂಬಿಕೆಯನ್ನು ಹೊಂದಿರುತ್ತಾರೆ. ಚಿಕ್ಕಮಗಳೂರು, ಶಿವಮೊಗ್ಗ ಮತ್ತು ಉಡುಪಿ ಜಿಲ್ಲೆಗಳಲ್ಲಿ ನೆಲೆಸಿರುವ ಈ ಗೌಡಾಲು ಸಮುದಾಯಗಳಲ್ಲಿ ಕುಲೆ ಪದ್ಧತಿಯು ಅಸ್ತಿತ್ವದಲ್ಲಿದೆ. ಕುಲೆಗಳು ನಿರಾಕಾರದಲ್ಲಿದ್ದು, ತಮ್ಮ ಕುಟುಂಬದವರ ಆಗು ಹೋಗುಗಳನ್ನು ನೋಡುತ್ತಿರುತ್ತವೆ. ಕುಟುಂಬದವರ ಆಸೆಗಳನ್ನು ಈಡೇರಿಸುತ್ತಿರುತ್ತವೆ. ಅವರ ಕಷ್ಟಗಳನ್ನು ದೂರಗೊಳಿಸುತ್ತವೆ ಎಂಬ ನಂಬಿಕೆಯೂ ಇವರಲ್ಲಿ ಇದೆ. ಹಾಗೆಯೇ ಕುಲೆಗಳಿಗೆ ಕಾಲಕಾಲಕ್ಕೆ ಅನ್ನ ಪಾನೀಯಗಳನ್ನು ನೀಡದೆ ಹೊದರೆ ತೊಂದರೆ ಕೊಡುತ್ತವೆ ಎಂಬ ನಂಬಿಕೆಯೂ ಇವರಲ್ಲಿ ಇದೆ. ಹಿಂದು ಧರ್ಮದ ಹಾಗೆ ಬೌದ್ಧ, ಜೈನ ಸಂಪ್ರದಾಯಗಳಲ್ಲಿ ಮತ್ತು ಪುರಾಣಗಳಲ್ಲಿ ಪುನರ್ಜನ್ಮ ಮತ್ತು ಸ್ವರ್ಗ ನರಕಗಳ ಬಗ್ಗೆ ನಂಬಿಕೆ ಇರುವುದು ಕಂಡುಬರುತ್ತದೆ. ಮರಣದ ಹಂತದಲ್ಲಿರುವ ವ್ಯಕ್ತಿಗೆ ಕೊನೆಯ ಸಲ ಬಾಯಿಗೆ ನೀರು ಬಿಡುವಾಗ 'ಸ್ವರ್ಗಕ್ಕೆ ಹೋಗಿ' ಎನ್ನುತ್ತಾರೆ. ಅನ್ಯಾಯ ಮಾಡಿದವರಿಗೆ ಹಂದಿಯಾಗಿ ಹುಟ್ಟಲಿ ಎಂದು ಬೈಯುತ್ತಾರೆ. ಸತ್ತವರು ಹದಿನಾರು ತಲೆಮಾರಿನವರೆಗೆ ಈ ಲೋಕದಲ್ಲಿ ಕುಲೆಗಳಾಗಿದ್ದು, ನಂತರ ಮೋಕ್ಷವನ್ನು ಪಡೆಯುತ್ತಾರೆ ಎಂಬ ಕಲ್ಪನೆ ಜನಪದವಾಗಿದೆ. ಹೀಗೆ ಸತ್ತ ವ್ಯಕ್ತಿಯನ್ನು ನೆನೆದು ಅವರ ಬೇಕು ಬೇಡಗಳನ್ನು ಪೂರೈಸುವ ಸಲುವಾಗಿ ವರ್ಷಕೊಮ್ಮೆ ಎಡೆ ಇಟ್ಟು ನೆನೆಯುವ ಕುಲೆಗಳ ಆರಾಧನೆಯನ್ನು ಗೌಡಾಲು ಜನರಲ್ಲಿ ವ್ಯಾಪಕವಾಗಿ ಕಾಣಬಹುದಾಗಿದೆ. ಅದರಲ್ಲಿಯೂ ಉಡುಪಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವಂತಹ ಗೌಡಾಲು ಸಮುದಾಯಗಳಲ್ಲಿ ಈ ಸಂಪ್ರದಾಯವು ಹೆಚ್ಚಾಗಿ ಕಂಡುಬರುತ್ತದೆ.

**ಕುಲೆಗಳ ನಂಬಿಕೆಯ ಹಿನ್ನೆಲೆ**

ದೇಹಕ್ಕೆ ಮಾತ್ರ ಸಾವು ಬರುತ್ತದೆ, ಆದರೆ ಆತ್ಮಕ್ಕೆ ಸಾವು ಎಂಬುವುದಿಲ್ಲ ಎಂಬ ನಂಬಿಕೆ ಹಿಂದೂ ಸಂಪ್ರದಾಯದಲ್ಲಿರುವುದನ್ನು ನಾವು ಕಾಣುತ್ತೇವೆ. ಅದೇ ರೀತಿಯಲ್ಲಿ ಬೇರೆ ಬೇರೆ ಧರ್ಮಗಳಲ್ಲಿಯೂ ಈ ನಂಬಿಕೆ ಇರುವುದು ಕಂಡುಬರುತ್ತದೆ. ಇದರಿಂದ ನಮ್ಮ ಜನ ಪೂರ್ವಜರಲ್ಲಿ ಅಥವಾ ಪುನರ್ಜನ್ಮದಲ್ಲಿ ನಂಬಿಕೆ ಹೊಂದಿದ್ದಾರೆ ಎಂಬುದು ಗೋಚರವಾಗುತ್ತದೆ. ಕೆಲವೊಂದು ಮಾಹಿತಿದಾರರಲ್ಲಿ ಕೆಲವೊಂದು ಆತ್ಮಗಳು ಭಗವಂತನನ್ನು ಸೇರಿ ಮೋಕ್ಷ ಪಡೆಯುತ್ತವೆ ಎಂಬ ದೃಢ ನಂಬಿಕೆಯೂ ಇದೆ. ಮನುಷ್ಯನು ಬದುಕಿದ ಸಂದರ್ಭದಲ್ಲಿ ಅವನು ಮಾಡಿರುವ ಕರ್ಮಗಳು, ಪಾಪ-ಪುಣ್ಯವು ಮುಂದೆ ಅವನನ್ನು ಸ್ವರ್ಗ ಮತ್ತು ನರಕಕ್ಕೆ ಹೋಗಲು ಸಹಕಾರಿಯಾಗಿವೆ ಎಂಬ ನಂಬಿಕೆಯು ಹೆಚ್ಚಿನವರಲ್ಲಿ ಇರುವುದನ್ನು ಕಾಣಬಹುದಾಗಿದೆ. ಸತ್ತವರನ್ನು ಬೆಟ್ಟಗುಡ್ಡಗಳ ಮೇಲೆಸೆಯುವುದು ಬಹಳ ಪ್ರಾಚೀನ ಸಂಪ್ರದಾಯವಾಗಿತ್ತು. ಇಂದಿನ ದಿನಗಳಲ್ಲಿಯೂ ಸಹ ಪಾರ್ಸಿಗಳು ಸತ್ತ ಹೆಣವನ್ನು ಗುಡ್ಡದ ಮೇಲೆ ಎತ್ತರವಾದ ಮರಕ್ಕೆ ತೂಗಾಡಿಸಿ ಪಕ್ಷಿಗಳಿಗೆ ಆಹಾರವಾಗಿ ನೀಡುತ್ತಾರೆ. ಮುಂದೆ ಹೆಣವನ್ನು ಸುಡುವ, ಹುಗಿಯುವ ಸಂಪ್ರದಾಯ ಬಂದಾಗ ಸುಟ್ಟ ಜಾಗದಲ್ಲಿ ಗುಡ್ಡದ ಆಕೃತಿಗಳನ್ನು ನಿರ್ಮಿಸವ ಪದ್ಧತಿ ರೂಢಿಗೆ ಬಂದಿತು. ನಂತರ ಸಮಾಧಿ, ಶಿಲೆಗಳು, ಬೃಂದಾವನಗಳು, ಸಮಾಧಿ ಮಂಟಪಗಳು, ಗೋರಿಗಳು ವಾಡಿಕೆಗೆ ಬರುವ ಮೊದಲು ಬರಿದಾಗಿಯೇ ಮಣ್ಣನ್ನು ಗುಡ್ಡದಾಕಾರದಲ್ಲಿ ಗುಡ್ಡೆ ಕಟ್ಟುತ್ತಿದ್ದರು. ಸತ್ತವರ ಪ್ರೇತವು ಅಲ್ಲಿ ನೆಲೆಸುತ್ತದೆ ಎಂಬ ನಂಬಿಕೆಯನ್ನು ಇವರು ಹೊಂದಿದ್ದು, ಅದನ್ನು ತೋರಿಸಲು ಹಾಗೂ ವರ್ಷಕ್ಕೊಮ್ಮೆ ಮೃತರಿಗೆ ಶ್ರಾದ್ಧಾದಿ ಕರ್ಮಗಳನ್ನು ನಡೆಸಬೇಕಾದ ಕ್ರಮವಿದೆಯೆಂದು ಗುರುತಿಸಲು ಈ ರಚನೆಯು ಅನುಕೂಲವಾಗಿದೆ.

''ಹಿಂದೆ ಬ್ರಾಹ್ಮಣರಲ್ಲಿ ಸತ್ತವನು ರಾಜನೋ, ಯತಿಯೋ, ಮಾಂತ್ರಿಕನೋ, ಶೂರನೋ ಆಗಿದ್ದರೆ ಗುಡ್ಡಗಳನ್ನು ಕಟ್ಟಿ ಅವುಗಳನ್ನು ಪೂಜಿಸುತ್ತಿದ್ದರು. ಮನುಷ್ಯನು ತನ್ನ ಮರಣದ ನಂತರವೂ ತನ್ನ ಮನೆ, ದೂಪೆ ಮತ್ತು ಪರಿಸರದಲ್ಲಿ ಅದೃಶ್ಯರೂಪದಲ್ಲಿ ಅಸ್ತಿತ್ವದಲ್ಲಿರುತ್ತಾನೆ ಎಂಬುದನ್ನು ಪ್ರಾಚೀನ ಕಾಲದಿಂದಲೂ ಜನಪದರು ನಂಬಿಕೊಂಡು ಬಂದಿದ್ದಾರೆ. ಹಲವಾರು ನಾಗರೀಕತೆಗಳಲ್ಲಿ ಈ ಮಾಹಿತಿ ಕಂಡುಬಂದಿದೆ. ಉದಾ ಗ್ರೀಸ್, ಈಜಿಪ್ಟ್, ರೋಮ್, ಮೆಸಪೊಟೋಮಿಯ, ಸಿಂಧೂ ಬಯಲಿನ ನಾಗರಿಕತೆ, ಚೀನಾ ನಾಗರಿಕತೆ, ಮುಂತಾದ ನಾಗರಿಕತೆಗಳ ಸಂಶೋಧನೆಗಳಲ್ಲಿ ತೊಡಗಿದಾಗ ಈ ಸಂಗತಿ ಕಂಡುಬಂದಿದೆ. ಮಾನವನು ಜೀವಿಸುವ ಕಾಲದಲ್ಲಿ ಯಾವ ಕೆಲಸ ಮಾಡುತ್ತಾನೋ, ಅದೇ ಕೆಲಸಗಳನ್ನು ಸತ್ತ ಬಳಿಕವೂ ಮಾಡುತ್ತಿರುತ್ತಾನೆ ಎಂಬ ಕಾರಣದಿಂದಲೇ ಹೊಂಡಗಳಲ್ಲಿ ಶವಗಳನ್ನು ಹುಗಿಯುವಾಗ ಜೊತೆಯಲ್ಲಿ ಆತ ನಿತ್ಯ ಬಳಸುವ ಪರಿಕರಗಳನ್ನು, ಆಹಾರ ಪಾನೀಯಗಳನ್ನು ಹುಗಿಯುತ್ತಿದ್ದರು. ಕೆಲವೊಂದು ಕಡೆಗಳಲ್ಲಿ ರಾಜನು ಸತ್ತಾಗ ಅವನೊಂದಿಗೆ ಆತನ ಸೇವಕರನ್ನು ಗೋರಿಗಳಲ್ಲಿ ಹುಗಿಯುತ್ತಿದ್ದರು. ಈಜಿಪ್ಟ್‌ನ ಫೆರೋ ರಾಜರು ಮಮ್ಮಿಗಳ ಪಕ್ಕದಲ್ಲಿ ಅವರು ಧರಿಸುತ್ತಿದ್ದ ಅಲಂಕಾರಿಕ ವಸ್ತುಗಳು, ಕಿರೀಟ, ಕನ್ನಡಿ, ಕೂದಲು, ಬಾಚಣಿಗೆ, ಕ್ಷೌರದ ಕತ್ತಿಗಳನ್ನು ಹುಗಿದಿಟ್ಟಿದ್ದು ಕಂಡುಬಂದಿದೆ. ಹೀಗೆ ಹಿಂದಿನ ಕಾಲದಿಂದಲೂ ದೇಶ ವಿದೇಶಗಳಲ್ಲಿಯೂ ಕುಲೆಗಳ ಬಗ್ಗೆ ನಂಬಿಕೆ ಇತ್ತು ಎಂಬುದು ತಿಳಿದುಬರುತ್ತದೆ.''[೭]

**ಕುಲೆಗಳ ವಿವಾಹದ ಆಚರಣೆ**

ಕುಲೆಗಳ ಬಗ್ಗೆ ಗೌಡಾಲು ಬುಡಕಟ್ಟು ಸಮುದಾಯದವರಲ್ಲಿ ಸಂಪೂರ್ಣ ನಂಬಿಕೆ ಇದೆ. ಈ ಕುಲೆಗಳಿಗೆ ಊಟ ಬಡಿಸುವ ಪದ್ಧತಿಯನ್ನು ಈ ಕೆಳಗಿನ ಕೋಷ್ಟಕದ ಮೂಲಕ ಕ್ರೋಢೀಕರಿಸಲಾಗಿದೆ.

**ಕೋಷ್ಟಕ ೫.೦೨**

**ಕುಲೆಗಳ ವಿವಾಹದ ಆಚರಣೆ**

| ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಆಷಾಢ ಮಾಸದಲ್ಲಿ | ೦೬ | ೦೬.೦೦ |
| ಕಾಲಾವಧಿ ಅಥವಾ ವರ್ಷಾವಧಿ ದಿನ | ೪೧ | ೪೧.೦೦ |
| ತಂಬಿಲದ ದಿನ | ೦೩ | ೦೩.೦೦ |
| ಅಮಾವಾಸ್ಯೆಯ ದಿನ | ೦೨ | ೦೨.೦೦ |
| ನಿರ್ದಿಷ್ಟವಾದ ಯಾವುದೇ ದಿನವಿಲ್ಲ | ೦೭ | ೦೭.೦೦ |
| ಬಲಿಪಾಡ್ಯಮಿ | ೧೧ | ೧೧.೦೦ |
| ಮೇಲಿನ ಎಲ್ಲ ಸಂದರ್ಭಗಳಲ್ಲಿ | ೩೦ | ೩೦.೦೦ |
| ಒಟ್ಟು | ೧೦೦ | ೧೦೦.೦೦ |

ಮೇಲಿನ ಕೊಷ್ಟಕವನ್ನು ಅವಲೋಕಿಸಿದಾಗ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ೦೬(ಶೇ.೦೬) ಜನ ಆಷಾಢ ತಿಂಗಳಲ್ಲಿ ಕುಲೆಗಳಿಗೆ ಪೂಜೆಯನ್ನು ಮಾಡುತ್ತಿದ್ದಾರೆ. ಹಾಗೆ ೪೧(ಶೇ.೪೧) ಜನ ವರ್ಷಾವಧಿಯಲ್ಲಿ ಅಥವಾ ಕಾಲವಾವಧಿಯಲ್ಲಿ, ೦೩(ಶೇ.೦೩) ಜನ ತುಂಬಿಲದ ದಿನ, ೦೨(ಶೇ.೦೨) ಜನ ಅಮವಾಸ್ಯೆಯ ದಿನ, ೦೭(ಶೇ.೦೭) ಜನ ನಿರ್ದಿಷ್ಟವಾಗಿ ಇದೇ ದಿನ ಎಂದಲ್ಲದೆ ಯಾವುದೇ ದಿನದಂದು, ೧೧(ಶೇ.೧೧) ಜನ ಬಲಿಪಾಡ್ಯಮಿಯಂದು, ೩೦(ಶೇ.೩೦) ಜನ ಮೇಲಿನ ಎಲ್ಲ ಸಂದರ್ಭಗಳಲ್ಲಿಯೂ ಕುಲೆಗಳಿಗೆ ಆರಾಧಿಸುವ ಅಥವಾ ಎಡೆ ಇಡುವ ಶಾಸ್ತ್ರವನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

ಇಲ್ಲಿ ಅತಿ ಹೆಚ್ಚು ಜನ ಕುಲೆಗಳ ಆಚರಣೆಯನ್ನು ಕಾಲಾವಧಿಯಲ್ಲಿ ಅಥವಾ ವರ್ಷಾವಧಿ ದಿನದಲ್ಲಿ ಮಾಡುತ್ತಿರುವುದು ಕಾಣಬಹುದು. ಹಾಗೆಯೇ ಅತಿ ಕಡಿಮೆ ಜನ ಶೇ.೦೨ರಷ್ಟು ಅಮಾವಾಸ್ಯೆಯ ದಿನದಂದು, ಶೇ.೦೩ರಷ್ಟು ಜನ ತುಂಬಿಲದ ದಿನದಂದು ಆರಾಧಿಸುತ್ತಿರುವುದು ಕಂಡುಬರುತ್ತದೆ. ಶೇ.೩೦ರಷ್ಟು ಜನ ಮೇಲಿನ ಅಂದರೆ ಎಲ್ಲ ಹಬ್ಬಗಳ ಸಮಯದಲ್ಲಿಯೂ ಕುಲೆಗಳನ್ನು ಆರಾಧಿಸುವ ಪದ್ಧತಿಯನ್ನು ಅನುಸರಿಸುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಎಲ್ಲರೂ ಕುಲೆಗಳನ್ನು ಆರಾಧಿಸುವ ಶಾಸ್ತ್ರವನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

**ಕುಲೆಗಳ ವಿವಾಹ (ಪ್ರೇತಗಳ ವಿವಾಹ)**

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಕಂಡುಬರುವ ಕುಲೆಗಳಿಗೆ ವಿವಾಹ ಮಾಡಿಸುವ ಪದ್ಧತಿಯು ಹಿಂದಿನಿಂದ ನಡೆದುಕೊಂಡು ಬಂದಿದ್ದು, ಇತ್ತೀಚಿನ ದಿನಗಳಲ್ಲಿ ಈ ಪದ್ಧತಿಯು ಕಡಿಮೆಯಾಗುತ್ತಾ ಇದೆ. ಕುಲೆಗಳ ವಿವಾಹವೆಂದರೆ ವಿವಾಹವಾಗುವ ಮುಂಚೆಯೇ ಯಾರಾದರೂ ತೀರಿಕೊಂಡರೆ ಅವರು ಪ್ರೇತವಾಗಿ ಬಂದು ಮನೆಯ ಸದಸ್ಯರಿಗೆ ತೊಂದರೆ ಕೊಡುತ್ತಾರೆ ಮತ್ತು ಮನೆಯ ಸದಸ್ಯರೊಬ್ಬರ ಮೈಮೇಲೆ ಬಂದು ನನಗೆ ಮದುವೆ ಮಾಡಿಸು ಎಂದು ಹೇಳುತ್ತಾರಂತೆ. ಹಾಗೆಯೇ ಕೆಲವೊಂದು ಸಂದರ್ಭದಲ್ಲಿ ಮನೆಯ ಸದಸ್ಯರಿಗೆ ತೊಂದರೆ ಕೊಡುತ್ತಿರುತ್ತಾರೆ. ಅಂತಹ ಸಮಯದಲ್ಲಿ ಪುರೋಹಿತರ ಹತ್ತಿರ ಹೋಗಿ ಕೇಳಿಸಿದಾಗ ಅವರು ಮನೆಯಲ್ಲಿ ಯಾರಾದರೂ ವಿವಾಹವಾಗದೇ ಸತ್ತಿದ್ದಾರೆಯೇ ಎಂದು ಕೇಳಿ, ಸತ್ತಿದ್ದರೆ ಅಂತಹ ಕುಲೆಗಳಿಗೆ ವಿವಾಹ ಮಾಡಿಸುತ್ತಾರೆ. ಅಂದರೆ ಬೇರೆ ಕಡೆ ಮದುವೆಯಾಗದೆ ಸತ್ತ ಬೇರೆ ಬೇರೆ ಬಳಿಯ ಪ್ರಾಯ ಹೊಂದಾಣಿಕೆಯಾಗುವ ತರುಣ ತರುಣಿಯರ ಪ್ರೇತಾತ್ಮಗಳಿಗೆ ವಿವಾಹ ಮಾಡಿಸುವುದನ್ನೇ ಕುಲೆ ವಿವಾಹ ಎನ್ನಲಾಗುತ್ತದೆ. ಸಾಮಾನ್ಯವಾಗಿ ಆಷಾಢ ತಿಂಗಳಲ್ಲಿ ಅಥವಾ ಬೇರೆ ತಿಂಗಳುಗಳ ಅಮಾವಾಸ್ಯೆಯ ದಿನ ಈ ರೀತಿಯ ವಿವಾಹವನ್ನು ಮಾಡಿಸುತ್ತಾರೆ.

ಕುಲೆಗಳ ವಿವಾಹವು ಸಾಮಾನ್ಯ ವಿವಾಹದಂತೆಯೇ ನಡೆಯುತ್ತದೆ. ಮದುವೆಯ ನಿಶ್ಚಯ ಮಾಡುವಾಗ ಗಂಡಿನ ಮನೆಯವರು ಹೆಣ್ಣಿನ ಮನೆಯವರ ಮನೆಗೆ ಹೋಗಿ ಹೆಣ್ಣು ಕೇಳಿ ನಿಶ್ಚಯ ಮಾಡುತ್ತಾರೆ. ಮದುವೆಯಾಗುವ ಹೆಣ್ಣುಕುಲೆಗೆ ಮುತ್ತೈದೆಯ ಅಲಂಕಾರ ಬೇಕು. ಕರಿಮಣಿ, ಕಾಲುಂಗುರ, ವಂಕಿ, ಉಂಗುರ, ಮಲ್ಲಿಗೆ ಹೂವು, ಧಾರೆಯ ಸೀರೆ, ಗಾಜಿನ ಬಳೆ ಮುಂತಾದವು ಬೇಕು. ವಿವಾಹವು ಗಂಡಿನ ಮನೆಯಲ್ಲಿ, ಕೆಲವೊಂದು ಕಡೆಗಳಲ್ಲಿ ವಧುವಿನ ಮನೆಯಲ್ಲಿ, ಇನ್ನೂ ಕೆಲವೊಂದು ಕಡೆಗಳಲ್ಲಿ ದೇವಸ್ಥಾನಗಳಲ್ಲಿ ನಡೆಯುತ್ತದೆ. ಎರಡು ಮಣೆಗಳನ್ನು ಅಕ್ಕಪಕ್ಕದಲ್ಲಿ ಇಟ್ಟು ಒಂದರಲ್ಲಿ ಮದುಮಗಳ ಉಡುಗೆಯನ್ನು ಇನ್ನೊಂದರಲ್ಲಿ ವರನ ಉಡುಗೆಯನ್ನು ಇಡುತ್ತಾರೆ. ಎರಡೂ ಮಣೆಗಳಲ್ಲಿ ಒಂದೊಂದು ಹೂವಿನಹಾರವನ್ನು ಇಡುತ್ತಾರೆ. ಅದರ ಮುಂದೆ ಮದುವೆ ಊಟದ 'ಎಡೆ' ಹಾಕಿರುತ್ತಾರೆ. ಹಿರಿಯರು ಪ್ರೇತಾತ್ಮಗಳನ್ನು ಪ್ರಾರ್ಥಿಸುತ್ತಾರೆ. ಎರಡು ಪ್ರೇತಾತ್ಮಗಳು ಇಹಲೋಕದಲ್ಲಿ ಅನುಭವಿಸಲಾಗದ ಸುಖವನ್ನು ಪರಲೋಕದಲ್ಲಿ ಅನುಭವಿಸಿ ಮುಕ್ತಿ ಪಡೆಯಲಿ ಎಂದು ಬೇಡಿಕೊಳ್ಳುತ್ತಾರೆ. ಮದುವೆ ಮುಗಿಸಿದ ನಂತರ ಮಣೆಯ ಮೇಲಿನ ಎರಡು ಹಾರಗಳನ್ನು ವಿನಿಮಯ ಮಾಡುತ್ತಾರೆ. ಕೋಣೆಯ ಬಾಗಿಲನ್ನು ಎಳೆದು ಸ್ವಲ್ಪ ಹೊತ್ತು ಹೊರಗೆ ನಿಲ್ಲುತ್ತಾರೆ. ಮತ್ತೆ ಒಳಗೆ ಹೋಗಿ ಮಡಚಿ ಇಟ್ಟಂತಹ ವಧು ಮತ್ತು ವರರ ಉಡುಗೆಯನ್ನು ಬಿಚ್ಚಿಡುತ್ತಾರೆ. ಬದಿಗಿಟ್ಟ ಎಲೆಗೆ ಮತ್ತೆ ಸ್ವಲ್ಪ ಊಟ ಸೇರಿಸಿ ಎರಡೂ ಕಡೆಯವರು ಊಟವನ್ನು ಮಾಡುತ್ತಾರೆ. ನಂತರ ಬಂದ ಎಲ್ಲ ಜನರಿಗೂ ಊಟವನ್ನು ಹಾಕುತ್ತಾರೆ. ಕೆಲವೊಂದು ಕಡೆ ವಧು ಮತ್ತು ವರನ ಆಕೃತಿಗಳನ್ನು ಮರದಿಂದ ಅಥವಾ ಬಾಳೆದಿಂಡಿನಿಂದ ಮಾಡುತ್ತಾರೆ. ಕೆಲವೊಂದು ಕಡೆ ಎರಡು ತೆಂಗಿನ ಕಾಯಿಯನ್ನು ಇಟ್ಟು ಮದುವೆ ಶಾಸ್ತ್ರವನ್ನು ಮಾಡುತ್ತಾರೆ. ಹಾಗಾಗಿ ವಿವಾಹ ಮಾಡುವ ವಿಧಾನವು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಭಿನ್ನವಾಗಿದೆ. ಸಾಮಾನ್ಯವಾಗಿ

ಚಿಕ್ಕಮಗಳೂರು, ಶಿವಮೊಗ್ಗ ಮತ್ತು ಉಡುಪಿ ಜಿಲ್ಲೆಗಳಲ್ಲಿ ನೆಲೆಸಿರುವ ಗೌಡಾಲುಗಳಲ್ಲಿ ಈ ಪದ್ಧತಿಯು ಸ್ವಲ್ಪ ಭಿನ್ನವಾಗಿರುವುದು ಕಂಡುಬರುತ್ತದೆ.

ಕುಲೆಗಳಿಗೆ ವಿವಾಹ ಮಾಡಿಸುವವರು ಮತ್ತು ಮಾಡಿಸದೆ ಇರುವವರನ್ನು ಕುರಿತು ಗೌಡಾಲು ಜನರ ಭಿನ್ನಾಭಿಪ್ರಾಯವನ್ನು ಈ ಕೆಳಗಿನ ಕೋಷ್ಟಕದ ಮೂಲಕ ಕ್ರೋಡೀಕರಿಸಲಾಗಿದೆ.

**ಕೋಷ್ಟಕ ೫.೦೩**

**ಸಮುದಾಯದ ಕುಟುಂಬಗಳಲ್ಲಿ ಕುಲೆಗಳ ವಿವಾಹ**

| ವಿವರ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಕುಲೆಗಳಿಗೆ ವಿವಾಹ ಮಾಡುವ ಕುಟುಂಬಗಳು | ೩೫ | ೩೫ |
| ಕುಲೆಗಳಿಗೆ ವಿವಾಹ ಮಾಡಿಸದೇ ಇರುವ ಕುಟುಂಬಗಳು | ೬೫ | ೬೫ |
| ಒಟ್ಟು | ೧೦೦ | ೧೦೦ |

ಈ ಮೇಲಿನ ಕೋಷ್ಟಕದ ಅಧ್ಯಯನದಿಂದ ೩೫(ಶೇ.೩೫)ರಷ್ಟು ಗೌಡಾಲು ಬುಡಕಟ್ಟು ಸಮುದಾಯಗಳಲ್ಲಿ ಕುಲೆಗಳಿಗೆ ವಿವಾಹ ಮಾಡುವಂತಹ ಪದ್ಧತಿಯು ಇರುವುದನ್ನು ಕಂಡುಕೊಳ್ಳಲಾಗಿದೆ. ಹಾಗೆಯೇ ೬೫ (ಶೇ.೬೫)ರಷ್ಟು ಜನರು ಕುಲೆಗಳ ವಿವಾಹದ ಆಚರಣೆ ಮಾಡುತ್ತಿಲ್ಲ. ಹಿಂದೆ ಇವರಲ್ಲಿ ಕುಲೆಗಳ ವಿವಾಹದ ಬಗ್ಗೆ ನಂಬಿಕೆ ಇತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಕುಲೆಗಳ ವಿವಾಹಕ್ಕೆ ಅಷ್ಟೊಂದು ಆದ್ಯತೆಯನ್ನು ನೀಡುತ್ತಿಲ್ಲ. ಶೇ.೩೫ರಷ್ಟು ಜನ ವಿವಾಹ ಮಾಡಿಸುವಾಗ ಸಂಪ್ರದಾಯದಂತೆ ಶಾಸ್ತ್ರೋಕ್ತವಾಗಿ ವಿವಾಹ ಮಾಡಿಸುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ಕುಲೆಗಳ ವಿವಾಹದಲ್ಲಿಯ ಬದಲಾವಣೆ**

ಇಂದಿನ ಆಧುನಿಕ ಯುಗದಲ್ಲಿ ನಮ್ಮ ಸಂಪ್ರದಾಯಗಳು ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಬದಲಾವಣೆಗಳು ಆಗುತ್ತಿರುವುದನ್ನು ನಾವು ಕಂಡುಕೊಳ್ಳಬಹುದು. ಹಾಗೆಯೇ ಕುಲೆಗಳಿಗೆ ವಿವಾಹ ಮಾಡಿಸುವ ಪದ್ಧತಿಯಲ್ಲಿಯೂ ಬದಲಾವಣೆ ಆಗುತ್ತಿರುವುದು ಕಂಡುಬರುತ್ತದೆ. ವಿದ್ಯಾವಂತ ಯುವಕ ಯುವತಿಯರು ಇದನ್ನು ನಂಬುವುದಿಲ್ಲ. ಆದರೆ ಕುಲೆಗಳಿಗೆ ಹಬ್ಬದ ಸಮಯದಲ್ಲಿ ಎಡೆ ಹಾಕುವ ಪದ್ಧತಿಯು ಇರುವುದು ಕಂಡುಬರುತ್ತದೆ. ಒಟ್ಟು ೬೫ ತಿಳುವಳಿಕೆದಾರರು ತಮ್ಮ ಕುಟುಂಬಗಳಲ್ಲಿ ಆಷಾಢ ತಿಂಗಳಲ್ಲಿ, ಅಮಾವಾಸ್ಯೆಯಂದು, ದೀಪಾವಳಿಯಂದು, ಹಬ್ಬ ಹರಿದಿನಗಳಂದು ತಮ್ಮ ಗತಿಸಿದ ಪೂರ್ವಜರಿಗೆ ಅಥವಾ ಕುಲೆಗಳಿಗೆ ಎಡೆ ಬಡಿಸುತ್ತಾರೆ ಎಂಬ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಶೇ.೩೫ರಷ್ಟು ತಿಳುವಳಿಕೆದಾರರಿಗೆ ಇದರ ಬಗ್ಗೆ ನಂಬಿಕೆ ಇಲ್ಲ ಎನ್ನುವುದನ್ನು ಕಂಡುಕೊಳ್ಳಬಹುದಾಗಿದೆ. ಆಧುನಿಕ ಸಮಾಜದ ಪ್ರಭಾವದಿಂದಾಗಿ ಹತ್ತು ಹಲವಾರು ಹಳೆಯ ಸಂಪ್ರದಾಯಗಳು ನಶಿಸಿ ಹೋಗುತ್ತಿರುವುದನ್ನು ಕಾಣಬಹುದು. ಇಲ್ಲಿ ಜನರ ನಂಬಿಕೆಗಳಲ್ಲಿ ಬದಲಾವಣೆಗಳಾಗುತ್ತಿರುವುದನ್ನು ಕಂಡುಕೊಳ್ಳಬಹುದು.

ಆಧುನಿಕ ಶಿಕ್ಷಣದ ಪ್ರಭಾವದಿಂದಾಗಿ ಹಿಂದಿನಿಂದ ಬೆಳೆದುಕೊಂಡು ಬಂದಿರುವಂತಹ ಕುಲೆ ಪದ್ಧತಿಯು ಇಂದು ಬದಲಾವಣೆಯಾಗುತ್ತಿದೆ ಮತ್ತು ಕೆಲವೆಡೆ ಕಡಿಮೆಯಾಗುತ್ತಿದೆ. ಹಿಂದೆ ಕುಲೆಗಳ ವಿವಾಹಕ್ಕೆ ಪುರೋಹಿತರನ್ನು ಕರೆಸಿ ದೇವಸ್ಥಾನಗಳಲ್ಲಿ ವಿವಾಹವನ್ನು ನಡೆಸುತ್ತಿದ್ದರು. ಎಲ್ಲರೂ ಶ್ರದ್ಧಾಭಕ್ತಿಯಿಂದ ಇದರಲ್ಲಿ ಪಾಲ್ಗೊಳ್ಳುತ್ತಿದ್ದರು. ಆದರೆ ಕಾಲ ಕಳೆದಂತೆ ಇದು ಕಡಿಮೆಯಾಗುತ್ತಿದೆ. ಇದೊಂದು ನಂಬಿಕೆ ಎಂದು ಕಂಡುಬಂದರೂ ಇದು ಮಕ್ಕಳ ಮತ್ತು ಪೋಷಕರ ಬಾಂಧವ್ಯವನ್ನು ಬೆಳೆಸುತ್ತದೆ ಎಂಬ ವಿಚಾರದಲ್ಲಿ ಅರ್ಥವಿದೆ. ಮಕ್ಕಳು ತಮ್ಮ ಹಿರಿಯರ ಬಗ್ಗೆ ಹೊಂದಿರುವ ಮನೋಭಾವನೆ, ಅನ್ಯೋನ್ಯ ಸಂಬಂಧ ಇನ್ನೂ ಮುಂತಾದ ಅಂಶಗಳನ್ನು ಕುರಿತು ಇದು ತಿಳಿಸುತ್ತದೆ. ಇದರಿಂದ ವ್ಯಕ್ತಿ-ವ್ಯಕ್ತಿಗಳ ನಡುವೆ ಪ್ರೀತಿ, ಸೌಹಾರ್ದ ಬೆಳೆಯುತ್ತದೆ. ಸತ್ತ ವ್ಯಕ್ತಿಗಳ ನೆನಪು ಮಾಡಿಕೊಳ್ಳುವುದು, ಹೊಸ ಪೀಳಿಗೆಗೆ ಅವರ ಬಗೆಗಿನ ತಿಳುವಳಿಕೆ ನೀಡುವುದು ಇದರಿಂದ ಸಾಧ್ಯವಾಗುತ್ತದೆ. ಆದ್ದರಿಂದ ಮೂಢನಂಬಿಕೆಯನ್ನು ಹೊರತುಪಡಿಸಿ ಇದನ್ನು ನೋಡಿದಾಗ ಇದೊಂದು ಧಾರ್ಮಿಕ, ಸಾಂಸ್ಕೃತಿಕ, ಆಚರಣೆಯಾಗಿದೆ. ಸಾಮಾಜಿಕ ಮನ್ನಣೆಯನ್ನು ಇದು ಪಡೆದಿರುವುದು ಈ ಸಂಶೋಧನೆಯಿಂದ ಗೋಚರಿಸುತ್ತದೆ.

### ೩.೧. ದೇವರು, ನಂಬಿಕೆಗಳು ಮತ್ತು ವಿಧಿ-ನಿಷೇಧಗಳು

ಭಾರತವು ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಸಾಂಸ್ಕೃತಿಕ ದೃಷ್ಟಿಯಿಂದ ಇತರೆ ರಾಷ್ಟ್ರಗಳಿಗೆ ಹೋಲಿಸಿದರೆ ಶ್ರೀಮಂತಿಕೆಯ ರಾಷ್ಟ್ರವಾಗಿದೆ. ಅಗೋಚರವಾದ ಶಕ್ತಿಗೆ ಇಲ್ಲಿ ವಾಸಿಸುವ ಸಮುದಾಯಗಳು ಬಯವನ್ನು ಸೃಷ್ಟಿಮಾಡಿಕೊಂಡು ಬದುಕನ್ನು ರೂಪಿಸಿಕೊಂಡಿವೆ. ಸಿ.ಎಚ್.ಕೂಲೆಯವರು ''ಪ್ರಾಥಮಿಕ ಹಂತದಿಂದಲೇ ಸಮಾಜ ವಿಕಾಸಗೊಂಡಿದೆ. ಆದ್ದರಿಂದಲೇ ಭಾರತೀಯ ಸಮಾಜ ಸಾಮಾಜಿಕ ಸಂಬಂಧಗಳ ಬಲೆ'' ಎಂದು ಹೇಳಿದ್ದಾರೆ. ಈ ಹಿನ್ನೆಲೆಯಲ್ಲಿ ಸಮಾಜದ ಸಾಂಸ್ಕೃತಿಕ ಅನನ್ಯತೆಯನ್ನು ಕುರಿತು ಸಮಾಜಶಾಸ್ತ್ರಜ್ಞರು ಅವರದೇ ಆದ ಅಧ್ಯಯನದ ಹಿನ್ನೆಲೆಯಲ್ಲಿ ಭಾರತೀಯ ಸಮಾಜದ ಸಂಪ್ರದಾಯಿಕ ಬಿಕ್ಕಟ್ಟುಗಳು ಎಷ್ಟರ ಮಟ್ಟಿಗೆ ಸಮಾಜದ ಪ್ರಗತಿಗೆ ಪೂರಕವಾಗಿವೆ ಹಾಗೂ ಇವು ತಳಸಮುದಾಯಗಳಲ್ಲಿ ಹೇಗೆ ಗಟ್ಟಿತನವನ್ನು ಕಾಪಾಡಿಕೊಂಡು ಬಂದಿವೆ ಎಂದು ಹೇಳಿದ್ದಾರೆ,[೮] ಗೌಡಾಲು ಸಮುದಾಯದ ಅಧ್ಯಯನದಲ್ಲಿಯೂ ದೇವರು ಮತ್ತು ನಂಬಿಕೆಗಳು ವಿಶೇಷವಾಗಿರುವುದು ತಿಳಿಯುತ್ತದೆ. ಇಲ್ಲಿ ಮಾನವನ ಬದುಕು ವಿಕಾಸಗೊಂಡಂತೆ ಅವನು ಮಾಡುವ ಬದುಕಿನಲ್ಲಿ ಆಚರಣೆಗಳು, ವಿಕಾಸಗೊಂಡಿರುವುದು ನಿಜ ಸಂಗತಿಯಾಗಿದೆ.

ಗೌಡಾಲುಗಳಲ್ಲಿ ಅಗಸ್ಟ್‌ಕಾಮ್ಟೆಯವರು ಹೇಳಿದುದರ ಹಿನ್ನೆಲೆಯಲ್ಲಿ ಹೇಳುವುದಾದರೆ, ಇವರು ಆಚರಿಸುವ ಪದ್ಧತಿಗಳು, ಸಂಪ್ರದಾಯಗಳು, ದೈವತ್ವದ ಬಗ್ಗೆ ಇರುವ ನಂಬಿಕೆಗಳೆಲ್ಲವೂ ಅಲೌಕಿಕ ಭಾವನೆಗಳಾಗಿವೆ. ಇವರ ಜೀವನವು ಕಾಡಿನ ಪರಿಸರದ ಎಲ್ಲ ಆಗುಹೋಗುಗಳು ದೈವಿಕ ಇಲ್ಲವೆ ಅಸುರೀ ಶಕ್ತಿಗಳ ಕೈವಾಡದಿಂದ ನಡೆಯುತ್ತಿರುವುದರಿಂದ ದೇವರು ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲಿಯೂ ನೆಲೆಗೊಂಡಿದ್ದಾರೆ. ಎಂಬುದಾಗಿ ನಂಬಿಕೆಯನ್ನು ಹೊಂದಿದವರಾಗಿದ್ದಾರೆ.

ಈ ಸಮುದಾಯ ಈಗಲೂ ಕಾಡಿನಲ್ಲಿ ಜೀವಿಸುವುದರಿಂದ, ದೇವರ ರೂಪವನ್ನು ಕಾಡಿನ ಗಿಡಮರಗಳಲ್ಲಿ ನೋಡುತ್ತಿರುವುದರಿಂದ ಇವರ ಬದುಕು ಮಾತೃದೇವತೆಯ ಆರಾಧನೆಯನ್ನು ಪಡೆದುಕೊಂಡಿತು. ಗೌಡಾಲು ಸಮುದಾಯವು ಜನಸಂಖ್ಯೆಯ ದೃಷ್ಟಿಯಿಂದ ೧೨೫೦೭ರಷ್ಟು ರಾಜ್ಯದಲ್ಲಿ ಇರುವುದಲ್ಲದೆ, ಚಿಕ್ಕಮಗಳೂರು ಜಿಲ್ಲೆಯಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ನೆಲೆ ನಿಂತು ಕಾಡಿನೊಳಗೆ ಜೀವನ ಕಟ್ಟಿಕೊಂಡಿದೆ. ಆದ್ದರಿಂದ ರಾಜ್ಯದಲ್ಲಿ ಸಾಂಪ್ರದಾಯಿಕ ದೃಷ್ಟಿಯಿಂದ ಇತರೆ ಬುಡಕಟ್ಟು ಸಮುದಾಯಗಳಿಗಿಂತ ಭಿನ್ನವಾದ ಆಚರಣೆಗಳನ್ನು ರೂಪಿಸಿಕೊಂಡು ಬದುಕು ಸಾಗಿಸುತ್ತಿದೆ. ಗೌಡಾಲು ಎಂದ ತಕ್ಷಣ ತಿಳಿಯುವುದೇನೆಂದರೆ ಚಿಕ್ಕದಾದ ಗುಂಪು ಎಂದು. ಏಕೆಂದರೆ ಈ ಸಮುದಾಯ ಹೇಳಿರುವಂತೆ ನಾವು ಕಾಶಿಯಿಂದ ಬಂದವರು, ಕಲಶೇಶ್ವರನ ಪೂಜೆಗೆಂದು ನಮ್ಮನ್ನು ಕರೆದುಕೊಂಡು ಬಂದರು. ಇಬ್ಬರು ಪುರುಷರು ಮತ್ತು ಇಬ್ಬರು ಮಹಿಳೆಯರು ಬಂದೆವು ಎನ್ನುವ ಹಿನ್ನೆಲೆಯನ್ನು ಗಮನಿಸಿದರೆ, ಇಲ್ಲಿಯವರೆಗೆ ಇವರ ಜನಸಂಖ್ಯೆಯನ್ನು ಅವಲೋಕಿಸಿದರೆ, ಅನಾದಿ ಕಾಲದಿಂದಲೂ ನೀರು, ಗಾಳಿ, ಬೆಳಕು ಮತ್ತು ಭೂಮಿಯನ್ನು ಹೆಚ್ಚು ಗೌರವಿಸುವುದಲ್ಲದೆ ಇವುಗಳೆಲ್ಲವೂ ಬುಡಕಟ್ಟು ಬದುಕಿನ ಅವಿಭಾಜ್ಯ ಅಂಗಗಳೇ ಆಗಿವೆ. ಹೀಗಾಗಿ ಗೌಡಾಲು ಸಮುದಾಯ ಜನಸಂಖ್ಯೆಯ ದೃಷ್ಟಿಯಿಂದ ಕಡಿಮೆ ಪ್ರಮಾಣದಲ್ಲಿರುವುದರಿಂದ ಇವರ ಜೀವನದ ರೂಪರೇಷಗಳು ಮೂಲ ಸ್ವರೂಪದಲ್ಲಿ ಗಟ್ಟಿತನವನ್ನು ಉಳಿಸಿಕೊಂಡಿವೆ. ಬುಡಕಟ್ಟಿನಲ್ಲಿ ಇಂದಿಗೂ ಹಬ್ಬ, ಜಾತ್ರೆ, ಪೂಜೆ, ಪುನಸ್ಕಾರಗಳು ಶ್ರೇಷ್ಠತೆಯಿಂದ ಕೂಡಿವೆ.

ಅಗಸ್ಟ್ ಕಾಮ್ಟೆಯವರು ಹೇಳಿರುವಂತೆ ವಸ್ತು ಪೂಜೆಯಿಂದ ಮಾನವನ ಪ್ರಾಥಮಿಕ ಜೀವನ ರೂಪಗೊಂಡ ಹಿನ್ನೆಲೆಯಿಂದ ಗೌಡಾಲುಗಳ ಬದುಕು ವಸ್ತು ಪೂಜೆಯಿಂದ ರೂಪಗೊಂಡಿರುವುದು ಗಮನಾರ್ಹವಾದುದಾಗಿದೆ. ಇವರು ಕಾಡಿನ ಅಣುರೇಣುತೃಣಗಳಲ್ಲಿ ದೈವೀ ಶಕ್ತಿ ಇದೆ ಎಂದು, ದೇವರು ಸರ್ವಚೇತನವಾದಿಯಾಗಿದ್ದಾನೆ ಎಂಬ ಮನೋಭಾವನೆಯಲ್ಲಿರುವ ಇವರು ದೇವರು ದೇವತೆಗೆ ಅವುಗಳದೇ ಆದ ನಿಶ್ಚಿತ ಕಾರ್ಯ ಮತ್ತು ಕಾರ್ಯಕ್ಷೇತ್ರವನ್ನು ನಿರ್ದಿಷ್ಟಪಡಿಸಿಕೊಂಡಿದ್ದಾರೆ.

ತಿಳುವಳಿಕೆದಾರರ ಪ್ರಕಾರ ನಾಡಿನಲ್ಲಿ ನಡೆಯುವ ಯಾವುದೇ ಅತಿವೃಷ್ಟಿ ಮತ್ತು ಅನಾವೃಷ್ಟಿಗಳು ಭಗವಂತನ ಇಚ್ಛೆಯಿಂದ ಪ್ರೇರಿತವಾಗಿವೆ. ಆದ್ದರಿಂದ ನಾವು ಮಾನವರು ಯಾವುದಕ್ಕೂ ಸಮಾನರಲ್ಲ. ಹೀಗಿರುವಾಗ ನಾವು ಮಾಡಿದ ಪಾಪಕ್ಕೆ ದೇವರು ಸುಮ್ಮನೆ ಬಿಡುವುದಿಲ್ಲ. ನಮಗೆಲ್ಲರಿಗೂ ಪಾಠ ಕಲಿಸುತ್ತಾನೆ ಇದಕ್ಕೆ ಸಾಕ್ಷಿಯಾಗಿ ನಮ್ಮ ಕಾಡು ನಾಶ ಮಾಡುವವರು ಬಹಳ ಕಾಲ ಬದುಕಲಾರರು ಎನ್ನುತ್ತಾರೆ. ಆದ್ದರಿಂದ ದೇವರು ಎಂಬ ಭಯದ ಭಾವನೆಯು ಬುಡಕಟ್ಟುಗಳಲ್ಲಿ ಆಳವಾಗಿ ಬೇರು ಬಿಟ್ಟಿದೆ. ಬದುಕಿಗೆ ಒಂದು ಭಯಬೇಕು. ಆ ಭಯ ಕಾಡನ್ನು ಉಳಿಸಿ ಬೆಳೆಸಿಕೊಂಡು ಬರಲು ಸಹಾಯಕವಾಗಿರುವುದು ಎಂಬ ಭಾವನೆ ಅವರದು.

ದೇವತಾರಾಧನೆ ಮಾನವ ಸಮೂಹದಲ್ಲಿಯೂ ಕಾಣಬರುತ್ತದೆ. ಆದ್ದರಿಂದ ಮಾನವ ಎಂದು ಭೂಮಿಯ ಮೇಲೆ ಸೃಷ್ಟಿಯಾದನೋ ಅಂದಿನಿಂದಲೇ ದೇವತಾರಾಧನೆಗೆ ತೊಡಗಿರುವುದು ನಿಜ ಸಂಗತಿಯಾಗಿದೆ. ಬುಡಕಟ್ಟು ಸಮುದಾಯಗಳಲ್ಲಿ ಪ್ರಕೃತಿ ವೈಚಿತ್ರ್ಯಗಳು ಭಯ ಭಕ್ತಿಯನ್ನು ಉಂಟುಮಾಡಿವೆ. ತನ್ನ ಜೀವನವನ್ನು ಯಾವುದೋ

ಕಾಣದ ಕೈ ನಿಯಂತ್ರಿಸುತ್ತದೆ ಎಂದು ತಿಳಿದುಕೊಂಡಿರುವ ಈ ಸಮುದಾಯಗಳು ತಮಗೆ ದೊರಕಿದ ಯಾವುದೇ ಪದಾರ್ಥ ವಸ್ತುಗಳನ್ನು ಅಗೋಚರವಾದ ಶಕ್ತಿಗೆ ಅರ್ಪಿಸುತ್ತಾ ಬಂದಿದ್ದರಿಂದ ದೇವತಾರಾಧನೆ ರೂಢಿಗತವಾಗಿದೆ.

''ಮನುಷ್ಯನ ಶಕ್ತಿಯ ಕೋಪ, ಕ್ರೋಧ, ಭಾವನೆಗಳನ್ನು ತಣಿಸಲು ಆ ಮೂಲಕ ಅದರ ಅನುಗ್ರಹ ಸಂಪಾದಿಸಲು ಅನೇಕ ಚಿತ್ರ ವಿಚಿತ್ರ ಮತಾಚರಣೆಗಳನ್ನು ಸೃಷ್ಟಿಸಿಕೊಂಡ. ಆದ್ದರಿಂದ ತನ್ನನ್ನು ತಾನು ಸಂರಕ್ಷಿಸಿಕೊಳ್ಳುವ, ನಿಯಮಕ್ಕೆ ಶಕ್ತಿಯ ಪೂರ್ಣಪ್ರಮಾಣದ ಅನುಗ್ರಹ ಗಳಿಸಲು ಆ ಆಚರಣೆಗಳು ಸಹಾಯಕವಾದವು. ಹೀಗೆ ದೇವತಾರಾಧನೆಗೆ ಸಂರಕ್ಷಣಾ ಭಾವನೆಯೇ ಮೂಲ ಪ್ರೇರಣೆಯಾಯಿತು. ಅಲ್ಲದೆ ಯಾವ ಶಕ್ತಿಯ ಸಹಾಯವೂ ಇಲ್ಲದೆ ತನ್ನ ಸಂರಕ್ಷಣೆ ಸಾಧ್ಯವಿಲ್ಲವೆಂದು ತಿಳಿದ ಮಾನವ ಸೃಷ್ಟಿಯ ಎಲ್ಲ ವಸ್ತುಗಳಿಗೂ ದೈವತ್ವವನ್ನು ಅವಲಂಬಿಸಿ ಬದುಕು ರೂಪಿಸಿಕೊಂಡನು.''[೯]

''ಗೌಡಾಲು ಬುಡಕಟ್ಟು ಸಮುದಾಯ ಸೃಷ್ಟಿಯ ಚರಾಚರ ವಸ್ತುಗಳಿಗೆಲ್ಲ ಚೇತನವನ್ನು ತುಂಬಿ ಎಲ್ಲ ಜೀವಿಗಳಲ್ಲೂ ಅಗೋಚರ ಶಕ್ತಿಯೊಂದು ಮನೆ ಮಾಡಿದೆ ಎಂದು ಭಾವಿಸಿದೆಯಲ್ಲದೆ ಆ ಶಕ್ತಿ ಏಕಕಾಲದಲ್ಲಿ ಒಳಿತು ಕೆಡುಕುಗಳನ್ನುಂಟು ಮಾಡುತ್ತದೆ. ಆ ಶಕ್ತಿಗೂ ಮಾನವನಂತೆ ಹಲವು ಆಸೆ ಆಕಾಂಕ್ಷೆಗಳಿವೆ, ರಾಗದ್ವೇಷಗಳಿವೆ ಎಂದು ತಿಳಿದು ಆ ಶಕ್ತಿ ಒಲಿದರೆ ಒಳಿತೆಂದು ಭಾವಿಸಿ ಅದರ ಕೋಪತಾಪಗಳನ್ನು ತಣಿಸಬೇಕು ಎಂದು ಆ ಯತ್ನದಲ್ಲಿಯೇ ತೊಡಗಿದೆ. ಈ ಪರಿಣಾಮವಾಗಿ ಹರಿವ ನೀರಿನಲ್ಲಿ, ಬೃಹದಾಕಾರವಾಗಿ ಬೆಳೆದು ನಿಂತ ಮರಗಿಡಗಳಲ್ಲಿ, ಎತ್ತರಕ್ಕೆ ನಿಂತ ಬೆಟ್ಟಗುಡ್ಡಗಳಲ್ಲಿ ಸರ್ವಾಂತರ್ಯಾಮಿಯನ್ನು ಕಂಡುಕೊಂಡಿರುವುದಲ್ಲದೆ ಅದಕ್ಕೆ ಅನುಕೂಲವಾಗಿ ನಡೆದುಕೊಂಡರೆ ತನ್ನ ಕಷ್ಟಗಳೆಲ್ಲವೂ ಮಾಯವಾಗುತ್ತವೆ, ಸಂಭವನೀಯ ಆಘಾತಗಳು ದೂರವಾಗುವುದಲ್ಲದೆ ಜೀವನ ಸುಖವಾಗುತ್ತದೆ ಎಂದು ಕಾಡಿನ ಆರಾಧನೆ, ದೇವತಾರಾಧನೆ, ದೈವ ಮತ್ತು ಭೂತಾರಾಧನೆಗಳು ಗೌಡಾಲುಗಳಲ್ಲಿ ಪ್ರಚಲಿತದಲ್ಲಿರುವುದು ಕಂಡುಬರುತ್ತದೆ.''[೧೦]

ಮಲೆನಾಡಿನ ಪಶ್ಚಿಮ ಘಟ್ಟ ಅಸಂಖ್ಯ ದೈವಗಳ ತವರೂರು. ದೈವಗಳ ಆರಾಧನಾ ಕ್ರಮವು ಪ್ರಚಲಿತವಿರುವ ನಡವಳಿಕೆಗಳಿಗನುಗುಣವಾಗಿ ಮಲೆನಾಡಿನ ಪ್ರತಿಯೊಂದು ಗ್ರಾಮದಲ್ಲೂ ಒಂದೊಂದು ಗ್ರಾಮದೇವತೆಯ ಆಚರಣೆಯು ಇದೆ. ಇಲ್ಲಿ ಬಹುಪಾಲು ಗ್ರಾಮಗಳ ಆದಿದೈವ ಸ್ತ್ರೀಯಾಗಿದ್ದು ಆದಿಮಾನವ ತನ್ನ ರಕ್ಷಣೆಗಾಗಿ ಪೂಜಿಸುತ್ತಿದ್ದ ಶಕ್ತಿದೇವತೆಯ ಪ್ರತಿರೂಪ ಎನ್ನಿಸಿದ್ದಾಳೆ. ಅಲ್ಲದೆ ಇವಳಂತೆ ಇನ್ನೂ ಅನೇಕ ಪ್ರಮುಖ ದೇವತೆಗಳು ಗ್ರಾಮಗಳಲ್ಲಿರುತ್ತವೆ. ಕ್ಷೇತ್ರಕಾರ್ಯದಲ್ಲಿ ಗಮನಿಸಿದ ವಿಶೇಷವೆಂದರೆ ದೈವ ಅಥವಾ ಕುಲದೇವತೆ ಇವರಲ್ಲಿ ಮುಖ್ಯವಾದ ಸ್ಥಾನವನ್ನು ಪಡೆದಿದೆ. ಗೌಡಾಲುಗಳಲ್ಲಿ ದೈವವದ ಪೂಜೆ ಮಾಡುವವನು ನಿಷ್ಠೆಯೊಂದಿಗೆ ತನ್ನ ಮನಸ್ಸನ್ನು ಸುದ್ದಿ ಮಾಡಿಕೊಂಡಿರಬೇಕು. ಅಲ್ಲದೆ ಭಯ ಭೀತಿಯಿಂದ ದೈವಕ್ಕೆ ಗೌರವವನ್ನು ಕೊಡುವಂತವನಾಗಿರಬೇಕು. ಚಿಕ್ಕಮಗಳೂರು ಜಿಲ್ಲೆಯ ಮೆಣಸಿನ ಹಾಡ್ಯದಲ್ಲಿ ದೈವದ ಮನೆಯು ಗೌಡಾಲುಗಳ ಹಾಡಿಯಲ್ಲಿ ಇದೆ. ವರ್ಷಕ್ಕೊಮ್ಮೆ ಈ ದೈವಕ್ಕೆ ಹರಕೆ ಪೂಜೆಯನ್ನು ಮಾಡುತ್ತಾರೆ. ಇವರಲ್ಲಿಯೇ ಒಬ್ಬ ಪೂಜಾರಿ ದೈವಕ್ಕೆ ಪೂಜೆ ಮಾಡಿ ಬಲಿ ಕೊಡುವ ಪರಂಪರೆ ಇದೆ. ಕಾಡು ಹಂದಿ ಇಲ್ಲವೇ ಇತ್ತೀಚೆಗೆ ಕುರಿ ಕೋಳಿಯನ್ನು ಬಲಿ ಕೊಡುತ್ತಾರೆ. ಕಡಿಯುವುದಕ್ಕೆ ಮೊದಲು ಕಪ್ಪು, ಕೆಂಪು ಬಿಳಿ ಹೀಗೆ ಮೂರು ಪ್ರಕಾರದ

ಓಕಳಿ ನೀರು, ಹನ್ನೊಂದು ನಿಂಬೆಹಣ್ಣನ್ನು ದೈವಕ್ಕೆ ಅರ್ಪಿಸಿ ಆ ನಂತರ ಬಲಿ ಕೊಡುವುದು. ಇಲ್ಲಿ ಬಲಿ ಕೊಟ್ಟ ಮೇಲೆ ದೈವಕ್ಕೆ ಎಡೆ ಹಾಕಿ ಅಕ್ಕಿ ಕಡುಬು, ಅನ್ನ ಕೋಸುವಿನ ಪಲ್ಯಗಳನ್ನು ದೈವಕ್ಕೆ ಅರ್ಪಿಸಿದ ನಂತರ ಇಡೀ ಹಾಡಿಯ ಜನರು ದೈವದ ಮುಂದೆ ಊಟ ಮಾಡುವ ಪದ್ಧತಿ ಇವರಲ್ಲಿದೆ.

ಗೌಡಾಲು ಸಮುದಾಯವು ಪೂಜಿಸುವ ಅಥವಾ ಆರಾಧಿಸುವ ದೇವರುಗಳಿಗೆ ಕೊರತೆಯೇನು ಇಲ್ಲ. ಒಂದೊಂದು ಮನೆತನಕ್ಕೂ ಒಂದೊಂದು ಚೌಡಿಯನ್ನು ಪೂಜಿಸುವ ನಿದರ್ಶನಗಳಿವೆ. ೧. ರಾಜದೈವ, ೨. ಭಾಗವತಿ ಕಲ್ಕುಡ, ೩. ಕಪ್ಪಿನಭೂತ, ೪. ಹೊಸಮಕ್ಕಿ ಭೂತ ೫. ಒಂಟಿ ಪಂಜ್ರೊಳ್ಳಿ ೬. ಹೊಸನಾಲಾ ಚೌಡಿ, ೭. ಚೂರುಮನೆ ಚೌಡಿಗಳನ್ನು ಆರಾಧಿಸುತ್ತಾರೆ. ಈ ದೇವರುಗಳು ವರ್ಷಕ್ಕೆ ಒಂದು ಬಾರಿ ಸಂಸೆಯ ಊರಿನ ಹಿತ್ತಲಮಕ್ಕಿ ಎಂಬ ಸ್ಥಳಕ್ಕೆ ಸೇರುತ್ತವೆ. ಇಲ್ಲಿ ಪದ್ಮಾವತಿ ಮತ್ತು ವರಮಹಾಲಕ್ಷ್ಮಿ ದೇವರುಗಳಿರುತ್ತವೆ. ಜೊತೆಗೆ ಭಗವತ ಶ್ರೀ ಮಹಾವೀರ ಕೂಡ ಸೇರುತ್ತಾನೆ. ಇಷ್ಟೆಲ್ಲ ದೇವರುಗಳು ಸೇರಿದ ಮೇಲೆ ತಾಯಿಯ ರತೋತ್ಸವ ನೆರವೇರುತ್ತದೆ. ಈ ರಥೋತ್ಸವಕ್ಕೆ ಮುಖ್ಯವಾಗಿ ಗೌಡಾಲುಗಳು ಇರಲೇಬೇಕು. ಏಕೆಂದರೆ ರಥೋತ್ಸವ ನೆರವೇರುವುದಕ್ಕೆ ಮೊದಲು ಒಂದು ವಿಶಾಲವಾದ ಸ್ಥಳವಿರುವ ಹಾಗೂ ಸುತ್ತಲು ಅಡಿಕೆ ತೋಟಗಳಿರುವ ಪ್ರದೇಶದಲ್ಲಿ ಎಲ್ಲ ದೇವರುಗಳು ಬಂದು ಸೇರುವುದಕ್ಕಾಗಿ ಕತ್ತಿಗಳು, ಸರ, ಛತ್ರಿ, ಯುದ್ಧಕ್ಕೆ ಸಂಬಂಧಿಸಿದ ಸಲಕರಣೆಗಳನ್ನು ಈ ಜಾತ್ರೆಗೆ ತರುವವರು ಗೌಡಾಲು ಸಮುದಾಯದವರಾಗಿರುತ್ತಾರೆ. ಆದ್ದರಿಂದ ಯುದ್ಧದ ಸಲಕರಣೆಗಳನ್ನು ತಂದು ಪೂಜೆಗೆಂದು ಕೊಡುವ ಕೆಲಸ ಗೌಡಾಲುಗಳದ್ದಿರುತ್ತದೆ. ಇಲ್ಲಿ ದ್ವೀಪದ ಡಳಿ ಅಂತ ಹೇಳಿ ಇರುತ್ತದೆ. ಇದು ದೇವರ ಎಡ ಮತ್ತು ಬಲ ಭಾಗಕ್ಕೆ ಇದ್ದು, ಇದಕ್ಕೆ ಬಟ್ಟೆಯಲ್ಲಿ ಮಾಡಿದ ಬತ್ತಿಗಳನ್ನು ಎಣ್ಣೆಯಲ್ಲಿ ಅದ್ದಿ ಒಂದು ಕಡೆ ಏಳು ಮತ್ತೊಂದು ಕಡೆ ಏಳು ದೀಪಗಳನ್ನು ಹಚ್ಚಿಡುತ್ತಾರೆ. ಹಾಗೇ ದೇವರುಗಳು ಬಾಜ ಬಾಜಂತ್ರಿಯಗಳಿಂದ ಕುಣಿದು ಕುಪ್ಪಳಿಸುತ್ತಿರುತ್ತವೆ. ಈ ರೀತಿಯಾಗಿ ತಾಯಿಯ ರಥೋತ್ಸವಕ್ಕೆ ಸಿದ್ಧರಾಗಿ ನಿಂತು ರಾತ್ರಿ ೧ ಘಂಟೆಯ ವೇಳೆಗೆ ನೆರವೇರುತ್ತದೆ. ಆದರೆ ಇಲ್ಲಿ ಗೌಡಾಲು ಸಮುದಾಯ ದೇವರುಗಳನ್ನು ನನ್ನ ದೇವರುಗಳು ಎಂದು ಭಾವಿಸಿಕೊಂಡು ಪೂಜೆಯನ್ನು ಕಣ್ಣುತುಂಬ ಸವಿಯುವುದಲ್ಲದೆ ಇಡೀ ಬ್ರಹ್ಮದೇವರು, ವರಮಹಾಲಕ್ಷ್ಮಿ ಮತ್ತು ಪದ್ಮಾವತಿಯ ಮೇಲಿನ ಉಸ್ತುವಾರಿಯನ್ನು ವಹಿಸಿಕೊಂಡಿರುವ ಜೈನರು ಹಾಗೂ ಬ್ರಾಹ್ಮಣರು ಹೇಳಿದಂತೆ ನಡೆಯುತ್ತಾರೆ. ಅಂದರೆ ಇಡೀ ಜಾತ್ರೆಯ ಕೆಳಸ್ತರದ ಕೆಲಸಗಳನ್ನು ಗೌಡಾಲುಗಳೇ ಮಾಡುತ್ತಾರೆ. ಕಳಸದಿಂದ ೧೮ ಕಿ.ಮೀ. ಜಾಂಬಾಳಗೆ ತಂದು ಇಲ್ಲಿಂದ ಸಂಸೆಗೆ ೫ ಕಿ.ಮೀ ಪಾಲಿಕೆ ಬಂಡಾರ ಕೆತ್ತಿ ಸರ ಮುಂತಾದವುಗಳ ಜೊತೆಗೂಡಿ ಜಾಂಬಾಳೆಯಿಂದ ದೇವರನ್ನು ತೆಗೆದುಕೊಂಡು ಸಂಸೆಗೆ ಕಾಲು ನಡಿಗೆಯಲ್ಲಿಯೇ ಈ ಸಮುದಾಯ ತನ್ನ ಜೀವನದಲ್ಲಿ ತಪ್ಪದೆ ನಡೆಸಿಕೊಂಡು ಬಂದಿದೆ. ಆದ್ದರಿಂದ ಪಶ್ಚಿಮ ಘಟ್ಟದ ಮಲೆನಾಡಿನಲ್ಲಿ ಜೈನರು ಮತ್ತು ಬ್ರಾಹ್ಮಣರ ಕೈಗೊಂಬೆಯಾಗಿ ಧಾರ್ಮಿಕ ವಿಧಾನಗಳನ್ನು ನೆರವೇರಿಸುವಂತಹ ವ್ಯವಸ್ಥೆಯು ಈಗಲೂ ಮುಂದುವರಿದುಕೊಂಡು ಹೋಗುತ್ತಿರುವುದನ್ನು ಗಮನಿಸಿದರೆ ಈ ರಾಜ್ಯದ ತಳ ಸಮುದಾಯಗಳು ಪ್ರಾಚೀನ ಕಾಲದಿಂದಲೂ ಪ್ರಭುತ್ವದ ಅಧೀನದಲ್ಲಿಯೇ ಬದುಕನ್ನು ಸಾಗಿಸಿಕೊಂಡು ಬರುತ್ತಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಗೌಡಾಲು ಸಮುದಾಯ ಪಂಜ್ರೊಳ್ಳಿ ದೈವವನ್ನು ಆರಾಧಿಸುತ್ತಾರೆ. ಹಸಿರು ಹಾರ ಕೊಟ್ಟು ಹರಕೆ ನಡೆಸುತ್ತಾರೆ. ಅಲ್ಲದೆ ಭಯದಿಂದ ಪೂಜಿಸುತ್ತಾರೆ. ಇಲ್ಲಿ 'ಹಸಿರು ಹಾರ' ಎಂದರೆ ಕೋಳಿ ಬಲಿ ಕೊಡುವ ಪರಿಪಾಟವಿದೆ. ಇಲ್ಲಿ ಇತರ ದೈವಗಳನ್ನು ಪೂಜಿಸುವಂತೆ ಅವಿವಾಹಿತನು ದೈವದ ಕಲ್ಲಿಗೆ ತುಸು ದೂರದಲ್ಲಿ ಅಡಿಯಿಕ್ಕಿ ಇಟ್ಟು ಕೋಳಿ ಕುಯ್ಯುವನು. ರಕ್ತ ಸಂಬಂಧಿಗಳನ್ನು ಕರೆದು ಊಟ ಹಾಕುವ ಪರಿಪಾಟವಿದೆ.

ಮೂಡಿಗೆರೆ ತಾಲೂಕಿನ ಕಳಸದ ಕಲಶೇಶ್ವರ ದೇವರು ಗೌಡಾಲು ಸಮುದಾಯದ ಮೂಲವನ್ನು ಬಟ್ಟುಮಾಡಿ ತೋರಿಸುವುದಷ್ಟೇ ಅಲ್ಲದೆ ಗೌಡಾಲುಗಳ ವಂಶಪರಂಪರೆಯ ಬದುಕು ಯಾವ ರೂಪದ್ದು ಎಂಬುದನ್ನು ತಿಳಿಹೇಳುತ್ತದೆ. ಅಂದರೆ ಕಲಶೇಶ್ವರನಿಗೆ ಸಂಬಂಧಿಸಿದಂತೆ ಹಲ್ಲಿ ಹಬ್ಬವನ್ನು ಮಾಡುತ್ತಾರೆ. ಆದ್ದರಿಂದಲೂ ಮತ್ತು ಕಲಶೇಶ್ವರನ ರಥೋತ್ಸವಕ್ಕೆ ತೇರನ್ನು ಕಟ್ಟುವುದರಿಂದ ಹಿಡಿದು ದೇವರ ಬಿಟ್ಟಿ ಕೆಲಸವನ್ನು ಪ್ರಸ್ತುತ ಸಂದರ್ಭದಲ್ಲಿಯೂ ಮಾಡುತ್ತಿದ್ದಾರೆ. ಆದರೆ ದೇವಸ್ಥಾನದ ಒಳಗಡೆ ಮಾತ್ರ ಯಾರೂ ಹೋಗುವುದಿಲ್ಲ. ಕ್ಷೇತ್ರಕಾರ್ಯದ ಸಮಯದಲ್ಲಿ ಬಾಬುಗೌಡ್ರು ಹೇಳಿದ ಮಾಹಿತಿಯ ಪ್ರಕಾರ 'ಕಲಶೇಶ್ವರ ದೇವರು ನಮ್ಮ ಆರಾಧ್ಯ ದೇವರು. ನಾವುಗಳೆಲ್ಲರೂ ಆತನ ಆರಾಧಕರು ಎನ್ನುತ್ತಾರೆ. ದೇವರ ಯಾವುದೇ ಕೆಲಸಗಳನ್ನು ನಮ್ಮ ಪೂರ್ವಜರಿಂದ ಮಾಡುತ್ತ ಬಂದಿದ್ದೇವೆ. ನಮ್ಮನ್ನ ಕಾಶಿಯಿಂದ ಇಲ್ಲಿಗೆ ದೇವರ ಕೆಲಸಗಳನ್ನು ಮಾಡಲು ಕರೆತಂದಿದ್ದರು ಎಂದು ಹಿರಿಯರು ಹೇಳುತ್ತಿದ್ದರು ಎನ್ನುತ್ತಾ ಕಲಶೇಶ್ವರ ಮತ್ತು ಗೌಡಾಲುಗಳ ಮಧ್ಯೆ ಇರುವ ಸಂಬಂಧ ಅನ್ಯೋನ್ಯವಾದುದು, ಆದ್ದರಿಂದಲೇ ನಾವು ಈಗಲೂ ಕಲಶೇಶ್ವರನ ಬಿಟ್ಟಿಕೆಲಸವನ್ನು ಮಾಡುತ್ತ ಬರುತ್ತಿದ್ದೇವೆ. ಇದಕ್ಕೆ ಉಪ್ಪನ್ನು ಮಾತ್ರ ತೆಗೆದುಕೊಳ್ಳುತ್ತೇವೆ ಎಂದು ತಮ್ಮ ಮನಸಿನಲ್ಲಿದ್ದ ಕಲಶೇಶ್ವರನ ಆರಾಧನೆಯು ಎಷ್ಟು ಶ್ರೇಷ್ಠವಾಗಿದೆ ಎಂಬುದನ್ನು ತೋರಿಸುತ್ತಾರೆ. ಇದನ್ನು ಗಮನಿಸಿದರೆ ಗೌಡಾಲುಗಳು ಕಲಶೇಶ್ವರನ ಭಕ್ತರಾಗಿ ಪೂಜಿಸುವುದಷ್ಟೇ ಅಲ್ಲದೆ ಈ ದೇವರ ಕಷ್ಟಗಳಿಗೂ ಜೊತೆಗೂಡುವಂತ ಮನಸ್ಸಿನವರಾಗಿದ್ದಾರೆ. ಏಕೆಂದರೆ ಕಲಶೇಶ್ವರನ ಮೇಲೆ ಹಲ್ಲಿ ಬಿತ್ತು ಎಂದು ಹಲ್ಲಿ ಬಿದ್ದಿರುವುದು ಅಪಶಕುನವೆಂದು ಶಕುನದ ಪರಿಹಾರಕ್ಕಾಗಿ ಹಲ್ಲಿ ಹಬ್ಬ ಆಚರಿಸಿ ತುಂಗಭದ್ರ ನದಿ ನೀರಿನಲ್ಲಿ ಬೂದಿ ಬಿಡುವ ಪದ್ಧತಿ ಸಾಂಪ್ರದಾಯಿಕವಾಗಿ ಇನ್ನು ನಡೆದು ಬರುತ್ತಿದೆ. ಆದ್ದರಿಂದ ಗೌಡಾಲುಗಳು ಕಲಶೇಶ್ವರನನ್ನು ಆರಾಧಿಸುವುದಷ್ಟೇ ಅಲ್ಲದೆ ಇವರ ಮೂಲ ದೇವರಾಗಿರುವುದು ಅಧ್ಯಯನ ದೃಷ್ಟಿಯಿಂದ ಗಮನಾರ್ಹವಾದ ಸಂಗತಿಯಾಗಿದೆ. ಕಳಸದ ಯಾವುದೇ ಸಮುದಾಯದ ಜನರು ಗೌಡಾಲುಗಳೇ ಕಲಶೇಶ್ವರನ ಬಿಟ್ಟಿಕೆಲಸ ಮಾಡುವವರು ಎನ್ನುತ್ತಾರೆ.

ಗೌಡಾಲು ಸಮುದಾಯವು ವಾಸಿಸುತ್ತಿರುವ ಸುತ್ತಮುತ್ತ ಇರುವ ಹೊರನಾಡು ಅನ್ನಪೂರ್ಣೇಶ್ವರಿ, ಶೃಂಗೇರಿಯ ಶಾರದಾ ದೇವಿ, ತುಳಸಿ, ಮಂಜುನಾಥ ಸ್ವಾಮಿ ದೇವರುಗಳನ್ನು ಪೂಜಿಸುತ್ತಾರೆ. ಅಲ್ಲದೆ ದೇವರುಗಳ ಜಾತ್ರೆ ಉತ್ಸವಗಳಲ್ಲಿ ಭಾಗವಹಿಸುತ್ತಾರೆ. ಆದರೂ ಕುಲದ ದೈವಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಾರೆ.

### ನಂಬಿಕೆಗಳು

ಪ್ರಾಚೀನ ಕಾಲದಿಂದಲೂ ಕಾಡಿನ ಇಳಿಜಾರಿನ ಕಂದರಗಳಲ್ಲಿ ಜೀವನ ಸಾಗಿಸುತ್ತಿರುವ ಗೌಡಾಲು ಬುಡಕಟ್ಟು ಸಮುದಾಯ ಆದಿಮಾನವನ ಬದುಕಿನ ರೂಪುರೇಷಗಳನ್ನು ತನ್ನಲ್ಲಿ ರೂಢಿಗತವಾಗಿಸಿಕೊಂಡು ಬಂದಿದೆ. ಅಲ್ಲದೆ

ಸಂಪ್ರದಾಯಬದ್ಧವಾದ ಸಾಮಾಜಿಕ ವ್ಯವಸ್ಥೆಯನ್ನು ಪಾರಂಪರಾಗತವಾಗಿ ತನ್ನದೇ ಆದ ನೆಲೆಯಲ್ಲಿ ಸಂರಚಿಸಿಕೊಂಡಿದೆ. ಆದ್ದರಿಂದ ನಾಡಿನ ಜನರಲ್ಲಿ ಇರುವ ನಂಬಿಕೆಗಳಿಗಿಂತ ಇವರಲ್ಲಿರುವ ನಂಬಿಕೆಗಳು ಹೆಚ್ಚು ವೈಜ್ಞಾನಿಕತೆಯಿಂದ ಕೂಡಿರುವುದಲ್ಲದೆ, ಸಮುದಾಯದ ಸಾರ್ವತ್ರಿಕತೆಯನ್ನು ಪ್ರತಿಬಿಂಬಿಸುವಂತವುಗಳಾಗಿವೆ. ಗೌಡಾಲು ಸಮಾಜ ನಂಬಿಕೆಗಳನ್ನು ಈಗಲೂ ಕಾಲದಿಂದ ಕಾಲಕ್ಕೆ ತಮ್ಮ ಮನಸ್ಸುಗಳಲ್ಲಿ ಇಟ್ಟುಕೊಂಡು ಬಂದಿರುವುದನ್ನು ಗಮನಿಸಿದರೆ ಸಮುದಾಯವು ನಂಬಿಕೆಯ ಆಧಾರದ ಮೇಲೆ ನಿಂತಿರುವುದು ಗೋಚರವಾಗುತ್ತದೆ. ಅಲ್ಲದೆ ಈ ಸಮುದಾಯ ವೃತ್ತಿಯ ವಿಷಯದಲ್ಲಿ ಸ್ವಾವಲಂಬನೆಯನ್ನು ಮೈಗೂಡಿಸಿಕೊಂಡಂತೆ ಬದುಕಿನಲ್ಲಿ ಹಲವು ನಂಬಿಕೆಗಳನ್ನು ಅಳವಡಿಸಿಕೊಂಡು ಕಾಡಿನ ಪ್ರಪಂಚದಲ್ಲಿ ಬದುಕು ಸಾಗಿಸುವ ಒಂದು ವಿಶಿಷ್ಟ ಬುಡಕಟ್ಟಾಗಿದೆ.

ಭಾರತವು ಸಾಂಸ್ಕೃತಿಕವಾಗಿ ವಿಭಿನ್ನವಾಗಿ ರೂಪಗೊಂಡಿರುವುದರಿಂದ, ಇಲ್ಲಿ ತಮ್ಮ ವಾಸದ ನೆಲೆಯನ್ನು ಗುರುತಿಸಿಕೊಂಡಿರುವ ಸಮುದಾಯಗಳು, ಆಯಾಯ ಭಾಗಗಳಿಗೆ ಅನುಗುಣವಾದ ನಂಬಿಕೆಗಳನ್ನು ಕಟ್ಟಿಕೊಂಡು ಬಂದಿರುವ ಹಿನ್ನೆಲೆ ದಕ್ಷಿಣ ಭಾರತದ ರಾಜ್ಯಗಳಲ್ಲಿ ಒಂದಾದ ಕರ್ನಾಟಕದ ದಕ್ಷಿಣ ಪ್ರದೇಶಗಳಾದ ಪಶ್ಚಿಮ ಘಟ್ಟದ ಕಾಡಿನ ಪರಿಸರಕ್ಕೆ ಪೂರಕವಾದ ನಂಬಿಕೆಗಳನ್ನು ಗೌಡಾಲು ಸಮುದಾಯ ರೂಪಿಸಿಕೊಂಡು ಇಂದಿನ ದಿನಮಾನದವರೆಗೆ ತನ್ನದೇ ಆದ ನಂಬಿಕೆಯಲ್ಲಿಯೇ ಬದುಕು ಸಾಗಿಸುತ್ತಿದೆ.

ಇಲ್ಲಿ ಈ ಸಮುದಾಯದವು ಬದುಕುವ ನೆಲೆ ಕಾಡಿನಿಂದ ಆವೃತವಾಗಿರುವುದರಿಂದ ಮಾತ್ರ ಪ್ರಧಾನತೆಯು ಸಮುದಾಯದಲ್ಲಿ ಇದ್ದುದರಿಂದ ಹಾಗೂ ಕಾಡು ಯಾವುದೇ ಪ್ರಾಣಿಗೆ ಭಯವನ್ನು ಉಂಟುಮಾಡುವುಲ್ಲದೆ ಇಲ್ಲಿ ವಾಸಿಸುವ ಮಾನವ ಪ್ರಾಣಿಯೂ ಭಯದಲ್ಲಿಯೇ ದಿನವಿಡೀ ಬದುಕು ಕಾಣುವಂತಾಗಿರುವುದರಿಂದ ಗೌಡಾಲುಗಳಿಗೆ ತನ್ನ ಸಮುದಾಯದ ಹಾಡಿಯ ಮುಖಂಡರ ಸಮ್ಮುಖದಲ್ಲಿ ಒಪ್ಪಿತವಾದ ನಂಬಿಕೆಗಳು ಈಗಲೂ ಚಾಲ್ತಿಯಲ್ಲಿವೆ. ಆದ್ದರಿಂದ ಈ ಬುಡಕಟ್ಟಿನಲ್ಲಿ ಯಾವ ರೀತಿ ಒಟ್ಟಾಗಿ ಜೀವಿಸಬೇಕು, ಪರಸ್ಪರರಲ್ಲಿ ನಂಬಿಕೆ ಹಾಗೂ ತಮ್ಮ ಸ್ವಂತ ದುಡಿಮೆಯಿಂದ ಬದುಕಬೇಕು, ಅರಣ್ಯದಲ್ಲಿ ಸಿಕ್ಕ ಯಾವುದೇ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿದರೂ ಅವುಗಳನ್ನು ಹಂಚಿಕೊಂಡು ತಿನ್ನಬೇಕು. ಹೀಗಾದಾಗ ಮಾತ್ರ ಸಮುದಾಯದ, ತಮ್ಮ ಬೆಳವಣಿಗೆ ಸಾಧ್ಯ ಎಂದು ನಂಬಿಕೊಂಡಿರುವ ಇವರು ನಂಬಿಕೆಗಳನ್ನು ಬದುಕಿನುದ್ದಕ್ಕೂ ಕರಗತ ಮಾಡಿಕೊಂಡು ಬಂದಿದ್ದಾರೆ. ನಂಬಿಕೆಗಳು ಇಲ್ಲಿ ಸಂಪ್ರದಾಯವಾಗಿವೆ. ಸಮುದಾಯದ ಪ್ರತಿಯೊಬ್ಬ ವ್ಯಕ್ತಿಯಿಂದ ವ್ಯಕ್ತಿಗೆ ಅನುವಂಶಿಕವಾಗಿ ಬಂದಿರುವ ಜಾನಪದೀಯ ಅಂಶವಾಗಿವೆ. ಆದ್ದರಿಂದ ಗೌಡಾಲು ತನ್ನ ಜೀವನದಲ್ಲಿ ಪಾಲಿಸಿಕೊಂಡು ಬಂದಿರುವ ನಂಬಿಕೆಗಳನ್ನು ಮುಂದುವರಿದು ಈ ರೀತಿ ಚರ್ಚಿಸಲಾಗಿದೆ.

**ಹಬ್ಬಕ್ಕೆ ಸಂಬಂಧಿಸಿದ ನಂಬಿಕೆಗಳು**

೧. ಹಬ್ಬದ ದಿನ ಸಗಣಿ ಬಳಿದು ರಂಗೋಲಿ ಇಡದಿದ್ದರೆ ಹಿರಿಯರಿಗೆ ಸಿಟ್ಟು ಬರುತ್ತದೆ.

೨. ಹಬ್ಬದಲ್ಲಿ ಯಾರಾದರೂ ಕುಟುಂಬದಲ್ಲಿ ತೀರಿಕೊಂಡರೆ ಮುಂದಿನ ವರ್ಷ ಹಬ್ಬ ಮಾಡಬೇಕು.

೩. ಗೌರಿ ಹಬ್ಬದಲ್ಲಿ ಚೌತಿ ಚಂದ್ರನನ್ನು ನೋಡಬಾರದು, ನೋಡಿದರೆ ಕೇಡು.

೪. ಶ್ರಾವಣದ ದಿನಗಳಲ್ಲಿ ಹಂದಿ ಮಾಸ ತಿನ್ನಬಾರದು, ತಿಂದರೆ ತೊಂದರೆಯಾಗುತ್ತದೆ.

೫. ಭೂಮಿ ಪೂಜೆಗಾಗಿ ಮನೆಯಿಂದ ಗದ್ದೆಗೆ ಒಯ್ಯುವ ದೀಪ ಆರಿ ಹೋಗಬಾರದು.

೬. ಅಂಟಿಕೆ ಪಂಟಿಗೆಯವರು ಹಾಡುತ್ತಿದ್ದಾಗ ದೀಪ ನಂದಿ ಹೋಗಬಾರದು, ಒಂದು ಪಕ್ಷ ನಂದಿ ಹೋದರೆ ಕೇಡು.

ಈ ನಂಬಿಕೆಗಳು ಪರಂಪರಾನುಗತವಾಗಿ ನಡೆದು ಬಂದ ಕಾರ್ಯಾಚರಣೆಗಳಾಗಿವೆ. ಒಂದು ಪಕ್ಷ ಇವುಗಳನ್ನು ನಡೆಸಿಕೊಂಡು ಹೋಗದಿದ್ದರೆ, ಹಿರಿಯರಿಗೆ ಅಪಚಾರವೆಸಗಿದಂತಾಗುತ್ತದೆ ಎಂಬ ಭಾವನೆಯ ಹಿನ್ನೆಲೆಯಲ್ಲಿ ಇವರು ಹಬ್ಬಗಳ ಆಚರಣೆಯನ್ನು ನಡೆಸಿಕೊಂಡು ಬಂದಿದ್ದಾರೆ. ಇಲ್ಲಿ ವರ್ತಮಾನದ ಬದುಕಿಗೆ ಗತಕಾಲದ ಜನರ ಆಲೋಚನೆ ಮತ್ತು ಭಾವನೆಗಳನ್ನು ಕೂಡಿಸುವುದು ಅಥವಾ ವ್ಯಕ್ತಿಯನ್ನು ಸಾಂಘಿಕ ಬದುಕಿಗೆ ತೊಡಗುವಂತೆ ಮಾಡುವುದೇ ಈ ಹಬ್ಬಾಚರಣೆಯ ಪ್ರಧಾನ ಉದ್ದೇಶವಾಗಿದೆ.

''ವಿಧಿ ಎಂದರೆ ಮಾಡಲೇಬೇಕಾದ ಅಥವಾ ಅನುಸರಿಸಲೇಬೇಕಾದ ಆಜ್ಞೆ. ಅದೇ ರೀತಿ ಇಂಥದನ್ನು ಮಾಡಕೂಡದು, ಮಾಡಲೇ ಕೂಡದು ಎನ್ನುವುದು ನಿಷೇಧ. ಇವು ಮನುಷ್ಯನ ಸಂಪ್ರದಾಯವಾಗಿವೆ. ಒಂದು ಅರ್ಥದಲ್ಲಿ ಇವು ಆಯಾ ಬುಡಕಟ್ಟು ಸಮುದಾಯಗಳು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದ ಮಾನಸಿಕ ಭಾವನೆಗಳಾಗಿವೆ. ಈ ಹಿನ್ನೆಲೆಯಿಂದ ಪ್ರತಿಯೊಂದು ಸಮುದಾಯದ ವಿಧಿ-ನಿಷೇಧಗಳು ಅವರವರ ವ್ರತ ನಂಬಿಕೆಗಳಿಗೆ ಆಧಾರ ಮತ್ತು ಆಕಾರವಾಗಿರುತ್ತವೆ.''[೧೧]

ಗೌಡಾಲುಗಳು ಹುಟ್ಟಿನಿಂದ ಮರಣದವರೆಗೂ ಅನೇಕ ಬಗೆಯ ಕಟ್ಟುನಿಟ್ಟಾದ ವಿಧಿ-ನಿಷೇಧಗಳನ್ನು ಪಾಲಿಸುವುದು ಈಗಲೂ ಇವೆ. ಇವರು ಪ್ರಾಚೀನ ಕಾಲದಿಂದಲೂ ಸಂಪ್ರದಾಯಶೀಲರಾಗಿದ್ದಾರೆ. ತಮ್ಮ ಪ್ರತಿಯೊಂದು ಆಚರಣೆಗಳಿಗೂ ವಿಧಿ-ನಿಷೇಧಗಳ ಸಂಬಂಧವನ್ನು ಕಲ್ಪಿಸುತ್ತಾರೆ. ಇವು ಗೌಡಾಲುಗಳ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಕೂಡ ಬಳಸುವ ಒಂದು ಬಗೆಯ ವಿಧಾನಗಳಾಗಿಯೇ ಮುಂದುವರಿದಿವೆ. ಇವರಲ್ಲಿರುವ ಈ ಬಗೆಯ ನಂಬಿಕೆ ಮತ್ತು ಆಚರಣೆಗಳನ್ನು ಗುರುತಿಸುವುದು ಮೇಲುನೋಟಕ್ಕೆ ಕಾಣುವಷ್ಟು ಸುಲಭವಲ್ಲ. ಏಕೆಂದರೆ ಬದಲಾದ ಶ್ರೇಣೀಕೃತ ಸಮಾಜದಲ್ಲಿ ಮೇಲ್‌ಸ್ತರದವರ ಆಚರಣೆಗಳ ಅಂಧಾನುಕರಣೆ ತಳ ಸಮುದಾಯಗಳ ಆಚರಣೆ ಮತ್ತು ನಂಬಿಕೆ ನಿಷೇಧಗಳನ್ನು ಮೌಢ್ಯ ಭಾವನೆಯಿಂದ ಕೂಡಿದವುಗಳೆಂದು ಕರೆಯುವ ಪರಿಪಾಠವಿದೆ.

''ಮಾನವ ಸಮಾಜವು ಬೆಳೆಯುತ್ತಾ ಬಂದಂತೆ ತನ್ನ ಬದುಕಿಗೆ ಅನುಗುಣವಾಗಿ ಹಾಗೂ ಸಮುದಾಯದ ಒಳತಿಗಾಗಿ ಅನೇಕ ರೀತಿಯ ಕಟ್ಟುಪಾಡುಗಳನ್ನು ರೂಢಿಸಿಕೊಂಡು ಪ್ರಾಚೀನ ಕಾಲದಿಂದಇಂದಿನವರೆಗೆ ನಡೆಸಿಕೊಂಡು ಬಂದಿರುವದನ್ನು ಕಾಣುತ್ತೇವೆ. ಆದ್ದರಿಂದ ಒಟ್ಟು ಮಾನವ ಸಂಸ್ಕೃತಿಯ ವಿವಿಧ ಘಟ್ಟಗಳನ್ನು ಹಾಗೂ ಅವುಗಳ ಸ್ವರೂಪ ಮತ್ತು ವಿನ್ಯಾಸಗಳನ್ನು ಗುರುತಿಸಿದಂತೆ ನಿಷೇಧಗಳೂ ಸಹ ಅಷ್ಟೇ ಪ್ರಾಮುಖ್ಯತೆಯನ್ನು ಪಡೆದಿರುತ್ತವೆ. ಈ ಹಿನ್ನೆಲೆಯಿಂದ ಬುಡಕಟ್ಟುಗಳನ್ನು ಅಧ್ಯಯನ ಮಾಡುವದಷ್ಟೇ ಅಲ್ಲ. ನಾಡಿನ ಜನರಿಂದ ದೂರವಿರುವ ಹಾಗೂ ಅವರದೇ ಆದ ವಿಶಿಷ್ಟತೆಯೆ ಹಿನ್ನೆಲೆಯನ್ನು ಹೊಂದಿರುವ ಸಮುದಾಯಗಳ ಸಂಸ್ಕೃತಿ,

ಭಾಷೆ, ಆಚರಣೆ, ಸಂಪ್ರದಾಯ ಹಾಗೂ ವೈವಾಹಿಕ ಆಚರಣೆಗಳಲ್ಲಿ ತಮ್ಮದೇ ಆದ ನಿಷೇಧಗಳನ್ನು ರೂಢಿಸಿಕೊಂಡು ಬಂದಿರುವುದು ಕಂಡುಬರುತ್ತದೆ.''[೨] ಇಲ್ಲಿ ವಿಧಿ-ನಿಷೇಧಗಳನ್ನು ಕುರಿತು ಕ್ಷೇತ್ರಕಾರ್ಯ ಮಾಡಿದಾಗ ಗೌಡಾಲು ಸಮುದಾಯವು ಪಾಲಿಸುವ ನಿಷೇಧಗಳು ಬೇರೆ ಸಮುದಾಯಗಳಿಗಿಂತ ವಿಶಿಷ್ಟತೆಯಿಂದ ಕೂಡಿವೆ. ಇವರು ಪಾಲಿಸುವ ವಿಧಿ-ನಿಷೇಧಗಳು ನಾಡಿನ ಜನರಿಗೆ ಮೂಢನಂಬಿಕೆಗಳು ಎನಿಸಿದರೂ ಕೂಡ ಗೌಡಾಲು ಸಮಾಜದಲ್ಲಿ ಎಲ್ಲರೂ ನಿಯಮಬದ್ಧರಾಗಿ ನಡೆಯಲು ಹಾಗೂ ಅವರ ಸಮೂಹದಲ್ಲಿರುವ ವ್ಯಕ್ತಿಗಳ ವರ್ತನೆಯ ಮೇಲೆ ನಿಯಂತ್ರಣವನ್ನು ಹಾಕಲು ವಿಧಿ-ನಿಷೇಧಗಳ ಅವಶ್ಯಕತೆಯಿದೆ. ಇಲ್ಲಿ ಮನೆಯ ಹಿರಿಯನಿಂದ ಹಿಡಿದು ಪ್ರಾಣಿ ಪಕ್ಷಿ, ಮದುವೆ ಮುಂತಾದವುಗಳಲ್ಲಿ ವಿಧಿ-ನಿಷೇಧಗಳಿವೆ.

ಗೌಡಾಲು ಸಮುದಾಯದಲ್ಲಿ ಹುಟ್ಟಿನಿಂದ ಸಾವಿನವರೆಗೆ ನಡೆಯುವ ಜೀವನಾವರ್ತನ ಆಚರಣೆಗಳಲ್ಲಿ ಅನೇಕ ರೀತಿಯ ವಿಧಿ-ನಿಷೇಧಗಳಿವೆ.

೧. ಬಸುರಿಗೆ ಬಿಳಿ ಅಥವಾ ಕೆಂಪು ಬಣ್ಣದ ಸೀರೆಯನ್ನು ಉಡಿಸಬಾರದು.

೨. ಬಸುರಿ ಹೆಣ್ಣು ಮಕ್ಕಳಿಗೆ ಮೊಟ್ಟೆ ತಿನ್ನಿಸಬಾರದು.

೩. ಮಗು ತಾಯಿಯ ಗರ್ಭದಿಂದ ಹೊರಬರುವ ವೇಳೆಯಲ್ಲಿ ಹಲ್ಲಿ ನಾಯಿಗಳು ಕೂಗಬಾರದು.

೪. ನಾಮಕರಣದ ದಿನ ಖಾಲಿ ತೊಟ್ಟಿಲು ತೂಗಬಾರದು, ಬಾಣಂತಿಯೂ ಮಗುವನ್ನು ಕಳೆದುಕೊಳ್ಳುತ್ತಾಳೆ.

೫. ತೊಟ್ಟಿಲನ್ನು ಕಾಲಿನಿಂದ ಒದೆಯಬಾರದು.

೬. ಅಮಾವಾಸ್ಯೆ ಹುಣ್ಣಿಮೆ ದಿನಗಳಲ್ಲಿ ಮಗುವಿಗೆ ಸ್ನಾನ ಮಾಡಿಸಬಾರದು.

೭. ಬಾಣಂತಿಯು ಹಾಸಿಗೆ ತಳದಲ್ಲಿ ಚಪ್ಪಲಿ, ಕಬ್ಬಿಣ, ಇದ್ದಿಲು, ಕುಡ್ಲು ಇಷ್ಟನ್ನು ಇಟ್ಟುಕೊಂಡು ಮಲಗಬೇಕು. ಇಲ್ಲವಾದರೆ ಪಿಶಾಚಿಗಳು ಪೀಡಿಸುತ್ತವೆ ಎಂಬ ವಿಧಿ-ನಿಷೇಧವಿದೆ.

೮. 'ಕರಿ' ದಿವಸ ಮಂಗಲ ಕಾರ್ಯ ಮಾಡಬಾರದು.

೯. ಹೊಸತಿನ ದಿನ ಮುಟ್ಟಾದವರು ಮನೆಯ ಹತ್ತಿರ ಸುಳಿಯಕೂಡದು.

೧೦. ಹೆರಿಗೆಯಾಗಿ ಆರು ತಿಂಗಳು ತುಂಬುವುದಕ್ಕೆ ಮುನ್ನ ಗಂಡ ಹೆಂಡಿರು ಮುಟ್ಟಿಕೊಂಡರೆ ರೋಗ ಬರುತ್ತದೆ ಎಂಬುದಲ್ಲದೆ ಮುಟ್ಟಬಾರದು ಎಂಬ ನಿಷೇಧವಿದೆ.

೧೧. ಸೋದರ ಮಾವ ಉಂಡ ತಟ್ಟೆಯಲ್ಲಿ ಮಗುವಿನ ಕೈ ಅದ್ದಿ ಉಗುರು ತೆಗೆಯಬೇಕು. ಇಲ್ಲವಾದರೆ ಉಗುರುಸುತ್ತು ಆಗುತ್ತದೆ.

೧೨. ಹೆಣ್ಣು ಸೂತಕದ ಅವಧಿ ಮುಗಿಯುವವರೆಗೂ ಬಾಣಂತಿ, ಮನೆ ಬಳಕೆಯ ವಸ್ತುಗಳನ್ನು ಮುಟ್ಟಬಾರದು.

೧೩. ಆರು ತಿಂಗಳವರೆಗೆ ಪುರುಷ ಬಾಣಂತಿಯನ್ನು ಮುಟ್ಟಬಾರದು.

೧೪. ಹೆರಿಗೆ ಕಾಲ ಸನ್ನಿಹಿತವಾದಾಗ ಗಂಡ ದೂರ ಪ್ರಯಾಣ ಕೈಗೊಳ್ಳಬಾರದು.

೧೫. ಸೂತಕ ಮುಗಿದ ಮೇಲೆ ಗಂಡನಾದವನು ದೈವ ಪಿಶಾಚಿಗಳಿಗೆ ಪರಿಹಾರ ಒದಗಿಸಬೇಕು.

೧೬. ಬಾಣಂತಿ, ಹನ್ನೊಂದು ರಾತ್ರಿ ಕಳೆಯುವವರೆಗೂ ಎದ್ದು ಕುಳಿತುಕೊಳ್ಳಬಾರದು.

೧೭. ಹೆರಿಗೆಯಾಗಿ ಹನ್ನೊಂದು ರಾತ್ರಿ ಕಳೆಯುವವರೆಗೂ ಬಾಣಂತಿಯ ತಲೆ ಬಾಚಿ ಹೂ ಮುಡಿಸಬಾರದು.

೧೮. ತುಳಸಿಯ ಮುಂದೆ ಸ್ಥಾಪಿಸುವ ಕಳಸಕ್ಕೆ ಹೊತ್ತಿಸಿರುವ ದೀಪ ಆರಬಾರದು.

೧೯. ಋತುಮತಿಯಾದ ಹೆಣ್ಣು ಸಾವಿನ ಸುದ್ದಿ ಕೇಳಬಾರದು.

೨೦. ನೀರು ಎರೆಯುವ ಮನೆ ಶಾಸ್ತ್ರ ಮುಗಿದ ದಿವಸ ಸೋದರಮಾವ ಹುಡುಗಿಯನ್ನು ಕರೆದೊಯ್ಯಬೇಕು.

೨೧. ಹೊರಗಾದಾಗ ಒಬ್ಬಳೇ ಪ್ರತ್ಯೇಕವಾಗಿ ಮಲಗಿಕೊಳ್ಳಬೇಕು.

೨೨. ಹೊರಗಾದವರ ನೆರಳನ್ನು ತುಳಿಯಬಾರದು.

೨೩. ಋತುಮತಿಯಾದಾಗ ಮೊದಲು ಐದು ದಿನ ಕಾರ, ಉಪ್ಪು, ಹುಳಿಯನ್ನು ತಿನ್ನಬಾರದು.

೨೪. ಹೊರಗಾದಾಗ ಕುಂಕುಮ ಇಡಬಾರದು, ಹೂ ಮುಡಿಯಬಾರದು, ದೇವರ ಬನಕ್ಕೆ ಹೋಗಬಾರದು.

೨೫. ಹೊರಗಾದ ಸ್ತ್ರೀಯನ್ನು ಪುರುಷ ಮುಟ್ಟಬಾರದು.

೨೬. ಹೊರಗಾದಾಗ ಹೂಗಿಡಗಳನ್ನು ನೆಡಬಾರದು.

೨೭. ಹಸುವಿನ ಹಾಲು ಕುಡಿಯಬಾರದು.

೨೮. ಕಾಡುಕುರಿ ಕೂಗಬಾರದು.

೨೯. ದಾರಿಯಲ್ಲಿ ಸೌದೆ ಹೊರೆ ಅಡ್ಡ ಬರಬಾರದು.

೩೦. ಲಗ್ನ ಕಟ್ಟಿಸಿದ ದಿನದಿಂದ ಮದುವೆ ಮುಗಿಯುವವರೆಗೆ ಮನೆಯಲ್ಲಿ ಮಾಂಸದ ಅಡುಗೆ ಮಾಡಿಸಬಾರದು.

೩೧. ಮಹಿಳೆ, ಪುರುಷನಿಗೆ ತಿಂಡಿ ತೀರ್ಥ ಕೊಡುವಾಗ ತಟ್ಟೆ ಲೋಟಾದಿಗಳು ಮುಗುಚಿ ಬೀಳಬಾರದು.

೩೨. ಮದುವೆ ನಿಶ್ಚಯವಾದ ಮೇಲೆ ಗಂಡಿನ ಮನೆಯಲ್ಲಿ ಯಾರಾದರೂ ಸತ್ತರೆ ಮದುವೆ ನಡೆಸಬಾರದು.

೩೩. ದಿಬ್ಬಣ ಹೊರಟಾಗ ಹೊತ್ತಿಸಿದ ಹಸೆ ದೀಪವು ದಿಬ್ಬಣ ಮನೆ ಬಂದು ಸೇರುವವರೆಗೆ ನಿಲ್ಲಬಾರದು.

೩೪. ಮದುವೆಯಾದ ವರ್ಷ ಮನೆ ಕಟ್ಟಬಾರದು.

೩೫. ಸಾಯುವುದಕ್ಕೆ ಮೊದಲು ಪಾಪ ವಿಮುಕ್ತರಾಗಬೇಕು.

೩೬. ಮನೆಯೊಳಗಡೆ ಪ್ರಾಣ ಬಿಡಬಾರದು.

೩೭. ಶವದ ಸ್ನಾನಕ್ಕೆ ಕಾಯಿಸಿದ ನೀರಿನಲ್ಲಿ ಒಂದು ಹನಿ ನೀರನ್ನು ಉಳಿಸಬಾರದು.

೩೮. ಶವವನ್ನು ಸುಡುಗಾಡಿಗೆ ಸಾಗಿಸುವಾಗ ಹೆಣದ ತಲೆ ಕಾಡಿನ ಕಡೆಗಿರಬೇಕು.

೩೯. ಸುಡುಗಾಡು ಹಾದಿಯ ಉತ್ತರ ದಿಕ್ಕಿಗಿರಬೇಕು.

೪೦. ರಾತ್ರಿ ಬಟ್ಟೆ ತೊಳೆದರೆ ಸಾವಿನ ಮನೆಯೆಂದು ತಿಳಿಯಬೇಕು.

೪೧. ರಜಸ್ವತಿಯಾದ ಹೆಣ್ಣುಮಕ್ಕಳು ಶವಸಂಸ್ಕಾರ ಕ್ರಿಯೆ ನೋಡಬಾರದು.

೪೨. ತೊನ್ನು ರೋಗ ಬಂದವರು ಸತ್ತರೆ ಹೂಳಬಾರದು.

೪೩. ವಿಧವೆಯರನ್ನು ನಂಟರಿಷ್ಟರು ಕರೆದು ಕಳಿಸಬೇಕು.

೪೪. ಮುಟ್ಟಾಗಿ ಹದಿನಾರು ದಿವಸಕ್ಕೆ ಸೋಬನಮಾಡಬೇಕು.

೪೫. ಮಗುವಿಗೆ ತಾಯಿಯು ಒಂದೇ ಮೊಲೆಯ ಹಾಲನ್ನು ಕುಡಿಸಬಾರದು.

೪೬. ತಾಯಿಯು ಹೊರಗಿನಿಂದ ಬಂದ ತಕ್ಷಣ ಎದೆ ಹಾಲು ಕೊಡಬಾರದು.

೪೭. ಮಗು ಮಲಗಿದ್ದಾಗ ಹಲ್ಲು ಕಡಿದರೆ ತಾಯಿತ ಕಟ್ಟಿಸಬೇಕು.

೪೮. ಹೆಂಡತಿಯ ಎಂಜಲನ್ನು ಗಂಡ ತಿನ್ನಬಾರದು.

೪೯. ಊಟ ಮಾಡುವಾಗ ಎಲೆಯ ಸುತ್ತಲೂ ನೀರನ್ನು ಚಿಮುಕಿಸಬೇಕು.

೫೦. ತಂಗಳನ್ನ ಉಂಡರೆ ಒಳ್ಳೆಯದು.

೫೧. ದೇವರಿಗೆ ಮುಡಿ ಬಿಟ್ಟರೆ ರೋಗ ವಾಸಿಯಾಗುತ್ತದೆ.

೫೨. ಅಂಟಿಗೆ ಪಂಟಿಗೆ ಪದ ಹೆಳುತ್ತಾ ಹೋಗುತ್ತಿರುವಾಗ ದೀಪ ಆರಿಹೋಗಬಾರದು.

೫೩. ಜಾತಿ, ನೀತಿ, ಕಟ್ಟು ಕರಾರು, ಹಬ್ಬ ಹುಣ್ಣಿಮೆ, ಶುಭಾಶುಭ, ದೇವರ ಸೇವೆ, ಅಂಟಿಗೆ ಪಂಟಿಗೆ, ಲಾಭ ನಷ್ಟ, ಕಷ್ಟ ಸುಖ, ಹುಟ್ಟು, ಮದುವೆ ಪ್ರಸ್ತ ಎಲ್ಲದಕ್ಕೂ ಪಾಲು ಗೌಡ, ಇಲ್ಲವೆ ಸೀಮೆ ಮುಖಂಡರು ಹೇಳಿದಂತೆ ಇವರ ಮಾರ್ಗದರ್ಶನದಲ್ಲಿ ಇಡೀ ಹಾಡಿಯ ಸಮುದಾಯ ನಡೆದುಕೊಳ್ಳಬೇಕು.

೫೪. ಮದುವೆ ಹಬ್ಬಗಳನ್ನು ನಡೆಸುವಾಗ ಹಾಡಿಯ ಗೌಡನ ಅನುಮತಿಯಿಲ್ಲದೆ ಮುಂದುವರಿಯಬಾರದು ಒಂದು ಪಕ್ಷ ಮುಂದುವರಿದರೆ 'ಚಪ್ಪರದೋಷ ಹಣ' ಕಟ್ಟಲೇಬೇಕು.

೫೫. ವಿಧವೆ ಅಥವಾ ಅವಿವಾಹಿತೆ ಬಸುರಾದಲ್ಲಿ ಜಾತಿಕಟ್ಟಿಗೆ ಒಳಗಾಗಬೇಕು.

೫೬. ಬಹಿಷ್ಕೃತರನ್ನು ಮನೆಯೊಳಗೆ ಸೇರಿಸಿಕೊಳ್ಳಬಾರದು ಎಂಬ ಅನೇಕ ವಿಧಿ-ನಿಷೇಧಗಳು ಗೌಡಾಲು ಬುಡಕಟ್ಟು ಸಮುದಾಯದ ಒಡಲಾಳದಲ್ಲಿರುವುದರಿಂದ ಸಮುದಾಯದ ಒಗ್ಗಟ್ಟಿಗೆ ಕಾರಣವಾಗಿದೆ. ಇಲ್ಲಿ ಗೌಡಾಲು ಸಮುದಾಯ ಇತರೆ ಸಮುದಾಯಗಳಿಗಿಂತ ಭಿನ್ನವಾಗಿದೆ ಎಂಬುದಕ್ಕೆ ಕಾಡಿನ ಸಂಸ್ಕೃತಿಗೆ ಅನುಗುಣವಾದ ವಿಧಿ-ನಿಷೇಧಗಳನ್ನು ರೂಪಿಸಿಕೊಂಡು ಜೀವನ ಸಾಗಿಸುತ್ತಿರುವುದೇ ಕಾರಣವಾಗಿದೆ. ಒಂದೊಂದು ವಿಧಿ-ನಿಷೇಧಗಳು ಅರ್ಥಗರ್ಭಿತವಾಗಿದ್ದಲ್ಲದೆ ವೈಜ್ಞಾನಿಕತೆಯನ್ನು ಪ್ರತಿಬಿಂಬಿಸುತ್ತವೆ. ಯಾವುದೇ ಸಮುದಾಯವಾಗಲಿ ಅಥವಾ ವ್ಯಕ್ತಿಯಾಗಲಿ ಅವರಿಗೆ ನಿಷೇಧಗಳೇ ಇಲ್ಲದಿದ್ದರೆ ಗುರು ಮತ್ತು ಗುರಿ ಇಲ್ಲದ ಜೀವನವಾಗುತ್ತದೆ. ಆದ್ದರಿಂದ ಮನೆಗೆ ಒಬ್ಬ ಒಡೆಯ ಯಾವ ರೀತಿಯಲ್ಲಿ ಇರುತ್ತಾನೋ ಅದೇ ರೀತಿ ಹಾಡಿಗೆ ಒಬ್ಬ ಗೌಡ ಅಥವಾ ಮುಖಂಡನಿರಬೇಕು. ಅದರಂತೆ ಪ್ರತಿಯೊಂದು ಆಚರಣೆಗೂ ಅದರದೇ ಆದ ವಿಧಿ-ನಿಷೇಧಗಳು ಇರಲೇಬೇಕು. ಆಗ ಮಾತ್ರ ಬದುಕು ಸುಮಗವಾಗಿ

ಸಾಗುತ್ತದೆ. ಇಲ್ಲವಾದರೆ ಮುಂದೆ ಅನಾಹುತಗಳಾಗುತ್ತವೆ ಎನ್ನುತ್ತಾ ಗೌಡಾಲುಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಸಿದ್ದಾರೆ. ಆದ್ದರಿಂದ ಗೌಡಾಲು ಬುಡಕಟ್ಟು ಬೇಟೆ, ಹಬ್ಬ ಜೀವನಾವರ್ತನ ಆಚರಣೆಗಳಲ್ಲಿ ಈ ಮೇಲೆ ಹೇಳಿದ ವಿಧಿ-ನಿಷೇಧಗಳನ್ನು ಹಾಕಿಕೊಂಡು ನಿಯಮಬದ್ಧವಾಗಿ ಇತರರಿಗೆ ಯಾವುದೇ ರೀತಿ ಮೋಸ ಮಾಡದೆ ದುಡಿದು ಜೀವನ ಮಾಡುತ್ತಿದೆ. ಈ ಹಿನ್ನೆಲೆಯಿಂದ ವಿಧಿ-ನಿಷೇಧಗಳನ್ನು ಇಲ್ಲಿ ಚರ್ಚಿಸಲಾಗಿದೆ.

### ೩.೨. ಸಾಂಸ್ಕೃತಿಕ ನಾಯಕರು

ಪಾಶ್ಚಿಮಾತ್ಯರು ಭಾರತವನ್ನು ಬಿಟ್ಟು ತೊಲಗಿದ ಮೇಲೆ ಇವರು ಇಂಡಿಯಾದಲ್ಲಿ ಸೃಷ್ಟಿಮಾಡಿದ ವಸಾಹತುಶಾಹಿ ಮನೋಧರ್ಮದ ಶಿಕ್ಷಣ, ಭಾರತದ ಶಿಕ್ಷಣ ಕ್ಷೇತ್ರವನ್ನು ಪ್ರವೇಶ ಮಾಡಿತು. ಈ ಬಗೆಯು ಎರಡು ರೀತಿಯಲ್ಲಿ ನಡೆಯಿತು. ಈಗಾಗಲೇ ಈ ದೇಶದಲ್ಲಿ ಪಾಶ್ಚಿಮಾತ್ಯರ ಪೂರ್ವದಲ್ಲಿದ್ದ ಪುರೋಹಿತಶಾಹಿ ಮೌಲ್ಯಗಳನ್ನು ಒಳಗೊಂಡ ಶಿಕ್ಷಣ ಮತ್ತು ವಸಾಹತುಶಾಹಿ ಶಿಕ್ಷಣ ಸೇರಿ ಇಂಡಿಯಾದ ರಾಷ್ಟ್ರೀಯತೆ ಮತ್ತು ಸಾಂಸ್ಕೃತಿಕ ಅನನ್ಯತೆಯ ಪ್ರಶ್ನೆಗಳು ಉದ್ಭವಿಸುವಂತೆ ಮಾಡಿದವು. ವಿದೇಶಿಯರು ಭಾರತಕ್ಕೆ ಬಂದ ನಂತರ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆಯುವ ಮೂಲಕ ಶಿಷ್ಟ ಪರಂಪರೆಯ ವ್ಯಕ್ತಿಗಳು ವಿದೇಶಿಯರ ಕಾಲದಲ್ಲಿ ಮತ್ತು ನಂತರದಲ್ಲಿ ಮತ್ತೆ ನವಪುರೋಹಿತಶಾಹಿಗಳಾಗಿ ಶಿಕ್ಷಣ, ಆಡಳಿತ, ರಾಜಕೀಯದ ಚುಕ್ಕಾಣಿಯನ್ನು ಹಿಡಿದರು. ಹಾಗಾಗಿಯೇ, ಅಲ್ಲಿ ಮತ್ತೆ ಕೆಳ ಸಂಸ್ಕೃತಿಗಳ ಬಗೆಗೆ ಕಾಳಜಿ ಮಾಡದೆ ಪ್ರಾಚೀನ ಮನೋಧರ್ಮಗಳೇ ಹೊಸ ರೂಪವನ್ನು ಪಡೆದುಕೊಂಡವು. ಈ ಕಾಲದ ಸಾಹಿತ್ಯ ಸೃಷ್ಟಿಕೂಡ ಸಾಮಾನ್ಯ ಜೀವನದಿಂದ ದೂರವಾಗಿ ಅಮೂರ್ತ ನೆಲೆಯಲ್ಲಿಯೇ ಸೃಷ್ಟಿಗೊಂಡಿರುತ್ತವೆ. ಇದಕ್ಕೆ ಮುಖ್ಯ ಕಾರಣ ನವಪುರೋಹಿತಶಾಹಿ ಮತ್ತು ವಸಾಹತುಶಾಹಿ ಪರಂಪರೆಗಳು. ಭಾರತದಲ್ಲಿ ಈ ಎರಡು ಪರಂಪರೆಗಳು ಬೇರೆ ಬೇರೆಯಲ್ಲ. ಪರಸ್ಪರ ಪೂರಕವಾದವುಗಳು. ಭಾರತೀಯ ಸಾಮಾಜಿಕ ಮತ್ತು ಬೌದ್ಧಿಕ ನೆಲೆಗಳ ಮೇಲೆ ಅಪಾರ ಪರಿಣಾಮವನ್ನುಂಟುಮಾಡಿ ಇಂಡಿಯಾದ ಒಳಗಡೆ ಇರುವ ಸಂಸ್ಕೃತಿಗಳನ್ನು ನೋಡುವಿಕೆಯಲ್ಲಿ ಒಂದು ಸೀಮಿತ ದೃಷ್ಟಿಕೋನವನ್ನು ತಂದುಕೊಟ್ಟವು. ಕೆಳಸ್ತರದ ಸಮುದಾಯಗಳಾದ ಬುಡಕಟ್ಟುಗಳಿಗೆ ಮತ್ತು ಹಿಂದುಳಿದ ಸಮುದಾಯಗಳಿಗೆ ಅವರದೇ ಆದ ಸಂಸ್ಕೃತಿಯಿದೆ ಎಂಬುದನ್ನು ಪರಿಗಣಿಸದೆ ಅವರನ್ನೇ ಸಂಸ್ಕೃತೀಕರಣಕ್ಕೆ ಒಳಗಾಗುವಂತೆ ಮಾಡಿದರು. ಈ ಹಿನ್ನೆಲೆಯಲ್ಲಿ ತಳ ಸಮುದಾಯಗಳ ಗುಂಪುಗಳಲ್ಲಿ ಇದ್ದ ಮಾನವೀಯ ಧಾರ್ಮಿಕ ಮೌಲ್ಯಗಳನ್ನು ಗುರುತಿಸದೆ ಅವುಗಳನ್ನು ಸಾರಾಸಗಟಾಗಿ ತಿರಸ್ಕರಿಸಲಾಯಿತು. ಪುರೋಹಿತಶಾಹಿ ಮತ್ತು ವಸಾಹತು ಶಾಹಿ ಶಿಕ್ಷಣಗಳು ಭಾರತದಲ್ಲಿ ಈ ರೀತಿಯ ಮನೋಧರ್ಮವನ್ನು ಬಿತ್ತರಿಸಲು ಸಾಧ್ಯವಾಯಿತು.

ಬುಡಕಟ್ಟುಗಳ ಬಗೆಗೆ ಅಧ್ಯಯನ ಮಾನವಶಾಸ್ತ್ರದಲ್ಲಿ ಹೆಚ್ಚಾಗಿ ನಡೆದು ಮುಂದೆ ಸಮಾಜಶಾಸ್ತ್ರ, ಇತರ ಶಾಸ್ತ್ರಗಳ ಅಧ್ಯಯನಗಳು ನಡೆದಿರುವುದನ್ನು ನೋಡಿದರೆ, ಇಲ್ಲಿ ತಳಸಮುದಾಯಗಳನ್ನು ಅಧ್ಯಯನದ ಆಕರಗಳಾಗಿ ಬಳಸಿ ಮಾನವನ ಬೆಳವಣಿಗೆಯ ಪ್ರಾಚೀನತೆಯನ್ನು ಗುರುತಿಸುವುದಕ್ಕೆ ಸೀಮಿತಗೊಂಡಿತ್ತು.

ಆದರೆ ಇತ್ತೀಚಿನ ಅಧ್ಯಯನಗಳು ಆ ನೆಲೆಯಲ್ಲಿ ನಡೆಯದೆ ಮಾನವನ ಬದುಕಿನ ಒಳಗೆ ಒಂದು ಸಂಸ್ಕೃತಿಯಿದೆ ಎಂಬುದನ್ನು ಶೋಧಿಸಲು ಹೊರಟ ಅಧ್ಯಯನಗಳಾಗಿವೆ. ಆದರೆ ಗೌಡಾಲು ಸಮುದಾಯವು ತನ್ನದೇ ಆದ ಸಂಸ್ಕೃತಿಯನ್ನಿಟ್ಟುಕೊಂಡು ತನ್ನ ಬದುಕನ್ನು ಕಟ್ಟಿಕೊಂಡಿದೆ. ಆದ್ದರಿಂದ ಬುಡಕಟ್ಟುಗಳ ಅಧ್ಯಯನಗಳು ಸಂಸ್ಕೃತಿಯ ಚಿತ್ರಣವನ್ನು ಹೊರಜಗತ್ತಿಗೆ ಪ್ರತಿಬಿಂಬಿಸುವಂತಹವುಗಳಾಗಿವೆ. ಏಕೆಂದರೆ ಯಾವುದೇ ಬುಡಕಟ್ಟು ಸಮುದಾಯಗಳು ಏಕ ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ರೂಪಗೊಂಡಿವೆ.

ಸಂಸ್ಕೃತಿ ಎಂಬುದು ಮೇಲ್ನೋಟಕ್ಕೆ ಒಂದೇ ಅನ್ನಿಸಿದರೂ ಸೂಕ್ಷ್ಮವಾಗಿ ನೋಡಿದಾಗ ಪ್ರತಿಯೊಂದು ಬುಡಕಟ್ಟು ವಿಭಿನ್ನವಾಗಿರುವುದು ತಿಳಿದುಬರುತ್ತದೆ. ಆದ್ದರಿಂದ ಪ್ರಧಾನ ಧಾರೆಯ ಅಧ್ಯಯನವಾಗಿ ರೂಪಗೊಳ್ಳಬೇಕಾದ ಅನಿವಾರ್ಯತೆ ಅಧ್ಯಯನದಲ್ಲಿ ಇದ್ದರೂ ಕೂಡ ಉಪಧಾರೆಗಳ ಕುರಿತ ಅಧ್ಯಯನವಾಗಿದೆ. ಅಲಕ್ಷಿತ ಬುಡಕಟ್ಟು ಅನಕ್ಷರತೆಯಿಂದ ದೂರವಿದ್ದು ಕಾಲ ಬದಲಾದಂತೆ ಸಾಂಸ್ಕೃತಿಕತೆಯಲ್ಲಿಯೂ ಪರಿವರ್ತನೆಯ ದಾರಿಯನ್ನು ಹಿಡಿದಿದೆ.

ಪರಿಣಾಮವಾಗಿ ಇಂದಿನ ಸಮಾಜದ ರೀತಿ ರಿವಾಜುಗಳು ಬುಡಕಟ್ಟಿಗೆ ಸವಾಲಾಗತೊಡಗಿವೆ. ಉಪ ಸಂಸ್ಕೃತಿ, ಪರ್ಯಾಯ ಸಂಸ್ಕೃತಿ, ಪ್ರತಿ ಸಂಸ್ಕೃತಿ ಎಂದೆಲ್ಲ ಕರೆಸಿಕೊಂಡ ಗೌಡಾಲುಗಳ ಬದುಕು ಹತ್ತು ಹಲವು ದೃಷ್ಟಿಕೋನಗಳಿಂದ ಮಹತ್ವ ಪಡೆದಿರುವುದು ಕೂಡ ಇದೆ.

ಇಂದು ಬುಡಕಟ್ಟು ಸಂಸ್ಕೃತಿ ರೂಪಾಂತರಗೊಳ್ಳುತ್ತಿದೆ. ತಲತಲಾಂತರದ ವೃತ್ತಿಗಳು ಕ್ರಮೇಣ ಮರೆಯಾಗುತ್ತಿವೆ. ಈ ಸಂದರ್ಭದಲ್ಲಿ ಆಯಾ ಸಮುದಾಯಗಳ ಕಸುಬು ಮತ್ತು ಆಚರಣೆಗಳ ಅಧ್ಯಯನಗಳು ಅವಶ್ಯಕವಾಗಿ ನಡೆಯಬೇಕಾಗಿದೆ. ಈ ದಿಸೆಯಲ್ಲಿ ಇವರ ಸಾಮಾಜಿಕ ರಚನಾಕ್ರಮ, ಆರ್ಥಿಕ ಚಟುವಟಿಕೆಗಳು, ರೂಢಿ ಪದ್ಧತಿಗಳು ಮತ್ತು ಇತರೆ ಬುಡಕಟ್ಟು ಸಮುದಾಯಗಳ ಜೊತೆಗೆ ವ್ಯವಹರಿಸುವ ರೀತಿ-ನೀತಿಗಳು ಹಾಗೂ ಸಮುದಾಯದ ಸ್ಥಿತ್ಯಂತರ ಕುರಿತು ಚಿಂತಿಸಬೇಕಾಗಿದೆ. ಸಮುದಾಯದ ಸಾಂಸ್ಕೃತಿಕ ನಾಯಕರ ಕುರಿತ ಆಲೋಚನ ಕ್ರಮವು ಸಮುದಾಯದಲ್ಲಿ ಯಾವ ಹಿನ್ನೆಲೆಯಿಂದ ಕೂಡಿದೆ ಎಂದು ಚರ್ಚಿಸುವುದು ಉಪಯುಕ್ತವಾಗುತ್ತದೆ. ಹಾಗಾಗಿ ಸಂಶೋಧನಾ ಅಧ್ಯಯನಕ್ಕೆ ಪೂರಕವಾದ ಮಾಹಿತಿಯು ಕ್ಷೇತ್ರಕಾರ್ಯದಿಂದ ಪಡೆದ ಹಿನ್ನೆಲೆಯಿಂದ ವಿವರಿಸುತ್ತಾ ಹೊರಟರೆ ಮಲೆನಾಡಿನ ಪರಿಸರಕ್ಕೆ ಅನುಗುಣವಾಗಿ ಅವರ ಸಾಂಸ್ಕೃತಿಕ ಜಗತ್ತು ಸಂರಚನೆಗೊಂಡಿರುವುದು ಕಂಡುಬರುತ್ತದೆ. ಅಂದರೆ ಇವರ ಆದಿದೈವಗಳು, ಭೂತಾರಾಧನೆ ಮತ್ತು ಸ್ತ್ರೀದೇವತೆಗಳಾಗಿದ್ದಾರೆ, ಮಾತೃಪ್ರಧಾನದ ಕುಟುಂಬ ವ್ಯವಸ್ಥೆಯು ರೂಪಿತವಾಗಿ ಬಂದಿರುವ ಸಾಮಾಜಿಕ ರಚನೆಯು ಮಲೆನಾಡು ಮತ್ತು ಪಶ್ಚಿಮ ಘಟ್ಟದಲ್ಲಿ ಸ್ಥಾಪಿತಗೊಂಡ ಹಿನ್ನೆಲೆಯಿಂದ ಇಲ್ಲಿ ಬಹುಮುಖಿ ಸಂಸ್ಕೃತಿಯ ನೆಲೆಯಲ್ಲಿ ಗೌಡಾಲು ಸಮುದಾಯ ತನ್ನ ಸಾಂಸ್ಕೃತಿಕ ಬದುಕನ್ನು ಸಾಗಿಸಿಕೊಂಡು ಬಂದಿದೆ. ಆದ್ದರಿಂದಲೇ ಇಲ್ಲಿ ಬುಡಕಟ್ಟುಗಳು ಭೂತಾರಾಧನೆ ಮತ್ತು ತಮ್ಮ ದೈವತ್ವದ ಕಲ್ಪನೆಯಲ್ಲಿ ಪೂಜ್ಯನೀಯ ಮನೋಭಾವನೆಯನ್ನು ಹೊಂದಿದ್ದಾರೆ.

ವೇದಗಳಲ್ಲಿ ಇಂದ್ರ, ವರುಣ, ಅಗ್ನಿ ಮೊದಲಾಗಿ ಮುವತ್ತುಮೂರು ದೇವತೆಗಳು ಪ್ರಮುಖವಾಗಿ ಕಂಡುಬರುತ್ತವೆ. ಅವುಗಳಲ್ಲಿ ಸ್ವರ್ಗದ ದೇವತೆಗಳು, ಆಕಾಶದ ದೇವತೆಗಳು ಮತ್ತು ಭೂಮಿಯ ದೇವತೆಗಳು

ಎಂಬ ಮೂರು ಗುಂಪುಗಳಿವೆ. ವರುಣ, ಮಿತ್ರ, ಸಮಿತ್ರ ಮೊದಲಾದವು ಸ್ವರ್ಗದ ದೇವತೆಗಳು ಇಂದ್ರ, ವಾಯು, ಪರ್ಜನ್ಯ ಮೊದಲಾದವು ಆಕಾಶದ ದೇವತೆಗಳು ಪೃಥ್ವಿ, ಅಗ್ನಿ, ಸೋಮ ಇತ್ಯಾದಿಗಳು ಭೂಲೋಕದ ದೇವತೆಗಳು ಇದನ್ನು ನೋಡಿದರೆ ಪ್ರಕೃತಿಯ ಒಂದೊಂದು ಶಕ್ತಿಯನ್ನು ಇಲ್ಲಿ ದೇವತೆಗಳನ್ನಾಗಿ ಕಲ್ಪಿಸಿ ಉಪಾಸಿಸಿದಂತೆ ಕಾಣುತ್ತದೆ. ಈ ಪ್ರಕೃತಿಯ ಉಪಾಸನೆ ಸಿಂಧೂ ಸಂಸ್ಕೃತಿಯಿಂದ ಪ್ರಭಾವಿತಗೊಂಡು ಆರ್ಯರು ವೇದಗಳಿಗೆ ತಂದುಕೊಂಡ ಅಂಶವೆನ್ನಬಹುದಾಗಿದೆ. ಸಿಂಧೂ ತೀರದ ಫಲವತ್ತಾದ ಬಯಲು, ಅಲ್ಲಿಂದ ಉತ್ತರದಿಕ್ಕಿಗೆ ಇದ್ದ ಹಿಮಾಲಯದ ಅಗಾಧ ಪ್ರಕೃತಿ ರಾಶಿ ಇವು ಆರ್ಯರನ್ನು ಪ್ರಕೃತಿ ಉಪಾಸಕರನ್ನಾಗಿಯೇ ಮಾಡಿದವು. ದಿನನಿತ್ಯ ಮೂಡುವ ಸೂರ್ಯನನ್ನು ಕುರಿತೇ ಋಗ್ವೇದಗಳಲ್ಲಿ ಅನೇಕ ಮಂತ್ರಗಳಿವೆ. ಇವನ್ನು ಗಮನಿಸಿದರೆ ವೇದಗಳಲ್ಲಿ ಕಾಣುವ ದೇವತೆಗಳು ಮಾನವ ವೇಷಧಾರಿಗಳಾದ ಪ್ರಕೃತಿ ಶಕ್ತಿಗಳು. ಇದರ ಜೊತೆಗೆ ವ್ಯವಸಾಯಕ್ಕೆ ಸಂಬಂಧಿಸಿದ ಪರಿಕರಗಳಿಗೆ ಅಧಿಪತಿಗಳಾದ ಪ್ರಾದೇಶಿಕ ದೇವತೆಗಳು ವೇದಗಳಲ್ಲಿವೆ. ಯಜ್ಞಸ್ತಂಭ, ದರ್ಭೆ, ಪತ್ರೆ, ಸೋಮರಸ ತೆಗೆಯುವ ಕಲ್ಲು, ಕೊನೆಗೆ ಬಿಲ್ಲು ಬಾಣ ಕೂಡ ವೇದಯುಗದಲ್ಲಿ ದೇವತೆಗಳಾಗಿವೆ. ಈ ಕ್ರಮದಲ್ಲಿಯೇ ಇಂದಿಗೂ ಅನೇಕಾನೇಕ ಬುಡಕಟ್ಟು ಗುಂಪುಗಳಲ್ಲಿ ಬಿಲ್ಲು, ಬಾಣ, ಕತ್ತಿಕಠಾರಿಗಳನ್ನು ದೇವತೆಗಳನ್ನಾಗಿ ಕಲ್ಪಿಸಿ ಪೂಜಿಸುವುದನ್ನು ಕಾಣಬಹುದಾಗಿದೆ.

ವೇದಗಳು ಭಾರತದ ಪ್ರಾಚೀನ ಬದುಕಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ನೀಡುತ್ತವೆ. ಆದಿಮ ಮಾನವ ಸಮೂಹದ ಬದುಕಿನ ಧರ್ಮ ಎಂದರೆ ಪ್ರಕೃತಿ ಉಪಾಸನೆ ಮತ್ತು ಮಾನವತ್ವವೇ ಎಂಬುದನ್ನು ಹಲವು ವೇದ ಮಂತ್ರಗಳು ಹೇಳುತ್ತವೆ. ಭಾರತದಲ್ಲಿಯೇ ಇದ್ದ ದ್ರಾವಿಡ ಮತ್ತು ಮಧ್ಯ ಏಷ್ಯಾದಿಂದ ಬಂದ ಆರ್ಯರ ಬದುಕಿನ ಕ್ರಮದ ಸಂಘರ್ಷದಿಂದ ಹುಟ್ಟಿಕೊಂಡ ವೇದ ಸಂಸ್ಕೃತಿಗೆ, ಅದರ ರಚನಾ ವಿಧಾನದಲ್ಲಾಗಲಿ ತತ್ವ ಪ್ರಚಾರಕ್ಕಾಗಲಿ ಯಾವ ಧಾರ್ಮಿಕ ನಾಯಕನನ್ನೂ ಕಾಣಲಾಗದು. ಮತ ಧರ್ಮದ ಅಭಿಲಾಷೆಯಿಲ್ಲದೆ, ಕಾಯಕದ ಘನತೆಯನ್ನು ಎತ್ತಿ ಹೇಳುವ ಜೊತೆಗೆ ತುಂಬು ಜೀವನ ಕ್ರಮವನ್ನು ಸಾರುವ ಚಿತ್ರ ವೇದಮಂತ್ರಗಳಲ್ಲಿವೆ. ಜೀವನವೆಂಬುವುದು ದುಃಖಮಯ. ಸಂತೋಷದ ಅನುಭವವೇ ಜೀವನದ ಉದ್ದೇಶವಾಗಿತ್ತು. ಇಲ್ಲಿ ಹಸನಾದ ಬದುಕನ್ನು ಜರುಗಿಸಬೇಕು. ಅನ್ಯಲೋಕದ ಬದುಕೂ ಒಂದಿದೆ. ಅದನ್ನು ಹೊಂದಲು ಯಜ್ಞಯಾಗಾದಿಗಳನ್ನು ಮಾಡಬೇಕು. ಆ ಮೂಲಕ ದೇವತೆಗಳ ಉಪಾಸನೆಯನ್ನು ನೆರವೇರಿಸಬೇಕು ಎಂಬುದು ವೇದಗಳಲ್ಲಿ ಕಂಡುಬರುತ್ತದೆ. ಅಲ್ಲದೆ ಬದುಕಿನ ಧರ್ಮವನ್ನೇ ಹೇಳುವ ತತ್ವಗಳು ಯಾವಾಗ ಹಿಂದೆ ಸರಿದವೋ, ಯಾವಾಗ ಅನ್ಯಧರ್ಮಗಳ ಆಗಮನವಾಯಿತೋ ಅಲ್ಲಿಂದೀಚೆಗೆ ಆಯಾ ಧರ್ಮಗಳೊಳಗೆ ಸಾಂಸ್ಕೃತಿಕ ನಾಯಕರು ಉದಿಸಿಬಂದರು. ಸಾಮಾನ್ಯ ಸ್ತರದಿಂದ ಹಿಡಿದು ಒಂದೊಂದು ಧರ್ಮವನ್ನೇ ಸಾರುವ ದೊಡ್ಡ ದೊಡ್ಡ ಸಾಂಸ್ಕೃತಿಕ ನಾಯಕರ ಆಗಮನ ಭಾರತದಲ್ಲಾಯಿತು. ಆದರೆ ಈ ಸಾಂಸ್ಕೃತಿಕ ನಾಯಕರ ಆದರ್ಶ ಕಲ್ಪನೆಗಳೆಲ್ಲವೂ ಕಾಲಕಾಲಕ್ಕೆ ನಾಶವಾಗಿರುವುದು ಕಂಡುರುತ್ತದೆ. ಈ ಧರ್ಮಗಳು ಬೇರೆ ಬೇರೆ ಶಾಖೆ ಉಪಶಾಖೆಗಳಾಗಿ ಉಗಮವಾಗಿದ್ದೇ ಭಾರತ ದೇಶದ ಧಾರ್ಮಿಕ ಚರಿತ್ರೆಯಾಗಿದೆ ಹಾಗೂ ರಾಜಕೀಯ ಚರಿತ್ರೆಯು ಇದರೊಳಗೆ ಸೇರಿಹೋಗಿದೆ.

ಬುಡಕಟ್ಟುಗಳ ಸಾಂಸ್ಕೃತಿಕ ನಾಯಕರನ್ನು ಕುರಿತು ಚರ್ಚಿಸುತ್ತಾ ಹೊರಟರೆ ಇಲ್ಲಿ ರಾಜಪ್ರಭುತ್ವದ ರಾಜಕೀಯ ಮತ್ತು ಧರ್ಮ ಪರಸ್ಪರ ಸಂಘರ್ಷಕ್ಕೆ ನಾಂದಿಯಾಗಿವೆ. ಧಾರ್ಮಿಕ ನಾಯಕರ ಮಧ್ಯೆ ವಾಗ್ವಾದ ಚರ್ಚೆಗಳು ಜರುಗಿವೆ. ಪ್ರಭುತ್ವದ ಸಾಂಸ್ಕೃತಿಕ ನಾಯಕರು ತಳಸಮುದಾಯದ ಸಾಂಸ್ಕೃತಿಕ ನಾಯಕರನ್ನು ಮೋಸದಿಂದ ಸೋಲಿಸಿ ಇವರ ಧರ್ಮದವರನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಂಡರು. ಇತಿಹಾಸದ ಪುರಾವೆಗಳಿಗೆ ಉದಾಹರಣೆಯಾಗಿ ಜಗಳೂರು ಅಜ್ಜನಿಗೂ ಮತ್ತು ತಿರುಪತಿ ತಿಮ್ಮಪ್ಪನಿಗೆ ನಡೆದ ವಾಗ್ವಾದವಿದೆ. ಇದರಲ್ಲಿ ಜಗಳೂರು ಅಜ್ಜನನ್ನು ಮೋಸದಿಂದ ಸೋಲಿಸಿ ಇಲ್ಲಿ ಸಮುದಾಯದ ಸಾಮಾನ್ಯ ಮನಸ್ಸುಗಳನ್ನು ತಿರುಪತಿ ತನ್ನ ಆರಾಧಕರಾಗಿ ಮಾಡಿಕೊಂಡಿರುವ ಘಟನೆಗಳನ್ನು ಈ ಸಂದರ್ಭದಲ್ಲಿ ಮರೆಯಬಾರದು.

ಒಟ್ಟಿನಲ್ಲಿ ವೇದಗಳ ಕಾಲಕ್ಕೆ ಇಲ್ಲದ ದೈವತ್ವದ ಕಲ್ಪನೆ, ಧಾರ್ಮಿಕ ನಾಯಕರ ಅಸ್ತಿತ್ವ ಕ್ರಿ.ಶ. ೧ನೇ ಶತಮಾನದ ನಂತರ ಭಾರತದಲ್ಲಿ ಪ್ರಚಲಿತಕ್ಕೆ ಬಂದಿದೆ. ಉಪನಿಷತ್ತುಗಳಲ್ಲಿಯೂ ಬದುಕನ್ನು ಕುರಿತ ಪ್ರಸ್ತಾಪವೇ ಹೆಚ್ಚು ಇರುವುದರಿಂದ ಇಲ್ಲಿಯೂ ಸಾಂಸ್ಕೃತಿಕ ನಾಯಕರ ಅಸ್ತಿತ್ವವಿದೆ ಎಂಬುದನ್ನು ಗ್ರಹಿಸಬಹುದಾಗಿದೆ. ಆದರೆ ಸಂಸ್ಕೃತ ಭಾಷೆಯ ಈ ವೇದ ಉಪನಿಷತ್ತಿನ ವಾಕ್ಯಗಳನ್ನು ಕಾಲಕ್ರಮೇಣ ಬೇರೆ ಬೇರೆಯ ಧರ್ಮಗಳಲ್ಲಿ ಬಂದ ಸಾಂಸ್ಕೃತಿಕ ನಾಯಕರು ಬಿಡಿಸಿ ಹೇಳಿದ್ದಾರೆ. ವೇದ ಸಂಹಿತೆಯ ಶ್ಲೋಕಗಳ ಅರ್ಥವನ್ನು ಬಿಡಿಸಿ ಹೇಳುವಾಗ ತಮ್ಮದೇ ಆದ ಜ್ಞಾನದ ಪರಂಪರೆಯನ್ನು ವ್ಯಾಖ್ಯಾನಿಸಿದ್ದಾರೆ. ಪ್ರಾರಂಭದಲ್ಲಿ ಈ ಕಾರ್ಯವನ್ನು ಜೈನ, ಬೌದ್ಧ ಧರ್ಮಗಳ ಸಾಂಸ್ಕೃತಿಕ ನಾಯಕರು ಮಾಡಿದ್ದಾರೆ. ಇಂತಹ ಸಂದರ್ಭದಲ್ಲಿ ವೇದಗಳ ಕಾಲದ ದೇವತೆಗಳ ಸ್ಥಾನವು ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮ ಸ್ಥಾನವನ್ನು ಕಳೆದುಕೊಂಡು, ಶಿವ, ವಿಷ್ಣು, ಜೈನತೀರ್ಥಂಕರರು ಬಂದರು. ಭಾರತದಲ್ಲಿ ಶೈವಧರ್ಮ ಉಗಮವಾಯಿತು. ಮುಂದೆ ವಿಷ್ಣುವಿನ ಅವತಾರವೆಂದು ಕೃಷ್ಣನ ಪಾತ್ರದ ಕಲ್ಪನೆ ಬೆಳೆದುದಲ್ಲದೆ ರಾಮಾಯಣದಲ್ಲಿ ರಾಮನೂ ಸಹ ವಿಷ್ಣುವಿನ ಅವತಾರವೆನಿಸಿಕೊಂಡನು ಅಲ್ಲದೆ ಮಹಾಭಾರತದಲ್ಲಿದ್ದ ರಾಮ, ಕೃಷ್ಣರ ಪಾತ್ರಗಳು ದೈವಿಕ ಅಥವಾ ಅವತಾರ ಪುರುಷರೂಪವಾಗಿ ಪರಿವರ್ತನೆಯಾದವು. ಈ ಪರಿಣಾಮವಾಗಿ ವರ್ಣಾಶ್ರಮ ಪದ್ಧತಿಯು ಉಗಮವಾಗಿ ಉಳ್ಳವರು ಮತ್ತು ಇಲ್ಲದವರ ವರ್ಗಗಳು ಸೃಷ್ಟಿಯಾದವು. ಆದ್ದರಿಂದ ಬುಡಕಟ್ಟು ಮತ್ತು ಕೆಳಸ್ತರದ ಸಮುದಾಯದ ಸಾಂಸ್ಕೃತಿಕ ನಾಯಕರು ಪ್ರಭುತ್ವದ ಧೋರಣೆಗಳನ್ನು ವಿರೋಧಿಸುತ್ತಲೇ ಬಂದರು. ಭಾರತೀಯ ಸಾಮಾಜಿಕ ವ್ಯವಸ್ಥೆಯ ಒಳಗೆ ಅಸಮಾನತೆ ಬೆಳೆಯಿತು. ನಂತರ ಇಂಡಿಯಾದ ರಾಜಕಾರಣ ಮತ್ತು ಪುರೋಹಿತಶಾಹಿಗಳು ಧರ್ಮದ ಹೆಸರಿನಲ್ಲಿ ಸಮಾಜವನ್ನು ಸಂಪೂರ್ಣವಾಗಿ ದುರುಪಯೋಗಪಡಿಸಿಕೊಂಡರು.

ಪ್ರತಿಯೊಂದು ಬುಡಕಟ್ಟು ಅರಣ್ಯವನ್ನೇ ತನ್ನ ಮೂಲ ನೆಲೆಯಾಗಿ ಮಾಡಿಕೊಂಡಿರುವುದರಿಂದ ಕಥೆ ಮತ್ತು ಹಾಡುಗಳಲ್ಲಿ ಕಾಡು ಮುಖ್ಯವಾಗಿ ಪ್ರಸ್ತಾಪವಾಗುತ್ತದೆ. ಆದ್ದರಿಂದಲೇ ಕಾಡಿನಲ್ಲಿ ಬುಡಕಟ್ಟುಗಳ ಸಂಸ್ಕೃತಿಯೂ ಋಷಿ ಮುನಿಗಳ ಸಂಸ್ಕೃತಿಯೂ ಜೊತೆಯಾಗಿ ಬೆಳೆದುಕೊಂಡು ಬಂದಿದೆ, ಬುಡಕಟ್ಟುಗಳು ತಮ್ಮ ನಡುವೆ ಬಂದು ಹೋದ ವೀರರನ್ನೇ ದೇವತೆಗಳೆಂದು, ಸಾಂಸ್ಕೃತಿಕ ಪುರುಷರೆಂದು ಆರಾಧಿಸುತ್ತಿದ್ದಾರೆ. ಶ್ರೀಶೈಲ ಮಲ್ಲಿಕಾರ್ಜುನನ್ನು ದಕ್ಷಿಣ ಭಾರತದ ಬುಡಕಟ್ಟುಗಳು ತಮ್ಮ ಪ್ರಮುಖ ದೈವವೆಂದು ಆರಾಧಿಸುವಂತೆ,

ಚಿಕ್ಕಮಗಳೂರು ಜಿಲ್ಲೆಯ ಕಳಸದ ಕಲಶೇಶ್ವರನು ಗೌಡಾಲುಗಳ ಆರಾಧ್ಯ ದೈವವಾಗಿದ್ದಾನೆ. ಇಲ್ಲಿ ಭಾರತೀಯ ಸಾಮಾಜಿಕ ವ್ಯವಸ್ಥೆಯ ಒಳಗಡೆ ಕಾಲಾನಂತರ ಬುಡಕಟ್ಟುಗಳ ಮೇಲೆ ಬೇರೆ ಬೇರೆ ಧರ್ಮಗಳ ಸಾಂಸ್ಕೃತಿಕ ನಾಯಕರು ಪ್ರಭಾವ ಬೀರಿರುವುದು ಗೋಚರಿಸುತ್ತದೆ. ಹಾಗಾಗಿ ಪ್ರತಿಯೊಂದು ಬುಡಕಟ್ಟಿನಲ್ಲಿ ಬೇರೆ ಬೇರೆ ಧರ್ಮಗಳನ್ನು ಅನುಸರಿಸುವ ಬಳಿಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಬುಡಕಟ್ಟುಗಳ ಜೀವನ ಕ್ರಮವು ಒಂದು ಬುಡಕಟ್ಟಿನಿಂದ ಇನ್ನೊಂದು ಬುಡಕಟ್ಟಿಗೆ ವಿವಿಧ ರೀತಿಯಲ್ಲಿ ಜೋಡಣೆಯಾಗಿರುತ್ತದೆ. ಇಲ್ಲಿ ಪಟ್ಟಣ ಮತ್ತು ಗ್ರಾಮ ಸಂಸ್ಕೃತಿಗಿಂತ ಭಿನ್ನವಾದ ಸಂಸ್ಕೃತಿಯು ಬುಡಕಟ್ಟುಗಳ ಹಾಡಿಯಲ್ಲಿ ರೂಪಿತಗೊಂಡಿರುತ್ತದೆ.

೧೪ನೇ ಶತಮಾನದಿಂದೀಚೆಗೆ ಅರಣ್ಯವಾಸಿ ಬುಡಕಟ್ಟುಗಳ ಮೇಲೆ ಶಿಷ್ಟ ಸಂಸ್ಕೃತಿಯ ಸಾಂಸ್ಕೃತಿಕ ನಾಯಕರ ಪುರಾಣ ಕಾವ್ಯಗಳ ಪ್ರಭಾವವು ಆಗಿದೆ. ಈ ಹಿನ್ನೆಲೆಯಿಂದ ಬುಡಕಟ್ಟುಗಳ ಮಧ್ಯೆ ಜನಪದ ಕಥನ ಕಾವ್ಯಗಳು ಸೃಷ್ಟಿಯಾದವು. ಬುಡಕಟ್ಟು ಸಾಂಸ್ಕೃತಿಕ ನಾಯಕರಲ್ಲಿ ಎರಡು ಬಗೆಯನ್ನು ಗುರುತಿಸಬಹುದು. ಅವುಗಳಲ್ಲಿ ಶುದ್ಧ ಐತಿಹಾಸಿಕ ಕ್ರಮದಲ್ಲಿ ನಿರೂಪಿಸಲ್ಪಟ್ಟ ವೀರರ ಕಥನಗೀತೆಗಳು ಮೊದಲನೇಯವು. ಎರಡನೆಯದು ಸಂಪೂರ್ಣ ಪೌರಾಣಿಕ ಆವರಣದ ಚೌಕಟ್ಟಿನಲ್ಲಿ ನಿರೂಪಿಸಲ್ಪಟ್ಟ ನಾಯಕರ ಕಥಾನಕಗಳಾಗಿರುತ್ತವೆ. ಆದರೆ ಬುಡಕಟ್ಟುಗಳಲ್ಲಿ ಹೆಚ್ಚು ಗೌರವಿಸಲ್ಪಡುವುದು ಎಂದರೆ ಪೌರಾಣಿಕ ಆವರಣದಲ್ಲಿ ನೆಲೆನಿಂತ ನಾಯಕರನ್ನು ಎಂದು ತಿಳಿಯಲಾಗಿದೆ. ಈ ನಾಯಕರು ಇಡೀ ಬುಡಕಟ್ಟು ಸಮೂಹವನ್ನು ದಾಟಿ ಒಂದೊಂದು ಪ್ರದೇಶವನ್ನು ಆವರಿಸಿದ್ದಾರೆ. ಈ ರೀತಿಯ ಬೆಳವಣಿಗೆಯು ಭಾರತದ ಬುಡಕಟ್ಟುಗಳಲ್ಲಿ ೫೦೦ ವರ್ಷಗಳಿಂದೀಚೆಗೆ ಆಗಿದೆ. ಅದಕ್ಕಿಂತ ಪೂರ್ವದಲ್ಲಿ ಬುಡಕಟ್ಟು ಸಮುದಾಯದಲ್ಲಿ ಸಾಂಘಿಕ ಜೀವನ, ಕೆಲವು ಸಂಪ್ರದಾಯಾಚರಣೆಗಳು ಪ್ರಧಾನವಾಗಿದ್ದವೇ ಹೊರತು, ದೈವಾರಾಧನೆ, ಧಾರ್ಮಿಕ ಅವಲಂಬನೆ, ಜನಪದ ಸಾಹಿತ್ಯ, ಪುರಾಣಗಳು ಯಾವುವೂ ಇರಲಿಲ್ಲ.

ಬುಡಕಟ್ಟುಗಳ ನಡುವೆ ಧರ್ಮ ಮತ್ತು ಸಾಂಸ್ಕೃತಿಕ ನಾಯಕರ ಪ್ರವೇಶವಾದಂತೆ ಪ್ರಭುತ್ವದ ರಾಜಕೀಯ ಪ್ರವೇಶವೂ ಆಗಿದೆ. ಕಾಡುವಾಸಿಯಾಗಿ ವಾಸಿಸುತ್ತಿದ್ದ ಬುಡಕಟ್ಟು ಜನಾಂಗ ಬೇಟೆಯಾಡುತ್ತಾ ದೃಢಕಾಯರೂ ಮುಗ್ಧರೂ ಆಗಿದ್ದುದರಿಂದ ಇವರನ್ನು ರಾಜಮನೆತನಗಳು ಯುದ್ಧದ ಸಾಮಗ್ರಿಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಬಳಸಿಕೊಂಡಿದೆ. ಬುಡಕಟ್ಟು ಸಮುದಾಯಗಳಲ್ಲಿ ಸಾಮಾನ್ಯವಾಗಿ ಶಿಷ್ಟದೇವತೆಗಳಿಗಿಂತ ಸಮುದಾಯದೊಳಗೆ ಆಗಿಹೋದ ವೀರರೇ ಸಾಂಸ್ಕೃತಿಕ ನಾಯಕರಾಗಿರುತ್ತಾರೆ. ಬುಡಕಟ್ಟು ಮತ್ತು ಜನಪದ ಸಾಂಸ್ಕೃತಿಕ ನಾಯಕರ ಕಥನ ಕ್ರಮವು ಇವರ ಬದುಕಿನಲ್ಲಿ ಎರಡು ಸಂಗತಿಗಳಲ್ಲಿ ನಿಚ್ಚಳವಾಗಿ ಕಾಣಿಸಿಕೊಳ್ಳುತ್ತದೆ. ಇಲ್ಲಿ ಸಾಂಸ್ಕೃತಿಕ ನಾಯಕರು ಐತಿಹಾಸಿಕ ವೀರರಾಗಿದ್ದಾರೆ. ನಾಯಕರು ಒಂದು ಸಮೂಹ ಅಥವಾ ಸಮುದಾಯದ ಒಳಿತಿಗಾಗಿ ದುಡಿದಿರುತ್ತಾರೆ. ಅಲ್ಲದೆ ಯಾರದೋ ರಕ್ಷಣೆಯ ಹೋರಾಟದಲ್ಲಿ ಭಾಗವಹಿಸಿರುತ್ತಾರೆ. ಈ ವೀರರ ಗುರಿ ರಾಜ್ಯ ಸ್ಥಾಪನೆಯಾಗಿರುವುದಿಲ್ಲ. ಎದುರಾದ ಅಪಾಯದೊಡನೆ ಹೋರಾಡುವುದು, ಒಳಿತನ್ನು ಕುರಿತಾದ ನಿಷ್ಠೆ ಇವರ ಗುರಿಯಾಗಿರುತ್ತದೆ.

ಗೌಡಾಲು ಸಮುದಾಯದೊಳಗಿನಿಂದ ಆಗಿಹೋದವರು ಯಾರೂ ಸಾಂಸ್ಕೃತಿಕ ನಾಯಕರು ಸಿಗುವುದಿಲ್ಲ. ಇಡೀ ಗೌಡಾಲು ಸಮುದಾಯವೇ ಮೂಡಿಗೆರೆ ತಾಲೂಕಿನ ಕಳಸದ ಕಲಶೇಶ್ವರ ದೇವರನ್ನು ತನ್ನ ಸಾಂಸ್ಕೃತಿಕ

ನಾಯಕನಂತೆ ಮನಸಿನಲ್ಲಿ ಇಟ್ಟುಕೊಂಡು ಆರಾಧಿಸುತ್ತಿದೆ. 'ಪ್ರಾಚೀನ ಕಾಲದಲ್ಲಿ ಕಲಶೇಶ್ವರನ ಪೂಜೆ ಮಾಡಲು ಮತ್ತು ಗುಡಿಯ ಸ್ವಚ್ಛತೆಗೆ ಎಂದು ನಮ್ಮನ್ನು ಕಾಶಿಯಿಂದ ಇಲ್ಲಿಗೆ ಕರೆದುಕೊಂಡು ಬಂದಿದ್ದರು' ಎಂದು ಗೌಡಾಲು ಮಾಹಿತಿದಾರರು ಹೇಳುವುದನ್ನು ಗಮನಿಸಬಹುದು. ಈ ಬುಡಕಟ್ಟು ಸಮುದಾಯ ಕುದುರೆಪೂಜೆಯ ಹಬ್ಬವನ್ನು ಆಚರಿಸುತ್ತಾರೆ. ಇದರಲ್ಲಿ ೩ ಕೂಡಿಗೆಯ ಮುಖಂಡರು ರಾಜನಂತೆ ಪೇಟವನ್ನು, ಬಟ್ಟೆಯನ್ನು ಹಾಕಿಕೊಂಡು ಚಾಮರದ ಕೆಳಗೆ ರಾಜನಂತೆ ನಡೆಯುತ್ತಾರೆ. ಇವರ ನಡಿಗೆ ಈ ಸಂದರ್ಭದಲ್ಲಿ ವಿಶೇಷವಾಗಿರುತ್ತದೆ. ದೇವರನ್ನು ಭೇಟಿ ಮಾಡಲು ಬೆಳಗಿನ ಜಾವ ೫ ಗಂಟೆಯ ಸುಮಾರಿಗೆ ದೇವಸ್ಥಾನ ಒಳಗಡೆ ಹೋಗದೆ ಮೆಟ್ಟಿಲುಗಳ ಹತ್ತಿರ ನಿಲ್ಲುತ್ತಾರೆ. ನಂತರ ದೇವರನ್ನು ಕರೆದುಕೊಂಡು ಊರಿನ ಪ್ರಮುಖ ಬೀದಿಗಳಲ್ಲಿ ನಾದ ನೃತ್ಯಗಳ ಮೂಲಕ ಮೆರವಣಿಗೆ ಹೊರಡುತ್ತಾರೆ. ನಂತರ ಓಡಿ ಓಡಿ ಹೋಗಿ ದೇವರನ್ನು ನೋಡಿ ರೊಚ್ಚಿನಿಂದ ದೇವರ ಎದುರಿಗೆ ಸೊಪ್ಪಿನಿಂದ ಮಾಡಿದ ಕುದುರೆಗಳನ್ನು ಕಡಿಯುತ್ತಾರೆ. ಏಕೆ ಈ ಹಬ್ಬವನ್ನು ನೀವು ಮಾಡುತ್ತೀರಿ ಎಂದರೆ 'ಕಲಶೇಶ್ವರನಿಗೆ ಮೈಮೇಲೆ ಹಲ್ಲಿ ಬಿದ್ದಿತು, ಆದ್ದರಿಂದ ಹಲ್ಲಿ ಬಿದ್ದ ದೋಷವನ್ನು ಕಳೆಯಲು ಹಲ್ಲಿ ಹಬ್ಬವನ್ನು ಆಚರಿಸುತ್ತೇವೆ ಎನ್ನುತ್ತಾರೆ. ನಂತರ ದೇವರನ್ನು ಹೊಳೆಗೆ ಕರೆದುಕೊಂಡು ಹೋಗಿ ನೀರನ್ನು ಚಿಮುಕಿಸಿ ಪೂಜೆ ಮಾಡಿ ದೇವರನ್ನು ಗುಡಿಗೆ ಸೇರಿಸುತ್ತಾರೆ. ಇನ್ನೆಲ್ಲ ಗಮನಿಸಿದರೆ ಒಂದು ಕಾಲದಲ್ಲಿ ಕಲಶೇಶ್ವರನ ನಿಜವಾದ ಭಕ್ತರು ಮತ್ತು ದೇವರ ಎಲ್ಲ ಜವಾಬ್ದಾರಿ ಇವರದ್ದಾಗಿದೆ ಎಂದು ಗ್ರಹಿಸಬಹುದಾಗಿದೆ. ಇಲ್ಲಿ ವಿಶೇಷವೆಂದರೆ ಇವರಲ್ಲಿರುವ ಕತ್ತಿ, ಚಾಮರ ಹಾಗೂ ಯುದ್ಧದ ಸಾಮಗ್ರಿಗಳನ್ನು ಗಮನಿಸಿದರೆ ಇವರು ರಾಜರಂತೆ ಆಡಳಿತ ಮಾಡಿದವರಾಗಿಯೂ ಕಾಣುತ್ತಾರೆ. ಆದರೆ ಇವರೆ ಹೇಳುವಂತೆ ಈಗಲೂ ಕಲಶೇಶ್ವರನ ರಥ(ತೇರು)ವನ್ನು ವಾಟೆಯಿಂದ ಕಟ್ಟುವುದನ್ನು ಗಮನಿಸಿದರೆ ಮತ್ತು ದೇವಸ್ಥಾನದ ಎಲ್ಲ ಕೆಲಸವನ್ನು ಯಾವುದೇ ಸಂಭಾವನೆಯನ್ನು ತೆಗೆದುಕೊಳ್ಳದೆ ಮಾಡುತ್ತಿರುವುದನ್ನು ನೋಡಿದರೆ ಪ್ರಸ್ತುತ ಸಂದರ್ಭದಲ್ಲಿ ಗೌಡಾಲುಗಳು ಸೇವಕರಾಗಿರುವುದು ಕಂಡುಬರುತ್ತದೆ.

ಇಲ್ಲಿ ಕ್ಷೇತ್ರಕಾರ್ಯದಿಂದ ಗಮನಿಸಿದ್ದೇನೆಂದರೆ ಗೌಡಾಲುಗಳ ಹಾಡಿಯಲ್ಲಿ ಹೆಣ್ಣು ಮಕ್ಕಳು ಶೋಬಾನೆಯ ಹಾಡುಗಳನ್ನು ಹೇಳುತ್ತಿದ್ದರೂ ತಮ್ಮದೇಯಾದ ದೈವಗಳು ಇದ್ದರೂ ಕಲಶೇಶ್ವರನೇ ಅವರ ಆರಾಧ್ಯ ದೈವ ಮತ್ತು ಸಾಂಸ್ಕೃತಿಕ ನಾಯಕನು ಹೌದು. ಈಗಲೂ ದೇವಸ್ಥಾನದ ಒಳಗಡೆ ಹೋಗದೆ ಇರುವುದು ಅವರ ದೇವರ ಮೇಲಿನ ನಂಬಿಕೆಯನ್ನು ತೋರಿಸುತ್ತದೆ. ಇದರಿಂದ ಮನವರಿಕೆಯಾಗುವುದೇನೆಂದರೆ ಗೌಡಾಲುಗಳು ಮೂಲತಃ ಬುಡಕಟ್ಟು ಸಂಸ್ಕೃತಿಯನ್ನು ಹೊಂದಿದ್ದು, ಸಮಾಜದ ಸ್ತರವಿನ್ಯಾಸದ ಸುಳಿಯಲ್ಲಿ ಸಿಲುಕಿ ಧರ್ಮ ಧರ್ಮಗಳ ಸಂಘರ್ಷಕ್ಕೆ ಒಳಗಾಗಿರುವುದು ವಿಷಾದನೀಯ ಸಂಗತಿಯಾಗಿದೆ. ಏಕೆಂದರೆ ಇಂಡಿಯಾದ ಧಾರ್ಮಿಕ ಪರಂಪರೆಯಲ್ಲಿ ಬಂದ ಬುದ್ಧ, ಮಹಾವೀರ, ಬಸವಣ್ಣ, ರಾಮಾನುಜಾಚಾರ್ಯ, ಶಂಕರಾಚಾರ್ಯ, ಮಧ್ವಾಚಾರ್ಯರ ಪ್ರಭಾವ ಸ್ಥಾಪಿತಗೊಂಡ ಹಿನ್ನೆಲೆಯಿಂದ ಇವರದೇ ಆದ ಮತಗಳು ಅಥವಾ ಪಂಥಗಳು ಜಾರಿಗೆ ಬಂದವು. ಸಮಾಜದ ಬದಲಾವಣೆಗೆ ಅನುಗುಣವಾಗಿ, ಈ ಪಂಥಗಳ ನಡುವೆ ಸ್ಪರ್ಧೆಗಳು ಏರ್ಪಟ್ಟವು. ಆದರೆ ಜನಪದ ವೀರರು, ಸಂತರು ಭಾರತದ ಪರಂಪರೆಯಲ್ಲಿ ಯಾವ ಧರ್ಮವನ್ನು ಸರಿಯಾಗಿ ಅನುಸರಿಸದೇ ಇರುವುದು ಮುಖ್ಯವಾಗಿದೆ. ಇಲ್ಲಿ ಬುಡಕಟ್ಟು ನಾಯಕರು ಯಾವುದೇ ಧರ್ಮದ ವಕ್ತಾರರಾಗಿ ಕಂಡುಬರದೆ

ಇದ್ದರೂ ಬುಡಕಟ್ಟುಗಳು ಮಾತ್ರ ಅನಿವಾರ್ಯವಾಗಿ ಎಂಬಂತೆ ಕಾಲಕಾಲಕ್ಕೆ ಪ್ರಭಾವ ಬೀರಿದ ಧರ್ಮಗಳ ಅಂಶವನ್ನು ಸ್ವೀಕರಿಸಿದ್ದಾರೆ. ಗೌಡಾಲುಗಳು ತಾವು ಯಾವುದೇ ಸಾಂಸ್ಕೃತಿಕ ನಾಯಕರನ್ನು ಹೊಂದಿಲ್ಲ. ಇವರು ಕಲಶೇಶ್ವರನನ್ನೇ ಆರಾಧ್ಯ ದೈವ ಎಂದುಕೊಂಡಿದೆ. ಆದರೆ ಕುಲವಿಲ್ಲದ ಬುಡಕಟ್ಟುಗಳಿಗೆ ಕುಲವನ್ನು ಹುಡುಕಿಸಿಕೊಟ್ಟವರಾಗಿದ್ದಾರೆ. ಉದಾಹರಣೆಯಾಗಿ ಮಂಟೇಸ್ವಾಮಿ, ಮಾದೇಶ್ವರ, ತಿಪ್ಪೇಸ್ವಾಮಿ ಮುಂತಾದ ಸಾಂಸ್ಕೃತಿಕ ನಾಯಕರು ಕುಲವಿಲ್ಲದ ಬುಡಕಟ್ಟಿನವರಿಗೆ, ಕುಲ, ನೆಲೆ, ನೆರಳು, ಕಲ್ಪಿಸಿಕೊಟ್ಟವರಾಗಿರುವುದರಿಂದ ಸಾಂಸ್ಕೃತಿಕ ನಾಯಕರನ್ನು ಯಾವುದೇ ಸಮುದಾಯ ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ಅದರಂತೆ ಇಲ್ಲಿ ಗೌಡಾಲು ಸಮುದಾಯ ಈಗಲೂ ಕಲಶೇಶ್ವರನ ಬಿಟ್ಟಿಕೆಲಸವನ್ನು ಒಪ್ಪಿಕೊಂಡಿದೆ. ಆದರೆ ಇದಕ್ಕೆ ಯಾವುದೇ ಸಂಭಾವನೆಯನ್ನು ತೆಗೆದುಕೊಳ್ಳದೆ ಬಿಟ್ಟಿ ಕೆಲಸಕ್ಕೆ 'ಉಪ್ಪನ್ನು' ಮಾತ್ರ ತೆಗೆದುಕೊಂಡು ಜೀವನ ಮಾಡುತ್ತಿದೆ.

ಈ ಬುಡಕಟ್ಟನ್ನು ಕುರಿತು ಕ್ಷೇತ್ರಕಾರ್ಯ ಮಾಡಿ ಅಧ್ಯಯನ ಮಾಡಿದಾಗ ಇವರ ಮೇಲೆ ಕ್ಲಾಸಿಕಲ್ ಧರ್ಮಗಳು ಹೆಚ್ಚಾಗಿ ಪ್ರಭಾವ ಬೀರಿದಂತೆ ಕಾಣುವುದಿಲ್ಲ. ಆದರೆ ನಂತರದ ಘಟ್ಟದಲ್ಲಿ ಜನಪದ ದೈವಗಳನ್ನು, ಸಾಂಸ್ಕೃತಿಕ ನಾಯಕರನ್ನು ಸಂಘಟಿತವಾದ ಬೃಹತ್ ಧರ್ಮಗಳು ತಮ್ಮ ಕಕ್ಷೆಯೊಳಗೆ ಸೇರಿಸಿಕೊಳ್ಳುವ ಕ್ರಿಯೆ ನಡೆದಿದೆ. ಪರಿಣಾಮವಾಗಿ ಈ ಸಮುದಾಯ ಸಾಮಾಜಿಕವಾಗಿ ಮೇಲುವರ್ಗದ ಸಂಸ್ಕೃತಿಯನ್ನು ಅನುಕರಿಸುತ್ತ ಬಂದಿದೆ.

ಇವರು ಸಾಂಸ್ಕೃತಿಕವಾಗಿ ಅವರದೇ ಆದ ಜಾನಪದ ಲೋಕವನ್ನು ಸೃಷ್ಟಿಸಿಕೊಂಡು ಕಲಶೇಶ್ವರನ ಜಾತ್ರೆ ಉತ್ಸವಗಳಲ್ಲಿ ಪಾಲ್ಗೊಳ್ಳುವುದಲ್ಲದೆ ಹೊರನಾಡು ಅನ್ನಪೂರ್ಣೇಶ್ವರಿ ದೇವಿಯ ಜಾತ್ರೆಗಳಲ್ಲಿಯೂ ಭಾಗವಹಿಸುತ್ತಾರೆ. ಸಂಸೆಯಲ್ಲಿರುವ ಪದ್ಮಾವತಿಯ ಜಾತ್ರೆ ಉತ್ಸವಗಳಲ್ಲಿ ತಮ್ಮಲ್ಲಿರುವ ಯುದ್ಧದ ಸಾಮಗ್ರಿಗಳ ಜೊತೆ ತಮ್ಮ ದೈವವನ್ನು ತೆಗೆದುಕೊಂಡು ಹೋಗುವ ಪರಿಪಾಟವನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಗೌಡಾಲುಗಳು ಇತರ ಧರ್ಮಗಳ ಪ್ರಭಾವಕ್ಕೆ ಒಳಗಾಗಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿ ಪ್ರತಿಯೊಬ್ಬ ಗಂಡಸರು ನಾಮವನ್ನು ಹಚ್ಚಿರುತ್ತಾರೆ. ತುಂಗೆಯ ನದಿ ದಡದಲ್ಲಿ ಅಗ್ರಹಾರಗಳು ದೊರೆಯುತ್ತವೆ. ಇದರಿಂದ ಮನವರಿಕೆಯಾಗುವುದೇನೆಂದರೆ ಈ ಬುಡಕಟ್ಟು ಸಮುದಾಯ ಶೈವ ಮತ್ತು ವೈಷ್ಣವ ಪಂಥಗಳಿಗೆ ಮಾರು ಹೋಗಿರುವುದು ತಿಳಿಯುತ್ತದೆ.

ಪ್ರಾಣಿ ಪಕ್ಷಿಗಳನ್ನು ಆರಾಧಿಸುತ್ತಿರುವುದು ಈ ಸಮುದಾಯದಲ್ಲಿ ಕಂಡುಬರುತ್ತದೆ. ಇವರು ತಮ್ಮ ಆರಾಧನಾ ಪದ್ಧತಿಯನ್ನು ಕಾಲಕಾಲಕ್ಕೆ ಹಬ್ಬಗಳನ್ನು ಆಚರಿಸುವುದರ ಮೂಲಕ ನೆರವೇರಿಸುತ್ತಾರೆ. ಉಲ್ಲಾಸಭರಿತ ಬದುಕನ್ನು ಬಾಳುವಲ್ಲಿ, ಬುದ್ಧಿಚುರುಕುಗೊಳಿಸುವಲ್ಲಿ ಹಬ್ಬ-ಉತ್ಸವಗಳು ಪ್ರಮುಖ ಸಾಧನಗಳಾಗಿವೆ. ಒಂದು ಸಮುದಾಯದ ಶಾಶ್ವತ ಸಂತೋಷ, ಸಂಬಂಧಗಳ ಸ್ಥಿರೀಕರಣ ಹೀಗೆ ಎಲ್ಲವೂ ಈ ಹಬ್ಬಗಳ ಆಚರಣೆಗಳಿಂದ ಸಾಧ್ಯವಾಗುತ್ತದೆ. ಇಂತಹ ಒಂದು ವಿಚಾರವನ್ನು ನಾವು ಪ್ರತಿಯೊಂದು ಜನಾಂಗದಲ್ಲೂ ಕಾಣುತ್ತೇವೆ.

ಗೌಡಾಲು ಬುಡಕಟ್ಟು ಸಮುದಾಯದವರು ಮೂಲತಃ ಕೃಷಿಯನ್ನು ಅವಲಂಬಿಸಿದ್ದು, ಕೂಲಿ ಮತ್ತು ಇತರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವುಗಳನ್ನು ಆಧಾರವಾಗಿರಿಸಿಕೊಂಡಿರುವ ಪ್ರತಿಯೊಂದು ಹಬ್ಬವೂ ನೇರವಾಗಿ ಕೃಷಿಗೆ ಸಂಬಂಧಿಸಿದೆ. ಹಾಗೆಯೇ ಪ್ರಕೃತಿ, ಪ್ರಾಣಿ, ಪಕ್ಷಿಗಳ, ದೈವಗಳ ಆರಾಧಕರಾಗಿರುವ

ಈ ಬುಡಕಟ್ಟಿನ ಜನರು ಭಕ್ತಿ, ಶ್ರದ್ಧೆಗಳಿಂದ ಬದುಕನ್ನು ನಿರಾತಂಕವಾಗಿ ಮುನ್ನಡೆಸುವ ದುಡಿದ ಮೈ ಮನಸ್ಸುಗಳಿಗೆ ಮುದವನ್ನು ನೀಡುವ ಅನೇಕ ಹಬ್ಬಗಳನ್ನು ಆಚರಿಸುತ್ತಾ ಬರುತ್ತಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಅಧ್ಯಯನ ಮಾಡಿ ಕೆಳಗಿನ ಕೋಷ್ಟಕದ ಮೂಲಕ ತಿಳಿಸಲಾಗಿದೆ.

**ಕೋಷ್ಟಕ-೪**

**ಗೌಡಾಲು ಜನರು ಆಚರಿಸುವ ಹಬ್ಬಗಳು**

| ಆಚರಿಸುವ ಹಬ್ಬಗಳು | ಒಟ್ಟು ಜನಸಂಖ್ಯೆ | ಶೇಕಡಾವಾರು |
|---|---|---|
| ದೀಪಾವಳಿ | ೧೦೦ | ೧೨.೯೦ |
| ಯುಗಾದಿ | ೯೮ | ೧೨.೬೪ |
| ಜಾತ್ರೆ ಹಬ್ಬ | ೮೭ | ೧೧.೨೫ |
| ನಾಗರ ಪಂಚಮಿ | ೭೧ | ೦೯.೧೬ |
| ಕದಿರು ಹಬ್ಬ | ೮೨ | ೧೦.೫೮ |
| ಆಟಿ ಅಮಾವಾಸ್ಯೆ | ೯೧ | ೧೧.೭೪ |
| ಹರಕೆ ಹಬ್ಬ | ೬೭ | ೦೮.೬೪ |
| ಮಹಾಲಯ ಅಮಾವಾಸ್ಯೆ | ೫೮ | ೦೭.೪೮ |
| ಕೋಡನ ಅಮಾವಾಸ್ಯೆ | ೪೨ | ೦೫.೪೧ |
| ಭೂಮಿ ಪೂಜೆ | ೩೭ | ೦೪.೭೭ |
| ನವರಾತ್ರಿ | ೪೨ | ೦೫.೪೧ |
| **ಒಟ್ಟು** | **೭೭೫** | **೧೦೦.೦೦** |

ಮೇಲಿನ ಕೋಷ್ಟಕದಲ್ಲಿ ಕಂಡುಬರುವಂತೆ ೧೦೦ ಶೇ.೧೨.೦ ಜನ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ೯೮ ಶೇ.೧೨.೬೪ ಜನ ಯುಗಾದಿ ಹಬ್ಬವನ್ನು ಆಚರಿಸುತ್ತಿದ್ದಾರೆ. ೮೭ ಶೇ.೧೧.೨೫ ಜನ ಜಾತ್ರೆಹಬ್ಬವನ್ನು ೭೧ ಶೇ.೯.೧೬ ಜನ ನಾಗರ ಪಂಚಮಿ, ೮೨ ಶೇ.೧೦.೫೮ ಜನ ಕದಿರು ಹಬ್ಬವನ್ನು, ೯೧ ಶೇ.೧೧.೭೪ ಜನ ಆಟಿ ಅಮಾವಾಸ್ಯೆಯನ್ನು, ೬೭ ಶೇ.೮.೬೪ ಜನ ಹರಕೆ ಹಬ್ಬವನ್ನು ೫೮ ಶೇ.೭.೪೮ ಜನ ಮಹಾಲಯ ಅಮಾವಾಸ್ಯೆಯ ಆಚರಣೆಯನ್ನು, ೪೨ ಶೇ.೫.೪೧ ಜನ ಕೋಡನ ಅಮಾವಾಸ್ಯೆಯ ಹಬ್ಬವನ್ನು, ೩೭ ಶೇ.೪.೭೭ ಜನ ಭೂಮಿಪೂಜೆಯನ್ನು, ೪೨ ಶೇ.೫.೪೧ ಜನ ನವರಾತ್ರಿ ಹಬ್ಬವನ್ನು ಆಚರಿಸುತ್ತಿರುವುದನ್ನು ಕ್ಷೇತ್ರಕಾರ್ಯದಿಂದ ಕಂಡುಕೊಳ್ಳಲಾಗಿದೆ.

ಇಲ್ಲಿ ಅತಿ ಹೆಚ್ಚು ಜನ ದೀಪಾವಳಿ, ಯುಗಾದಿ, ಜಾತ್ರೆಹಬ್ಬ, ಕದಿರುಹಬ್ಬ, ಆಟಿ ಅಮಾವಾಸ್ಯೆಯಂತಹ ಹಬ್ಬಗಳನ್ನು ಆಚರಿಸುತ್ತಿರುವುದು ಈ ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ.

ಕೋಷ್ಟಕವನ್ನು ಗಮನಿಸಿದಾಗ ಕೆಲವೊಂದು ಮಾಹಿತಿದಾರರು ಒಂದಕ್ಕಿಂತ ಹೆಚ್ಚು ಹಬ್ಬಗಳನ್ನು ಆಚರಣೆ ಮಾಡುತ್ತಿರುವುದು ಕಂಡುಬರುತ್ತದೆ. ಆದ್ದರಿಂದ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ. ಉದಾಹರಣೆಗೆ ೧೦೦ ಜನ ಮಾಹಿತಿದಾರರು ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ಅದೇ ರೀತಿ ಇವರಲ್ಲಿ ೯೮ ಜನ ಯುಗಾದಿ ಹಬ್ಬವನ್ನೂ ಆಚರಿಸುತ್ತಾರೆ. ಹಾಗೆಯೇ ೯೮ ಜನ ಯುಗಾದಿ ಹಬ್ಬವನ್ನು ಆಚರಿಸುವುದರ ಜೊತೆಯಲ್ಲಿ ದೀಪಾವಳಿ ಹಬ್ಬವನ್ನೂ ಆಚರಿಸುತ್ತಿರುವುದನ್ನು ಕಂಡುಕೊಳ್ಳಬಹುದು. ಇಲ್ಲಿ ಅತಿ ಕಡಿಮೆ ಜನ ನವರಾತ್ರಿ ಮತ್ತು ಕೋಡನ ಅಮಾವಾಸ್ಯೆಯನ್ನು ಆಚರಿಸುತ್ತಿರುವುದನ್ನು ಕಾಣಬಹುದು. ಗೌಡಾಲು ಬುಡಕಟ್ಟು ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಎಲ್ಲ ಆಚಾರ ವಿಚಾರಗಳಲ್ಲಿಯೂ ಸಾಂಪ್ರದಾಯಿಕತೆಯಿಂದ ಕೂಡಿರುವುದು ಕಂಡುಬರುತ್ತದೆ.

**ದೀಪಾವಳಿ**

ದೀಪಾವಳಿಯ ಹಬ್ಬವನ್ನು ಇವರು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಮುಖ್ಯವಾಗಿ ಐದು ದಿನ ವಿಶೇಷ ಕಾರ್ಯಕ್ರಮಗಳಿರುತ್ತವೆ. ಐದು ದಿನಗಳ ಹಬ್ಬದಲ್ಲಿ ಒಂದನೇ ದಿನವನ್ನು ಬೂದಿಹಬ್ಬ, ಎರಡನೇ ದಿನ ಅಮಾವಾಸ್ಯೆ ಹಬ್ಬ, ಮೂರನೇ ದಿನ ಪಾಡ್ಯದ ಹಬ್ಬ, ನಾಲ್ಕನೇ ದಿನ ಕರಿಹಬ್ಬ, ಐದನೇ ದಿನ ಸಿರಿಹಬ್ಬ, ಕೊನೆಯದಾಗಿ ವಸ್ತಡ್ಕ ಮಾಡುತ್ತಾರೆ.

**ಬೂದಿಹಬ್ಬ**

ಬೂದಿಹಬ್ಬದ ದಿನ ಬೆಳಗ್ಗೆ ಮುಂಚೆಯೇ ಎದ್ದು ಸ್ನಾನದ ಹಂಡೆಗೆ ನೀರು ತುಂಬಿಸಿ, ಜೇಡಿ ಮತ್ತು ಕೆಮ್ಮಣ್ಣುಗಳ ಪಟ್ಟೆಯನ್ನು ಹಂಡೆಗೆ ಹಚ್ಚುತ್ತಾರೆ. ಹಂಡೆಗೆ ಹಿಂಡಲೆ ಕುಡಿಬಳ್ಳಿಯನ್ನು ಸುತ್ತುತ್ತಾರೆ. ನಂತರ ಅದಕ್ಕೆ ಪೂಜೆ ಮಾಡಿ ಸ್ನಾನ ಮಾಡುತ್ತಾರೆ. ನಂತರ ಮುಂಡಗವನ್ನು ಹಾಕುವ ಕಾರ್ಯಕ್ರಮ ನಡೆಯುತ್ತದೆ. ಮುಂಡಗ ಮತ್ತು ಅದರ ಹೂವು, ಗರಿಕೆ ಕುಡಿ, ಉತ್ತರಾಣೆ ಕಡ್ಡಿ, ವಾಟೆಯ ಎಲೆ ಇತ್ಯಾದಿಗಳನ್ನು ಒಟ್ಟಾಗಿ ಇಡುತ್ತಾರೆ. ಭೂಮಿಗೆ, ಕಲ್ಲಿಗೆ, ದನದ ಕೊಟ್ಟಿಗೆಯ ಬಾಗಿಲಿಗೆ, ಮನೆಯ ಬಾಗಿಲಿಗೆ, ದೈವದ ಬಾಗಿಲು, ದೇವಸ್ಥಾನಗಳ ಬಾಗಿಲಿಗೆ ಇದನ್ನು ಹಾಕುತ್ತಾರೆ. ನಂತರ ಪೂಜೆ ಮಾಡಿ ತಿಂಡಿ ಮಾಡುತ್ತಾರೆ. ಈ ದಿನದ ತಿಂಡಿ ವಿಶೇಷವಾಗಿರುತ್ತದೆ. ಚೀನಿಕಾಯಿ ಮತ್ತು ಅಕ್ಕಿಯ ಕಡುಬನ್ನು ವಿಶೇಷವಾಗಿ ಮಾಡುತ್ತಾರೆ. ಸಂಜೆ ಶಾವಿಗೆ, ಕೀರು, ಚಿತ್ರನ್ನ ಮುಂತಾದ ವಿಶೇಷ ಊಟವನ್ನು ತಯಾರಿಸುತ್ತಾರೆ. ಇದೇ ದಿನ ಮನೆಗೆ ಬಳಸುವ ಹತ್ಯಾರಗಳನ್ನು ತೊಳೆದು ಅವುಗಳಿಗೆ ಜೇಡಿಮಣ್ಣು ಮತ್ತು ಕೆಂಪುಮಣ್ಣಿನ ಪಟ್ಟೆಗಳನ್ನು ಹಚ್ಚುತ್ತಾರೆ. ಕೆಲವರು ಮೂರನೆಯ ದಿನ ಬೆಳಗ್ಗೆ ಹತ್ಯಾರಗಳನ್ನು ತೆಗೆದಿಡುತ್ತಾರೆ. ಕಳಶವನ್ನು ಮಾಡಿ, ತಾಮ್ರದ ತಂಬಿಗೆಯಲ್ಲಿ ನೀರು ತುಂಬಿ, ಕಾಯಿ, ಮಾವಿನ ಎಲೆ, ಹಿಂಗಾರದ ಹೂವಿನಿಂದ ಅಲಂಕರಿಸಿ ಸಂಜೆ ಮುಂಡಗವನ್ನು ಹಾಕಿದ ಕಡೆ ವಾಡೆಕೋಲು, ಕವರಿಕೋಲು, ಜಂಜರಗಿ ದೀಪದ ಕೋಲುಗಳನ್ನು ಹಚ್ಚಿಡುತ್ತಾರೆ. ಮಾವಿನ ತೋರಣ, ರಂಗೋಲಿಯನ್ನು ಹಾಕಿ ಪೂಜೆಯನ್ನು ಮಾಡುತ್ತಾರೆ. ಇಂತಹ ಸಂಪ್ರದಾಯ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸ್ವಲ್ಪ ಭಿನ್ನವಾಗಿರುತ್ತದೆ.

### ಅಮಾವಾಸ್ಯೆಯ ಹಬ್ಬ

ಅಮಾವಾಸ್ಯೆಯ ಹಬ್ಬವು ದೀಪಾವಳಿಯ ಎರಡನೆಯ ದಿನ ನಡೆಯುತ್ತದೆ. ಇಲ್ಲಿ ಏನೂ ವಿಶೇಷತೆ ಇರುವುದಿಲ್ಲ. ಹಿಂದಿನ ದಿನದ ಕಾರ್ಯ ಮುಂದುವರಿಸುವ ಮತ್ತು ಮುಂದಿನ ದಿನದ ತಯಾರಿಯಲ್ಲಿ ಇರುತ್ತಾರೆ. ಈ ದಿನ ಕಳಶಕ್ಕೆ ಬೆಳಿಗ್ಗೆ ಮತ್ತು ಸಂಜೆ ಪೂಜೆಯನ್ನು ಮಾಡುತ್ತಾರೆ.

### ಪಾಡ್ಯದ ಹಬ್ಬ

ಈ ದಿನ ದೀಪಾವಳಿಯ ಮೂರನೆಯ ದಿನವಾಗಿದ್ದು, ಮುಂಜಾನೆಯಿಂದಲೇ ಹಬ್ಬದ ಸಡಗರವಿರುತ್ತದೆ. ಈ ದಿನ ವಿಶೇಷವಾಗಿ ಗೋವುಗಳ ಪೂಜೆ ಇರುತ್ತದೆ. ಬೆಳಗ್ಗೆ ಗೋವುಗಳಿಗೆ ಮೈತೊಳೆಸಿ, ಬಣ್ಣವನ್ನು ಹಚ್ಚಿ, ಕೊರಳಲ್ಲಿ ಅಡಿಕೆ, ಚಂಡಿನ ಹೂವು, ಅಡಿಕೆ ಹಿಂಗಾರದಿಂದ ಮತ್ತು ಇನ್ನೂ ಹಲವು ಆಲಂಕಾರಿಕ ವಸ್ತುಗಳಿಂದ ಶೃಂಗಾರ ಮಾಡಿರುತ್ತಾರೆ. ನಂತರ ಗೋವುಗಳ ಕಾಲು ತೊಳೆದು ಅವುಗಳ ತಲೆಗೆ ಎಣ್ಣೆ ಹಚ್ಚುತ್ತಾರೆ. ಅರಿಶಿಣ, ಕುಂಕುಮ ಇಡಿಸುತ್ತಾರೆ. ನಂತರ ಹಾರವನ್ನು ಹಾಕುತ್ತಾರೆ. ಹಣ್ಣುಕಾಯಿಯನ್ನು ಇಟ್ಟು ಪೂಜೆ ಮಾಡಿ ಆರತಿಯನ್ನು ಎತ್ತಿ ಪ್ರತಿಯೊಂದು ಗೋವುಗಳಿಗೆ ದೋಸೆ, ನೆನೆಸಿದ ಅಕ್ಕಿ ಮತ್ತು ಇತರೆ ಸಲಕರಣೆಗಳನ್ನು ಇಟ್ಟು ಇವುಗಳ ಪೂಜೆ ಮಾಡುತ್ತಾರೆ. ಮೊದಲನೆಯ ದಿನವಿಟ್ಟ ಕಳಶವನ್ನು ತೊಳೆದು ಅದರ ನೀರನ್ನು ಬದಲಾಯಿಸಿ ಶೃಂಗರಿಸುತ್ತಾರೆ. ಆ ದಿನದ ಸಂಜೆ ಬಲೀಂದ್ರನ (ಮೇಳ ದೇವರ) ಪೂಜೆಯನ್ನು ಮಾಡುತ್ತಾರೆ. ಇದರ ವಿಧಾನ ಎಂದರೆ ೪ ಬಾಳೆಯ ದಿಂಡಿನಿಂದ ಮಂಟಪವನ್ನು ಮಾಡಿ, ಅಡಕೆಯ ಒಡೆಯದೆ ಇರುವಂತಹ ಹಿಂಗಾರವನ್ನು ತೆಗೆದು ಅದಕ್ಕೆ ಕಣ್ಣು ಬಾಯಿಯನ್ನು ಬಿಡಿಸಿ ಮಂಟಪದಲ್ಲಿ ಕೂರಿಸಿ 'ಬಲೀಂದ್ರ' ಅಥವಾ 'ಮೇಳದೇವರ'ನ್ನು ಪೂಜಿಸುತ್ತಾರೆ. ಮಂಟಪದ ಮೇಲ್ಭಾಗದಲ್ಲಿ ವಿವಿಧ ರೀತಿಯ ಫಲಗಳನ್ನು ಕಟ್ಟುತ್ತಾರೆ. ಸಂಜೆ ಸಮಯದಲ್ಲಿ 'ಕೋಲು ಹಚ್ಚುವ' ಸಂಪ್ರದಾಯ ಇರುತ್ತದೆ. ಇಲ್ಲಿ ಕೋಲುಗಳನ್ನು ಧೂಪದಿಂದ ಮಾಡಿದ್ದು, ಇವುಗಳಿಗೆ ಧೂಪದ ಮೇಣವನ್ನು ತುದಿಯಲ್ಲಿ ಹಚ್ಚಿರುತ್ತಾರೆ. ಹಿಂದೆ ಈ ಧೂಪದ ಕೋಲುಗಳಿಗೆ 'ಕರಿಕೋಲು' ಎಂದು ಕರೆಯುತ್ತಿದ್ದರು. ಈಗ ಧೂಪದ ಕೋಲು ಎಂದು ಕರೆಯುತ್ತಾರೆ. ಇದು ಸುಮಾರು ೪ರಿಂದ ೬ ಅಡಿಯಷ್ಟು ಉದ್ದದ ಕೋಲಾಗಿರುತ್ತದೆ. ಕೋಲುಗಳನ್ನು ಗದ್ದೆ, ತೋಟ, ದೈಯ್ಯಗಳ ಜಾಗ, ಕೊಟ್ಟಿಗೆ ಮನೆಗಳ ಮುಂದೆ ಹಚ್ಚುತ್ತಾರೆ. ಧೂಪದ ಕೋಲು ಹಚ್ಚಿದ ನಂತರ ದೀಪಾವಳಿಗೆ... ದೀಪಾವಳಿಗೆ... ಬಲೀಂದ್ರ... ರಾಜ್ಯ ನೋಡಿ ಹೋಗೋ... ಎಂದು ಕೂಗುತ್ತಾರೆ. ನಂತರ ಮನೆಯಲ್ಲಿ ಮೇಳದೇವರು ಅಥವಾ ಬಲೀಂದ್ರನಿಗೆ ಮತ್ತು ಮನೆಯಲ್ಲಿ ಉಪಯೋಗಿಸುವ ಎಲ್ಲ ಉಪಕರಣಗಳಿಗೆ ಹಣ್ಣು, ಕಾಯಿ, ಹೂವು, ಕರ್ಪೂರ, ಊದ್ಬತ್ತಿಯನ್ನು ಹಚ್ಚಿ ಪೂಜೆಯನ್ನು ಮಾಡುತ್ತಾರೆ. ಪೂಜೆಯ ಸಂದರ್ಭದಲ್ಲಿ ಮನೆಯಲ್ಲಿ ಎಲ್ಲ ಆಹಾರದ ಪದಾರ್ಥಗಳನ್ನು ಎಡೆ ಇಟ್ಟು ಪೂಜೆ ಮಾಡುತ್ತಾರೆ. ಈ ಮೂರು ದಿನದ ಹಬ್ಬವನ್ನು 'ಕರಿ', 'ಸಿರಿ' ಹಾಗೂ 'ವಸ್ತಡ್ಕ' ಎಂದು ಕರೆಯುತ್ತಾರೆ.

ದೀಪಾವಳಿ ಹಬ್ಬದ ಸಮಯದಲ್ಲಿ ಊರಿನಲ್ಲಿ ಕೋಲಾಟ, ಕರಡಿಕುಣಿತ, ಅಂಟಿಗೆ-ಪಂಟಿಗೆ, ಹುಲಿವೇಷ ಕರಡಿವೇಷ ವಿವಿಧ ಪ್ರಕಾರದ ಆಟಗಳನ್ನು ಆಡುತ್ತಾರೆ.

## ಕರಿ ಹಬ್ಬ

ಮೇಲಿ ತಿಳಿಸಲಾದ ಮೂರು ದಿನವನ್ನು ಕರಿಹಬ್ಬ ಎಂದು ಕರೆಯುತ್ತಾರೆ. ದೀಪದ ಕೋಲುಗಳ 'ಕರಿ'ಯನ್ನು ನೋಡಬಾರದು ಎಂಬ ನಂಬಿಕೆ ಇದೆ. ಅದಕ್ಕಾಗಿಯೇ ಸಂಜೆ ಹಚ್ಚಿದ ದೀಪದ ಕೋಲು ರಾತ್ರಿ ಆರಿದ ನಂತರ ರಾತ್ರಿಯೇ ಅದನ್ನು ತೆಗೆಯುತ್ತಾರೆ. ಹಾಗೆಯೇ ಈ ದಿನ ಸಲಕರಣೆಗಳಿಗೆ ಎಡೆ ಇಟ್ಟು, ನೈವೇದ್ಯ ಮಾಡುತ್ತಾರೆ. ನಂತರ ಪೂಜೆ ಮಾಡುತ್ತಾರೆ.

## ವಸ್ತಡ್ಕ

ಈ ದಿನ ವಿಶೇಷವಾಗಿ ಮಾಂಸಾಹಾರಿ ಪದಾರ್ಥಗಳನ್ನು ಮಾಡುತ್ತಾರೆ. ಮಾಡಿದ ಪದಾರ್ಥಗಳನ್ನು ಎಡೆ ಇಟ್ಟು ಪೂಜಿಸುತ್ತಾರೆ. ಮುಂಜಾನೆ ಇಟ್ಟಿರುವ ಸಲಕರಣೆಗಳನ್ನು ಬೇಗನೆ ತೆಗೆದು ಇಡುತ್ತಾರೆ. ಇಲ್ಲಿಗೆ ದೀಪಾವಳಿ ಹಬ್ಬವು ಮುಕ್ತಾಯಗೊಳ್ಳುತ್ತದೆ.

ದೀಪಾವಳಿಯ ಸಂಪ್ರದಾಯಗಳು ಮತ್ತು ಆಚರಣೆ ಕ್ರಮಗಳು ಪ್ರದೇಶದಿಂದ ಪ್ರದೇಶಕ್ಕೆ ಸ್ವಲ್ಪ ಮಟ್ಟಿಗೆ ಬದಲಾವಣೆಯಿಂದ ಕೂಡಿರುವುದು ಕಂಡುಬರುತ್ತದೆ.

## ಯುಗಾದಿ ಹಬ್ಬ

ಈ ಸಮುದಾಯದಲ್ಲಿ ಯುಗಾದಿ ಹಬ್ಬವನ್ನು ವರ್ಷದ ಮೊದಲ ಹಬ್ಬವಾಗಿ ಆಚರಿಸುತ್ತಾರೆ. ಹಾಗೆಯೇ ಹೊಸ ವರ್ಷವು ಯುಗಾದಿ ಹಬ್ಬದಿಂದ ಪ್ರಾರಂಭವಾಗುತ್ತದೆ. ಈ ಹಬ್ಬದ ದಿನದಂದು ಮುಂಜಾನೆ ಬೇಗನೆ ಎದ್ದು ಪ್ರತಿಯೊಬ್ಬರೂ ಸ್ನಾನವನ್ನು ಮಾಡಿ, ದೇವರಿಗೆ ಕೈ ಮುಗಿದು, ಹಣೆಗೆ 'ಗೇರ'ನ್ನು ಇಡಬೇಕು. ನಂತರ ಎಲ್ಲರೂ 'ಬೇವುಬೆಲ್ಲ'ವನ್ನು ತಿನ್ನುತ್ತಾರೆ. ಈ ದಿನ ಪ್ರತಿಯೊಬ್ಬರ ಮನೆಯಲ್ಲಿಯೂ ಬೆಳಗ್ಗೆ ಸಿಹಿತಿಂಡಿಯನ್ನು ತಯಾರಿಸುತ್ತಾರೆ. ಸಂಜೆ ಮಾಂಸ ಮತ್ತು ಮೀನಿನ ಪದಾರ್ಥ ಮಾಡಿ ಎಡೆ ಇಟ್ಟು ಪೂಜೆ ಮಾಡಿ ಎಲ್ಲರೂ ಊಟ ಮಾಡುತ್ತಾರೆ. ಯುಗಾದಿ ಹಬ್ಬದ ವಿಶೇಷ ಎಂದರೆ 'ಬೇವುಬೆಲ್ಲ', ಸಿಹಿಕಹಿಯ ಮಿಶ್ರಣದಂತೆ ಇಡೀ ವರುಷ ಸುಖಮಯವಾಗಿ ಕಳೆಯಲಿ ಎಂಬುದು ಗೌಡಾಲು ಬುಡಕಟ್ಟು ಸಮುದಾಯದವರ ಆಶಯವಾಗಿದ್ದು, ಇದರಲ್ಲಿ ಅವರು ಹೆಚ್ಚಿನ ನಂಬಿಕೆ ಹೊಂದಿರುವುದನ್ನು ಕಾಣಬಹುದಾಗಿದೆ.

## ಗಣೇಶ ಹಬ್ಬ

ಈ ಹಬ್ಬದಲ್ಲಿ ಊರಿನವರು ಸೇರಿ ಅಥವಾ ಸಂಘ-ಸಂಸ್ಥೆಗಳ ಮೂಲಕ ಗಣಪತಿಯನ್ನು ಇಟ್ಟು ಹೆಚ್ಚೆಂದರೆ ೩ ದಿನಗಳವರೆಗೆ ಪೂಜಿಸುತ್ತಾರೆ. ಸಂಜೆಯ ಸಮಯದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಗೌಡಾಲು ಸಮುದಾಯದವರಲ್ಲಿ ಮನೆಗಳಿಗೆ ಗಣಪತಿಯನ್ನು ತರುವ ಸಂಪ್ರದಾಯವಿಲ್ಲ. ಹಿಂದಿನಿಂದಲೂ ಈ ಪದ್ಧತಿ ಇಲ್ಲದೇ ಇದ್ದುದು ಇದಕ್ಕೆ ಪ್ರಮುಖ ಕಾರಣ. ಜೊತೆಗೆ ಇದನ್ನು ತಂದರೆ ಖರ್ಚು-ವೆಚ್ಚ ಹೆಚ್ಚು ಮತ್ತು ಮಡಿಯಿಂದ ಇದನ್ನು ಆಚರಿಸುವುದು ಕಷ್ಟಕರ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

### ಭೂಮಿಪೂಜೆ/ಭೂಮಿ ಹುಣ್ಣಮೆ

ಈ ಹಬ್ಬ ದೀಪಾವಳಿಗಿಂತ ಮುಂಚಿತವಾಗಿ ಬರುತ್ತದೆ. ಇದನ್ನು ಭೂಮಿಗೆ ಪೂಜೆ ಮಾಡುವುದರ ಮೂಲಕ ಆಚರಿಸುತ್ತಾರೆ. ಇದು ಭೂಮಿ ತಾಯಿಯ ಬಯಕೆ ತೀರಿಸುವುದು ಎಂಬ ನಂಬಿಕೆಯನ್ನು ಹೊಂದಿರುತ್ತದೆ. ಈ ಹಬ್ಬಕ್ಕೆ 'ಭೂಮಿ ಕಲ್ಲು' ಎಂದು ಕರೆಯುತ್ತಾರೆ. ಗದ್ದೆಯ ಸಮೀಪದಲ್ಲಿ ಒಂದು ಕಲ್ಲನ್ನು ಪೂಜೆಸುತ್ತಾರೆ. ಈ ಕಲ್ಲಿನ ಮೇಲೆ ಬಾಳೆಹಣ್ಣು, ಕಾಯಿ, ಹೂವು, ದೀಪವನ್ನು ಇಟ್ಟು ನಂತರ ಮಾರನೆಟ್ಟಿ (ಭತ್ತದ ನೆಟ್ಟಿ) ಒಟ್ಟು ಮಾಡಿ ಕಟ್ಟಿ ಅದಕ್ಕೆ ಒಂದು ಸರವನ್ನು ಜೋಡಿಸಿ, ಹೂವು ಮತ್ತು ಮಾವಿನ ಎಲೆಯ ತೋರಣ ಮಾಡಿ ಅರಿಶಿಣ, ಕುಂಕುಮ ಹಚ್ಚಿ ಆರತಿ ಬೆಳಗುತ್ತಾರೆ. ತಂದಿರುವ ಪದಾರ್ಥಗಳನ್ನು, ಚಿನ್ನೆ-ಕಾಯಿ, ಕಡುಬು, ರಾಗಿಕಡುಬು, ಬೆರಕೆ ಸೊಪ್ಪಿನ ಪಲ್ಯ ಮುಂತಾದ ಎಲ್ಲ ಪದಾರ್ಥಗಳನ್ನು ಬಾಳೆಯ ಎಲೆಯಲ್ಲಿ ಸುತ್ತಿ ಪೊಟ್ಟಣ ಮಾಡಿ, ಪೂಜೆ ಮಾಡಿ ಅದನ್ನು 'ನಟ್ಟಿ'ಯ ಸಮೀಪದಲ್ಲಿ ಸ್ವಲ್ಪ ಹೊಂಡ ತೆಗೆದು ಮುಚ್ಚುತ್ತಾರೆ. ನಂತರ ಮನೆಗೆ ಹೋಗಿ ಊಟಮಾಡುತ್ತಾರೆ. ಹಬ್ಬದ ಮಾರನೆಯ ದಿನದಂದು ಭೂಮಿಯು ಬಲಿಯುತ್ತದೆಯೆಂಬ ನಂಬಿಕೆ ಇದೆ. ಆದಕಾರಣ ಮೂರು ದಿನಗಳವರೆಗೆ ಯಾರೂ ಯಾವ ಕೆಲಸವನ್ನೂ ಮಾಡುವುದಿಲ್ಲ. ಭೂಮಿ ಬಲಿಯುವುದು ಎಂದರೆ ಭೂಮಿ ಗಟ್ಟಿಯಾಗುವುದು ಎಂದರ್ಥ. ಭೂಮಿಯನ್ನು ಈ ದಿನದಂದು ಕಡಿದರೆ ಅಥವಾ ಅಗೆದರೆ 'ಭೂಮಿ'ತಾಯಿ ಶಾಪ ನೀಡುತ್ತಾಳೆ ಎಂಬ ನಂಬಿಕೆ ಜನರಲ್ಲಿ ಇದೆ. ಈ ಹಬ್ಬದಲ್ಲಿ ಮಾಂಸಾಹಾರ ಪದಾರ್ಥಗಳನ್ನು ಮಾಡುವಂತಿಲ್ಲ.

ಈ ಬುಡಕಟ್ಟು ಜನರು ಭೂಮಿಗೆ ತಾಯಿಯ ಸ್ಥಾನವನ್ನು ಕೊಟ್ಟಿರುವುದು ಕಂಡುಬರುತ್ತದೆ.

### ಜಾತ್ರೆಹಬ್ಬ

ಪ್ರಸಿದ್ಧ ಕ್ಷೇತ್ರದರ್ಶನ ಮಾಡಲು ಜನ ಯಾತ್ರೆ ಹೋಗುತ್ತಾರೆ. ವರ್ಷಕ್ಕೊಮ್ಮೆ ಜನರು ಸೇರಿ ದೇವರಿಗೆ ನಡೆಸುವ ಮಹೋತ್ಸವ ಕಾಲ ಜಾತ್ರೆಗೆ ಪ್ರಶಸ್ತಕಾಲ "ಜಾತ್ರೆಯು ಸಾಮಾಜಿಕ ಹೊಂದಾಣಿಕೆಗಾಗಿ ವಿಶೇಷ ದಿನಗಳಲ್ಲಿ ಜನರು ಸಂಭ್ರಮೋತ್ಸಾಹಗಳಿಂದ ನಡೆಸುವ ಆಚರಣೆಯಾಗಿದೆ. ಇಂಗ್ಲಿಷ್‌ನ Festival ಪದ ಹಬ್ಬ ಮತ್ತು ಜಾತ್ರೆ ಎರಡನ್ನು ಒಳಗೊಳ್ಳುವಂಥದು. Festival is a complex unit of customs and other folklore to celebrate a special ocsaion, usually annually and public interest. ಹಬ್ಬದ ಸಂಪ್ರದಾಯ, ರೂಢಿ ಹಾಗೂ ಕಲಾ ಪ್ರದರ್ಶನಗಳನ್ನು ಜರುಗಿಸುವ ಒಂದು ವಿಶೇಷ ಸಂದರ್ಭ; ವರ್ಷಕ್ಕೊಮ್ಮೆ ಆಚರಿಸುವಂಥದ್ದು; ಸಾಮಾಜಿಕ ಆಸಕ್ತಿಯುಳ್ಳಂಥದ್ದು" ಎಂದು ಬಾಗ್ಸ್ ಆರ್.ಎಸ್. ಅವರು ಅಭಿಪ್ರಾಯಪಟ್ಟಿದ್ದಾರೆ."[೧೩]

ಜಾತ್ರೆಗಳನ್ನು ಹಿಂದಿನಿಂದಲೂ ಗ್ರಾಮ ದೇವರ ಹೆಸರಿನಲ್ಲಿ ಮಾಡುತ್ತಾರೆ. ಇದು ವಾರ್ಷಿಕ ಜಾತ್ರೆ ಆಗಿರಬಹುದು. ಕೆಲವು ಕಡೆ ೨ ವರ್ಷಕ್ಕೆ, ೩ ವರ್ಷಕ್ಕೆ ಕೆಲವೊಂದು ಕಡೆಗಳಲ್ಲಿ ೫ ವರ್ಷಗಳಿಗೆ ಒಮ್ಮೆ ಜಾತ್ರೆ ಮಾಡುತ್ತಾರೆ. ಜಾತ್ರೆಗಳು ಪ್ರತಿಯೊಂದು ಹಳ್ಳಿಯಲ್ಲಿಯೂ ನಡೆಯಬಹುದು ಅಥವಾ ಬೇರೆ ಹಳ್ಳಿಯ ಜಾತ್ರೆಯ ವಿಧಿವಿಧಾನವನ್ನು ಇವರು ನಂಬಿರಬಹುದು. ಚಿಕ್ಕಮಗಳೂರು ವ್ಯಾಪ್ತಿಯಲ್ಲಿ ಬರುವ ಶೃಂಗೇರಿ ತಾಲ್ಲೂಕಿನ

ಕಿಗ್ಗಾ ಗ್ರಾಮದ ಋಷಶೃಂಗೇಶ್ವರ ದೇವರ ಜಾತ್ರೆಯಾಗಿರಬಹುದು ಅಥವಾ ಮೂಡಿಗೆರೆ ತಾಲ್ಲೂಕಿನ ಕಳಸ ಗ್ರಾಮದ ಕಲಶೇಶ್ವರ ಸ್ವಾಮಿ ಜಾತ್ರೆಯಾಗಿರಬಹುದು. ಹೀಗೆ ಎಲ್ಲ ಕಡೆಗಳಲ್ಲಿಯೂ ಜಾತ್ರೆಯನ್ನು ಆಚರಿಸುತ್ತಾರೆ. ಜಾತ್ರೆಯ ವಿಶೇಷವೆಂದರೆ ಜನರಲ್ಲಿ ಹರಕೆ ಮಾಡಿಕೊಂಡವರು ಹರಕೆ ತೀರಿಸುತ್ತಾರೆ. ಕೆಲವರು ಕೋಳಿ, ಕುರಿ, ಹಂದಿ ಬಲಿ ಕೊಡಬಹುದು. ಕೆಲವರು ತುಲಾಭಾರ ಮಾಡಿಸಬಹುದು (ಅಕ್ಕಿಯ ತುಲಾಭಾರ ಮತ್ತು ಕಾಯಿಯ ತುಲಾಭಾರ). ಸಾಮಾನ್ಯವಾಗಿ ಕಷ್ಟಗಳನ್ನು ನಿವಾರಿಸಲು, ಫಲ ಕೊಡಲು, ಆರೋಗ್ಯ ಸುಧಾರಿಸಲು, ಜಾನುವಾರುಗಳಿಗೆ ತೊಂದರೆ ಆಗದೇ ಇರಲು, ಮಕ್ಕಳ ಫಲ, ವಿವಾಹದ ಫಲ, ಬೆಳೆ ಸರಿಯಾಗಿ ಆಗಲಿ. ಹೀಗೆ ಹಲವಾರು ಪ್ರಕಾರದ ಹರಕೆಗಳನ್ನು ಮಾಡಿಕೊಂಡವರು ಈ ಸಂದರ್ಭದಲ್ಲಿ ಹರಕೆ ತೀರಿಸಿಕೊಳ್ಳುತ್ತಾರೆ.

ವಿಶೇಷವಾಗಿ ಕಳಸ ಮತ್ತು ಕಿಗ್ಗ ಜಾತ್ರೆಗಳಲ್ಲಿ ಹಿಂದಿನಿಂದಲೂ ತೇರು ಕಟ್ಟುವುದರಿಂದ ಹಿಡಿದು ರಥವನ್ನು ಶೃಂಗರಿಸುವುದು, ರಥವನ್ನು ಎಳೆಯುವುದು, ಜಾಗಟೆ ಹಿಡಿಯುವುದು, ಛತ್ರಿ, ಪತಾಕಿ, ಚಾಮರ ಹಿಡಿಯುವ ಕೆಲಸವನ್ನು ಗೌಡಾಲು ಸಮುದಾಯದವರೇ ಮಾಡಬೇಕು. ಇವರು ಮಾಡುವ ಈ ಕೆಲಸಕ್ಕೆ 'ಬಿಟ್ಟಿಕೆಲಸ' ಎಂದು ಕರೆಯುತ್ತಾರೆ. ಬಿಟ್ಟಿಯೆಂದರೆ ಪುಕ್ಕಟೆ ಎಂದರ್ಥ. 'ಬಿಟ್ಟಿ' ಎಂದರೆ ಪ್ರತಿಫಲವಿಲ್ಲದೆ ಭಕ್ತಿಯಿಂದ ಹೆಚ್ಚು ಕಟ್ಟೆಗಳಲ್ಲಿ ದೇವಸ್ಥಾನದ ಕೆಲಸ ಮಾಡುವುದು ಎಂದರ್ಥ. ಜೊರಿಕೊಡಿಗೆ, ಮುಂಡಾನಿಕೊಡಿಗೆ, ತಾರುಣಿಕೊಡಿಗೆ, ತೊಡಲುಕೊಡಿಗೆ, ಮುಮ್ಮಗೆಕೊಡಿಗೆ ಈ ಐದು ಕೊಡಿಗೆ ಗೌಡಾಲುಗಳು ಈ 'ಬಿಟ್ಟಿ' ಮಾಡಬೇಕಾಗಿತ್ತು (ಶ್ರೀ ಕಲಶೇಶ್ವರ ಸ್ವಾಮಿಯವರ ದೇವಸ್ಥಾನದ ಕೈಪಿಡಿ (ಮ್ಯಾನ್ಯುಯಲ್): ೩೨). ಇತ್ತೀಚೆಗೆ ಈ ಕೆಲಸಕ್ಕೆ ದಿನಗೂಲಿಯನ್ನು ಕೊಡುತ್ತಿದ್ದಾರೆ. ಕೆಲವೊಂದು ಕಡೆಗಳಲ್ಲಿ ಇಡೀ ವರ್ಷಕ್ಕೆ ಆಗುವಷ್ಟು ಉಪ್ಪು ಕೊಡುತ್ತಾರೆ. ಇವರಲ್ಲಿ ಕೆಲವರು ಶೃಂಗೇರಿಯ ನವರಾತ್ರಿ ಸಮಯದಲ್ಲಿ ಭಾಗಿಯಾಗುತ್ತಾರೆ.

ಗೌಡಾಲು ಸಮುದಾಯದವರು ಪ್ರಾಮಾಣಿಕರು, ಶ್ರಮ ಜೀವಿಗಳು ಹಾಗೂ ಕೌಶಲ್ಯವನ್ನು ಹೊಂದಿದ್ದಾರೆ. ಬಿಟ್ಟಿ ಕೆಲಸವನ್ನು ಮಾಡಿ ಶ್ರಮಕ್ಕೆ ಯಾವುದೇ ರೀತಿಯ ಪ್ರತಿಫಲ ಪಡೆಯದೆ ದೇವರ ಸೇವೆ ಮಾಡುವ ನಂಬಿಕೆಯು ಇವರ ಮುಗ್ಧತೆಯನ್ನು ತೋರಿಸುತ್ತದೆ. ಸರಕಾರ ಮತ್ತು ಆಡಳಿತ ಮಂಡಳಿಯು ವರುಷಗಳಿಂದ ಬಿಟ್ಟಿಕೆಲಸ ಮಾಡಿಸಿಕೊಳ್ಳಬಾರದು ಎಂದು ಅವರು ಮಾಡುವ ಕೆಲಸಕ್ಕೆ ತಕ್ಕ ಹಣವನ್ನು ನೀಡುತ್ತಿರುವುದನ್ನು ಗಮನಿಸಬಹುದಾಗಿದೆ.

ಹಾಗೆಯೇ ಕೋಡನ ಅಮಾವಾಸ್ಯೆ, ಮಹಾಲಯ ಅಮಾವಾಸ್ಯೆ, ಇನ್ನೂ ಮುಂತಾದ ಹಬ್ಬಗಳನ್ನು ಮಾಡಿದರೂ ಅವುಗಳಲ್ಲಿ ಯಾವುದೇ ವಿಶೇಷತೆಗಳು ಇಲ್ಲದೆ ಇರುವುದು ಕಂಡುಬರುತ್ತದೆ. ಮೇಲಿನ ಎಲ್ಲ ಹಬ್ಬಗಳು ಗೌಡಾಲು ಜನರ ಇಡೀ ಜೀವನ ಚಿತ್ರಣವನ್ನು ಪ್ರತಿಬಿಂಬಿಸುತ್ತವೆ.

**ಗೌಡಾಲು ಬುಡಕಟ್ಟು ಜನರ ನಾಗಾರಾಧನೆ**

ಗೌಡಾಲು ಬುಡಕಟ್ಟು ಸಮುದಾಯದ ಒಟ್ಟು ೧೦೦ ತಿಳುವಳಿಕೆದಾರರಲ್ಲಿ ೮೮ ಜನ (ಶೇ.೮೮) ತಿಳುವಳಿಕೆದಾರರು ನಾಗರ ಆರಾಧನೆಯನ್ನು ಮಾಡುವುದಿಲ್ಲ. ಕೇವಲ ೧೨ (ಶೇ.೧೨)ರಷ್ಟು ಜನ ತಿಳುವಳಿಕೆದಾರರು

ನಾಗರ ಆರಾಧನೆ ಮಾಡುವವರು ಇದ್ದಾರೆ ಎಂಬುದು ಸಂಶೋಧನೆಯಿಂದ ಕಂಡುಬರುತ್ತದೆ. ಹೆಚ್ಚಾಗಿ ಈ ಆರಾಧನೆ ಮಾಡುವವರು ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನಲ್ಲಿ ಇರುವುದು ಕಂಡುಬರುತ್ತದೆ. ದಕ್ಷಿಣ ಕನ್ನಡದಲ್ಲಿ ಕಂಡುಬರುವ ಗೌಡಾಲು ಬುಡಕಟ್ಟಿನವರು ನಾಗರ ಆರಾಧನೆಗೆ ಒತ್ತನ್ನು ನೀಡುತ್ತಾರೆ. ಆದರೆ ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಕಂಡುಬರುವ ಗೌಡಾಲು ಬುಡಕಟ್ಟು ಜನರು ನಾಗರ ಆರಾಧನೆಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಿಲ್ಲ. ನಾಗರ ಆರಾಧನೆಯು ಸಾಂಸ್ಕೃತಿಕ ಮತ್ತು ಧಾರ್ಮಿಕ ಆಚರಣೆಯಾಗಿದ್ದು, ಇದು ಭೂತಾರಾಧನೆಗಿಂತಲೂ ಹಳೆಯ ಆಚರಣೆಯಾಗಿದೆ. ನಾಗನನ್ನು ಕಂಡಾಗ ಗೌಡಾಲು ಜನರು ಅದಕ್ಕೆ ಭಯ ಮತ್ತು ಭಕ್ತಿಯಿಂದ ಗೌರವ ಕೊಡುತ್ತಾರೆ ಮತ್ತು ಹಾಗೆಯೇ ಆರಾಧಿಸತೊಡಗುತ್ತಾರೆ. ಕೆಲವೊಂದು ಸಮೂಹದಲ್ಲಿ ತೊಂದರೆಗಳು ತಲೆದೋರಿದಾಗ, ಅದಕ್ಕೆ ಪುರೋಹಿತರಲ್ಲಿ ಕಾರಣ ಕೇಳಿದಾಗ, ನಾಗದೇವರ ಪ್ರತಿಷ್ಠಾಪನೆ ಮಾಡಬೇಕೆನ್ನುತ್ತಾರೆ. ಅಂತಹ ಸಂದರ್ಭದಲ್ಲಿ ಸುಂದರವಾದ, ಕಲಾತ್ಮಕವಾದ ನಾಗನ ಕಲ್ಲುಗಳನ್ನು ಕೆತ್ತಿಸಿ ಅದನ್ನು ಪುರೋಹಿತರಿಂದ ಪ್ರತಿಷ್ಠಾಪಿಸಬೇಕಾಗುತ್ತದೆ. ನಾಗ ದೇವನೆಂದು ಹೆಸರಿಸಿ ಅಲ್ಲಿ ಆರಾಧನೆ ನಡೆಸಿಕೊಂಡು ಬರುವ ಕ್ರಮವನ್ನು ಇವರು ಮುಂದುವರೆಸಿಕೊಂಡು ಬಂದಿದ್ದಾರೆ. ನಂತರ ನಾಗರ ಪಂಚಮಿ ಮತ್ತು ವಾರ್ಷಿಕ ಕೆಲವೊಂದು ಹಬ್ಬಗಳ ಸಂದರ್ಭಗಳಲ್ಲಿ ನಾಗಾರಾಧನೆಯನ್ನು ಮಾಡುತ್ತಾರೆ.

### ಗೌಡಾಲು ಜನರ ಕಲೆ

ಜನಪದ ಕಲೆಯು ಭಾರತೀಯ ಸಮಾಜದ ಪ್ರಾಥಮಿಕ ರೂಪವಾಗಿದ್ದು, ಗ್ರಾಮಿಣ ಪರಂಪರೆಗಳೆಲ್ಲವೂ ಗತಕಾಲದ ಸಮಷ್ಟಿ ಸಂವೇದನೆಯನ್ನು ದಟ್ಟವಾಗಿ ಕಾಲಘಟ್ಟಗಳಲ್ಲಿ ಅಂತರ್ಗತಿಸಿಕೊಳ್ಳುತ್ತಲೇ ವಿಕಾಸಗೊಂಡಿರುತ್ತದೆ. ಜನಪದ ಕಲೆಗಳು ಜನತೆಯ ಸಂಸ್ಕೃತಿಯನ್ನು ಹಲವು ಗುರಿಗಳಲ್ಲಿ ಅಭಿನಯಿಸುತ್ತಾ, ಆಚರಿಸುತ್ತಾ ಪರಂಪರೆಯನ್ನು ವಿಸ್ತರಿಸುವ ಕೆಲಸವನ್ನು ಮಾಡುತ್ತಿರುತ್ತವೆ. ಪ್ರತಿಯೊಂದು ಜಾನಪದ ಕಲೆಯು ತನ್ನ ಕಾಲದ ಸಂಬಂಧಗಳನ್ನು ಪೂರ್ವಕಾಲದ ಆಚಾರ-ವಿಚಾರ, ನಂಬಿಕೆ, ಸಂಪ್ರದಾಯಗಳು, ಅವರು ರೂಢಿಸಿಕೊಂಡ ಕಲೆಗಳ ಮೂಲಕ ಸಾಮಾಜಿಕ ಒಪ್ಪಂದವನ್ನು ಏರ್ಪಡಿಸುತ್ತಲೇ ಸಾಂಸ್ಕೃತಿಕವಾದ ವ್ಯವಸ್ಥೆಯನ್ನು ಪ್ರತಿಪಾದಿಸುತ್ತಿರುತ್ತವೆ. ಜನಪದ ಕಲೆಗಳು ಒಂದು ನಾಡಿನ ಅಥವಾ ಒಂದು ಜನಾಂಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಉದಾಹರಣೆಗೆ ಕಥೆ, ಗೀತೆ, ಕಾವ್ಯ, ಗಾದೆ, ಒಗಟು, ನಾಟಕ, ವೈದ್ಯ, ಕ್ರೀಡೆ, ಅಡುಗೆ, ಸಂಪ್ರದಾಯ, ಕಲೆ, ಆಚರಣೆಗಳು, ಅಂಟಿಗೆ-ಪಂಟಿಗೆ, ಕೋಲಾಟ, ಡೊಳ್ಳುಕುಣಿತ ಇವುಗಳ ಆಚರಣೆ ಮತ್ತು ಅಲ್ಲಿ ಹಾಡುವಂತಹ ಹಾಡುಗಳು, ತೊಡುವ ವೇಷಗಳು, ಸಂಭಾಷಣೆಗಳು ಇವುಗಳೆಲ್ಲವೂ ಕಲೆ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

ಗೌಡಾಲು ಬುಡಕಟ್ಟು ಸಮುದಾಯವು ತನ್ನದೇ ಆದಂತಹ ಕಲೆ, ಸಂಸ್ಕೃತಿಯನ್ನು ಮತ್ತು ಜನಪದ ನಂಬಿಕೆಗಳನ್ನು ಹೊಂದಿದೆ. ಇದು ಸಮುದಾಯದವರಲ್ಲಿ ತಲೆ ತಲಾಂತರದಿಂದ ಬೆಳೆದು ಬಂದಿದೆ. ಅವು ಅಂಟಿಗೆ-ಪಂಟಿಗೆ, ಕೋಲಾಟ, ಕರಡಿಕುಣಿತ, ಹುಲಿವೇಷ, ಅಕ್ಕಿಯನ್ನು ಬೀಸುವಾಗ, ನಾಟಿ ಮಾಡುವಾಗ, ಮಗುವನ್ನು ತೊಟ್ಟಿಲಿಗೆ ಹಾಕುವಾಗ, ಮದುವೆಯ ಸಂದರ್ಭದಲ್ಲಿ ವಿವಿಧ ಪ್ರಕಾರದ ವೇಷಗಳನ್ನು, ಹಾಡುಗಳನ್ನು,

ಗೀತೆಗಳನ್ನು, ಆಚರಣೆಗಳನ್ನು ಮಾಡುತ್ತಿರುವುದು ನೋಡಬಹುದು. ಇವುಗಳಲ್ಲಿ ಕೆಲವೊಂದನ್ನು ಈ ಕೆಳಗಿನಂತೆ ವಿಸ್ತರಿಸಲಾಗಿದೆ.

**ಅಂಟಿಗೆ-ಪಂಟಿಗೆ**

'ಅಂಟಿಗೆ-ಪಂಟಿಗೆ'ಯು ಮಲೆನಾಡು ಜನರ ಒಂದು ಸಾಂಪ್ರದಾಯಿಕ ಕಲೆಯಾಗಿದೆ. ಇದು ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಉಡುಪಿ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಗೌಡಾಲು ಬುಡಕಟ್ಟು ಜನರ ಜೀವನದೊಂದಿಗೆ ದಟ್ಟವಾಗಿ ಮೈಗೂಡಿಸಿಕೊಂಡಿರುವ ಜನಪದ ಗೀತ ಸಂಪ್ರದಾಯವಾಗಿದೆ. ಒಂದು ಪ್ರದೇಶದ ಜನರು ಆಡುವ ಅಂಟಿಗೆ ಪಂಟಿಗೆಯ ರೀತಿಯನ್ನು ಬೇರೆ ಒಂದು ಪ್ರದೇಶಕ್ಕೆ ಹೋಲಿಸಿದಾಗ ಅದು ಭಿನ್ನವಾಗಿರುವುದು ಕಂಡುಬರುತ್ತದೆ. ಇದು ಒಂದು ಪ್ರದೇಶದ ಜನತೆಯ ನುಡಿ, ನಂಬಿಕೆ, ಸಂಪ್ರದಾಯಗಳನ್ನು ಪ್ರತಿನಿಧಿಸುತ್ತದೆ. ಹಲವಾರು ಹಾಡುಗಳನ್ನೊಳಗೊಂಡಿರುವ ಈ ಸಂಕಲನ, ಹಾಡುಗಳ ಪ್ರಾದೇಶಿಕ ಭಿನ್ನತೆ ಮತ್ತು ಪಾಠಾಂತರಗಳ ಅಧ್ಯಯನದ ದೃಷ್ಟಿಯಿಂದಲೂ ಅನುಕೂಲಕರವಾಗಿದೆ.

ಅಂಟಿಗೆ-ಪಂಟಿಗೆ ಗೌಡಾಲು ಬುಡಕಟ್ಟು ಸಂಸ್ಕೃತಿಯ ಒಂದು ಮುಖ್ಯ ಕಲೆ. ದೀಪಾವಳಿಯ ಮೊದಲನೆಯ ದಿನದಿಂದ ೧೫ ದಿನಗಳವರೆಗೆ ಇದನ್ನು ಆಡುತ್ತಾರೆ. ಒಂದೊಂದು ಕಡೆಯವರು ಒಂದೊಂದು ರೀತಿಯಲ್ಲಿ ಆಡುತ್ತಾರೆ. ಸಂಜೆ ೭ ಗಂಟೆಯಿಂದ ಬೆಳಿಗ್ಗೆ ೬ ಗಂಟೆಯವರೆಗೆ ಹಾಡನ್ನು ಹಾಡುತ್ತಾರೆ. ಇಲ್ಲಿ ಮುಖ್ಯವಾದದ್ದು ಜ್ಯೋತಿ ಅಥವಾ ದೀಪ. ಇದು ಸಮೃದ್ಧಿಯ ಸಂಕೇತವಾಗಿದ್ದು, ಸಮುದಾಯದ ಪ್ರಗತಿಯನ್ನು ಪ್ರತಿಬಿಂಬಿಸುತ್ತದೆ. ಸಾಮಾನ್ಯವಾಗಿ ೧೦ ರಿಂದ ೩೦ ಜನರವರೆಗೆ ಅಥವಾ ಅದಕ್ಕಿಂತ ಹೆಚ್ಚು ಜನರು ಅಂಟಿಗೆ-ಪಂಟಿಗೆಯಲ್ಲಿ ಇರುತ್ತಾರೆ. ಗುಂಪಾಗಿರುವ ಇವರು ಹಲವಾರು ವೇಷಗಳನ್ನು ಹಾಕುತ್ತಾರೆ. ಅವುಗಳೆಂದರೆ ಕೊರವನ ವೇಷ, ಜೋಗಿವೇಷ, ಹೂವತಾರನ ವೇಷ, ಬಾಲೆ ಸಂತೋಷದ ವೇಷ, ಗೊಲ್ಲನ ವೇಷ, ಶಿಕಾರಿಯ ವೇಷ, ಬಸವನ ವೇಷ, ಹಂದಿಯ ವೇಷ ಇವರೆಲ್ಲ ಸೇರಿ, ಹಾಲು ಬರುವ ಮರದ ಕೆಳಗೆ (ಉದಾಹರಣೆಗೆ ಹಲಸಿನ ಮರ, ಆಲದ ಮರ, ಅತ್ತಿಯ ಮರ) ಸಾಮಾನ್ಯವಾಗಿ ಹಲಸಿನ ಮರದ ಕೆಳಗೆ ದೀಪವನ್ನು ಹಚ್ಚಿಕೊಂಡು ಸಂಜೆ ೭ ಗಂಟೆಯ ಸಮಯಕ್ಕೆ ಗುಂಪಿನ ಎಲ್ಲ ಸದಸ್ಯರು ಸೇರಿ ಹಾಡನ್ನು ಹಾಡುವುದರ ಮೂಲಕ ಹೊರಡುತ್ತಾರೆ. ಒಂದೊಂದೇ ಮನೆಗೆ ಹೋಗಿ ಸುಮಾರು ಕಾಲು ಗಂಟೆಯಿಂದ ೧ ಗಂಟೆಯವರೆಗೆ ಆಟವನ್ನು ಆಡುತ್ತಾರೆ.

ಆ ಸಂದರ್ಭದಲ್ಲಿ ಅಂಟಿಗೆ-ಪಂಟಿಗೆಯ ಜ್ಯೋತಿಯಿಂದ ಮನೆಯವರು ಹಣತೆಯಿಂದ ದೀಪ ಹಚ್ಚಿಕೊಂಡು ದೇವರ ಕೋಣೆಯಲ್ಲಿ ಇಡುತ್ತಾರೆ. ಆಟವನ್ನು ಆಡುವಾಗ ಕೆಲವೊಂದು ಹಾಡುಗಳನ್ನು ಹಾಡುತ್ತಾರೆ. ಅವು ಜ್ಯೋತಿ ಹುಟ್ಟಿದ ಹಾಡು, ಬಸವನು ಹುಟ್ಟಿದ ಹಾಡು. ಬಾಲಚಕ್ರನ ಹಾಡು, ಮದುಮಕ್ಕಳ ಮೇಲಿನ ಹಾಡು, ಸೆಟ್ಟಿಗಾರರ ಮೇಲಿನ ಹಾಡು, ಅಗಸರ ಮೇಲಿನ ಹಾಡು. ಹಾಗೆಯೇ ಅಕ್ಕಿಪದ, ಭತ್ತದ ಪದ, ಹಣದ ಪದ, ಬಾಗಿಲು ಪದ, ದೇವರ ಪದ, ಜ್ಯೋತಿಯ ಪದ ಹೀಗೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಈ ಹಾಡು ಮತ್ತು ಪದಗಳು ಬೇರೆಯದ್ದೇ ಆಗಿರಬಹುದು. ಹಾಡುಗಳಲ್ಲಿ ಹುಟ್ಟಿನಿಂದ ಹಿಡಿದು ಸಾವಿನವರೆಗೆ ಬರುವಂತಹ ಪ್ರತಿಯೊಂದು ಘಟ್ಟಗಳನ್ನು ಹಾಡಿನ ಮೂಲಕ ಹಾಡಲಾಗುವುದು. ವಿವಿಧ ವೇಷಗಳನ್ನು ಹಾಕಿರುವವರು ತಮ್ಮ

ಪಾತ್ರಗಳನ್ನು ವ್ಯಕ್ತಪಡಿಸುತ್ತಾರೆ. ಒಂದು ಕಡೆ ಪಾತ್ರದ ಮೂಲಕ ತೋರಿಸಿದರೆ, ಇನ್ನೊಂದು ಕಡೆಯಿಂದ ಅದರ ವಿವರಣೆ ನೀಡುತ್ತಾರೆ ಮತ್ತು ಹಾಡು ಹಾಡುತ್ತಾರೆ. ಹೀಗೆ ವಿಷಯವನ್ನು ಅಭಿವ್ಯಕ್ತಪಡಿಸುತ್ತಾರೆ. ನಂತರ ಆ ಮನೆಯವರು ಕಾಣಿಕೆಯಾಗಿ ಹಣ, ವಸ್ತುಗಳು, ಅಕ್ಕಿ, ರಾಗಿ, ಇತರೆ ಆಹಾರ ಧಾನ್ಯಗಳನ್ನು ಕೊಡುತ್ತಾರೆ. ಇಲ್ಲಿ ಮುಗಿದಾಗ ಮುಂದಿನ ಮನೆಗಳಿಗೆ ಹೋಗಿ ಆಟವನ್ನು ಪ್ರಾರಂಭಿಸುತ್ತಾರೆ. ಹೀಗೆ ಸುಮಾರು ೧೫ ದಿನಗಳವರೆಗೆ ಆಟವನ್ನು ಆಡುತ್ತಾರೆ. ಅವಶ್ಯಕತೆ ಇದ್ದರೆ ೨ ದಿನ ಹೆಚ್ಚಾಗಿ ತೆಗೆದುಕೊಳ್ಳಬಹುದು. ಅದನ್ನು 'ಚಟ್ಟಿಹೊಟ್ಟಿ' ಎಂದು ಕರೆಯುತ್ತಾರೆ. ಸೂತಕ ಇರುವ ಮನೆಗಳಿಗೆ ಹೋಗುವುದಿಲ್ಲ. ಗುಂಪಿನ ಸದಸ್ಯರು ಬದಲಾವಣೆ ಆಗುತ್ತಿರುತ್ತಾರೆ. ಅಂಟಿಗೆ-ಪಂಟಿಗೆಯ ಕೊನೆಯ ದಿನ ಬೆಳಗಿನ ಜಾವ ದೀಪವನ್ನು ಹಲಸಿನ ಮರದ ಕೆಳಗೆ ಅಥವಾ ಹಾಲು ಬರುವಂತಹ ಮರದ ಕೆಳಗೆ ಇಟ್ಟು ಬರುತ್ತಾರೆ. ಕೊನೆಯದಾಗಿ ಒಟ್ಟು ಸಂಗ್ರಹಿಸಿದ ಕಾಣಿಕೆ, ದವಸ-ಧಾನ್ಯ, ವಸ್ತುಗಳನ್ನು ಸೇರಿಸಿ ಗುಡ್ಡದ ಮೇಲೆ ಹಂದಿಯನ್ನು ಬಲಿ ಕೊಟ್ಟು, ಕುಣಿದಾಡಿ ಸಂಭ್ರಮಿಸಿ ನಂತರ ಊಟ ಮುಗಿಸಿಕೊಂಡು ಬರುತ್ತಾರೆ. ಅಲ್ಲಿಗೆ ಆ ವರುಷದ ಅಂಟಿಗೆ-ಪಂಟಿಗೆ ಕಾರ್ಯಕ್ರಮ (ಆಟವು) ಮುಗಿಯುತ್ತದೆ.

ಅಂಟಿಗೆ-ಪಂಟಿಗೆಯ ಸಂದರ್ಭದಲ್ಲಿ ಹಾಡುವ ಕೆಲವೊಂದು ಹಾಡುಗಳು ಈ ಮುಂದಿನಂತೆ ಕಂಡುಬರುತ್ತವೆ.

**ದೇವರ ಪದ**

ದೀಪೋಳಿಗೆನ್ನಿರೋ ನಮ್ಮೂರ ಅನಾಯ್ಕಗೆ
ದೀಪೋಳಿಗೆನ್ನಿರೋ ನಮ್ಮೂರ ಗ್ರಾಮಗೆ
ದೀಪೋಳಿಗೆನ್ನಿರೋ ನಮ್ಮೂರ ಭೂತಗೆ
ದೀಪೋಳಿಗೆನ್ನಿರೋ ನಮ್ಮೂರ ಈಸೂರಗೆ
ದೀಪೋಳಿಗೆನ್ನಿರೋ ನಮ್ಮೂರ ಚೌಡಿಗೆ
ದೀಪೋಳಿಗೆನ್ನಿರೋ ನಮ್ಮೂರ ಜಟಕಾಗೆ
ದೀಪೋಳಿಗೆನ್ನಿರೋ ನಮ್ಮೂರ ಬಸವಗೆ
ದೀಪೋಳಿಗೆನ್ನಿರೋ ದೀಪೋಳಿಗೆ

ನಮ್ಮೂರ ಗ್ರಾಮಗೆ ಒಂದು ಕೈಸತ್ತಿಗೆ
ಒಂದು ಕೈ ಸತ್ತಿಗೂ ಬೆರಳು ಬೆರಳು ಉಂಗುರ
ಬೆರಳು ಬೆರಳು ಉಂಗುರ ಬೇರೊಂದು ಕಳಸ

ನಮ್ಮೂರ ಭೂತಾಯ್ಗೆ ಎರಡು ಕೈಸತ್ತಿಗೆ
ಎರಡು ಕೈಸತ್ತಿಗೂ ಬೆರಳು ಬೆರಳು ಉಂಗುರ
ಬೆರಳು ಬೆರಳು ಉಂಗುರ ಬೇರೊಂದು ಕಳಸ

ನಮ್ಮೂರ ಚೌಡಿಗೆ ಮೂರು ಕೈಸತ್ತಿಗೆ
ಮೂರು ಕೈಸತ್ತಿಗೂ ಬೆರಳು ಬೆರಳು ಉಂಗುರ
ಬೆರಳು ಬೆರಳು ಉಂಗುರ ಬೇರೊಂದು ಕಳಸ

ನಮ್ಮೂರ ನಾಗಗೆ ನಾಲ್ಕು ಕೈಸತ್ತಿಗೆ
ನಾಲ್ಕು ಕೈಸತ್ತಿಗೂ ಬೆರಳು ಬೆರಳು ಉಂಗುರ
ಬೆರಳು ಬೆರಳು ಉಂಗುರ ಬೇರೊಂದು ಕಳಸ

ನಮ್ಮೂರ ಈಸುರಗೆ ಐದು ಕೈಸತ್ತಿಗೆ
ಐದು ಕೈಸತ್ತಿಗೂ ಬೆರಳು ಬೆರಳು ಉಂಗುರ
ಬೆರಳು ಬೆರಳು ಉಂಗುರ ಬೇರೊಂದು ಕಳಸ

ನಮ್ಮೂರ ಅಮ್ಮೋರ್ಗೆ ಆರು ಕೈಸತ್ತಿಗೆ
ಆರು ಕೈಸತ್ತಿಗೂ ಬೆರಳು ಬೆರಳು ಉಂಗುರ
ಬೆರಳು ಬೆರಳು ಉಂಗುರ ಬೇರೊಂದು ಕಳಸ

ಭೂಮಿ ತಾಯಿಗೆ ಎಂಟು ಕೈಸತ್ತಿಗೆ
ಎಂಟು ಕೈಸತ್ತಿಗೂ ಬೆರಳು ಬೆರಳು ಉಂಗುರ
ಬೆರಳು ಬೆರಳು ಉಂಗುರ ಬೇರೊಂದು ಕಳಸ

ಹಣದ ಪದ

ಉಪ್ಪರಿಗೆ ಮ್ಯಾಲೆ ನ್ಯಾಲೆ ಗಂಧದ ಮಂಚ
ಜಾಣಾ ನಮ್ಮಗೆ ಸುಖನಿದ್ರೆ – ಪಾಡಾಗ
ಸದರೀಗೆ ಬಂದಾವೆ ಕಾಗದ

ಬಂದ ಕಾಲದವ ಕುಂತೋದಿಕೊಂಡು
ಮಲಗಿದ ಮಂಚಗಳ ಬಗಿಮಾಡಿ – ನಮ್ಮಯ್ಯ
ಕೆಳಗಿಳಿದಾರೆ ದಸಮಾರೆ

ಉದ್ದಾ ಜಗುಲಿಯ ಮೇಲೆ ರತ್ನಕಂಬಳಿನಾಸಿ
ಸೇರಲ್ಲಿ ಸೆರೆಹೊನ್ನು ಅಳೆದಾರೆ – ನಮ್ಮಯ್ಯ
ಬುದ್ಧಿಮಾನವರಿಗೆ ಜಯವಾದು

ಜ್ಯೋತಿ ಪದ

ಆರಗದಿಂದ ಬಂದಾವೆ ಆರು ಸಾವಿರ ಹಣತೆ
ಬತ್ತಿಸಾಲಿನ ಕೊಂದಣಿ ಸಾಲು – ಜಗಜ್ಯೋತಿ
ಸತ್ಯದಿಂದುರಿಯೇ ನಮಗಾಗಿ

ಮಾಳೂರಲಿಂದ ಬಂದಾವೆ ಮೂರು ಸಾವಿರ ಹಣತೆ
ಬತ್ತಿ ಸಾಲಿನ ಕೊಂದಾಣಿ ಸಾಲು – ಜಗಜ್ಯೋತಿ
ಆಯದಿಂದುರಿಯೇ ನಮಗಾಗಿ

ಮಣ್ಣಲಿ ಹುಟ್ಟೋಳೆ ಮಣ್ಣಲಿ ಬೆಳೆಯೋಳೆ
ಮಣ್ಣಲಿ ಕಣ್ಣಾ ಬಿಡುವೋಳೆ – ಜಗಜ್ಯೋತಿ
ಚೊಕ್ಕದಿಂದುರಿಯೇ ನಮಗಾಗಿ

ಕಲ್ಲಲಿ ಹುಟ್ಟೋಳೆ ಕಲ್ಲಲಿ ಬೆಳಿಯೋಳೆ
ಕಲ್ಲಲಿ ಕಣ್ಣಾ ಬಿಡುವೋಳೆ – ಜಗಜ್ಯೋತಿ
ವೈನಾದಿಂದುರಿಯೇ ನಮಗಾಗಿ

ಬೆಳ್ಳಿಲುಟ್ಟೋಳೆ ಬೆಳ್ಳೀಲಿ ಬೆಳಿಯೋಳೆ
ಬೆಳ್ಳೀಲಿ ಕಣ್ಣಾ ಬಿಡುವೋಳೆ – ಜಗಜ್ಯೋತಿ
ಸತ್ಯದಿಂದುರಿಯೇ ನಮಗಾಗಿ

**ಕೋಲಾಟ**

ಕೋಲಾಟವು ಒಂದು ಜಾನಪದ ಕಲೆಯಾಗಿದೆ. ಇದು ಗುಂಪಿನ ಆಟವಾಗಿದೆ. ಇದನ್ನು ಹೆಚ್ಚಾಗಿ ದೀಪಾವಳಿಯ ಸಮಯದಲ್ಲಿ ಆಡುತ್ತಾರೆ. ಈಗಲೂ ಗ್ರಾಮೀಣ ಪ್ರದೇಶದಲ್ಲಿ ಕೋಲಾಟಕ್ಕೆ ಹೆಚ್ಚಿನ ಮಹತ್ವವಿದೆ. ಕೋಲಾಟವು ಗೌಡಾಲು ಜನರ ಒಂದು ಜಾನಪದ ಕಲೆಯಾಗಿದೆ. ಇವರು ಇದನ್ನು ಹಲವಾರು ಪ್ರಕಾರಗಳಲ್ಲಿ ಆಡುವುದರ ಮೂಲಕ ಮನರಂಜನೆಯನ್ನು ನೀಡುತ್ತಾರೆ. ಇದರಲ್ಲಿ ೪ರಿಂದ ೧೨ ಜನರವರೆಗೆ ಅಥವಾ ಅದಕ್ಕಿಂತ ಹೆಚ್ಚಿನ ಜನರು ಇರುತ್ತಾರೆ. ಹಾಡನ್ನು ಹಾಡುವುದರ ಮೂಲಕ ಕೋಲುಗಳನ್ನು ಒಂದನ್ನು ಇನ್ನೊಂದಕ್ಕೆ ಶಬ್ದ ಬರುವಂತೆ ತಾಗಿಸಿ, ಸಮೂಹನೃತ್ಯ ಮಾಡುತ್ತಾರೆ. ಅದರಿಂದ ಮನರಂಜನೆ ಪಡೆದ ಜನರು ಕೊಟ್ಟ ಕಾಣಿಕೆಯಿಂದ ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ಇದು ಸಹ ದೀಪಾವಳಿಯ ಮೊದಲನೆಯ ದಿನದಿಂದ ೧೦ ರಿಂದ ೧೫ ದಿನಗಳವರೆಗೆ ಆಡುತ್ತಾರೆ. ಮನೆಗಳಿಗೆ ಹೋಗಿ ಅಲ್ಲಿ ಕೋಲಾಟದ ನೃತ್ಯವನ್ನು ಮಾಡಿ ನಂತರ ಮುಂದಿನ ಮನೆಗೆ ಹೋಗುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ಕೋಲಾಟವು ಕಡಿಮೆಯಾಗುತ್ತಿದೆ. ಇದಕ್ಕೆ ಕಾರಣ ಇವರಲ್ಲಿ ಆಸಕ್ತಿ ಇಲ್ಲದೇ ಇರುವುದು, ಆಧುನೀಕರಣದ ಪ್ರಭಾವ, ಸಾರಿಗೆ ಮತ್ತು ಸಂಪರ್ಕದ ಪ್ರಭಾವ. ಹೀಗೆ ಹಲವಾರು ಕಾರಣಗಳಿಂದ ಕೋಲಾಟ ಇಂದು ಕಣ್ಮರೆಯಾಗುತ್ತಿದೆ. ಕೋಲಾಟದ ಹಾಡು ಹೇಳುವವರಿಗೆ ಸಾಮಾನ್ಯವಾಗಿ ಶಿಕ್ಷಣ ಇರುವುದಿಲ್ಲ. ಆದರೂ ಎಲ್ಲ ಪದ್ಯಗಳನ್ನು ಕಂಠಪಾಠ ಮಾಡಿಕೊಂಡಿರುತ್ತಾರೆ ಎಂಬುದು ತಿಳಿದುಬರುತ್ತದೆ.

**ಕೋಲಾಟ ಹಾಡಿನ ಒಂದು ಪಲ್ಲವಿ**

ಕೋಲು ಕೋಲೆ ಕೋಲು ಕೋಲಣ್ಣ ಕೋಲೆ
ಕೋಲೇ ಕೋಲೆ ಕೋಲು ಕೋಲಣ್ಣ ಕೋಲೆ
ಏಳುತಲೆ ಎದ್ದು ಯಾರ್ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳಿಯೋಳೆ |ಕೋಲೆ|
ಎಳ್ಳು ಜೀರಿಗೆ ಬೆಲಿಯೋ ಭೂಮಿತಾಯ
ಎದ್ದೊಂದು ಗಳಿಗೆ ನೆನದೇನು |ಕೋಲೆ|

### ವಿಶೇಷ ಸಂದರ್ಭದಲ್ಲಿ ಹಾಡುವ ಹಾಡು

ಏನು ಮೋಚೊಂದೇನು ಠೀಕಣ್ಣ
ಮಂಚಾದ ಮ್ಯಾಲೆ
ಎಂತೇ ಮೋಚೊಂದೇನು ಸೋಗಸಣ್ಣ
ಒಳ್ಳೆದು ಮುರುದು ಉಣಿಸಿದಳಪ್ಪ
ಕೆಟ್ಟುದು ಮುರುದು ತಿನಿಸಿದಳಪ್ಪ
ಸಾಕು ಸಾಕು ನಿನ್ನ ಸಾವಾಸ ಸಾಕು
ಹೋಯ್ತಿನಂತ ಹೇಳಿದೆನಪ್ಪ
ಮುರ್ನಾದಿ ಪಯಣ ಬಂದಾಳಪ್ಪ
ಬೋರು ಬೋರಾಕೊಂಡು ಅತ್ತಾಳಪ್ಪ
ದೊಡ್ನ ಜೋಬಿಗೆ ಕೈಯಾಕ್ಯಾಳಪ್ಪ
ನೂರೆಂಟು ರೂಪಾಯಿ ಕದ್ದಾಳಪ್ಪ

### ಹಲ್ಲಿ ಹಬ್ಬ

ಗೌಡಾಲು ಬುಡಕಟ್ಟು ಜನರಲ್ಲಿ ಕಂಡುಬರುವ ಇನ್ನೊಂದು ಜನಪದ ಆಟವೆಂದರೆ 'ಹಲ್ಲಿ ಕುಣಿತ' ಅಥವಾ 'ಹಲ್ಲಿಹಬ್ಬ'. ಇದು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಕಳಸ ಹೋಬಳಿಯ ವ್ಯಾಪ್ತಿಯಲ್ಲಿ ಕಂಡುಬರುತ್ತದೆ. ಇದು ಚಿತ್ರಾಪೌರ್ಣಮಿಯ ದಿನದಂದು ನಡೆಯುತ್ತದೆ. 'ಅಷ್ಟಮಿ ಲಾಗಾಯಿತು ಪೌರ್ಣಮಿಯು ಮುಗಿಯುವವರೆಗೂ ನಡೆಯುವ ಗೌಡಾಲುಗಳಿಗೆ ಸಂಬಂಧಪಟ್ಟ ಉತ್ಸವ ಕುಣಿತಕ್ಕೆ 'ಹಲ್ಲಿ ಹುಣ್ಣಿಮೆ' ಅಥವಾ 'ಹಲ್ಲಿ ಕುಣಿತ' ಎಂದು ಹೆಸರು'. ಇದು ರಾತ್ರಿ ಸಮಯದಲ್ಲಿ ನಡೆಯುವ ಆಟವಾಗಿದೆ. ಸುಮಾರು ೫ರಿಂದ ೬ ದಿನಗಳವರೆಗೆ ನಡೆಯುತ್ತದೆ. ಇದನ್ನು ೩ರಿಂದ ೬ ಕೂಡಿಗೆಯವರು ಸೇರಿ ಆಟವಾಡುತ್ತಾರೆ. ಶಿವನ ಜೋಳಿಗೆಯನ್ನು ಹಿಡಿದುಕೊಂಡು ಜೇಡಿಮಣ್ಣು ಹಚ್ಚಿಕೊಂಡು ಕುಣಿಯುತ್ತಾರೆ. ಇದನ್ನು ಮಾಡುವ ಉದ್ದೇಶ ಎಂದರೆ ಇದರಿಂದ ದೋಷ ಪರಿಹಾರವಾಗುತ್ತದೆ ಎಂಬ ನಂಬಿಕೆ ಇವರಲ್ಲಿರುವುದು. ಇವರ ನಂಬಿಕೆಗಳ ಪ್ರಕಾರ ಶಿವನ ಮೈಮೇಲೆ ಹಲ್ಲಿ ಬಿದ್ದಿತ್ತಂತೆ. ಆದ್ದರಿಂದ ಶಿವನಿಗೆ ದೋಷವಾಯಿತಂತೆ. ಹಾಗೆಯೇ ಶಿವನ ಭಕ್ತರಾದ ಗೌಡಾಲು ಬುಡಕಟ್ಟು ಜನರು ಶಿವನಿಗೆ ಆದಂತಹ ದೋಷವನ್ನು ನಿವಾರಿಸಲು ಪ್ರತಿ ವರುಷ ಈ ಆಟವನ್ನು ಆಡುತ್ತಾರೆ. ಈ ಉತ್ಸವದ ಕೊನೆಯ ದಿನ ಹಲ್ಲಿಯ ಗೊಂಬೆ ಮಾಡಿ ಅದನ್ನು ಬೆಂಕಿಯಲ್ಲಿ ಹಾಕಿ ನಾಶ ಮಾಡುತ್ತಾರೆ. ನಂತರ ಹೊಳೆಯ ಸಮೀಪದಲ್ಲಿ ಎಲ್ಲರೂ ಸೇರಿ ಕುಣಿದು ಅಲ್ಲಿಯೇ ಊಟ ಮಾಡಿಕೊಂಡು ಬರುತ್ತಾರೆ. ಅಲ್ಲಿಗೆ ಹಲ್ಲಿಯ ದೋಷ ಪರಿಹಾರವಾಯಿತು ಎಂದು ನಂಬುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಕಲೆಯನ್ನು ಎಲ್ಲ ಗೌಡಾಲು ಜನರು ಆಚರಿಸುತ್ತಿಲ್ಲ ಎಂಬುದು ಈ ಅಧ್ಯಯನದಿಂದ ತಿಳಿದುಬಂದಿದೆ.

### ಕಣಗಲ್ ಹಬ್ಬ/ಕರಡಿ ವೇಷ

ಗೌಡಾಲು ಬುಡಕಟ್ಟು ಜನರಲ್ಲಿ ಕಣಗಲ್ ಹಬ್ಬವನ್ನು ದೀಪಾವಳಿಯ ಹಬ್ಬದ ಸಂದರ್ಭದಲ್ಲಿ ಆಚರಿಸುತ್ತಾರೆ. ಈ ಹಬ್ಬದಲ್ಲಿ ಕರಡಿಯ ಕುಣಿತವಿರುತ್ತದೆ. ಅಂದರೆ ಕರಡಿಯ ವೇಷವನ್ನು ಹಾಕಿಕೊಂಡು ಮನೆ ಮನೆಗಳಿಗೆ

ಹೋಗಿ ಅವರಿಗೆ ಮನರಂಜನೆಯನ್ನು ನೀಡಿ, ಅವರು ಕೊಟ್ಟ ಕಾಣಿಕೆಯಿಂದ ಕೊನೆಯ ದಿನ ಎಲ್ಲರೂ ಸೇರಿ ಉತ್ಸವವನ್ನು ಆಚರಿಸುತ್ತಾರೆ. ಇದೊಂದು ಗುಂಪಿನ ಆಟವಾಗಿದ್ದು, ಎಲ್ಲರೂ ಇದನ್ನು ನೋಡಲು ಉತ್ಸಾಹ ತೋರುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಇದು ಕಡಿಮೆಯಾಗುತ್ತಿರುವುದು ಕಂಡುಬರುತ್ತದೆ.

**ಹುಲಿವೇಷ**

ಇದು ಗೌಡಾಲು ಸಮುದಾಯದಲ್ಲಿ ಹಿಂದಿನಿಂದಲೂ ನಡೆದು ಬಂದಂತಹ 'ಹುಲಿಯಕುಣಿತ'. ಇದನ್ನು ದೀಪಾವಳಿಯ ಸಂದರ್ಭದಲ್ಲಿ ಆಚರಿಸುತ್ತಾರೆ. ಕೆಲವರು ಹುಲಿಯ ವೇಷವನ್ನು ಹಾಕುತ್ತಾರೆ. ಮನೆ ಮನೆಗಳಿಗೆ ಹೋಗಿ ಹುಲಿವೇಷ ಹಾಕಿದವರು ಕುಣಿಯುವುದರ ಮೂಲಕ ಜನರಿಗೆ ಮನರಂಜನೆಯನ್ನು ನೀಡುತ್ತಾರೆ. ಅದನ್ನು ನೋಡಿದ ಜನರು ತಮ್ಮ ಕೈಯಲ್ಲಿ ಅದಷ್ಟು ಕಾಣಿಕೆಯನ್ನು ಕೊಡುತ್ತಾರೆ. ಅದನ್ನು ಒಟ್ಟುಗೂಡಿಸಿ ಕೊನೆಯದಿನ ಎಲ್ಲರೂ ಸೇರಿ ಹಬ್ಬವನ್ನು ಆಚರಿಸುತ್ತಾರೆ. ಕೆಲವರು ಬಂದಿರುವ ಕಾಣಿಕೆಯಿಂದ ತಮ್ಮ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುತ್ತಿದ್ದರು ಎಂಬುದು ಕಂಡುಬರುತ್ತದೆ. ಹುಲಿವೇಷ ಏಕವ್ಯಕ್ತಿ ಬೇಕಾದರೂ ಹಾಕಬಹುದು ಅಥವಾ ಗುಂಪಿನವರೂ ಹಾಕಬಹುದು. ಆದರೆ ಇತ್ತೀಚಿನ ದಿನಗಳಲ್ಲಿ ಈ ಕಲೆಯು ಮಾಯವಾಗುತ್ತಿರುವುದು ಕಂಡುಬರುತ್ತದೆ.

**ಗೌಡಾಲು ಜನರ ಕೌಟುಂಬಿಕ ಸಂಸ್ಕಾರಗಳು**

ಒಂದು ಮಗುವಿನಲ್ಲಿ ಇಲ್ಲದೇ ಇರುವ ಗುಣಗಳನ್ನು ತುಂಬಿಸಿಕೊಡುವುದೇ ಸಂಸ್ಕಾರ. ಸಂಸ್ಕಾರ ಇಲ್ಲದೇ ಇರುವಂತಹ ಸಮಾಜವನ್ನು ಪ್ರಪಂಚದಲ್ಲಿ ಗುರುತಿಸಲು ಸಾಧ್ಯವಿಲ್ಲ. ಪ್ರತಿಯೊಂದು ಸಮುದಾಯಗಳು ಕೂಡ ತಮ್ಮ ಜಾತಿ, ಧರ್ಮ, ಪಂಗಡ ಅಥವಾ ಬುಡಕಟ್ಟಿಗೆ ಸಂಬಂಧಿಸಿದಂತೆ ತಮ್ಮದೇ ಆದ ಹಲವಾರು ಸಂಸ್ಕಾರಗಳನ್ನು ಹೊಂದಿರುತ್ತದೆ. ಮಾನವನ ಶರೀರದ ಮತ್ತು ಆತ್ಮದ ಪಾವಿತ್ರ್ಯ ಹಾಗೂ ಉತ್ಕೃಷ್ಟತೆಯ ಬಗ್ಗೆ ಇರುವ ಶಾಸ್ತ್ರಬದ್ಧವಾದ ಕೆಲವು ಅನುಷ್ಠಾನಗಳನ್ನು 'ಸಂಸ್ಕಾರ'ಗಳೆನ್ನುವರು. ಸಂಸ್ಕಾರದಿಂದ ಮಾನವಿಕ ಮತ್ತು ಶಾರೀರಿಕ ಸಮಸ್ಯೆಗಳನ್ನು ನಿವಾರಣೆ ಮಾಡಬಹುದು. ಒಬ್ಬ ವ್ಯಕ್ತಿಯು ನಿರ್ದಿಷ್ಟ ಉದ್ದೇಶಗಳನ್ನು ಸಾಧಿಸಲು ಕ್ರಿಯೆಯಲ್ಲಿ ತೊಡಗಿದ್ದರೆ ಅದನ್ನು ಸಂಸ್ಕಾರಗೊಳಿಸುವುದು ಎಂದು ಕರೆಯಬಹುದು. ಪ್ರತಿಯೊಂದು ಧರ್ಮದವರೂ ಮಕ್ಕಳ ಶಾರೀರಿಕ, ಬೌದ್ಧಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಗೆ ಕೆಲವೊಂದು ನಿರ್ದಿಷ್ಟ ಸಂಸ್ಕಾರಗಳನ್ನು ಅವರಲ್ಲಿ ಬೆಳೆಸುವರು. ಸಮಾಜದಲ್ಲಿ ವ್ಯಕ್ತಿಯ ಸರ್ವಾಂಗೀಣ ಬೆಳವಣಿಗೆಗೆ ಮುಕ್ತಿ ಮಾರ್ಗವನ್ನು ಪಡೆಯಬೇಕಾದರೆ ಅಲ್ಲಿ ಸಂಸ್ಕಾರಗಳು ಬೇಕು. ಸಂಸ್ಕಾರಗಳು ವಿಭಿನ್ನವಾಗಿರುತ್ತವೆ. ತಂದೆ ತಾಯಿಯಿಂದ, ಬಂಧುಗಳಿಂದ, ಸ್ನೇಹಿತರಿಂದ, ಗುರುಗಳಿಂದ ಸಮಾಜದಿಂದ ಪಡೆದುಕೊಂಡಂತಹ ಒಟ್ಟು ಸಂಸ್ಕಾರಗಳ ಗುಂಪನ್ನು ಅಥವಾ ಮೊತ್ತವನ್ನು 'ಸಂಸ್ಕೃತಿ' ಎಂದು ಕರೆಯಬಹುದು.

ಮಾನವ ಜೀವನವನ್ನು ಕ್ರಮಬದ್ಧವಾಗಿ ರೂಪಿಸುವಲ್ಲಿ ಸಂಸ್ಕಾರಗಳು ಪ್ರಮುಖ ಪಾತ್ರ ವಹಿಸುತ್ತವೆ. ಮಗುವು ಬಾಲ್ಯಾವಸ್ಥೆ, ಪ್ರೌಢಾವಸ್ಥೆ, ಯೌವನಾವಸ್ಥೆ ಮತ್ತು ವದ್ಧಾಪ್ಯಾವಸ್ಥೆ ಹೊಂದುವಂತಹ ಸಂದರ್ಭಕ್ಕೆ ಅನುಗುಣವಾಗಿ ಸಂಸ್ಕಾರಗಳು ಬೆಳೆಯುತ್ತವೆ. ಈ ಸಂಸ್ಕಾರಗಳಿಂದ ಮನುಷ್ಯನನ್ನು ಸುಸಂಸ್ಕೃತನನ್ನಾಗಿ

ಮಾಡಬಹುದು. ಭಾಷೆಯೂ ಪ್ರತಿ ವ್ಯಕ್ತಿಯ ಸಂಸ್ಕಾರವಾಗಿದ್ದು, ವ್ಯಕ್ತಿಯ ನಡೆ-ನುಡಿ, ವರ್ತನೆ, ಕೆಲಸ, ಹೊಂದಾಣಿಕೆ ಮನೋಭಾವನೆ, ಸಹಕಾರ ಇವೆಲ್ಲ ಅಂಶಗಳು ಆ ವ್ಯಕ್ತಿಯ ಸಂಸ್ಕಾರವನ್ನು ಒಳಗೊಂಡಿರುತ್ತವೆ.

ಗೌಡಾಲು ಸಮುದಾಯದವರು ಕೌಟುಂಬಿಕ ಸಂಸ್ಕಾರಗಳನ್ನು ಒಳಗೊಂಡಿವೆ. ಇವುಗಳ ಮೂಲಕ ಅವರ ಜೀವನದ ಸ್ಥಿತಿಗತಿಯು ಕಂಡುಬರುತ್ತದೆ. ಇವರ ಪ್ರಮುಖ ಸಂಸ್ಕಾರ ಎಂದರೆ ಜನನ, ತೊಟ್ಟಿಲುಶಾಸ್ತ್ರ, ನಾಮಕರಣ, ಕಿವಿ ಚುಚ್ಚುವುದು, ಹುಡುಗಿ ಮೈನೆರೆದಾಗ ಮಾಡುವ ಶಾಸ್ತ್ರ, ಮದುವೆ, ಸೀಮಂತ, ಮರಣಕಾಲದ ಸಂಸ್ಕಾರಗಳು. ಹೀಗೆ ತಮ್ಮದೇ ಆದ ಕೆಲವು ವಿಶೇಷ ಸಂಸ್ಕಾರಗಳನ್ನು ಅಳವಡಿಸಿಕೊಂಡಿದ್ದಾರೆ. ಇತ್ತೀಚೆಗೆ ಮದುವೆಗೆ ಪುರೋಹಿತರನ್ನು ಕರೆಯುವುದನ್ನು ಬಿಟ್ಟರೆ ಉಳಿದಂತೆ ಇವರ ಎಲ್ಲ ಸಂಸ್ಕಾರಗಳನ್ನೂ ಗೌಡಾಲು ಸಂಪ್ರದಾಯದಂತೆ ಹಿರಿಯರು, ಊರಿನವರು ಮತ್ತು ಕುಟುಂಬದವರು ಸೇರಿ ಆಚರಿಸುತ್ತಾರೆ.

**ಗೌಡಾಲು ಜನರ ಕೌಟುಂಬಿಕ ಸಂಸ್ಕಾರಗಳು**

ಮಗು ಜನನವಾದ ದಿನದಿಂದ ಸುಮಾರು ೧೨ ದಿನಗಳವರೆಗೆ ಮನೆಯಲ್ಲಿ ಸೂತಕವನ್ನು ಆಚರಿಸುತ್ತಾರೆ. ೭ನೇ ದಿನದವರೆಗೆ ತಾಯಿ ಮತ್ತು ಮಗುವನ್ನು ಮನೆಯ ಹೊರಗಡೆಯ ಒಂದು ಕೋಣೆಯಲ್ಲಿ ಅಥವಾ ಕೊಟ್ಟಿಗೆಯಲ್ಲಿ ಇರಿಸುತ್ತಾರೆ. ಅಲ್ಲಿ ಸುತ್ತಲೂ ಗಾಳಿ ಬಾರದ ಹಾಗೆ ಬೆಚ್ಚನೆಯ ವಾತಾವರಣವಿರಬೇಕು. ೭ನೇ ದಿನದ ನಂತರ ಸ್ನಾನ ಮಾಡಿಸಿ ಮಗು ಮತ್ತು ತಾಯಿಯನ್ನು ಕರೆದುಕೊಂಡು ಬರುತ್ತಾರೆ. ಆ ದಿನ ವಿಶೇಷವಾಗಿ ಮೆಂತೆಯ ಅನ್ನವನ್ನು ಮನೆಯಲ್ಲಿ ಮಾಡುತ್ತಾರೆ. ಇದನ್ನು 'ಹುಗ್ಗಿತುಪ್ಪ'ವೆಂದು ಕರೆಯುತ್ತಾರೆ. ೧೨ನೇ ದಿನದಂದು ನೀರು ಹಾಕುತ್ತಾರೆ. ಅಲ್ಲಿಗೆ ೧೨ ದಿನದ ಸೂತಕ ಮುಗಿಯುತ್ತದೆ. ನಂತರ ತಿಂಗಳ ಒಳಗಾಗಿ ಮುಹೂರ್ತ ನೋಡಿಕೊಂಡು ತೊಟ್ಟಿಲಶಾಸ್ತ್ರ ಮತ್ತು ನಾಮಕರಣಶಾಸ್ತ್ರವನ್ನು ಮಾಡುತ್ತಾರೆ.

ಹೀಗೆ ಹೆರಿಗೆಯನ್ನು ಮನೆಯಲ್ಲಿಯೇ ಮಾಡಿಸುತ್ತಿದ್ದರು. ಅದನ್ನು ಮಾಡಿಸುವ ಸೂಲಗಿತ್ತಿಯರು ಇರುತ್ತಿದ್ದರು. ಇತ್ತೀಚೆಗೆ ಆಸ್ಪತ್ರೆಗಳಿಗೆ ಕರೆದುಕೊಂಡು ಹೋಗಿ ಅಲ್ಲಿ ಹೆರಿಗೆಯನ್ನು ಮಾಡಿಸುತ್ತಾರೆ.

**ತೊಟ್ಟಿಲು ಮತ್ತು ನಾಮಕರಣ ಶಾಸ್ತ್ರ**

ಮಗು ಹುಟ್ಟಿದ ಒಂದು ತಿಂಗಳ ಒಳಗೆ ಮಗುವನ್ನು ತೊಟ್ಟಿಲಿಗೆ ಹಾಕುವ ಸಂಪ್ರದಾಯವಿರುತ್ತದೆ. ಮುಹೂರ್ತವನ್ನು ಪುರೋಹಿತರ ಹತ್ತಿರ ಕೇಳಿಸಿ ಒಂದು ದಿನವನ್ನು ನಿಗದಿಪಡಿಸಿಕೊಂಡು ಕಾರ್ಯಕ್ರಮ ಇಡುತ್ತಾರೆ. ಅಂದು ಸ್ನೇಹಿತರನ್ನ, ಸಂಬಂಧಿಗಳನ್ನು ಆಹ್ವಾನಿಸುತ್ತಾರೆ. ತೊಟ್ಟಿಲನ್ನು ಸಿಂಗರಿಸುತ್ತಾರೆ. ಮಗುವಿನ ತಂದೆ ತಾಯಿ ಮಗುವನ್ನು ತೊಟ್ಟಿಲಿನ ಅಡಿಯಿಂದ ಮೂರು ಬಾರಿ ಸುತ್ತಿಸಿ ನಂತರ ತೊಟ್ಟಿಲಿಗೆ ಮಗುವನ್ನು ಹಾಕುತ್ತಾರೆ. ನಂತರ ಮನೆಯ ಹಿರಿಯರು ಅಥವಾ ತಂದೆ ಅಥವಾ ತಾಯಿಯಲ್ಲಿ ಯಾರಾದರೂ ಒಬ್ಬರು ಮಗುವಿನ ಬಾಯಿಗೆ ಸ್ವಲ್ಪ ಬೆಣ್ಣೆಯನ್ನು ಹಾಕುವುದರ ಮೂಲಕ ಮಗುವಿಗೆ ಹೆಸರು ಇಡುತ್ತಾರೆ. ಮಗುವಿಗೆ ಹೆಸರನ್ನು ಇಡುವಾಗ ಕೆಲವರು ಪುರೋಹಿತರ ಹತ್ತಿರ ಕೇಳಿಸಿಕೊಂಡು ಇಡುತ್ತಾರೆ. ಇಲ್ಲಿ ಹುಟ್ಟಿದ ಹೆಸರು ಮತ್ತು ಕರೆಯುವ ಹೆಸರು ಬೇರೆ ಬೇರೆಯಾಗಿರುತ್ತದೆ. ಕೆಲವರು ಪುರೋಹಿತರ ಹತ್ತಿರ ಕೇಳಿಸುವುದಿಲ್ಲ. ಗಂಡುಮಗುವಾದರೆ ಅಜ್ಜನ ಹೆಸರು, ಹೆಣ್ಣು ಮುಗುವಾದರೆ ಅಜ್ಜಿಯ ಹೆಸರನ್ನು ಇಟ್ಟಿರುವುದು ಕಂಡುಬಂದಿದೆ.

ನಂತರ ಎಲ್ಲರೂ ಸೇರಿ ತೊಟ್ಟಿಲನ್ನು ತೂಗುತ್ತಾರೆ. ತೂಗುವ ಸಮಯದಲ್ಲಿ ತೊಟ್ಟಿಲ ಹಾಡನ್ನು ಹಾಡುತ್ತಾರೆ. ಮಗುವನ್ನು ನೋಡಲು ಬಂದವರು ಮಗುವಿನ ಮುಖವನ್ನು ನೋಡಿ ಕೆಲವು ಉಡುಗೊರೆಯನ್ನು ನೀಡುತ್ತಾರೆ. ಕೆಲವರು ಹಣವನ್ನು ಕೊಡುತ್ತಾರೆ. ಆ ದಿನ ವಿಶೇಷ ಊಟದ ವ್ಯವಸ್ಥೆ ಇರುತ್ತದೆ. ಈ ಸಂಪ್ರದಾಯವು ಪ್ರದೇಶದಿಂದ ಪ್ರದೇಶಕ್ಕೆ ಸ್ವಲ್ಪಮಟ್ಟಿನ ವ್ಯತ್ಯಾಸ ಹೊಂದಿರುವುದು ಕಂಡುಬರುತ್ತದೆ.

**ಕೂದಲು ತೆಗೆಯುವ ಶಾಸ್ತ್ರ**

ಮಗುವಿನ ತಂದೆ ತಾಯಿ ಮಗುವಿಗೆ ಒಂಬತ್ತು ತಿಂಗಳು ಅಥವಾ ಹನ್ನೊಂದು ತಿಂಗಳು ಅಥವಾ ಒಂದು ವರ್ಷ ತುಂಬುವುದರ ಒಳಗೆ ಧರ್ಮಸ್ಥಳಕ್ಕೆ ಅಥವಾ ಇತರೆ ಕ್ಷೇತ್ರಗಳಿಗೆ ಮಗುವನ್ನು ಕರೆದುಕೊಂಡು ಹೋಗಿ ಕೂದಲು ತೆಗೆಸುತ್ತಾರೆ. ಕೆಲವರು ಮನೆಯಲ್ಲಿಯೇ ಕೂದಲು ತೆಗೆಸುತ್ತಾರೆ. ಕೆಲವರು ಹರಕೆಯನ್ನು ಮಾಡಿಕೊಂಡಿರುತ್ತಾರೆ. ಹೀಗೆ ಹರಕೆ ಮಾಡಿಕೊಂಡವರು ಅವರು ಹೇಳಿಕೊಂಡ ಸ್ಥಳಕ್ಕೆ ಹೋಗಿ ಕೂದಲು ತೆಗೆಸುತ್ತಾರೆ. ಹರಕೆ ತೀರದೆ ಅದಕ್ಕಿಂತ ಮುಂಚೆ ಕೂದಲು ತೆಗೆಸುವುದಿಲ್ಲ. ಕೂದಲು ತೆಗೆಸಿ ಮನೆಗೆ ಬಂದ ನಂತರ ಬಾಗಿಲಲ್ಲಿ ಆರತಿಯನ್ನು ಎತ್ತಿ ಒಳಗೆ ಬರಮಾಡಿಕೊಳ್ಳುತ್ತಾರೆ. ೩ನೆಯ ದಿನದಂದು ಬಿಳಿ ಅಂಗಿ, ಮತ್ತು ಪಂಚೆಯನ್ನು (ಕಚ್ಚೆಪಂಚೆ) ತೊಡಿಸಿ ತಲೆಗೆ ಪೇಟವನ್ನು ಕೂರಿಸುತ್ತಾರೆ. ಮನೆಯಲ್ಲಿ ತಂದೆ ತಾಯಿ, ಹಿರಿಯರು ಸಂಬಂಧಿಕರು, ಸ್ನೇಹಿತರು ಆರತಿ ಎತ್ತಿ ಹಾಲುತುಪ್ಪವನ್ನು ಕುಡಿಯಲು ಕೊಡುತ್ತಾರೆ. ನಂತರ ಉಡುಗೊರೆ ತಂದವರು ಉಡುಗೊರೆ ಕೊಡುತ್ತಾರೆ. ಕೆಲವರು ಹಣವನ್ನು ಕೊಡುತ್ತಾರೆ. ಆ ದಿನ ವಿಶೇಷ ಊಟದ ವ್ಯವಸ್ಥೆ ಇರುತ್ತದೆ.

**ಕಿವಿ ಚುಚ್ಚುವ ಶಾಸ್ತ್ರ**

ಗೌಡಾಲು ಸಮುದಾಯದವರು ಕಿವಿ ಚುಚ್ಚುವುದನ್ನು ಹರಕೆ ಮಾಡಿಕೊಂಡಿರುತ್ತಾರೆ. ಅವರು ಹೇಳಿಕೊಂಡು ದೇವಸ್ಥಾನಕ್ಕೆ ಹೋಗಿ ಕಿವಿ ಚುಚ್ಚಿಸುತ್ತಾರೆ. ಇಲ್ಲದಿದ್ದರೆ ಮನೆಯಲ್ಲಿಯೇ ಕಿವಿ ಚುಚ್ಚಿಸುತ್ತಾರೆ. ಹಿಂದೆ ಗಂಡಸರಿಗೂ ಕಿವಿಯನ್ನು ಚುಚ್ಚಿಸುತ್ತಿದ್ದು, ಇದು ಕಡ್ಡಾಯವಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಂಪ್ರದಾಯವು ಕಡಿಮೆಯಾಗಿದೆ.

**ಋತುಮತಿಯ ಶಾಸ್ತ್ರ**

ಋತುಮತಿಯಾದ ಹೆಣ್ಣು ಮನೆಯಿಂದ ಸಮೀಪವಿರುವ ಹಲಸಿನ ಮರದ ಕೆಳಗೆ ಕುಳಿತುಕೊಳ್ಳಬೇಕು. ಇದು ಹೆಣ್ಣು ಋತುಮತಿಯಾಗಿದ್ದಾಳೆ ಎಂಬುದನ್ನು ಸೂಚಿಸುತ್ತದೆ. ಕೆಲವರನ್ನು ಮನೆಯ ಹೆಂಗಸರು ಕರೆದುಕೊಂಡು ಹೋಗಿ ಕೂರಿಸುತ್ತಾರೆ. ನಂತರ ಅಕ್ಕಪಕ್ಕದ ಮನೆಗಳ ಹೆಂಗಸರಿಗೆ ವಿಷಯ ತಿಳಿಸಿ, ಕೆಲವರು ಒಟ್ಟುಗೂಡಿ ಅವಳು ಕುಳಿತಿರುವ ಹಲಸಿನ ಮರದ ಸಮೀಪ ಹೋಗಿ ಹಳ್ಳಿಹಾಡು (ಋತುಮತಿ ಸಂದರ್ಭದಲ್ಲಿ ಹಾಡುವ ಹಾಡು) ಹಾಡುತ್ತಾರೆ. ನಂತರ ೫ ದಿನಗಳವರೆಗೆ ಆ ಹೆಣ್ಣು ಮನೆಯಲ್ಲಿ ಒಂದು ಕೋಣೆಯಲ್ಲಿ ಅಥವಾ ವಿಶೇಷ ಕೋಣೆಯಲ್ಲಿ ಇರಬೇಕಾಗುತ್ತದೆ. ದೇವರ ಕೋಣೆಗೆ ಹೋಗಲು ಅವಕಾಶವಿರುವುದಿಲ್ಲ. ೫

ದಿನಗಳವರೆಗೆ ನೀರು ಹಾಕುತ್ತಿರುತ್ತಾರೆ. ಇದರ ಅರ್ಥ ಶುದ್ಧೀಕರಣಗೊಳಿಸುವುದು. ೫ ದಿನದ ನೀರು ಆದ ನಂತರ ೬ನೇ ದಿನ ಸೋದರಮಾವ ಅಥವಾ ಸಂಬಂಧಿಕರು ಬಂದು ವಿಶೇಷ ಕಾರ್ಯಕ್ರಮ ಮಾಡುತ್ತಾರೆ. ಇಲ್ಲಿ ಹೆಣ್ಣಿಗೆ ಹೊಸಬಟ್ಟೆ, ಒಡವೆಗಳು, ಅರಿಶಿಣ, ಕುಂಕುಮ ಹಚ್ಚಿ ಬಳೆ ತೊಡಿಸುತ್ತಾರೆ. ಬಂದವರು ಹೆಣ್ಣಿಗೆ ಆರತಿಯನ್ನು ಮಾಡಿ ಉಡುಗೊರೆ ಮತ್ತು ಹಣವನ್ನು ಕೊಡುತ್ತಾರೆ. ಈ ಕಾರ್ಯಕ್ರಮವನ್ನು ಕೆಲವರು ವಿಜೃಂಭಣೆಯಿಂದ ಮಾಡುತ್ತಾರೆ. ಈ ಹೆಣ್ಣು 'ಮೈನೆರೆದಿದ್ದಾಳೆ' ಎಂಬ ವಿಷಯ ಇತರರಿಗೆ ಗೊತ್ತಾಗಲಿ ಎಂದು, ಮುಂದೆ ವಿವಾಹ ಮಾಡುವಾಗ ಈ ಮನೆಯಲ್ಲಿ ಮದುವೆಯಾಗುವ ಹೆಣ್ಣು ಇದ್ದಾಳೆ ಎಂಬ ವಿಷಯ ತಿಳಿದಿರಲಿ ಎಂದು ಇದನ್ನು ಮಾಡುತ್ತಾರೆ. ಕಾರ್ಯಕ್ರಮ ಮುಗಿದ ನಂತರ ಹುಡುಗಿಯ ಸೋದರಮಾವ ಕರೆದುಕೊಂಡು ಹೋಗುತ್ತಾನೆ. ಕೆಲವು ದಿನಗಳ ನಂತರ ಪುನಃ ಮನೆಗೆ ಕಳುಹಿಸಿಕೊಡುತ್ತಾರೆ. ಈ ಸಂಪ್ರದಾಯವನ್ನು ಗೌಡಾಲು ಜನರು ಹಿಂದಿನಿಂದಲೂ ಬೆಳೆಸಿಕೊಂಡು ಬರುತ್ತಿದ್ದಾರೆ. ಇಲ್ಲಿ ತಮ್ಮದೇ ಆದಂತಹ ಸಂಪ್ರದಾಯಗಳನ್ನು ಅನುಸರಿಸಿಕೊಂಡು ಬಂದಿದ್ದಾರೆ.

**ವಿವಾಹ ಪದ್ಧತಿ**

ಗೌಡಾಲು ಸಮುದಾಯದಲ್ಲಿ ವಿವಾಹ ಪದ್ಧತಿಯು ಆಧುನಿಕತೆಗೆ ಅಷ್ಟೊಂದು ಸಿಲುಕದೆ ತನ್ನದೇ ಆದ ಸಂಪ್ರದಾಯ, ವಿಧಿ, ವಿಧಾನಗಳನ್ನು ಉಳಿಸಿಕೊಂಡಿರುವುದು ಕಂಡುಬಂದಿದೆ. ವಿವಾಹವು ದುಡಿಮೆಯ ಕೈಯ ಸೇರ್ಪಡೆಯ ಅವಶ್ಯಕತೆಗಾಗಿದೆ, ಕಾಡಿನ ನಡುವೆ ಒಂದೊಂದೇ ಮನೆಗಳಿರುವ ಕಾರಣಕ್ಕಾಗಿಯೇ ಎಂಬಂತೆ ಹುಡುಗಿಗೆ ಸುಮಾರಾಗಿ ೧೮ರಿಂದ ೨೧ರ ಒಳಗೆ, ಹುಡುಗನಿಗೆ ೨೦ ರಿಂದ ೨೫ರ ಒಳಗೆ ವಿವಾಹ ಮಾಡುತ್ತಾರೆ.

ಈ ಪಂಗಡದವರಲ್ಲಿ ವಿವಾಹವನ್ನು ಹಿರಿಯರು ನಿಶ್ಚಯಿಸುತ್ತಾರೆ. ಸಂಬಂಧಿಕರಲ್ಲಿ ಸ್ನೇಹಿತರ ಮೂಲಕ ಹುಡುಗ ಹುಡುಗಿಯರ ವಿಷಯ ತಿಳಿದುಕೊಳ್ಳುತ್ತಾರೆ. ಹೆಚ್ಚಾಗಿ ಗಂಡಿನ ಮನೆಯವರೇ ಹೆಣ್ಣಿನ ಮನೆಯವರನ್ನು ಹುಡುಕಿಕೊಂಡು ಹೋಗಿ ವಿಚಾರಿಸುತ್ತಾರೆ. ಹಾಗೆಯೇ ಸಂಬಂಧ ಆಗಬಹುದೆಂದರೆ ಯಾವುದಾದರೂ ದೇವಸ್ಥಾನದಲ್ಲಿಯೋ, ಸಂಬಂಧಿಕರ ಮನೆಯಲ್ಲಿಯೋ ಹುಡುಗಿಯನ್ನು ಹುಡುಗನಿಗೆ ತೋರಿಸುತ್ತಾರೆ. ಹುಡುಗನಿಗೆ ಒಪ್ಪಿಗೆಯಾದರೆ ದೇವಸ್ಥಾನದಲ್ಲಿ ಒಂದು ದಿನ ಪ್ರಸಾದ ತೆಗೆಯುವುದೆಂದು ನಿಶ್ಚಯಿಸುತ್ತಾರೆ.

ಗ್ರಾಮದ ದೇವಸ್ಥಾನದಲ್ಲಿ ಪ್ರಸಾದ ತೆಗೆಯಲು ಹುಡುಗಿಯ ಕಡೆಯ ಹಿರಿಯರಲ್ಲಿ ತಂದೆ ಅಥವಾ ಸೋದರ ಮಾವ ಹಾಗೂ ಹುಡುಗನ ಕಡೆಯ ಹಿರಿಯರು ಬಂದು ದೇವರಿಗೆ ಪೂಜೆ ಸಲ್ಲಿಸಿ, ದೇವರ ಎದುರು ಮದುವೆ ಮಾಡಬಹುದಾದರೆ ಪ್ರಸಾದ ನೀಡಬೇಕೆಂದು ಬೇಡುತ್ತಾರೆ. ಆಗ ಪೂಜಾರಿ ದೇವರ ತಲೆಯ ಮೇಲೆ ಹೂವನ್ನು ಮುಡಿಸಿ ಆರತಿ ಮಾಡುತ್ತಾರೆ. ಆಗ ದೇವರ ಬಲಭಾಗಕ್ಕೆ ಹೂವು ಬಿದ್ದರೆ ಪ್ರಸಾದ ಬಂತೆಂದು ಒಪ್ಪಿಕೊಳ್ಳುತ್ತಾರೆ.

ಪ್ರಸಾದದ ಮಾದರಿ ಇಲ್ಲದಿದ್ದರೆ ಸಾಲಾವಳಿ ಅಥವಾ ಜಾತಕ ತೋರಿಸುತ್ತಾರೆ. ಆಗ ಜ್ಯೋತಿಷಿ ಜಾತಕದ 'ಬಳ' ನೋಡಿ ಹುಡುಗ ಹುಡುಗಿಗೆ ಜಾತಕ ಬಂದರೆ ಮದುವೆ ಮಾಡಬಹುದೆಂದು ಹೇಳುತ್ತಾರೆ. ಪ್ರೇಮ ವಿವಾಹದ ಸಮಯದಲ್ಲಿ ಇದು ಯಾವುದೂ ಗಣನೆಗೆ ಬರುವುದಿಲ್ಲ. 'ನಿಶ್ಚಿತಾರ್ಥ'ದ ಸಮಯದಲ್ಲಿ ಮನೆಯವರು

ಒಪ್ಪಿದನಂತರ ಗಂಡು ಹೆಣ್ಣನ್ನು ಒಪ್ಪಿ, ಹುಡುಗನ ಮನೆಯವರು ಹುಡುಗಿಯ ಮನೆಗೆ ಬಂದು ಹುಡುಗಿಗೆ ಸೀರೆ, ಬಳೆ, ಉಂಗುರ ತೊಡಿಸಿ ಮದುವೆ ನಿಶ್ಚಯಿಸಿಕೊಂಡು ಹೋಗುತ್ತಾರೆ. ನಂತರ ಮದುವೆಯ ದಿನವನ್ನು ಗೊತ್ತುಮಾಡಿ, ಹೆಚ್ಚಾಗಿ ಹೆಣ್ಣಿನ ಮನೆಯಲ್ಲಿ ಅಥವಾ ದೇವಸ್ಥಾನದಲ್ಲಿ ಮದುವೆಯನ್ನು ಇಡುತ್ತಾರೆ. ಲಗ್ನಪತ್ರಿಕೆ ಮಾಡಿಸಿ ಕುಲದೇವರಿಗೆ ಮೊದಲು ನೀಡಿ ನಂತರ ಹುಡುಗ-ಹುಡುಗಿಯ ಮನೆಗಳಿಗೆ ಮತ್ತು ಸೋದರ ಮಾವನಿಗೆ ನೀಡುತ್ತಾರೆ.

ಮದುವೆಯ ಹಿಂದಿನ ದಿನ ಎರಡೂ ಮನೆಗಳಲ್ಲಿ ವಿಶೇಷ ಪೂಜೆಗಳಿರುತ್ತವೆ. ಹಸುವಿನ ಪೂಜೆ, ಗಂಗೆ ಪೂಜೆ, ದೇವರಪೂಜೆ, ಹಸೆ ಮತ್ತು ಹಸೆಗೋಡೆ ಪೂಜೆಗಳನ್ನು ವರ ಮತ್ತು ವಧುವಿನಿಂದ ಮಾಡಿಸುತ್ತಾರೆ. ವಿವಾಹದ ದಿನ ಬೆಳಿಗ್ಗೆ ಹೊಸ್ತಿಲ ಪೂಜೆ ಮಾಡಿ ಸಹಪೂಜೆ ಮಾಡಿ ವಿವಾಹ ಚಪ್ಪರಕ್ಕೆ ಗಂಡಿನ ಕಡೆಯವರು ಬರುತ್ತಾರೆ. ಹೆಣ್ಣಿನ ಕಡೆಯವರು ವರನನ್ನು ಮತ್ತು ಅವರ ಕಡೆಯವರನ್ನು ಎದುರುಗೊಂಡು ಶಾಸ್ತ್ರಗಳನ್ನು ಮಾಡಿ ಕರೆದುಕೊಂಡು ಬರುತ್ತಾರೆ. ಮುಹೂರ್ತಕ್ಕೆ ಗಂಡನ್ನು ಆತನ ಸೋದರಮಾವ ಮಂಟಪಕ್ಕೆ ಕರೆತರುತ್ತಾನೆ. ಹಾಗೆಯೇ ಹೆಣ್ಣನ್ನೂ ಆಕೆಯ ಸೋದರಮಾವ ಮಂಟಪಕ್ಕೆ ಕರೆತರುತ್ತಾನೆ. ಹೆಣ್ಣಿನ ತಂದೆ-ತಾಯಿ ಹಾಲು, ನೀರು, ತೀರ್ಥಗಳಿಂದ ಗುರಿಕಾರ/ಪುರೋಹಿತರ ಹೇಳಿಕೆಯಂತೆ ಧಾರೆ ಎರೆಯುತ್ತಾರೆ. ಮಾಂಗಲ್ಯವನ್ನು ಕಟ್ಟಿಸಲಾಗುತ್ತದೆ. ಮತ್ತೆ ಹಸೆಯಲ್ಲಿ ವಧು-ವರರನ್ನು ಕೂರಿಸಿ ಅಕ್ಷತೆಯಿಂದ ಶಾಸ್ತ್ರ ಮಾಡಿಸುತ್ತಾರೆ. ನಂತರ ಎಲ್ಲರ ಆಶೀರ್ವಾದವನ್ನು ಪಡೆದು ವಧುವಿನೊಡನೆ ವರನ ಮನೆಗೆ ಹೊರಡುತ್ತಾರೆ.

ಗಂಡಿನ ಮನೆಗೆ ಬಂದ ನಂತರ ಅಲ್ಲಿಯೂ ಹಸೆಯ ಶಾಸ್ತ್ರಗಳಿರುತ್ತವೆ. ಅಕ್ಕಿಯಲ್ಲಿ ಬಂಗಾರದ ಉಂಗುರ ಹಾಕಿ ಹುಡುಕಿಸುತ್ತಾರೆ, ಅಡಿಕೆಯಲ್ಲಿ ಸರಿ-ಬೆಸ ಆಡಿಸುತ್ತಾರೆ. ಹೀಗೆ ಶಾಸ್ತ್ರಗಳನ್ನು ಮಾಡಿಸಿ ಸಂಜೆ ಅರಿಶಿಣವನ್ನು ನೀರಿಗೆ ಕದಡಿ ಇಬ್ಬರಿಗೂ ಎರಚಿ ನಂತರ ಸ್ನಾನ ಮಾಡಿಸುತ್ತಾರೆ. ಸೊಸೆಗೆ ಅತ್ತೆಯ ಸೀರೆಯನ್ನು ಉಡಿಸಿ, ಗಂಗೆ ಪೂಜೆ ಮಾಡಿಸಿ, ಸೊಸೆಯನ್ನು ಮನೆ ತುಂಬಿಸಿಕೊಳ್ಳುತ್ತಾರೆ. ಹೀಗೆ ಒಂದು ಹೆಣ್ಣು ಸೊಸೆಯಾಗಿ, ಹೆಂಡತಿಯಾಗಿ ಮತ್ತು ಗೃಹಿಣಿಯಾಗಿ ಬದುಕಿಗೆ ಆ ಕುಟುಂಬದಲ್ಲಿ ಪ್ರವೇಶಿಸುತ್ತಾಳೆ.

ಹೀಗೆ ಗೌಡಾಲು ಸಮುದಾಯದಲ್ಲಿ ತಮ್ಮದೇ ಆದ ಸಂಪ್ರದಾಯಗಳಿಗೆ ಅನುಸಾರವಾಗಿ ವಿವಾಹವನ್ನು ಮಾಡುತ್ತಾರೆ. ಹಿಂದೆ ವಿವಾಹಗಳು ೪ರಿಂದ ೧೦ ಜೊತೆಗಳವರೆಗೆ ಏಕಕಾಲದಲ್ಲಿ ಆಗುತ್ತಿದ್ದವು. ಹಾಗೆಯೇ ಹಿಂದಿನ ವಿವಾಹಗಳಲ್ಲಿ ಪುರೋಹಿತರು ಬರುತ್ತಿರಲಿಲ್ಲ. ಗುರಿಕಾರನೇ ಪ್ರಮುಖನಾಗಿದ್ದ. ಇತ್ತೀಚಿನ ವರ್ಷಗಳಲ್ಲಿ ಪುರೋಹಿತರು ವಿವಾಹ ಕಾರ್ಯ ನೆರವೇರಿಸುತ್ತಿದ್ದಾರೆ. 'ಬುಡಕಟ್ಟಿನಲ್ಲಿ ಹುಟ್ಟು, ಮದುವೆ, ಸಾವು ಈ ಮೂರು ಸಂದರ್ಭದಲ್ಲಿ ಬ್ರಾಹ್ಮಣರ ಪೌರೋಹಿತ್ಯಕ್ಕೆ ಅವಕಾಶ ಕೊಡದೆ ತಾವೇ ನಡೆಸಿಕೊಂಡು ಹೋಗುತ್ತಾರೆ. ಎಲ್ಲಿಯವರೆಗೆ ಈ ಪರಿಸ್ಥಿತಿ ಉಳಿದಿರುವುದೋ ಅಲ್ಲಿಯವರೆಗೆ ಬುಡಕಟ್ಟು ತನ್ನ ಮೂಲರೂಪದಲ್ಲಿ ಉಳಿದಿರುತ್ತದೆ. ಹುಟ್ಟು, ಮದುವೆ ಹಾಗೂ ಸಾವು ಈ ಸಂದರ್ಭಗಳಲ್ಲಿ ಬ್ರಾಹ್ಮಣರ ಪೌರೋಹಿತ್ಯಕ್ಕೆ ಅವಕಾಶ ಕೊಡುವುದೋ ಆಗ ಬುಡಕಟ್ಟು ತನ್ನ ಮೂಲ ಸ್ವರೂಪವನ್ನು ಸ್ವಾತಂತ್ರ್ಯವನ್ನು ಕಳೆದುಕೊಂಡು ಜಾತಿಯಾಗಿ ಪರಿವರ್ತಿತವಾಗುತ್ತದೆ.''[೮]

## ಸೀಮಂತ(ಬಯಕೆ)ಶಾಸ್ತ್ರ

ಗೌಡಾಲು ಸಮುದಾಯದಲ್ಲಿ ಗರ್ಭಿಣಿ ಸ್ತ್ರೀಯನ್ನು ಹೆರಿಗೆಗೆ ಹೆಚ್ಚಾಗಿ ತವರಿಗೇ ಕಳುಹಿಸುತ್ತಾರೆ ಹೀಗೆ ಕಳುಹಿಸುವಾಗ ಗರ್ಭಿಣಿಗೆ ಬಯಕೆಗಳನ್ನು ಪೂರೈಸುವ ಶಾಸ್ತ್ರವನ್ನು ಮಾಡುತ್ತಾರೆ. ೭ನೇ ತಿಂಗಳು ತುಂಬಿದ ನಂತರ ಒಂದು ದಿನವನ್ನು ಗೊತ್ತುಪಡಿಸಿ ತವರಿನವರು ಬಗೆ-ಬಗೆಯ ತಿಂಡಿ ತಿನಿಸುಗಳನ್ನು ಅವಳ ಮುಂದೆ ಇಟ್ಟು ಸೀರೆಯನ್ನು ಉಡಿಸಿ, ಶಾಸ್ತ್ರ ಮಾಡುತ್ತಾರೆ. ಹಾಗೆಯೇ ಗಂಡಿನ ಕಡೆಯವರು ಗರ್ಭಿಣಿಗೆ ಸೀರೆ-ರವಿಕೆ, ಬಳೆಗಳನ್ನು ತಂದು ತೊಡಿಸಿ ಶಾಸ್ತ್ರ ಮಾಡುತ್ತಾರೆ. ಬಯಕೆಯ ಶಾಸ್ತ್ರ ಮುಗಿದ ನಂತರ ಗರ್ಭಿಣಿಯನ್ನು ಹೆರಿಗೆಗಾಗಿ ತವರಿಗೆ ಕರೆದುಕೊಂಡು ಹೋಗುತ್ತಾರೆ. ಇನ್ನು ಅವಳು ಹೆರಿಗೆಯಾಗಿ ಮೂರು ಅಥವಾ ಐದು ತಿಂಗಳ ನಂತರ ಗಂಡನ ಮನೆಗೆ ಬರುತ್ತಾಳೆ.

## ಶವಸಂಸ್ಕಾರ/ಅಂತ್ಯಕ್ರಿಯೆ

ಗೌಡಾಲು ಬುಡಕಟ್ಟು ಸಮುದಾಯದ ಕುಟುಂಬದಲ್ಲಿ ಯಾರಾದರೂ ತೀರಿಕೊಂಡರೆ, ಜಗಲಿಯ ಉತ್ತರಕ್ಕೆ ತಲೆಮಾಡಿ ಮಲಗಿಸುತ್ತಾರೆ. ತಲೆಯ ಕಡೆಗೆ ಹಣತೆಯಲ್ಲಿ ದೀಪ ಹಚ್ಚಿರುತ್ತಾರೆ. ಹಾಗೆಯೇ ತಲೆ ಕಡೆಯಲ್ಲಿ ಬಾಳೆ ಎಲೆಯಲ್ಲಿ ಸ್ವಲ್ಪ ಭತ್ತ ಇಡುತ್ತಾರೆ. ಕಾಲಿನ ಕಡೆಗೆ ಬಾಳೆ ಎಲೆಯಲ್ಲಿ ಅಕ್ಕಿಯನ್ನು ಇಟ್ಟಿರುತ್ತಾರೆ. ಒಡೆದಿರುವ ತೆಂಗಿನ ಕಾಯಿಯನ್ನು ತಲೆಕಡೆ ಮತ್ತು ಕಾಲಿನ ಕಡೆಗಳಲ್ಲಿ ಇಡುತ್ತಾರೆ. ಬಂದವರು ಕಾಯಿ ಮತ್ತು ಊದುಬತ್ತಿ ತರುತ್ತಾರೆ. ತಂದಿರುವ ಊದುಬತ್ತಿ ಹಚ್ಚಿ ಕಾಯಿಯನ್ನು ಒಡೆದು ಇಟ್ಟಿರುತ್ತಾರೆ. ನಂತರ ಎಲ್ಲರೂ ಸೇರಿ ಹೆಣವನ್ನು ಮನೆಯ ಹೊರಗೆ ತೆಗೆದುಕೊಂಡು ಹೋಗಿ ಸ್ನಾನ ಮಾಡಿಸುತ್ತಾರೆ. ಗಂಡ ಸತ್ತರೆ ಹೆಂಡತಿ ಮತ್ತು ಮಕ್ಕಳು ಬಾಯಲ್ಲಿ ಹಾಲು ಮತ್ತು ನೀರನ್ನು ಹಾಕುತ್ತಾರೆ. ಹಣೆಗೆ ಕುಂಕುಮ ಹಚ್ಚುತ್ತಾರೆ. ನಂತರ 'ಕೂಳನ್ನು' (ಅನ್ನ) ಮಡಕೆಯಲ್ಲಿ ಬೇಯಿಸುತ್ತಾರೆ. ಬೇಯಿಸಿದ ಅನ್ನದ ತುತ್ತನ್ನು ಮೂರು ಸಾರಿ ಬಾಯಿಗೆ ಹಿಡಿಯುತ್ತಾರೆ. ಹಾಗೆಯೇ ಎಲೆ, ಅಡಿಕೆಯನ್ನು ಬಾಯಿಯ ಸಮೀಪದಲ್ಲಿ ಹಿಡಿದು ತೆಗೆಯುತ್ತಾರೆ. ಗಂಡ ಸತ್ತರೆ ಹೆಂಡತಿಯ ತಾಳಿ, ಕಾಲುಂಗುರ, ಮೂಗುತಿ, ಬಳೆ ತೆಗೆಯುತ್ತಾರೆ. ಕುಂಕುಮ ಅಳಿಸುತ್ತಾರೆ. ಹಾಗೆಯೇ ತಲೆಯ ಕೂದಲನ್ನು ಬಿಚ್ಚುತ್ತಾರೆ. ಹೆಂಡತಿ ತೀರಿಕೊಂಡರೆ ಗಂಡನಿಗೆ ಇಂತಹ ನಿಯಮಗಳು ಇರುವುದಿಲ್ಲ. ಊದುಬತ್ತಿ ಹಚ್ಚಿಟ್ಟು, ಸಾಂಬ್ರಾಣಿಯ ಧೂಪ ಹಾಕುತ್ತಾರೆ. ಹೆಣವನ್ನು ತೆಗೆದುಕೊಂಡು ಹೋಗಲು ಚಟ್ಟವನ್ನು ಮಾಡಿರುತ್ತಾರೆ. ಹೆಣವನ್ನು ಚಟ್ಟದಲ್ಲಿ ಇಟ್ಟುಕೊಂಡು ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆ. ತಂದೆ ಅಥವಾ ತಾಯಿ ತೀರಿಕೊಂಡರೆ ಮಕ್ಕಳು ಹೆಗಲು ಕೊಡಲೇಬೇಕು. ನಂತರ ಕಟ್ಟಿಗೆಯ ಮೇಲೆ ಹೆಣವನ್ನು ಇಟ್ಟು, ನೀರುತುಂಬಿದ ಮಡಕೆ ಹೆಗಲ ಮೇಲೆ ಇಟ್ಟುಕೊಂಡು ಆ ಶವವಿರುವ ಕಟ್ಟಿಗೆಯ ಗುಡ್ಡೆಯ ಒಂದು ಸುತ್ತು ಹಾಕಿದ ನಂತರ ಕತ್ತಿಯಿಂದ ಆ ಮಡಕೆಗೆ ಕುಕ್ಕಿ ಒಂದು ರಂಧ್ರ ಮಾಡುತ್ತಾರೆ. ನೀರು ಕೆಳಗೆ ಬೀಳುತ್ತದೆ. ಹೀಗೆ ಮೂರು ಸುತ್ತು ಹಾಕಿ ಮೂರು ರಂಧ್ರಗಳು ಮಾಡಿದ ನಂತರ ಮಡಕೆಯನ್ನು ಕೆಳಗೆ ಬಿಟ್ಟು, ಬೆಂಕಿಯನ್ನು ಹೆಣದ ಕಾಲಿನ ಕಡೆಯಿಂದ ಕೊಡುತ್ತಾರೆ. ಒಡೆದಿರುವ ಕಾಯಿಯ ಹೋಳು ಕಟ್ಟಿಗೆಯ ಮೇಲೆ ಮುಂಚೆಲೇ ಇಟ್ಟಿರುತ್ತಾರೆ. ಕೆಲವರು ಅಲ್ಲಿಯೇ ಇದ್ದು ಉಳಿದವರೆಲ್ಲ ಹಿಂದಿರುಗುತ್ತಾರೆ. ಹೆಣ ಪೂರ್ತಿಯಾಗಿ ಸುಟ್ಟ ನಂತರ ಉಳಿದವರು ಮನೆಗೆ ಹಿಂತಿರುಗುತ್ತಾರೆ.

ಮನೆಗೆ ಬಂದು ಕಾಲು ಕೈ ತೊಳೆದುಕೊಂಡು, ಹಲಸಿನ ಕುಡಿಯಿಂದ ಸಗಣಿ ನೀರು, ವೆವಲೆ ಹಾಂಡು, ಅಲ್ಲಿಯೇ ಮಡಕೆಯಲ್ಲಿ ಬೆಂಕಿಯ ಕೆಂಡಕ್ಕೆ ಧೂಪ ಹಾಕುತ್ತಾರೆ. ಈ ಧೂಪದ ಹೊಗೆಗೆ ಕಾಲುಗಳನ್ನು ಹಿಡಿದು ಮನೆಯ ಒಳಗೆ ಬಂದು ಸ್ನಾನ ಮಾಡುತ್ತಾರೆ. ಮನೆಯಲ್ಲಿ ಊಟಕ್ಕೆ ಗಂಜಿ ಮಾಡಿರುತ್ತಾರೆ. ಬಂದವರೆಲ್ಲರೂ ಗಂಜಿ ಊಟವನ್ನು ಮಾಡುತ್ತಾರೆ.

ಎರಡನೆಯ ದಿನ ಗಂಜಿ ಮತ್ತು ಬಾಳೆಕಾಯಿ ಸಾಂಬಾರು ಮಾಡುತ್ತಾರೆ. ಮೊದಲನೆಯ ದಿನ ಹೆಣವಿಟ್ಟ ಜಾಗಕ್ಕೆ ದೀಪವನ್ನು ಹಚ್ಚಿಡುತ್ತಾರೆ. ಹಣತೆ ಇಟ್ಟ ಜಾಗದಲ್ಲಿ ಬಾಳೆ ಎಲೆ ಇಟ್ಟು 'ಮೇಗೈಯಲ್ಲಿ' ಗಂಜಿಯನ್ನು ಬಡಿಸುತ್ತಾರೆ. ಅಂದರೆ ಸತ್ತಿರುವವರ ಆತ್ಮ ಬಂದು ತಿನ್ನುತ್ತದೆ ಎಂಬ ನಂಬಿಕೆಯು ಇವರಲ್ಲಿ ಇದೆ. ೧೧ನೇ ದಿನದವರೆಗೂ ಸೂತಕವಿರುತ್ತದೆ. ೧೧ನೇ ದಿನದ ನಂತರ ಮುಹೂರ್ತ ಕೇಳಿ ಸೂತಕ ಕಳೆಯುತ್ತಾರೆ. ಈ ದಿನ ಹೆಣಸುಟ್ಟ ಜಾಗಕ್ಕೆ ಹೋಗಿ ಮೂಳೆ ಮತ್ತು ಬೂದಿ ಸಂಗ್ರಹಿಸಿ ಗುಂಡಿ ತೋಡಿ ಹಾಕುತ್ತಾರೆ. ಅದರ ಮೇಲೆ ಮಣ್ಣಿನ ಗುಡ್ಡೆ ಮಾಡಿ ಅದಕ್ಕೆ ಪೂಜೆ ಮಾಡಿ ಹಾಲು, ನೀರು ಹಾಕಿ ಊದುಬತ್ತಿ ಹಚ್ಚಿಟ್ಟು ಮನೆಗೆ ಬಂದು ಊಟ ಮಾಡುತ್ತಾರೆ. ಈ ದಿನದಂದು ವಿಶೇಷ ಊಟದ ವ್ಯವಸ್ಥೆ ಇರುತ್ತದೆ. ಹಾಗೆಯೇ ತಿಂಗಳ ತಿಥಿಯನ್ನು ತಿಂಗಳಿಗೆ ಮಾಡುತ್ತಾರೆ. ಇದು ಗೌಡಲು ಜನಾಂಗದ ಶವಸಂಸ್ಕಾರದ ಪದ್ಧತಿಯಾಗಿದೆ.

ಮೇಲಿನ ಎಲ್ಲ ಅಂಶಗಳನ್ನು ಗಮನಿಸಿದಾಗ ಗೌಡಾಲು ಬುಡಕಟ್ಟು ಜನರ ಕೌಟುಂಬಿಕ ಸಂಸ್ಕಾರಗಳು ಬಹಳ ವಿಶಿಷ್ಟವಾಗಿರುವುದು ಕಂಡುಬರುತ್ತದೆ. ಅವರು ಅವುಗಳನ್ನು ಹಿಂದಿನಿಂದಲೂ ಬೆಳೆಸಿಕೊಂಡು ಬಂದಿದ್ದಾರೆ. ಇವರ ಎಲ್ಲ ಸಂಸ್ಕಾರಗಳು ಈ ಜನಾಂಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಹಾಗೆಯೇ ಅವರ ಸಂಸ್ಕೃತಿಯ ಬಗೆಗಿನ ಗೌರವ ಮತ್ತು ಅದನ್ನು ಉಳಿಸಿಕೊಂಡು ಹೋಗಬೇಕೆನ್ನುವ ಮನೋಭಾವನೆಯನ್ನು ಎತ್ತಿ ತೋರಿಸುತ್ತದೆ.

**ಗೌಡಾಲು ಬುಡಕಟ್ಟು ಸಮುದಾಯದ ಆಟಗಳು**

ಸಮಾಜದಲ್ಲಿ ಬದುಕುತ್ತಿರುವ ಪ್ರತಿಯೊಬ್ಬ ಮನುಷ್ಯನಿಗೆ, ಆಹಾರ, ನೀರು, ಬಟ್ಟೆ, ವಸತಿ ಹೇಗೆ ಮುಖ್ಯವೋ ಅದೇ ರೀತಿಯಲ್ಲಿ ಅವನ ದಿನನಿತ್ಯ ಜೀವನದಲ್ಲಿ ಆಟಗಳು ಅಷ್ಟೇ ಪ್ರಾಮುಖ್ಯತೆಯನ್ನು ಪಡೆದಿರುವುದು ಕಂಡುಬರುತ್ತದೆ. ಇವರ ದಿನನಿತ್ಯದ ಜೀವನದಲ್ಲಿ ಕೆಲವೊಂದು ಸಂದರ್ಭಗಳಲ್ಲಿ ಮನೋಲ್ಲಾಸಕ್ಕಾಗಿ ವಿವಿಧ ರೀತಿಯ ಆಟಗಳನ್ನು ಆಡುತ್ತಿರುವುದು ಕೆಳಗಿನ ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.

**ಕೋಷ್ಟಕ ೫.೦೫**

**ಸಮುದಾಯದ ಆಟಗಳು**

| ಆಟಗಳ ಸ್ವರೂಪ | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಪಗಡೆಯಾಟ | ೧೧ | ೦೨.೯೧ |
| ಚನ್ನೆಮಣೆ | ೧೭ | ೦೪.೪೯ |
| ಚೆಂಡಿನ ಆಟ | ೧೧ | ೦೨.೯೧ |

| | | |
|---|---|---|
| ಲಗೋರಿ | ೨೭ | ೦೭.೧೪ |
| ಜೋಕಾಲಿ | ೧೬ | ೦೪.೨೩ |
| ಕುಂಟಾಬಿಲ್ಲೆ | ೧೯ | ೦೫.೦೨ |
| ಕಾರ್ಡ್ಸ್ | ೦೩ | ೦೦.೭೯ |
| ಕಣ್ಣಾಮುಚ್ಚಾಲೆ | ೧೪ | ೦೩.೭೦ |
| ಚಿನ್ನಿದಾಂಡು | ೩೧ | ೦೮.೩೧ |
| ಕಾಯಿಯಾಟ | ೩೫ | ೦೯.೨೫ |
| ಕ್ರಿಕೆಟ್ | ೮೫ | ೨೨.೪೮ |
| ವಾಲಿಬಾಲ್ | ೪೮ | ೧೨.೬೯ |
| ಬುಗುರಿ | ೬೧ | ೧೬.೧೩ |
| **ಒಟ್ಟು** | **೩೭೮** | **೧೦೦.೦೦** |

ಮೇಲಿನ ಕೋಷ್ಟಕದಲ್ಲಿ ಕಂಡುಬರುವ ಮಾಹಿತಿ ಎಂದರೆ, ೧೧ (ಶೇ.೨.೯೧) ಜನ ಪಗಡೆಯಾಟವನ್ನು, ೧೭ (ಶೇ.೪.೪೯) ಜನ ಚನ್ನಮಣೆಯಾಟವನ್ನು, ೧೧ (ಶೇ.೨.೯೧) ಜನ ಚೆಂಡಿನ ಆಟವನ್ನು, ೨೭ (ಶೇ.೭.೧೪) ಜನ ಲಗೋರಿಯಾಟವನ್ನು, ೧೬ (ಶೇ.೪.೨೩) ಜನ ಜೋಕಾಲಿಯಾಟವನ್ನು, ೧೯ (ಶೇ.೫.೨೦) ಜನ ಕುಂಟಾಬಿಲ್ಲೆ ಆಟವನ್ನು, ೦೩ (ಶೇ.೦.೭೯) ಜನ ಕಾರ್ಡ್ಸಿನ ಆಟವನ್ನು ೧೪ (ಶೇ.೩.೭೦) ಕಣ್ಣಾಮುಚ್ಚಾಲೆ ಆಟವನ್ನು, ೩೧ (ಶೇ.೮.೩೧) ಜನ ಚಿನ್ನಿದಾಂಡು ಆಟವನ್ನು, ೩೫ (ಶೇ.೯.೨೫) ಜನ ಕಾಯಿಯಾಟವನ್ನು, ೮೫ (ಶೇ.೨೨.೪೮) ಜನ ಕ್ರಿಕೆಟ್ ಆಟವನ್ನು, ೪೮ (ಶೇ.೧೨.೬೯) ಜನ ವಾಲಿಬಾಲ್ ಆಟವನ್ನು ಮತ್ತು ೬೧ (ಶೇ.೧೬.೧೩) ಜನ ಬುಗುರಿಯಾ ಟವನ್ನು ಆಡುತ್ತಿರುವುದು ಮೇಲಿನ ಕೋಷ್ಟಕದಿಂದ ಕಂಡುಬರುತ್ತದೆ. ಇವರಲ್ಲಿ ಅತಿ ಹೆಚ್ಚು ಜನ ಅಂದರೆ (ಶೇ.೨೨.೪೮) ತಿಳುವಳಿಕೆದಾರರು ಕ್ರಿಕೆಟ್ ಆಟವನ್ನು ಆಡುತ್ತಿರುವುದು ಹಾಗೂ ಅತಿ ಕಡಿಮೆ ಜನ ಶೇ.೦೭೯ ಜನ ತಿಳುವಳಿಕೆದಾರರು ಕಾರ್ಡ್ಸ್ ಆಟವನ್ನು ಆಡುತ್ತಿರುವುದು ಕಂಡುಬರುತ್ತದೆ. ಸಂಪ್ರದಾಯಬದ್ಧ ಆಟಗಳನ್ನು ಹಿಂದಿನ ವರ್ಷಗಳಲ್ಲಿ ಹೆಚ್ಚು ಜನ ಆಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಶಿಕ್ಷಣದ ಪ್ರಭಾವದಿಂದ, ಆಧುನಿಕತೆ ಮತ್ತು ನಗರೀಕರಣದ ಕಾರಣದಿಂದಾಗಿ ಇವರು ಕ್ರಿಕೆಟ್, ವಾಲಿಬಾಲ್‌ನಂತರ ಆಟಗಳಿಗೆ ಮಹತ್ವ ನೀಡುತ್ತಿರುವುದು ಈ ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ.

ಕೋಷ್ಟಕದಲ್ಲಿ ಗಮನಿಸಬೇಕಾದ ಸಂಗತಿ ಎಂದರೆ, ಕೆಲವೊಂದು ಸೂಚನಾದಾರರು ಒಂದಕ್ಕಿಂತ ಹೆಚ್ಚು ಆಟಗಳನ್ನು ಆಡುತ್ತಿರುವುದರಿಂದ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ. ಉದಾ ಪಗಡೆಯಾಟವಾಡುವವರು ಚನ್ನೆಮಣೆಯಾಟವನ್ನೂ ಆಡುತ್ತಿದ್ದಾರೆ. ಹಾಗೆಯೇ ಕ್ರಿಕೇಟ್ ಆಡುವವರು ವಾಲಿಬಾಲ್ ಆಟವನ್ನೂ ಆಡುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಗೌಡಲು ಬುಡಕಟ್ಟು ಜನರು ಹಿಂದೆ ಸಂಪ್ರದಾಯ ಬದ್ಧ ಆಟಗಳಿಗೆ ಪ್ರಾಶಸ್ತ್ಯ ಕೊಡುತ್ತಿದ್ದರು. ಆದರೆ ಇತ್ತೀಚೆಗೆ ಇವರ ಜೀವನ ವ್ಯವಸ್ಥೆಯಲ್ಲಿ ಆದಂತಹ ಬದಲಾವಣೆಗಳ ಕಾರಣದಿಂದಾಗಿ ಆಧುನಿಕ ಆಟಗಳಿಗೆ ಇವರು ಹೆಚ್ಚಿನ ಆದ್ಯತೆ ನೀಡುತ್ತರುವುದು ಕಂಡುಬರುತ್ತದೆ.

### ಚೆಂಡಿನ ಆಟ

ಗೌಡಾಲು ಬುಡಕಟ್ಟು ಜನರಲ್ಲಿ ಹಿಂದಿನಿಂದಲೂ ಕಂಡುಬಂದಂತಹ ಆಟಗಳಲ್ಲಿ ಚೆಂಡಿನ ಆಟ ಅಥವಾ ಚೆಂಡಿನ ಉತ್ಸವ ಮನೋರಂಜನೆ ನೀಡುವಂತಹ ಉತ್ಸವವಾಗಿದೆ. ಇದೊಂದು ಕಲಾತ್ಮಕ ವಿನೋದದ ಆಟವಾಗಿದೆ. ಹಿಂದೆ ಕೆಸರುಗದ್ದೆಗಳಲ್ಲಿ, ಬಯಲು ಪ್ರದೇಶಗಳಲ್ಲಿ, ದೇವಸ್ಥಾನಗಳ ಎದುರಿನಲ್ಲಿ ಈ ಆಟವನ್ನು ಆಡುತ್ತಿದ್ದರು. ಚೆಂಡಿನ ಆಟವು ಸಾಧಾರಣವಾಗಿ ಈಗಿನ ಕಾಲ್ಚೆಂಡು ಆಟವನ್ನು ಹೋಲುತ್ತದೆ. ಇಲ್ಲಿ ಆಟಗಾರರ ಸಂಖ್ಯೆಯು ನಿರ್ದಿಷ್ಟವಾಗಿರುವುದಿಲ್ಲ. ನಿಯಮಗಳಲ್ಲೂ ಅಷ್ಟೊಂದು ಕಠಿಣತೆ ಇರುವುದಿಲ್ಲ. ಚೆಂಡು ಹದಮಾಡಿದ ಚರ್ಮದಿಂದ ಮಾಡಿದ್ದು, ಅದರೊಳಗೆ ತೆಂಗಿನನಾರು ತುಂಬಿಸಿ ಹೊಲಿದಿರುತ್ತಾರೆ. ಚೆಂಡಾಟವನ್ನು ಹೆಚ್ಚಾಗಿ ಬಯಲು ಪ್ರದೇಶಗಳಲ್ಲಿ ಆಡುತ್ತಾರೆ. ಗುರಿಕಾರರು ಚೆಂಡಿನ ಆಟವನ್ನು ಆಡುವವರನ್ನು ಎರಡು ಗುಂಪುಗಳನ್ನಾಗಿ ಮಾಡಿ, ಆ ಎರಡು ಗುಂಪುಗಳ ಮಧ್ಯದಲ್ಲಿ ಚೆಂಡು ಎಸೆಯುತ್ತಾರೆ. ಈ ಚೆಂಡನ್ನು ತುದಿ ಮುಟ್ಟಿಸಿದವರು ಅದನ್ನು ಹಿಡಿದು ಗುರಿಕಾರನ ವಶದಲ್ಲಿ ಕೊಡಬೇಕು. ಹೀಗೆ ಚೆಂಡನ್ನು ತುದಿ ಮುಟ್ಟಿಸುವುದಕ್ಕೆ ಕೋಡಿ ತುದಿ ಎಂದು ಕರೆಯುತ್ತಾರೆ. ಈ ರೀತಿ ದಿನಕ್ಕೆ ಮೂರು ಬಾರಿ ಅಥವಾ ಅದಕ್ಕಿಂತ ಹೆಚ್ಚು ಬಾರಿ ಚೆಂಡು ಹಾರಿಸುತ್ತಾರೆ. ಯಾವ ತಂಡವು ಹೆಚ್ಚು ಸಲ ಚೆಂಡನ್ನು ತುದಿಗೆ ಮುಟ್ಟಿಸುತ್ತದೆಯೋ ಅಥವಾ ಕೋಡಿ ಮಾಡುತ್ತದೆಯೋ ಅದನ್ನು ವಿಜೇತ ತಂಡವೆಂದು ಪರಿಗಣಿಸುತ್ತಾರೆ. ಚೆಂಡನ್ನು ತುದಿ ಮುಟ್ಟಿಸಿದ ಕೂಡಲೇ ನಗಾರಿ ಅಥವಾ ಜಾಗಟೆಯನ್ನು ಬಾರಿಸುತ್ತಾರೆ. ಕೆಲವೊಂದು ಕಡೆಗಳಲ್ಲಿ ಡೊಳ್ಳು, ಸಿಡಿಮದ್ದು ಉರಿಸುತ್ತಾರೆ. ಹೀಗೆ ವೈಭವೀಕರಿಸಿ ಮೆರವಣಿಗೆ ಮಾಡುತ್ತಾರೆ. ಈ ಆಟವು ಮೂರು ಅಥವಾ ನಾಲ್ಕು ದಿನಗಳವರೆಗೆ ನಡೆಯುತ್ತದೆ. ಇದನ್ನು ಕೆಲವೊಂದು ಹಬ್ಬಗಳ ಸಮಯದಲ್ಲಿ, ಸುಗ್ಗಿಯ ಸಮಯದಲ್ಲಿ ಆಡುತ್ತಿದ್ದರು ಎಂಬುದು ಅಧ್ಯಯನದಿಂದ ತಿಳಿದುಬಂದಿದೆ. ಗುರಿಕಾರರ ಸಮ್ಮುಖದಲ್ಲಿ ಗೆದ್ದಿರುವ ತಂಡಕ್ಕೆ ಊರಲ್ಲಿ ವಿಶೇಷ ಗೌರವ ನೀಡುತ್ತಿದ್ದರು. ಈ ಚೆಂಡಿನ ಆಟವು ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿದೆ. ಹೊಸ ಹೊಸ ಆಟಗಳು ಕಲಿಯುತ್ತಿರುವ ಇವರು ಚೆಂಡಿನ ಆಟವನ್ನು ಮರೆಯುತ್ತಿದ್ದಾರೆ ಎಂಬುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಚೆಂಡಿನ ಆಟಕ್ಕೆ ಸಂಬಂಧಿಸಿದಂತೆ ಪುರಾಣಗಳಲ್ಲಿ ಉಲ್ಲೇಖವಿದ್ದು, ಕ್ರಿ.ಶ. ೧೭೫೭ರಲ್ಲಿ ಇಕ್ಕೇರಿ ಸಂಸ್ಥಾನದ ಕೆಳದಿ ಮಹಾರಾಣಿ ಚನ್ನಮ್ಮಾಜಿಯ ದೇವಿ ಭಕ್ತಿಯಿಂದಾಗಿ ಪೂಳಲಿ ಚೆಂಡಿನ ಉತ್ಸವವನ್ನು ಐದು ದಿನಗಳವರೆಗೆ ನಡೆಸುತ್ತಿದ್ದರೆಂದು ಇತಿಹಾಸವಿದೆ. ಹೀಗೆ ಈ ಚೆಂಡಿನ ಆಟಕ್ಕೆ ಇತಿಹಾಸದಲ್ಲಿಯೂ ಒಂದು ವಿಶೇಷ ಮಹತ್ವ ಇತ್ತು ಎಂಬುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

### ತೆಂಗಿನಕಾಯಿ ಆಟ

ತೆಂಗಿನಕಾಯಿ ಆಟವನ್ನು ಸಾಮಾನ್ಯವಾಗಿ ದೀಪಾವಳಿಯ ಸಮಯದಲ್ಲಿ ಸುಮಾರು ಹತ್ತು ದಿನಗಳಿಂದ ಹಿಡಿದು ಒಂದು ತಿಂಗಳವರೆಗೆ ಆಡುತ್ತಾರೆ. ಇತ್ತೀಚೆಗೆ ಬೇರೆ ಬೇರೆ ವಿಧಗಳಲ್ಲಿ ಈ ಆಟವನ್ನು ಆಡುತ್ತಾರೆ.

ಒಂದನೆಯ ಪ್ರಕಾರದಲ್ಲಿ ನೋಡುವುದಾದರೆ ಸಿಪ್ಪೆ ಬಲಿಷ್ಠ ಯುವಕನು ತನ್ನ ಎರಡು ಕೈಗಳನ್ನೂ ಒಟ್ಟಿಗೆ ಹಿಡಿದು ಆ ತೆಂಗಿನ ಕಾಯಿಯನ್ನು ಬಡಿದು ಚೂರು ಚೂರು ಮಾಡುತ್ತಾನೆ. ಅದರಲ್ಲಿ ಎಷ್ಟು ತುಂಡುಗಳಾಗುತ್ತವೆ

ಎಂದು ಯುವಕರು ಪಣ ಕಟ್ಟುತ್ತಾರೆ. ಯಾರು ಹೆಚ್ಚು ಚೂರುಗಳನ್ನು ಮಾಡುತ್ತಾರೆಯೋ ಅಂತಹವರು ಬಹುಮಾನ ಪಡೆಯುತ್ತಾರೆ.

ಎರಡನೆಯ ಪ್ರಕಾರದಲ್ಲಿ ಸಿಪ್ಪೆಯನ್ನು ತೆಗೆದ ಗಟ್ಟಿಯಾದ ತೆಂಗಿನ ಕಾಯಿಯನ್ನು ಇಬ್ಬರು ಹಿಡಿದುಕೊಂಡು ಕಾಯಿಗಳನ್ನು ಬಲವಾಗಿ ಒಂದಕ್ಕೊಂದು ತಾಗಿಸುತ್ತಾರೆ. ಆಗ ಒಡೆದ ಕಾಯಿಯು ಗೆದ್ದ ಕಾಯಿಯವನಿಗೆ ದೊರೆಯುತ್ತದೆ. ಇದಕ್ಕೆ ಕಾಯಿಕಟ್ಟುವುದು ಅಥವಾ ಕಾಯಿಚೂರು ಆಟ ಎಂದು ಕರೆಯುತ್ತಾರೆ. ದಪ್ಪ ಚಿಪ್ಪು ಇದ್ದು, ಗಟ್ಟಿಯಾಗಿರುವ ಕಾಯಿಗಳದ್ದೇ ಕೆಲವು ತೆಂಗಿನ ಮರಗಳಿರುತ್ತವೆ. ಕಾಯಿಕಟ್ಟುವುದು ಒಂದು ವಿಶಿಷ್ಟ ಆಟವಾಗಿದ್ದು, ಇದು ಎಲ್ಲರಿಗೂ ಸಿದ್ಧಿಸುವಂತದ್ದಲ್ಲ.

ಮೂರನೆಯ ಪ್ರಕಾರದಲ್ಲಿ ಕೆಲವರು ದೂರದಿಂದಲೇ ಎರಡು ಕಾಯಿಗಳನ್ನು ನೆಲದ ಮೇಲೆ ಹೊರಳಾಡಿಸಿ ಬಿಸಾಡುತ್ತಾರೆ. ಈ ಕಾಯಿಗಳು ಒಂದಕ್ಕೊಂದು ತಾಗಿದಾಗಿ ಒಡೆದ ಕಾಯಿಯು ಉಳಿದ ಕಾಯಿಯವನಿಗೆ ಸಿಗುತ್ತದೆ.

ನಾಲ್ಕನೇ ಪ್ರಕಾರದಲ್ಲಿ ಒಂದಿಷ್ಟು ದೂರದಲ್ಲಿ ಕಾಯಿಯನ್ನು ಇಡುತ್ತಾರೆ ದೂರದಿಂದ ದುಂಡನೆಯ ಕಲ್ಲನ್ನು ಎಸೆದು ಕಾಯಿಯ ಮೇಲೆ ಹಾಕುತ್ತಾರೆ. ಕಾಯಿ ಒಡೆದು ನೀರು ಬಂದರೆ ಯಾರು ಕಲ್ಲನ್ನು ಎಸೆದು ಕಾಯಿ ಒಡೆದಿರುತ್ತಾರೆಯೋ ಅಂತಹವರಿಗೆ ಕಾಯಿ ಸಿಗುತ್ತದೆ. ಆದರೆ ಕಲ್ಲು ಎಸೆಯಲು ಇಂತಿಷ್ಟು ಹಣ ಕೊಡಬೇಕು ಎಂಬ ನಿಯಮವಿರುತ್ತದೆ. ಎಷ್ಟು ಸಲ ಕಲ್ಲು ಎತ್ತಿ ಒಗಾಯಿಸುತ್ತಾರೆಯೋ ಅಷ್ಟು ಹಣ ಕಾಯಿಕಟ್ಟಿದವರಿಗೆ ಸಿಗುತ್ತದೆ. ಹೀಗೆ ಹಲವಾರು ವಿಧಗಳಲ್ಲಿ ಆಡುವ ಈ ಆಟವು ವಿವಿಧ ಸ್ವರೂಪವನ್ನು ಪಡೆದಿರುತ್ತದೆ. ಆಟವನ್ನು ಸಾಮಾನ್ಯವಾಗಿ ದೀಪಾವಳಿ, ನವರಾತ್ರಿ ಸಮಯದಲ್ಲಿ ಆಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಗೌಡಾಲು ಬುಡಕಟ್ಟು ಜನರಲ್ಲಿ ಈ ಆಟವು ಹೆಚ್ಚಾಗಿ ಕಂಡುಬರುತ್ತಿಲ್ಲ. ಹಿಂದೆ ತೆಂಗಿನಕಾಯಿ ಆಟಕ್ಕೆ ಇವರು ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರು ಎಂಬುದು ಈ ಅಧ್ಯಯನದಿಂದ ಕಂಡುಬಂದಿದೆ.

ಈ ಆಟಗಳ ಅಷ್ಟೇ ಅಲ್ಲದೆ ಪಗಡೆ, ಕುಂಟಾಬಿಲ್ಲೆ, ಕ್ರಿಕೆಟ್, ಚನ್ನೆಮಣೆ, ವಾಲಿಬಾಲ್, ಚೆಂಡಿನ ಆಟ, ಕಣ್ಣಾಮುಚ್ಚಾಲೆ, ಲಗೋರಿ, ಚಿನ್ನಿದಾಂಡು, ಬುಗುರಿ, ಜೋಕಾಲಿ, ವಾಲಿಬಾಲ್ ಹೀಗೆ ಹಲವಾರು ಆಟಗಳನ್ನು ಆಡುತ್ತಿದ್ದು, ಇವು ಈ ಬುಡಕಟ್ಟು ಸಮುದಾಯದವರ ವಿವಿಧ ರೀತಿಯ ಮನರಂಜನೆಯನ್ನು ಪ್ರತಿಬಿಂಬಿಸುತ್ತವೆ. ಇತ್ತೀಚಿನ ದಿನಗಳಲ್ಲಿ ಕ್ರಿಕೇಟ್ ಆಟ ಆಡುವವರ ಪ್ರಮಾಣವು ಹೆಚ್ಚಾಗಿರುವುದು ಕಂಡುಬರುತ್ತದೆ. ಆಧುನಿಕತೆಯ ಪ್ರಭಾವದಿಂದ ಹಿಂದಿನ ಸಾಂಪ್ರದಾಯಿಕ ಆಟಗಳು ಕಡಿಮೆಯಾಗುತ್ತಿರುವುದನ್ನು ನಾವೀಗ ನೋಡಬಹುದಾಗಿದೆ.

### ೩.೪. ಹಬ್ಬ - ಆಚರಣೆಗಳು

ಪ್ರತಿಯೊಂದು ಜನಾಂಗವು ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಚಾರಧಾರೆಯನ್ನು ಹೊಂದಿರುತ್ತದೆ. ಹಾಗೆಯೇ ಗೌಡಾಲು ಬುಡಕಟ್ಟು ಜನರ ಸಂಪ್ರದಾಯಗಳು, ಧಾರ್ಮಿಕ ನಂಬಿಕೆಗಳು ಪ್ರಾಮುಖ್ಯತೆಯನ್ನು ಪಡೆದಿರುವುದನ್ನು ನಾವು ಇಲ್ಲಿ ಕಂಡುಕೊಳ್ಳಬಹುದಾಗಿದೆ. ಈ ಬುಡಕಟ್ಟಿನವರು ಮುಖ್ಯವಾಗಿ ಪ್ರಕೃತಿ ಆರಾಧನೆ, ದೆವ್ವ-ದೇವರುಗಳು ಆರಾಧನೆ, ಐತಿಹಾಸಿಕ ವ್ಯಕ್ತಿಗಳ ಆರಾಧನೆ, ಈಗಾಗಲೇ ನಿಧನ ಹೊಂದಿದ ಪೋಷಕರ ಆರಾಧನೆ, ಪ್ರಕೃತಿಯಲ್ಲಿ ಕಂಡುಬರುವ ಬೆಟ್ಟ-ಗುಡ್ಡಗಳು, ನದಿ-ಸರೋವರಗಳು, ಮರ-ಗಿಡಗಳು, ಸೂರ್ಯ,

ಚಂದ್ರ, ಬೆಂಕಿ, ನೀರು ಭೂಮಿ, ಹೀಗೆ ತನ್ನ ಸಮುದಾಯದ ಒಡಲಿನೊಳಗೆ ಅನೇಕ ಆಚರಣೆಗಳನ್ನು ಮಾಡುತ್ತಿದೆ. ಇವುಗಳೆಲ್ಲವು ವೈಶಿಷ್ಟತೆಯ ಹಾಗೂ ಸಮುದಾಯವನ್ನು ಗುರುತಿಸುವಲ್ಲಿ ಸ್ಥಾನವನ್ನು ಇಟ್ಟುಕೊಂಡಿವೆ. ಇದಕ್ಕೆ ಸಾಕ್ಷಿಯಾಗಿ ಭಾರತೀಯರ ಕಲ್ಪನೆಯಲ್ಲಿ ಶ್ರೇಷ್ಠ ಸ್ಥಾನವನ್ನು ಗಳಿಸಿಕೊಂಡಿರುವ ದೀಪಾರಾಧನೆಯು ಗೌಡಾಲುಗಳಲ್ಲಿ ಇರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ.

**ಅಂಟಿಗೆ-ಪಂಟಿಗೆ**

ಈ ಹಬ್ಬವನ್ನು ಗೌಡಾಲು ದೀಪಾವಳಿಯಂದು ಬೆಳಕಿನ ಹಬ್ಬದ ಪರಿಯಲ್ಲಿ ಆಚರಿಸುತ್ತದೆ. ಐದು ದಿವಸಗಳ ಕಾಲ ಬಹು ವಿಜೃಂಭಣೆಯಿಂದ ಆಚರಿಸುವ ಹಬ್ಬವಾಗಿದೆ. ಪ್ರಕೃತಿಯ ಆಯಾಸ ಕಳೆದು ಹಗುರಾಗಿ ಹರೆಯ ಚಿಗುರಿರಲು ನೆಲ ಹೊಲಗಳು ಹಸಿರಾಗಿರಲು ಆನಂದದ ಮಾಯಕಾರ ಕಾರ್ತಿಕ ಮೆಲು ಹೆಜ್ಜೆಗಳನ್ನಿಡುತ್ತಾ ನೆಲಕ್ಕಿಳಿಯುವಾಗಿನ ಗೆಜ್ಜೆಯ ಮೃದು ಕಿಂಕಣಿಯ ಲಹರಿಯಂತೆ ಈ ಹಬ್ಬ ಬರುತ್ತದೆ. ಈ ಕಾರಣದಿಂದ ದೀಪಾವಳಿ ಬಂದಿತೆಂದರೆ ಇಡೀ ಮಲೆನಾಡೇ ನಲಿಯುತ್ತಿರುತ್ತದೆ. ಜೊತೆಗೆ ಬುಡಕಟ್ಟು ಸಮುದಾಯಗಳ ಹೆಣ್ಣುಮಕ್ಕಳು ಸಂತೋಷದಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಮಲೆನಾಡಿನ ಯಾವುದೇ ಹಳ್ಳಿಗಳಲ್ಲಿ ಇದಕ್ಕಿಂತ ಮಿಗಿಲಾದ ಹಬ್ಬವೇ ಇಲ್ಲ. ಹಾಗಾಗಿ ಇದಕ್ಕೆ ದೊಡ್ಡ ಹಬ್ಬವೆಂದು ಕರೆಯುವುದೇ ವಾಡಿಕೆ. ಗೌಡಾಲುಗಳು ಇಲ್ಲಿ ಹತ್ತಾರು ಹಣತೆಗಳನ್ನು ಹಚ್ಚಲು ಎಣ್ಣೆ ಇಲ್ಲದಾತನ ಮನೆಯಲ್ಲಿಯೂ ಸಡಗರ ಸಂಭ್ರಮ, ನರಕ ಚತುರ್ದಶಿಯಂದು ಈ ಹಬ್ಬದ ನಾಂದಿ ಫಸಲು ಕೊಯ್ಯುವ ಮುನ್ನ ಊರಿನ ಹೆಣ್ಣುಮಕ್ಕಳು ಭೂಮಿಯಲ್ಲಿ ಬೋರೆಯ ಕೊಡದಲ್ಲಿ ಹೊಸ ನೀರನ್ನು ತುಂಬಿ ಬಲೀಂದ್ರನನ್ನು ಮನೆಗೆ ಬರಮಾಡಿಕೊಳ್ಳುತ್ತಾರೆ. ಅಲ್ಲದೆ ಇವರಲ್ಲಿ ಬಲೀಂದ್ರನ ಬಗ್ಗೆ ಒಂದು ನಂಬಿಕೆಯಿದೆ. ಅದೇನೆಂದರೆ ಬಲೀಂದ್ರ ಕಾರ್ಮುಲದ ಜಡ ದಿನಗಳನ್ನು ನರಕದ ಕತ್ತಲಿರುವವನಲ್ಲಿ ಕಾರ್ತಿಕದ ಎದುರಿನ ಹಿತವಾದ ಸುಂದರ ರಾತ್ರಿಯಲ್ಲಿ ಮೇಲೇರಿ ಮರ್ತ್ಯಕ್ಕೆ ಬರುತ್ತಾನೆ ಎಂದು ಪ್ರಬಲವಾದ ನಂಬಿಕೆಯವರಾಗಿರುವ ಈ ಬುಡಕಟ್ಟು ಪ್ರತಿಯೊಂದು ಹಾಡಿಯಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿಯೇ ಅತ್ಯಂತ ವರ್ಣರಂಜಿತವಾದುದಾಗಿದೆ. ಪಾಡ್ಯದ ದಿವಸ ಗೋಪೂಜೆಯನ್ನು ಮಾಡುವ ಪರಿಪಾಟವಿದೆ. ಆದ್ದರಿಂದ ಮನೆಯಲ್ಲಿರುವ ಜಾನುವಾರುಗಳನ್ನು ಮೈತೊಳೆಸಿ ಸಿಂಗರಿಸಿ ಕೊರಳಿಗೆ ಕೋವಿನ ಕೋಳಲು, ಹಿಂಗಾರ, ಚಂಡುವು, ಹರಿ ಅಡಿಕೆ, ಅಂಬಾಡೆ ಎಲೆ, ಪಚ್ಚೆ ತೆನೆಗಳನ್ನು ಸೇರಿಸಿ ಕೂರುಮಾಡಿ ಜಾನುವಾರುಗಳ ಕೊರಳಿಗೆ ಕಟ್ಟುತ್ತಾರೆ. ಮೈಮೇಲೆಲ್ಲಾ ಕೆಮ್ಮಣ್ಣು ಜೇಡಿಯಿಂದ ಕಾರದ ಸಿದ್ದಿಯಿಂದ ದಾಕುಗಳನ್ನು ಹಾಕಿ ಹಣೆಗೆ ಬಿಪ್ಪರೆ ಕೊಟ್ಟೆಪರಗಳನ್ನು ಕಟ್ಟಿ ಕೋಡುಗಳಿಗೆ ಊರಿ ಮಂಜುಗಣ್ಣಾ ಬಳಿದು ಬಂಡಿ ಎತ್ತುಗಳ ಕೋಡುಗಳನ್ನು ಬರೆದು ಕೋಡು ಗೆಣಸು ಹಾಕಿ ಕೋಡುಗಳಿಗೆ ಬಣ್ಣ ಹಚ್ಚಿ ಚೆಂಡು ಹೂವುಗಳಿಂದ ಅಲಂಕಾರದ ಬಾಸಿಂಗಗಳನ್ನು ಹಾಕಿ ಮೆರೆಸುವುದನ್ನು ನೋಡಲು ಎರಡು ಕಣ್ಣುಗಳು ಸಾಲದಾಗುತ್ತವೆ. ಆದ್ದರಿಂದ ಈ ಬುಡಕಟ್ಟಿನ ಆಚರಣೆಯ ವಿಧಾನಗಳು ಶ್ರೇಷ್ಠತೆಯಿಂದ ಕೂಡಿದವುಗಳಾಗಿವೆ.

ಗೌಡಾಲುಗಳಲ್ಲಿ ಈ ಹಬ್ಬವನ್ನು ಅವಲೋಕಿಸಿದಾಗ ದೀಪಾವಳಿಯ ಪಾಡ್ಯದಿಂದ ಪ್ರಾರಂಭಿಸಿ ವರ್ಷ ತೊಡಕಿನವರೆಗೆ ಮೂರು ದಿವಸಗಳ ರಾತ್ರಿ ನಡೆಯುವ ಜನಪದ ಗೀತೆ, ಸಂಪ್ರದಾಯವೇ ಅಂಟಿಗೆ-ಪಂಟಿಗೆ.

ಇದು ಗೌಡಾಲುಗಳ ಅತ್ಯಂತ ಪ್ರಮುಖವಾದ ಜಾನಪದ ಕಲಾ ಪ್ರಕಾರವಾಗಿದೆ. ಇಲ್ಲಿ ದೀಪಾವಳಿಯ ರಾತ್ರಿಗಳಲ್ಲಿ ಮನೆ ಮನೆಗೆ ಹೋಗಿ ದೀಪ ನೀಡಿ ಹಾಡುವ ಈ ಸಂಪ್ರದಾಯ ಚಿಕ್ಕಮಗಳೂರು ಜಿಲ್ಲೆಯಲ್ಲಿ ಅದು ಕಳಸ, ಶೃಂಗೇರಿ, ಮೂಡಿಗೆರೆ, ಕೊಪ್ಪ, ತೀರ್ಥಹಳ್ಳಿಯ ಭಾಗದಲ್ಲಿ ಹೆಚ್ಚಾಗಿ ಕಂಡುಬರುವುದರಿಂದ ಅಂಟಿಗೆ-ಪಂಟಿಗೆ ಎಂದು ಕರೆಯುತ್ತಾರೆ. ಗ್ರಾಮೀಣ ಬದುಕನ್ನು ಮೈಗೂಡಿಸಿಕೊಂಡಿರುವ ಪಶ್ಚಿಮಘಟ್ಟದಲ್ಲಿ ಬದುಕು ಸಾಗಿಸುತ್ತಿರುವ ಗೌಡಾಲು ಶ್ರಮಜೀವಿಗಳಿಗೆ ಬಿಡುವೆಂದರೆ ತಮ್ಮ ಆನಂದ ಉತ್ಸಾಹಗಳಿಗೆ ರೂಪ ಕೊಟ್ಟು ರಸಿಕತೆಯನ್ನು ಮೆರೆಸುವ ಕಲಾವಿದರು ಇವರಲ್ಲಿ ದೊರಕುತ್ತಾರೆ. ಇದರಿಂದಾಗಿ ಗೌಡಾಲುಗಳ ಕಲೆ ಅವರ ಬಡತನಕ್ಕೆ ದುಡಿಮೆಯಿಂದ ದಣಿದ ದೇಹಕ್ಕೆ ಉತ್ಸಾಹದ ವಸ್ತುವಾಗುತ್ತದೆ. ಅಲ್ಲದೆ ಬದುಕಿಗೆ ಬೇಕಿರುವ ಸಂಘಟನೆ ಬೆಳೆಯುತ್ತದೆ. ಪರಿಣಾಮವಾಗಿ ದೀಪಾವಳಿಯ ಪಾಡ್ಯ, ಕರಿ, ವರ್ಷ ತೊಡಕು ಈ ಮೂರು ದಿವಸಗಳು ಮಲೆನಾಡಿನ ಜನಕ್ಕೆ ಮಹತ್ತರವಾದ ದಿವಸಗಳಾಗಿವೆ. ಇಲ್ಲಿ ಗೌಡಾಲುಗಳು, ಬಲಿಪಾಡ್ಯಮಿ ದಿವಸದಿಂದ ಮೂರು ರಾತ್ರಿಗಳಲ್ಲಿ ಊರಿನ ಉತ್ಸಾಹಿ ತರುಣರು ಹಿರಿಯರೊಂದಿಗೆ ಹಾಡಿಯ ಜನರೊಂದಿಗೆ ಸಂಪ್ರದಾಯದಿಂದ ಪೂಜೆ ಮಾಡಿ ಹಚ್ಚಿಕೊಂಡು ಜ್ಯೋತಿಯನ್ನು ಮನೆಯಿಂದ ಮನೆಗೆ ಒಯ್ದು ಅಂಟಿಸಿ ಹಾಡುವ ಪದ್ಧತಿಯೇ ಅಂಟಿಗೆ-ಪಂಟಿಗೆ. ಈ ವಿಶಿಷ್ಟ ದೀಪ ಸಂಪ್ರದಾಯದಲ್ಲಿ ಜಾನಪದ ಹಾಡುಗಾರ ತಂಡದವರನ್ನು ಹಬ್ಬ ಹಾಡುವವರು, ಜ್ಯೋತಿ ನೀಡುವವರು. ಅಂಟಿಗೆ-ಪಂಟಿಗೆಯವರು ಎನ್ನುತ್ತಾರೆ. ಈ ಕಾರಣಕ್ಕಾಗಿ ಅಂಟಿಗೆ-ಪಂಟಿಗೆ ಪದಗಳು ನಮ್ಮ ಜನಪದ ಸಾಹಿತ್ಯದ ಶ್ರೀಮಂತ ಭಂಡಾರವಾಗಿರುತ್ತವೆ ಎನ್ನುವುದನ್ನು ಕ್ಷೇತ್ರಕಾರ್ಯದಲ್ಲಿ ಗ್ರಹಿಸಲಾಗಿದೆ. ಈ ಸಾಹಿತ್ಯವು ಕಂಠಸ್ಥ ಸಂಪ್ರದಾಯದಲ್ಲಿ ಉಳಿದುಬಿಟ್ಟಿವೆ. ಆದ್ದರಿಂದ ಮಲೆನಾಡಿನಲ್ಲಿ ಒಂದೊಂದು ಜಿಲ್ಲೆಯಲ್ಲಿ ಒಂದೊಂದು ರೀತಿ ಕರೆಯುತ್ತಾರೆ. ಆದರೆ ಚಿಕ್ಕಮಗಳೂರು ಜಿಲ್ಲೆಯಲ್ಲಿ ಗೌಡಾಲುಗಳು ಅಂಟಿಗೆ-ಪಂಟಿಗೆ ಎಂದು ಕರೆಯುವ ಪದ್ಧತಿ ಜಾರಿಯಲ್ಲಿದೆ. ಇಲ್ಲಿ ಅಂಟಿಗೆ ಪಂಟಿಗೆ ಕಲಾವಿದರು ಹಾಡುಗಳನ್ನು ಹೇಳುವಾಗ ಮುಮ್ಮೇಳದ ಇಬ್ಬರು, ಹಿಮ್ಮೇಳದ ಇಬ್ಬರು ಹಾಡುಗಾರರು ತೀರಾ ಹತ್ತಿರದಲ್ಲಿ ಕುಳಿತು ಅಂಟಿಕೊಂಡು ದನಿಗೂಡಿಸಿ ಹಾಡುವುದರಿಂದ ಅಂಟಿಗೆ ಎಂಬ ಮೊದಲ ಪದ ಬಂದಿರಬಹುದು ಎಂದು ಕ್ಷೇತ್ರಕಾರ್ಯದ ಸಮಯದಲ್ಲಿ ಊಹಿಸಲಾಗಿದೆ. ಆದರೆ ಪಂಟಿಗೆ ಎಂಬ ಪದದ ಬಗ್ಗೆ ಅಧ್ಯಯನದ ಹಿನ್ನೆಲೆಯಲ್ಲಿ ಚರ್ಚಿಸಲು ಹೊರಟರೆ ಅಥವಾ ಪಂಟಿಗೆಯ ಬಗ್ಗೆ ಅರ್ಥವನ್ನು ತಿಳುವಳಿಕೆದಾರರನ್ನು ಕೇಳಿದರೆ ಯಾವುದೇ ಉತ್ತರ ಸಿಗದೆ ಪಂಟಿಗೆ ಎಂಬ ಪದದ ಅರ್ಥ ಸಮಸ್ಯೆಯಾಗಿಯೇ ಉಳಿಯಿತು. ಇದರಿಂದಾಗಿ ಅಂಟಿಗೆ ಎಂಬ ಮಾತಿಗೆ ಒತ್ತಾಗಿ ಪಂಟಿಗೆ ಎಂಬ ಪದ ಬಂದಿರಬಹುದೆಂದು ಊಹಿಸಬಹುದಾದರೂ ಇದು ಊಹೆ ಮಾತ್ರ. ಇಲ್ಲಿ ಮೇಳದವರು ಹೊತ್ತು ತಂದ ದೀಪವನ್ನು ಮನೆಯವರು ತಮ್ಮ ದೀಪಕ್ಕೆ ಅಂಟಿಸಿ ಹೊತ್ತಿಸಿಕೊಳ್ಳುವುದರಿಂದ ಈ ಪದ ಬಳಕೆಯಲ್ಲಿ ಬಂದಿರಬಹುದು ಎಂದು ಊಹಿಸುವುದು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಹೆಚ್ಚು ಸಾಧಕವಾದುದಾಗಿದೆ. ಇರುಳಿನಲ್ಲಿ ದೀಪ ಹಿಡಿದು ಬರುವ ಈ ಜಾನಪದ ದೀಪದಾರಿಗಳ ಕಾಯಕದ ಜೋಳಿಗೆಯಲ್ಲಿ ಚಿತ್ರ ವಿಚಿತ್ರವಾದ ಘರಕುಗಳಿರುತ್ತವೆ. ಒಂದು ಸೋಲ್ಲು ಎತ್ತಿ ಜೋಳಿಗೆಯ ಎಳೆದರಾಯಿತು. ಬಣ್ಣ ಬಣ್ಣದ ಯಕ್ಷ ಲೋಕವೇ ಕಣ್ಣೆದುರು ನಲಿಯತೊಡಗುತ್ತದೆ. ಈ ರೀತಿಯ ಆಚರಣೆಯನ್ನು ಗಮನಿಸಿದಾಗ

ಈ ಸಂಪ್ರದಾಯವನ್ನು ಹೋಲುವ ಅನೇಕ ಸಂಪ್ರದಾಯಗಳು ಬಯಲು ನಾಡಿನ ಕೆಲವು ಭಾಗಗಳಲ್ಲಿ ಇರುವುದು ನಿಜ ಸಂಗತಿಯಾಗಿದೆ.

ಇಲ್ಲಿ ಗೌಡಾಲುಗಳು ಒಂದು ವಿಶಿಷ್ಟ ಬುಡಕಟ್ಟಾಗಿ ಗೋಚರಿಸುತ್ತದೆ. ಏಕೆಂದರೆ ದೀಪಾವಳಿಯನ್ನು ಬಯಲುಸೀಮೆಯಲ್ಲಿ ಕಾಣಬರುವುದಕ್ಕಿಂತ ಹೆಚ್ಚಾಗಿ ಮಲೆನಾಡಿನ ಪಶ್ಚಿಮಘಟ್ಟಗಳಲ್ಲಿ ತುಂಬ ಅಚ್ಚುಕಟ್ಟಾಗಿ ಆಚರಿಸುತ್ತಾರೆ. ಇಲ್ಲಿ ಭಾಗವಂತಿಗೆ ಮೇಳ ದೀಪಾವಳಿಯಲ್ಲಿ ಆಚರಿಸುತ್ತಾರೆ. ಇದು ಒಂದು ವಿಶಿಷ್ಟ ಸಂಪ್ರದಾಯ. ವೈಷ್ಣವ ಸಂಪ್ರದಾಯಗಳು ಹೆಚ್ಚಾಗಿರುವ ಭಾಗಗಳಲ್ಲಿ ಅಂದರೆ ಕಳಸದ ಕಡೆ ನಡೆಯುತ್ತದೆ. ಹಾಡಿಯ ದೈವತರೊಡನೆ ಭಾಗವಂತಿಕೆಯ ಪದಗಳನ್ನು ಹೇಳಿಕೊಂಡು ಊರೂರ ಮೇಲೆ ಹೊರಡುವ ತಂಡವನ್ನು ದೀಪಾವಳಿಯ ಹಾಡು ಎಂದು ಕರೆಯಲಾಗುತ್ತದೆ. ಇಲ್ಲಿ ಗೌಡಾಲು ದೀವಳಿಗೆಗೆ ಐದಾರು ದಿನ ಮುಂಚೆಯೇ ಊರಿನ ಗೋಮಾಳದಲ್ಲಿ ಕಲಿತು ದೊಡ್ಡದೊಂದು ದೀವಿಗೆಯನ್ನು ಹೊಂದಿಸಿಕೊಂಡು ಕಾಡುಮೇಡುಗಳನ್ನೆಲ್ಲಾ ಶೋಧಿಸಿ ಒಂದು ದೊಡ್ಡ ವಸ್ತ್ರದಲ್ಲಿ ಕಣಗಿಲೆ ಮುಂತಾದವುಗಳನ್ನು ಸಂಗ್ರಹಿಸಿಕೊಂಡು ರಾತ್ರಿಯಲ್ಲಿ ಗುಂಪುಕಟ್ಟಿಕೊಂಡು ಹೊರಡುತ್ತಾರೆ. ಬೆಳಗಾಗುವವರೆಗೆ ದೊಡ್ಡ ಹಣತೆಯನ್ನು ಹಿಡಿದವನು ಮುಂದೆ ಸಾಗುತ್ತಾನೆ. ಅನಂತರ ಹಿಂದೆ ಇತರರು ನಡೆದು ಹಾಡುತ್ತಾ ಮನೆ ಮನೆಯ ಬಾಗಿಲಿಗೂ ಬರುತ್ತಾರೆ. ಇಬ್ಬರ ಸೊಲ್ಲಿಗೆ ಮತ್ತಿಬ್ಬರ ಸೊಲ್ಲನ್ನು ಕೂಡುತ್ತಾ ಉಳಿದವರು ಪಲ್ಲವಿಯನ್ನು ಹಾಡುತ್ತಾರೆ. ಮನೆಯವರು ಇವರ ದೀಪಕ್ಕೆ ಎಣ್ಣೆಯನ್ನು ಎರೆದು ಕಾಣಿಕೆಯನ್ನು ನೀಡುತ್ತಿರುತ್ತಾರೆ. ಇದರಿಂದಾಗಿ ಅಂಟಿಗೆ-ಪಂಟಿಗೆ ನಮ್ಮ ಜನಪದರಿಗೆ ದೇವರು, ಭೂಮಿ, ದೀಪ, ಗೋವು ಇತ್ಯಾದಿಗಳ ಬಗೆಗಿದ್ದ ಶ್ರದ್ಧೆ ಆಚರಣೆ ಸಾಮಾಜಿಕ ಜೀವನ ಪದ್ಧತಿಗೆ ಕೈಪಿಡಿಯಾಗಿದೆ. ಈ ಸಂಪ್ರದಾಯವನ್ನು ಪಾಡ್ಯದ ದಿವಸ ಪ್ರಾರಂಭಿಸಿ ವರ್ಷ ತೊಡಕಿನವರೆಗೆ ಆಚರಿಸುತ್ತಾರೆ. ಮಣ್ಣಿನ ಹಣತೆ ಅಥವಾ ಪಂಜಿನ ಹಣತೆಯನ್ನು ಹಾಡಿಯ ದೇವರ ಭಕ್ತರಾಗಿರುವವರ ಅಥವಾ ಸಮುದಾಯದ ಮುಖ್ಯಸ್ಥರಾಗಿರುವವರ ಮನೆಯಲ್ಲಿ ಇಟ್ಟಿರುತ್ತಾರೆ. ಹಬ್ಬದ ಊಟವಾದ ನಂತರ ಮುಖ್ಯಸ್ಥನ ಮನೆಗೆ ಹೋಗಿ ಈ ದೀಪದಾರಿಗಳು ದೀಪವನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಹೋಗಿ ದೈವತ್ವದ ಸನ್ನಿದಿಯಲ್ಲಿ ಪೂಜೆ ಸಲ್ಲಿಸುತ್ತಾರೆ.

ಗೌಡಾಲು ಸಮುದಾಯದಲ್ಲಿ ಅಂಟಿಗೆ ಪಂಟಿಗೆಯನ್ನು ಆಚರಿಸುವಾಗ ಮಂಗಳಾರತಿಯನ್ನು ಹಾಡುತ್ತಾರೆ. ಅದೇಂದರೆ

ದುಪ್ಪಡು ದುಪ್ಪಡು ಒಳಗೋಗು

ಕಾಲಕ್ಕೆ ಬರುವ ದೀವಳಿಗೂ

ಹಬ್ಬಕ್ಕೊಂದು ಹೋಳಿಗೂ

ಎಂದು ಕೂಗಿದಾಗ ಹಿಮ್ಮೇಳದವರು ''ದುಮ್ಮಾಲೋ'' ಎಂದು ಹೇಳುತ್ತಾರೆ.

ದಿಮ್ಮೆಲೋಡೆಯವರ ದನಿಯೆದ್ದು ಬಲಲೋ

ದಿಮ್ಮಾಲ್ಲೋದಿರಣ್ಣಾ ಈ ಊರ ದೇವಕ್ಕ

ಈ ಊರ ಭೂತಪ್ಪ ಬಲು ಸತ್ಯವಂತ
ಸತ್ಯವಂತನಾದರೆ ಸಭೆ ಮುಂದೆ ಬರಲಿ
ಈ ಊರ ಭೂತಪ್ಪಗೆ ಏನೇನು ಕೂಜೂ
ಹೆಡಿಗೇಲ ಹಣ್ಣು ಹೇರೀಲಿ ಕಾಯೊ ಆಚೆಯ ದಿಂಬದಾಗ ಯಾರ ತರದ ಬೆಳಕೂ
ದಾದಾರ್ಪುಡುಗನ ನಾಮನ ಬೆಳಕಿಕೋ||

ಎಂದು ಹಾಡುತ್ತಾ ಮನೆ ಮನೆಗೂ ಹೋಗುತ್ತಾರೆ. ಮನೆಯ ಬಾಲಿಗೆ ಹೋಗಿ ನಿಂತು ಮನೆಯವರನ್ನು ಎಚ್ಚರಿಸಲು ಏಕಕಂಠದಿಂದ ದುಮ್ಮಾಲೆ ಹೊಡೆಯುತ್ತಾರೆ. ತಾವು ದೂರದಿಂದ ನಡೆದುಬಂದ ಸ್ಥಿತಿಯನ್ನು ಹಾಡಿನ ಮೂಲಕ ಈ ರೀತಿ ಹೇಳುತ್ತಾರೆ.

ಹೋ ಹೋ ದಲ್ಲಾರೆ ಎಂದು ಆಚರಿಸಿ
ಗೋರೆಂಬ ಕತ್ತಲೆಯೊಳಗೆ ನಾವು ಬಂದೇವಯ್ಯೋ
ಬಂದರೆ ನಾಮಚಾಜು ಬರಬೇಕಯ್ಯೋ
ಕಲ್ಲು ಮುಳ್ಳನೆ ತುಳಿದು ನಾಬು ಬಂದೇವರಯ್ಯ
ಬಂದರೆ ನರು ಚಾಜು ಬರಬೇಕಯ್ಯ
ಎನ್ನುತ್ತಾ ಬಾಗಿಲು ತೆರೆಸುತ್ತಾರೆ.
ಬಾಗಿಲು ಬಾಗಿಲು ಚೆಂದ
ಈ ಮನೆ ಬಾಗಿಲು ಚೆಂದ
ಬಾಗಿಲ ಮ್ಯಾಲೇನೋ ಬರದಾರ
ಬಾಗಿಲ ಮ್ಯಾಲೆ ಏನೇನೋ ಬರದ್ಯದಾರ
ಕುಚ್ಚು ಪಾರಿವಾಳದ ನಿವಳ್ಳಿಂಡು

ಎಂದು ಹಾಡಿದಾಗ ಮನೆಯವರು ಬಾಗಿಲು ತೆರೆಯುತ್ತಾರೆ. ಮನೆಯವರು ಬಾಗಿಲು ತೆರೆದ ನಂತರ ದೀಪವಿಡುವ ಸ್ಥಳದಲ್ಲಿ ಮನೆಯ ಒಡತಿ ನೆಲವನ್ನು ಸಗಣಿಯಿಂದ ಸಾರಿಸಿ ಮಣೆ ಇಡುತ್ತಾಳೆ. ದೀಪವನ್ನು ಮಣೆ ಮೇಲಿಟ್ಟು, ಹಾಡುಗಾರರ ತಂಡದ ಯಜಮಾನ ಮಾತ್ರ ಕುಳಿತುಕೊಳ್ಳುತ್ತಾನೆ. ಉಳಿದವರು ನಿಂತುಕೊಂಡೇ ಹಾಡುತ್ತಾರೆ. ದೀಪಕ್ಕೆ ಪೂಜೆ ಮಾಡಿ ತೆಂಗಿನ ಕಾಯಿ ಹೊಡೆದು ನಂತರ ಮನೆಯ ಒಡತಿ ದೀಪಕ್ಕೆ ಎಣ್ಣೆ ಎರೆದು ಜ್ಯೋತಿಯನ್ನು ಮನೆಯ ಹಣತೆಗೆ ಅಂಟಿಸಿಕೊಂಡು ಬಲೀಂದ್ರನ ಹತ್ತಿರ ಇಡುತ್ತಾರೆ. ನಂತರ ಬಲೀಂದ್ರನ ಹಾಡು ಹೇಳುತ್ತಾರೆ. ಇಲ್ಲಿ ಮುಖ್ಯವಾದ ಸಂಗತಿಯೆಂದರೆ ದೀಪಾವಳಿ ಮತ್ತು ಅಂಟಿಗೆ-ಪಂಟಿಗೆಯ ಆಚರಣೆಯು ಗೌಡಾಲುಗಳಲ್ಲಿ ವಿಶಿಷ್ಟವಾದ ಆಚರಣೆಯ ಪದ್ಧತಿಯಾಗಿದೆ. ಇಲ್ಲಿ ಅನೇಕ ಕಥನ ಗೀತೆಗಳನ್ನು ಈ ದೀಪದಾರಿಗಳು ಹೇಳುತ್ತಾ ಮುಂದೆ ಸಾಗುತ್ತಾರೆ. ಹೀಗೆ ಮೂರು ದಿವಸಗಳವರೆಗೆ ಹಬ್ಬ ಹಾಡುವ ಸಂಪ್ರದಾಯ ನಡೆಯುತ್ತದೆ. ಮನೆಯಿಂದ ಮನೆಗೆ ಹಳ್ಳಿಯಿಂದ ಹಳ್ಳಿಗೆ ಹೋಗುವಾಗ ''ದೀಪ''ಗಾಳಿಗೆ ಆರದಂತೆ ಅಡಿಕೆ ಹಾಳೆಯಿಂದ

ಮಾಡಿದ ತಡಿಕೆಯನ್ನು ಮರೆ ಮಾಡಿಕೊಳ್ಳುತ್ತಾರೆ. ಅಕಸ್ಮಾತ್ ಗಾಳಿಗೆ ದೀಪ ಆರಿಹೋದರೆ ಪುಂಡಿ ಅಥವಾ ಕಾಲು ನಾರಿನಿಂದ ಮಾಡಿದ ಹಗ್ಗೆಕ್ಕೆ (ದಪ್ಪ ಹುರಿ) ಬೆಂಕಿ ಹಚ್ಚಿಕೊಂಡಿರುತ್ತಾರೆ. ಹುರಿಯ ಬೆಂಕಿಯಿಂದ ದೀಪವನ್ನು ಹಚ್ಚುತ್ತಾರೆ. ಬೆಳಗಾದ ನಂತರ ಮನೆಗೆ ವಾಪಸಾಗುವಾಗ ದೀಪದ ನೆನಬತ್ತಿಯನ್ನು ಹಾಲು ಮರಕ್ಕಿಟ್ಟು ಹಗ್ಗಕ್ಕೆ ಬೆಂಕಿಯನ್ನು ಹಚ್ಚಿಕೊಂಡು ಹಾಡಿ ಸೇರುತ್ತಾರೆ. ಹಾಡಿಗೆ ಸೇರಿದ ನಂತರ ದೀಪದ ಯಜಮಾನರ ಮನೆಗೆ ಅಡಿಗೆ ಮಾಡುವ ಒಲೆಯ ಅಗ್ನಿಗೆ ಜ್ವಾಲೆಗೆ ಅಥವಾ ಜೂಲುಗೆ ಬತ್ತಿಯ ಬತ್ತಿಯನ್ನು ತೇಲಿಸಿ ಆರಿಸಿ ಇಟ್ಟುಕೊಳ್ಳುತ್ತಾರೆ. ಒಲೆಯಲ್ಲಿರುವ ಬೆಂಕಿ ಆರದಂತೆ ಮನೆಯವರು ನೋಡಿಕೊಳ್ಳಬೇಕು. ದೀಪದಾರಿಗಳು ತೆಗೆದುಕೊಂಡು ಹೋಗುವ ಜ್ಯೋತಿ ಮಧ್ಯದಲ್ಲಿ ಆರಬಾರದೆಂಬ ನಿಯಮವಿದೆ. ಅಕಸ್ಮಾತ್ ದೀಪ ಆರಿದರೆ ಆ ತಂಡದವರಿಗೆ ಮತ್ತು ಹಾಡಿಯವರಿಗೆ ಕೆಡುಕಾಗುತ್ತದೆ ಎಂಬ ನಂಬಿಕೆಯಿದೆ.

ಹಬ್ಬ ಹಾಡುವ ಸಂಪ್ರದಾಯ ಮುಗಿದ ನಂತರ ನಾಲ್ಕನೆಯ ದಿವಸ ಸಂಜೆ ತಂಡದವರೆಲ್ಲಾ ಸೇರಿ ಪುನಃ ದೀಪ ಹಚ್ಚಿಕೊಂಡು ಹಾಡು ಹೇಳುತ್ತಾ ದೀಪ ಆರಿಸುವ ಹಾಲುಮರದ ಹತ್ತಿರ ಹೋಗಿ ಮರ ಮತ್ತು ಜ್ಯೋತಿಯನ್ನು ಪೂಜೆ ಮಾಡಿ ನೆನಬತ್ತಿಯನ್ನು ಹಾಲುಮರದ ಕೊಂಬೆ ಕೊಂಬೆಗೆ ಇಡುವುದರ ಮೂಲಕ ಮುಕ್ತಾಯ ಮಾಡುತ್ತಾರೆ.

ಇಲ್ಲಿ ಹಬ್ಬ ಹಾಡುವವರು ಮನೆ ಮನೆಗೆ ಹೋದಾಗ ಮನೆಯ ಯಜಮಾನರು ಮತ್ತು ಮನೆಯೊಡತಿಯರು ಹಣ್ಣು ಕಾಯಿಕಡಿ, ಕೊಟ್ಟೇ ಕಡಬು, ಹೋಳಿಗೆ, ಹಣ ಕೊಡುತ್ತಾರೆ. ಆಯಾ ದಿವಸ ಕೊಟ್ಟ ತಿಂಡಿ, ತೆಂಗಿನಕಾಯಿ ಕಡಿಗಳನ್ನು ವಾಪಸು ಮನೆಗೆ ಬರುವಾಗ ಹಂಚಿಕೊಂಡು ತಿನ್ನುತ್ತಾರೆ. ನಂತರ ಸಂಗ್ರಹವಾದ ಹಣವನ್ನು ಹಬ್ಬವಾದ ಒಂದು ತಿಂಗಳ ನಂತರ ಒಣಮೀನು ಅಥವಾ ಕುರಿ ಕಡಿದು ಸಾಮೂಹಿಕ ಅಡಿಗೆ ತಯಾರಿಸಿ ಹಾಡಿಯ ಜನರೆಲ್ಲರು ಸಾಮೂಹಿಕ ಭೋಜನ ಮಾಡುತ್ತಾರೆ. ಭೋಜನಕ್ಕೆ ಬಾರದಿರುವ ಮಹಿಳೆಯರಿಗೆ ಪ್ರತಿಯೊಂದು ಮನೆಗೂ ಎಡೆ ಕೊಡುತ್ತಾರೆ. ಈ ರೀತಿಯ ಸಾಂಪ್ರದಾಯಿಕ ಆಚರಣೆಯನ್ನು ಗೌಡಾಲು ಸಮುದಾಯ ಇಂದಿನ ದಿನಮಾನಗಳಲ್ಲಿಯೂ ಮುಂದುವರಿಸಿಕೊಂಡು ಬಂದಿರುವುದು ವಿಶೇಷವಾಗಿದೆ.

**ಟಿಪ್ಪಣಿಗಳು**

೧. ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರ ಪುಟ ३೦-३೫

೨. ಪ್ರಭಾಕರ ಎ.ಎಸ್., ೨೦೦೪, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ ೨೦-೨३

३. ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಣ ೧೬-೨೨

೪. ಪ್ರಭಾಕರ ಎ.ಎಸ್., ದೊಂಬರ ಒಂದು ಅಧ್ಯಯನ ಪು.३೮

೫. ದೇವೇಂದ್ರ ವಯಸ್ಸು ३೦, ಮೆಣಸಿನ ಹಾಡ್ಯ

೬. ಲಕ್ಷ್ಮಮ್ಮ ಮತ್ತು ಗೋಪಾಲಗೌಡ ವಯಸ್ಸು ३೦-೪೦ ಮೆಣಸಿನ ಹಾಡ್ಯ

೭. ಶ್ರೀನಿವಾಸಗೌಡ ವಯಸ್ಸು ೩೫, ಕಳಸ

೮. ಲಕ್ಷ್ಮಿ ವಯಸ್ಸು ೩೮, ಮೆಣಸಿನ ಹಾಡ್ಯ

೯. ಶ್ರೀಧರ ವಯಸ್ಸು ೪೦, ಕಳಸ

೧೦. ಸಾವಿತ್ರಿ ವಯಸ್ಸು ೩೮, ಅಡಿಕೇಸು,

೧೧. ಬೋರಲಿಂಗಯ್ಯ ಹಿ.ಚಿ. ಕಾಡು ಕಾಂಕ್ರೇಟ್ ಮತ್ತು ಜಾನಪದ ಪುಟ

೧೨. ಕಲ್ಕುಳಿ ವಿಠಲ್ ಹೆಗಡೆ ವಯಸ್ಸು ೫೦, ಶೃಂಗೇರಿ

೧೩. ಕಲ್ಕುಳಿ ವಿಠಲ್ ಹೆಗಡೆ ವಯಸ್ಸು ೫೦, ಶೃಂಗೇರಿ

* * *

## ಅಧ್ಯಾಯ ನಾಲ್ಕು

# ವರ್ತಮಾನದಲ್ಲಿ ಗೌಡಾಲು ಸಮುದಾಯ ಎದುರುಗೊಳ್ಳುವ ಸವಾಲುಗಳು

## ಅಧ್ಯಾಯ ನಾಲ್ಕು

## ವರ್ತಮಾನದಲ್ಲಿ ಗೌಡಾಲು ಸಮುದಾಯ ಎದುರುಗೊಳ್ಳುವ ಸವಾಲುಗಳು

ಭಾರತದ ಸಮಾಜವನ್ನು ಅದರ ಚರಿತ್ರೆಯ ಮೂಲಕವೇ ನೋಡಬೇಕಾದ ಅನಿವಾರ್ಯತೆಯು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವವರಿಗೆ ಮುಖ್ಯವಾಗುತ್ತದೆ. ಯಾವುದೇ ಸಮುದಾಯವಿದೆ ಎಂದರೆ ಅದು ತನ್ನ ಅಳಿವುಗಳನ್ನು ಬದುಕಿನ ಉದ್ದಕ್ಕೂ ಹೃದಯದ ಅಂತರಾಳದಲ್ಲಿ ಬಚ್ಚಿಟ್ಟುಕೊಂಡು ಬಂದಿರುವುದು ನಿಜ ಸಂಗತಿಯಾಗಿರುವುದರಿಂದ ಪ್ರಾಚೀನ ಕಾಲದ ಸಮಾಜದಿಂದ ಇಲ್ಲಿಯವರೆಗೆ ಹಾಗೆಯೇ ಮುಂದುವರಿದುಕೊಂಡು ಬಂದ ಶ್ರೇಣೀಕೃತ ವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯಗಳು ಸಿಕ್ಕಿಹಾಗಿಕೊಂಡಿರುವುದು ತಿಳಿದ ಮಾಹಿತಿಯಾಗುತ್ತದೆ. ಈ ಶ್ರೇಣೀಕೃತ ವ್ಯವಸ್ಥೆಯಲ್ಲಿ ಪ್ರಭುತ್ವದ ಸೇವೆ ಮಾಡಲೆಂದೇ ಹುಟ್ಟಿರುವ ಬುಡಕಟ್ಟುಗಳ ಬದುಕು ಆಧುನಿಕತೆಯ ಸೆರಗನ್ನು ಮುಖದ ಮೇಲೆ ಹಾಕಿಕೊಂಡು ಬದುಕುವ ನಾಗರಿಕ ಸಮುದಾಯದ ಮನಸ್ಸುಗಳಿಗೆ ವಿಲಕ್ಷಣವಾಗಿ ಹಾಗೂ ಸುಂದರವಾಗಿ ಗೋಚರಿಸಬಹುದು. ಆದರೆ, ಬುಡಕಟ್ಟುಗಳು ತಮ್ಮ ದಿನನಿತ್ಯದ ಬದುಕಿನಲ್ಲಿ ಎದುರಿಸುವ ಕಷ್ಟಗಳಿಗೆ ಇವರ ಸಂಸ್ಕೃತಿ ಮತ್ತು ಬದುಟು ಯಾವತ್ತೂ ಪೂರಕವಾಗಿರುವುದಿಲ್ಲ ಎಂಬ ಮಾತು ಸತ್ಯದ ಸಂಗತಿ.

ಇಂದು ಭಾರತದಲ್ಲಿ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಆಲೋಚಿಸುವಾಗ ನಮ್ಮ ಆಡಳಿತ ವ್ಯವಸ್ಥೆಯು ಪ್ರಜಾಪ್ರಭುತ್ವದ ಮನೋಭಾವನೆಯಲ್ಲಿ ಯೋಚಿಸದೆ ಇರುವುದು ಹಾಗೂ ಉಳಿಗಮಾನ್ಯ ಮನಸ್ಸಿನಲ್ಲಿಯೇ ತಮ್ಮ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿರುವುದು ಇಂದು ಗಮನಾರ್ಹವಾಗಿದೆ. ರಾಷ್ಟ್ರದಲ್ಲಿರುವ ಸಮೃದ್ಧಿಯ ಹಾಗೂ ದಟ್ಟ ಅರಣ್ಯಗಳನ್ನು ಮತ್ತು ಇಲ್ಲಿರುವ ಬುಡಕಟ್ಟುಗಳ ಬದುಕನ್ನು ದೇಶದ ಬೃಹತ್ ಯೋಜನೆಗಳು ಯಾರಿಗೂ ತಿಳಿಯದ ರೀತಿಯಲ್ಲಿ ನುಂಗಿ ಹಾಕಿವೆ. ಆದ್ದರಿಂದ ವರ್ತಮಾನದಲ್ಲಿ ಗೌಡಾಲು ಸಮುದಾಯವು ಬಂಡವಾಳಶಾಹಿ ಮತ್ತು ಜಮೀನ್ದಾರಿಕೆಯ ಕೈಗೆ ಸಿಕ್ಕು ತತ್ತರಿಸಿ ಹೋಗಿದೆ. ಪ್ರಭುತ್ವವೆನ್ನುವುದು ಬುಡಕಟ್ಟು ಸಮುದಾಯಗಳ ಆಶೋತ್ತರ ಹಾಗೂ ಅವರ ಬದುಕನ್ನು ನಾಶ ಮಾಡುತ್ತಲೇ ಬಂದಿದೆ. ಇಂದು ಜಾಗತೀಕರಣ ಮತ್ತು ಮೇಲ್ವರ್ಗದ ಪ್ರಭುತ್ವದ ಮನೋಭಾವನೆಗಳು ಸಮುದಾಯಗಳ ಜೀವನವನ್ನು ರೂಪಾಂತರಗೊಳಿಸುತ್ತಿರುವುದು ದುರಂತವೇ ಸರಿ. ಗೌಡಾಲು ಸಮುದಾಯವನ್ನು ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಿಸಿದಂತೆ ಭಾರತದಂತಹ ಬಹು ಸಂಸ್ಕೃತಿಯ ದೇಶದಲ್ಲಿ ಜಾಗತೀಕರಣವು ಹಲವು ರಾಜಕೀಯ ವೈರುಧ್ಯಗಳನ್ನು ಸೃಷ್ಟಿ ಮಾಡಿರುವುದರಿಂದ ಕಾಡಿನ ಮಕ್ಕಳಾಗಿರುವ ಇವರು ಸರ್ಕಾರದ ಸುಳ್ಳು ಭರವಸೆಗಳಲ್ಲಿ

ಕನಸು ಕಾಣುತ್ತಾ ಬದುಕುವವರಾಗಿದ್ದಾರೆ. ಅಲ್ಲದೆ ಪಶ್ಚಿಮಘಟ್ಟದಲ್ಲಿ ನಿಲ್ಲಲು ನೆಲೆಯಿಲ್ಲದೆ ಬದುಕುವ ದಾರಿ ಯಾವುದೆಂದು ತಿಳಿಯದ ಮುಗ್ಧ ಬುಡಕಟ್ಟುಗಳಿಗೆ ಯಾವ ಕಾಯ್ದೆ ಕಾನೂನುಗಳೂ ಅರಣ್ಯ ರಕ್ಷಿಸುವ ಪಾಠ ಹೇಳಿಕೊಡದೆ ಇದ್ದರೂ ಅವೈಜ್ಞಾನಿಕತೆಯಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ರೂಢಿಸಿಕೊಂಡಿರುವ ಸಮುದಾಯಗಳು ಯಾವುದೇ ಸರ್ಕಾರಕ್ಕೆ ಹೊರೆಯಾಗದೆ ಗಿನವಿಡೀ ದುಡಿದು ತಮ್ಮ ಬವಣೆಗಳಿಗೆ ತಾವೇ ಪರಿಹಾರೋಪಾಯಗಳನ್ನು ಕಂಡುಕೊಳ್ಳುವ ಶ್ರಮಿಕರಾಗಿದ್ದಾರೆ. ಈ ಹಿನ್ನೆಲೆಯನ್ನು ಗಮನಿಸಿದರೆ ರಾಷ್ಟ್ರದ ಬಗ್ಗೆ, ಗೌರವದ ಬಗ್ಗೆ, ಆಧುನಿಕ ಸೆರಗನ್ನು ಹಾಕಿಕೊಂಡಿರುವ ನಾಗರಿಕ ಪ್ರಪಂಚ ಯಾವುದನ್ನು ತಿಳಿಸಿಕೊಡುವ ಗಿಣಿಪಾಠ ಬೇಕಾಗಿಲ್ಲವಾಗಿದೆ. ಆದರೆ ರಾಷ್ಟ್ರದ ಹಿತದ ಹೆಸರಿನಲ್ಲಿ ರಕ್ಷಿತ ಅರಣ್ಯ, ಅಭಯಾರಣ್ಯ, ರಾಷ್ಟ್ರೀಯ ಉದ್ಯಾನಗಳಿಂದ ಬುಡಕಟ್ಟು ಸಮುದಾಯಗಳನ್ನು ಒಕ್ಕಲೆಬ್ಬಿಸಿ ಇಡೀ ಅರಣ್ಯವನ್ನು ಬಂಡವಾಳಶಾಹಿಗಳು ಮತ್ತು ಭೂಹಿಡುವಳಿದಾರರ ಅಸ್ತಿಯಾಗುವಂತೆ ಕಾನೂನುಗಳನ್ನು ರೂಪಿಸಿ ಪಶ್ಚಿಮ ಘಟ್ಟದ ನೈಸರ್ಗಿಕ ಸಂಪತ್ತನ್ನು ಪರೋಕ್ಷವಾಗಿ ದೋಚುವ ವಿಧಾನಗಳೆಲ್ಲವು ಗೌಡಾಲು ಸಮುದಾಯವನ್ನು ಅತಂತ್ರಸ್ಥಿತಿಗೆ ತೆಗೆದುಕೊಂಡು ಹೋಗಿದೆ. ಆದ್ದರಿಂದ ಈ ಸಮುದಾಯ ಇಂದು ಹಲವು ಬಗೆಯಲ್ಲಿ ಸಮಸ್ಯೆಯ ಸುಳಿಗೆ ತನಗೆ ಅರಿವಿಲ್ಲದೆ ಸಿಕ್ಕಿಹಾಕಿಕೊಂಡಿರುವುದು ಕ್ಷೇತ್ರಕಾರ್ಯದಲ್ಲಿ ಗಮನಕ್ಕೆ ಬಂದ ಮಾಹಿತಿಯಾಗಿದೆ. ಮಲೆನಾಡಿನಲ್ಲಿ ಯಾವುದೇ ಪ್ರಾಥಮಿಕ ಸೌಲಭ್ಯಗಳಿಲ್ಲದೆ ಬದುಕುತ್ತಿರುವ ಗೌಡಾಲು ಸಮುದಾಯಕ್ಕೆ ಮಾವೋವಾದಿ ಹೋರಾಟ, ಚಿಕ್ಕಮಗಳೂರು ಮತ್ತು ಇತರೆ ಜಿಲ್ಲೆಗಳಲ್ಲಿ ನೆಲೆಯೂರಿರುವುದು ಆತಂಕವನ್ನು ಉಂಟುಮಾಡಿದೆ.

ಚಿಕ್ಕಮಗಳೂರು ಜಿಲ್ಲೆ ಮಲೆನಾಡಿನ ದಟ್ಟ ಕಾಡನ್ನು ಹಾಗೂ ಬೆಲೆಬಾಳುವ ಸಂಪತ್ತನ್ನು ಹೊಂದಿರುವ ಜಿಲ್ಲೆಯಾದ್ದರಿಂದ ಇಲ್ಲಿ ಬಂಡವಾಳಶಾಹಿಗಳು ಮತ್ತು ಭೂಹಿಡುವಳಿದಾರರು ತಮ್ಮ ಬದುಕಿಗಾಗಿ ಕಾಡಿನಲ್ಲಿಯೇ ಕಾಫಿ ಎಸ್ಟೇಟ್‌ಗಳನ್ನು ರೂಪಿಸಿಕೊಂಡು ಗೌಡಾಲು ಸಮುದಾಯದ ಮುಗ್ಧ ಮನಸ್ಸುಗಳನ್ನು ತಮ್ಮ ದಿನನಿತ್ಯದ ಕೆಲಸಕ್ಕಾಗಿ ಕಡಿಮೆ ಸಂಭಾವನೆಯಲ್ಲಿ ಹೆಚ್ಚುವರಿ ದುಡಿಸಿಕೊಳ್ಳುತ್ತಿರುವುದು ಗಮನಾರ್ಹವಾಗಿದೆ. ಈ ಪರಿಣಾಮವಾಗಿ ಮಾರ್ಕ್ಸ್ ಅವರು ತಮ್ಮ ಬರಹದ ಉದ್ದಕ್ಕೂ ಹೇಳಿದ ಸೈದ್ಧಾಂತಿಕ ನುಡಿಗಳು ತಳಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವಂತಹ ಯಾವುದೇ ಅಧ್ಯಯನಕಾರರಿಗೆ ಮುಖ್ಯವಾಗುತ್ತವೆ.

ಗೌಡಾಲು ಸಮುದಾಯವು ರಾಷ್ಟ್ರೀಯ ಉದ್ಯಾನ ವಿರೋಧಿ ಸಮಿತಿಯಲ್ಲಿ ಗುರುತಿಸಿಕೊಂಡಿದೆ. ಪರಿಣಾಮವಾಗಿ ಅನೇಕ ಸವಾಲುಗಳನ್ನು ಕೂಡ ಎದುರಿಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಗಮನಕ್ಕೆ ಬಂದಿದೆ. ಸರ್ಕಾರ ಮತ್ತು ಮಾವೋವಾದಿ ಹೋರಾಟದ ಫಲವಾಗಿ ಗಿರಿಜನರು ಸಾವು ನೋವುಗಳಿಂದ ಮುಕ್ತರಾಗದೆ ಚಿಕ್ಕಮಗಳೂರಿನ ಮೆಣಸಿನಾಡ್ಕದ ಒಡೆಯರ ಮಠದಲ್ಲಿ ನಡೆದ ಎನ್‌ಕೌಂಟರ್‌ನಲ್ಲಿ ಅಮಾಯಕ ದಂಪತಿ ರಾಮೇಗೌಡ್ರು ಕಾವೇರಮ್ಮ ಬಲಿಯಾಗಿ ಅವರ ಇಬ್ಬರು ಮಕ್ಕಳು ಬಲಿಯಾದರೂ ಬಲಿಯಾದವರೆಲ್ಲರೂ ಗೌಡಾಲು ಸಮುದಾಯದ ನೊಂದ ಮನಸ್ಸುಗಳು ಎಂಬುದನ್ನು ಸಂಶೋಧನಾ ಸಂದರ್ಭದಲ್ಲಿ ಗಮನಿಸಲೇಬೇಕಾದ ಸಂಗತಿಯಾಗಿದೆ. ಇಲ್ಲಿರುವ ಬುಡಕಟ್ಟು ಸಮುದಾಯಗಳೆಲ್ಲವು ವಿಭಿನ್ನವಾದ ಸಮಸ್ಯೆಗಳಿಂದ ಬಳಲುತ್ತಿರುವುದರಿಂದ ಇಡೀ ಪಶ್ಚಿಮಘಟ್ಟದ ತಳಸಮುದಾಯಗಳು ನಿಲ್ಲಲು ನೆಲೆಯಿಲ್ಲದೆ ಬದುಕಲು ಬೇರೆ

ದಾರಿಯಿಲ್ಲದೆ ಭಯದ ಮತ್ತು ಆತಂಕದ ಪರಿಸ್ಥಿತಿಯಲ್ಲಿ ಜೀವನವನ್ನು ಮುಂದುವರಿಸಿಕೊಂಡು ದಿನಗಳನ್ನು ಕಳೆಯುತ್ತಿದ್ದಾರೆ.

ಚಿಕ್ಕಮಗಳೂರು ಜಿಲ್ಲೆಯು ಕರ್ನಾಟಕದಲ್ಲಿ ಸುದ್ದಿಯಲ್ಲಿರುವ ಜಿಲ್ಲೆಯಾದರೂ ಸಾಂಸ್ಕೃತಿಕ, ನೈಸರ್ಗಿಕ ಮತ್ತು ಗಿಡಮೂಲಿಕೆಗಳಿಂದಕೂಡಿದ ಶ್ರೀಮಂತ ಜಿಲ್ಲೆ ಎಂಬುದು ಮುಖ್ಯ. ಆದ್ದರಿಂದ ಇಂತಹ ಜಿಲ್ಲೆಯಲ್ಲಿರುವ ಬುಡಕಟ್ಟುಗಳು ಪದೇ ಪದೇ ಶೋಷಣೆಗೆ ಒಳಗಾಗುತ್ತಾ ಯಾರಾದರೂ ಅವರ ಹತ್ತಿರ ಹೋದರೆ ಅವರ ಬದುಕಿನ ಮಜಲುಗಳನ್ನು ಎಳೆ ಎಳೆಯಾಗಿ ಬಿಚ್ಚಿಡುತ್ತಾರೆ. ಈ ಪರಿಣಾಮವಾಗಿ ''ಡಾ.ಪ್ರಭಾಕರ ಅವರು ಬಂಡವಾಳಶಾಹಿ ವ್ಯವಸ್ಥೆಯು ಕಾಡಿನ ಮಕ್ಕಳಾಗಿರುವ ಬುಡಕಟ್ಟು ಸಮುದಾಯಗಳನ್ನು ಎಷ್ಟರ ಮಟ್ಟಿಗೆ ಶೋಷಣೆ ಮಾಡುತ್ತಾ ಬಂದಿದೆ ಎಂಬುದನ್ನು ತಮ್ಮ ಬರವಣಿಗೆಗಳಲ್ಲಿ ಹೇಳುತ್ತಿರುವುದನ್ನು ಕ್ಷೇತ್ರಕಾರ್ಯದ ಮಾಹಿತಿಗೆ ಹೋಲಿಸಿ ನೋಡಿದಾಗ ವಸ್ತುನಿಷ್ಠವಾದ ಮಾಹಿತಿಯಾಗುತ್ತದೆ.''[೧]

ಗೌಡಾಲು ಸಮುದಾಯವು ತನ್ನ ಬದುಕಿನ ಉದ್ದಕ್ಕೂ ಹೋರಾಟವನ್ನು ಮೈಗೂಡಿಸಿಕೊಂಡು ಬಂದ ವಿಶಿಷ್ಟವಾದ ಬುಡಕಟ್ಟಾಗಿದೆ. ರಾಷ್ಟ್ರದ ಕಾಡಿನ ಸಂಸ್ಕೃತಿ ಈ ಪರಿಸರದ ಕಾಳಜಿಯನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡು ಸಮಸ್ಯೆಗಳಲ್ಲಿಯೇ ಬದುಕು ರೂಪಿಸಿಕೊಳ್ಳುತ್ತದೆ. ಇದಕ್ಕೆ ಉದಾಹರಣೆಯಾಗಿ ಕುದುರೆಮುಖ ಗಣಿಗಾರಿಕೆಯ ವಿರುದ್ಧ ನಡೆದ ಹೋರಾಟದಲ್ಲಿ ಅನೇಕ ಪ್ರತಿಭಟನೆಗಳನ್ನು ಮಾಡುತ್ತಾ ಬಂದಿರುವುದು ತಿಳಿಯಲಾಗಿದೆ. ಈ ಪರಿಣಾಮವಾಗಿ ಗೌಡಾಲು ಬುಡಕಟ್ಟು ಭಾವೈಕ್ಯತಾ ಅಥವಾ ಸೌಹಾರ್ದ ವೇದಿಕೆ, ರಾಷ್ಟ್ರೀಯ ಉದ್ಯಾನ ನಿರ್ಮಾಣದ ವಿರುದ್ಧ ಹೋರಾಟ, ಪರಿಸರ ಉಳಿಸಿ ಹೋರಾಟಗಳಂತಹವುಗಳನ್ನು ಮಾಡುತ್ತಾ ಸಾಮ್ರಾಜ್ಯಶಾಹಿಗೆ ನೀತಿಪಾಠವನ್ನು ಹೇಳಿಕೊಟ್ಟ ಸಮುದಾಯವಾಗಿದೆ.

ಇಡೀ ಚಿಕ್ಕಮಗಳೂರು ಜಿಲ್ಲೆಯ ಬುಡಕಟ್ಟು ಸಮುದಾಯಗಳು ಬಯಲು ಸೀಮೆಯಲ್ಲಿರುವ ಶ್ರೀಮಂತರಿಗೆ ಮತ್ತು ಜನಸಮಾನ್ಯರಿಗೆ ಅನುಕೂಲವಾಗುತ್ತದೆ ಎಂಬುದನ್ನು ಕುರಿತು ಕುದುರೆಮುಖ ಗಣಿಗಾರಿಕೆಯನ್ನು ನಿಲ್ಲಿಸಬೇಕು ಎಂದು ಹೋರಾಟ ಮಾಡಿ, ಪರಿಸರನಾಶವನ್ನು, ಪರಿಸರ ಮಾಲಿನ್ಯವನ್ನು ಹಾಗೂ ಜನಸಾಮಾನ್ಯರಿಗೆ ಆಗುವ ದುಷ್ಪರಿಣಾಮಗಳನ್ನು, ತುಂಗಭದ್ರಾ ನದಿಗಳಿಗೆ ಒದಗುವ ಅಪಾಯವನ್ನು ತಪ್ಪಿಸಿದ ಕೀರ್ತಿ ಬುಡಕಟ್ಟು ಸಮುದಾಯಗಳಿಗೆ ಸಲ್ಲುತ್ತದೆ. ಆದ್ದರಿಂದ ಇಲ್ಲಿ ನಾವು ಗ್ರಹಿಸಬೇಕಾಗಿರುವುದೇನೆಂದರೆ ಗೌಡಾಲು ಬುಡಕಟ್ಟು ವಿಭಿನ್ನವಾದ ಸಮಸ್ಯೆಗೆ ಬಲಿಯಾಗಿ ಇಂದಿನ ದಿನಮಾನದಲ್ಲಿ ತಮ್ಮ ಬದುಕನ್ನು ಸವಾಲಾಗಿ ಸ್ವೀಕರಿಸಿದೆ. ಶೃಂಗೇರಿ ತಾಲೂಕಿನಲ್ಲಿರವ ಅಡಿಕೇಸು ಮತ್ತು ಉಡುತ್ತಾಳ ಗ್ರಾಮದ ಗೌಡಾಲುಗಳು ರಾಜ್ಯದ ವಿವಿಧ ಸ್ಥಳಗಳಿಗೆ ಹೋಗಿ ಪರಿಸರ ಜಾಗೃತಿಯನ್ನು ಮೂಡಿಸಿ ಈ ದೇಶದ ನೆಲ, ಜಲ ಮತ್ತು ನೈಸರ್ಗಿಕ ಸಂಪತ್ತಿನ ಮಹತ್ವವನ್ನು ಕುರಿತ ಹೋರಾಟಗಳಲ್ಲಿ ಭಾಗವಹಿಸಿರುವುದು ಕ್ಷೇತ್ರಕಾರ್ಯದಲ್ಲಿ ತಿಳುವಳಿಕೆಗೆ ಬಂದಿದೆ. ಈ ಹಿನ್ನೆಲೆಯನ್ನು ಹೊಂದಿರುವ ಈ ಬುಡಕಟ್ಟು ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತದೆ.

ಗೌಡಾಲು ಸಮುದಾಯವು ಭಾರತದ ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾಜದ ನಾಲ್ಕು ಮಜಲುಗಳ ಶ್ರೇಣೀಕರಣದಲ್ಲಿ ಸಾಗಿಬಂದ ಬುಡಕಟ್ಟಾಗಿದೆ. ಪ್ರಾಚೀನ ಕಾಲದಲ್ಲಿ ತಳಮಟ್ಟದ ಸಮುದಾಯಗಳು

ಪ್ರಭುತ್ವದ ಸೆರೆಯಲ್ಲಿ ಸಿಕ್ಕಿಹಾಕಿಕೊಂಡು ಪರಂಪರಾಗತವಾಗಿ ಅನುಭವಿಸಿದ ದುಃಖ ದುಮ್ಮಾನಗಳನ್ನು ಮನಸ್ಸಿನಲ್ಲಿಯೇ ಬಚ್ಚಿಟ್ಟುಕೊಂಡಂತೆ ಗೌಡಾಲುಗಳು ಅನುಭವಿಸುತ್ತಿರುವುದು ತಿಳಿಯಲಾಗಿದೆ. ಈ ಪರಿಣಾಮವಾಗಿ ಬುಡಕಟ್ಟು ಸಮುದಾಯಗಳು, ನೆಲ ಕಾಡು ಮತ್ತು ಸುತ್ತಲಿನ ಪ್ರಾಕೃತಿಕ ಪರಿಸರದ ಮೇಲೆ ಆಸಕ್ತಿಯನ್ನು ಇಟ್ಟುಕೊಂಡು ನೈಸರ್ಗಿಕ ಸಂಪತ್ತನ್ನು ಕಾಪಾಡಿಕೊಂಡು ಬಂದಿದ್ದರೂ ಈ ದೇಶದ ಬಂಡವಾಳಶಾಹಿ ನೀತಿಯು, ಇವರ ಬದುಕಿನ ದಾರಿಯನ್ನು ದಿಕ್ಕು ತಪ್ಪಿಸಿರುವುದು ಇಲ್ಲಿ ಕಂಡುಬರುತ್ತದೆ.

ಬುಡಕಟ್ಟು ಸಮುದಾಯಗಳು ತಮ್ಮ ಬದುಕಿಗಾಗಿ ಹಾಗೂ ಸಮಾಜದ ಶ್ರೇಯಸ್ಸಿಗಾಗಿ ಹೋರಾಟ ಮಾಡಿರುವುದು ಹೊಸದೇನಲ್ಲ. ಚರಿತ್ರೆಯ ಪುಟಗಳನ್ನು ತೆರೆದು ನೋಡಿದರೆ ಉಳಿಯುವಿಕೆಗಾಗಿ ಕೆಳಸ್ತರದ ಸಮುದಾಯಗಳು ಪ್ರಭುತ್ವದ ವಿರುದ್ಧ ಹೋರಾಟ ಮಾಡುತ್ತಲೇ ಬಂದಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ಗೌಡಾಲುಗಳು ಪರಿಸರಕ್ಕಾಗಿ ಮತ್ತು ರಾಜ್ಯದ ಶ್ರೀಮಂತ ನೈಸರ್ಗಿಕ ವನ್ಯಸಂಪತ್ತಿಗಾಗಿ ತಮ್ಮ ತನು ಮನಗಳನ್ನು ಅರ್ಪಿಸಿರುವುದು ತಿಳಿದುಬರುತ್ತದೆ.

ಒಂದು ಕಾಲದಲ್ಲಿ ಬುಡಕಟ್ಟು ಸಮುದಾಯಗಳು ಪುರೋಹಿತಶಾಹಿಯ ಕೈಗೊಂಬೆಯಾಗಿ ತಾವು ಆರಾಧಿಸುತ್ತಿದ್ದ ದೇವತೆ, ದೇವರು ಮತ್ತು ಕಾಡುಗಳೆಲ್ಲವನ್ನು ಬಿಟ್ಟುಕೊಟ್ಟಂತೆ ಇಲ್ಲಿ ಗೌಡಾಲು ಬುಡಕಟ್ಟು ಕೂಡ ಸರ್ಕಾರಕ್ಕೆ ಮತ್ತು ಪ್ರಭುತ್ವಕ್ಕೆ ತಮ್ಮ ನೆಲ ಜಲ, ಹಾಗೂ ದೈವಾರಾಧನೆ, ಭೂತಾರಾಧನೆಗಳೆಲ್ಲವನ್ನು ಅನಿವಾರ್ಯವಾಗಿ ಬಿಟ್ಟುಕೊಡಬೇಕಾದ ಪರಿಸ್ಥಿತಿ ಸೃಷ್ಟಿಯಾಗಿದೆ. ಇದರಿಂದಾಗಿ ಗೌಡಾಲುಗಳ ವರ್ತಮಾನದ ಬದುಕು ದುಸ್ತರವಾಗಿದೆ.

ಕುದುರೆಮುಖ ರಾಷ್ಟ್ರೀಯ ಉದ್ಯಾನ ಸುಮಾರು ೧,೬೨,೦೦೦ ಎಕರೆ ಪ್ರದೇಶವನ್ನು ಒಳಗೊಂಡಿದೆ. ಈ ಪ್ರದೇಶದಲ್ಲಿ ವಾಸಿಸುತ್ತಿರುವ ಗೌಡಾಲುಗಳಿಗೆ ನೋಟಿಸ್ ಕೊಟ್ಟು ಅವರನ್ನೆಲ್ಲ ಇಲ್ಲಿಂದ ಎತ್ತಂಗಡಿ ಮಾಡಲು ಸರ್ಕಾರ ಹೊರಟಿರುವುದು ದುರಂತವೇ ಸರಿ. ಕಾಡನ್ನೇ ನಂಬಿಕೊಂಡು ಜೀವಿಸುವ ಬುಡಕಟ್ಟು ಸಮುದಾಯಗಳು ೧೦೦ಕ್ಕೆ ೯೦ರಷ್ಟು ಜನಸಂಖ್ಯೆಯನ್ನು ಹೊಂದಿದವರಾಗಿದ್ದಾರೆ. ತುಂಡು ತುಂಡು ಭೂಮಿಯನ್ನು ಹೊಂದಿರುವ ಗೌಡಾಲು ಸಮುದಾಯವು ತಮ್ಮ ಬದುಕಿಗೆ ಕಾಡಿನ ಆಶ್ರಯ ಪಡೆದಿದೆ. ಆದರೆ ಬುಡಕಟ್ಟುಗಳನೆಲ್ಲ ಸರ್ಕಾರ ಕೂಡಲೇ ಅರಣ್ಯದಿಂದ ಬೇರೆಡೆಗೆ ಹೋಗುವಂತೆ ತಾಕೀತು ಮಾಡಿದರೆ, ತಳಮಟ್ಟದ ಪಾರಂಪರಿಕ ಬದುಕಿನಲ್ಲಿ ಜೀವನ ಕಳೆಯುತ್ತಿರುವ ಬುಡಕಟ್ಟುಗಳ ಗತಿಯೇನು ಎಂಬುದನ್ನು ಅಧ್ಯಯನ ದೃಷ್ಟಿಯಿಂದ ಚರ್ಚಿಸಬೇಕಾಗಿದೆ. ಏಕೆಂದರೆ ಪ್ರಪಂಚದ ಯಾವುದೇ ರಾಷ್ಟ್ರೀಯ ಉದ್ಯಾನವನದಲ್ಲೂ ಈ ರೀತಿಯ ವಾತಾವರಣವಿದ್ದು ಇಲ್ಲಿ ವಾಸಿಸುವ ಸಮುದಾಯಗಳಿಗೆ ನ್ಯಾಯಬದ್ಧವಾದ ಸಾಮಾಜಿಕ ಹಾಗೂ ಆರ್ಥಿಕ ಪರಿಹಾರ ಹಾಗೂ ಪುನರ್ವಸತಿ ಸೌಲಭ್ಯಗಳು ದೊರೆತ ಉದಾಹರಣೆಗಳಿಲ್ಲ. ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯ ವಿಷಯಕ್ಕೆ ಬಂದಾಗ ಬುಡಕಟ್ಟುಗಳನ್ನು ಎತ್ತಂಗಡಿ ಮಾಡಿದ ಮೇಲೆ ಅವರ ಪರಿಸ್ಥಿತಿ ಶೋಚನೀಯವಾಗಿರುತ್ತದೆ ಎಂಬುದು ಮಾತ್ರ ಸತ್ಯ ಸಂಗತಿ.

ವರ್ತಮಾನದಲ್ಲಿ ಗೌಡಾಲು ಸಮುದಾಯಕ್ಕೆ ರಾಷ್ಟ್ರೀಯ ಉದ್ಯಾನವನ ಒಂದು ಸವಾಲಾಗಿದೆ. ಈ ಹಿನ್ನೆಲೆಯಿಂದ ಬುಡಕಟ್ಟು ಸಮುದಾಯವನ್ನು ಅವಲೋಕಿಸುತ್ತಾ ಹೊರಟರೆ ಕುದುರೆಮುಖ ರಾಷ್ಟ್ರೀಯ ಉದ್ಯಾನ

ವ್ಯಾಪ್ತಿಯಲ್ಲಿ ಬರುವ ಗಿರಿಜನ ಹಾಗೂ ರೈತರ ಪರವಾಗಿ ಅನೇಕ ಸಂಘಟನೆಗಳು ದನಿ ಎತ್ತಿರುವುದು ಗೋಚರಿಸುತ್ತದೆ. ಆದ್ದರಿಂದ ಯಾವುದೇ ಅಧ್ಯಯನಕಾರ ಗಮನಿಸಲೇಬೇಕಾದುದೇನೆಂದರೆ, ''ಇಲ್ಲಿ ಬಂಡವಾಳಶಾಹಿಯೂ ತನ್ನ ಒಡೆತನವನ್ನು ಪರೋಕ್ಷವಾಗಿ ಬೀರುತ್ತಿದೆ. ಅಂದರೆ ರಾಷ್ಟ್ರೀಯ ಉದ್ಯಾನವನದ ಹೆಸರಿನಲ್ಲಿ ಪಂಚತಾರಾ ಹೋಟೆಲ್ ಹಾಗೂ ರೆಸಾರ್ಟ್‌ಗಳನ್ನು ವ್ಯವಸ್ಥೆ ಮಾಡಿ ಪ್ರವಾಸಿಗರನ್ನು ಆಕರ್ಷಿಸಿ ಅದರಿಂದ ವಿದೇಶಿ ವಿನಿಮಯ ಪಡೆದು ಲಾಭ ಗಳಿಸುವ ಬಹುರಾಷ್ಟ್ರೀಯ ಕಂಪನಿಗಳೇ ಹೊರತು ಶತ ಶತಮಾನಗಳಿಂದ ಕಾಡನ್ನು ನಂಬಿಕೊಂಡು ಬಂದಿರುವ ಬುಡಕಟ್ಟು ಸಮುದಾಯಗಳು ಅಲ್ಲ ಎಂಬ ಮಾತು ನಿಜವಾಗಿದೆ. ಸರ್ಕಾರ, ಅರಣ್ಯ ಇಲಾಖೆಯ ಅಧಿಕಾರಿಗಳು, ರಾಜಕಾರಣಿಗಳ ಭ್ರಷ್ಟತೆ ಹಾಗೂ ಅನೈತಿಕ ವ್ಯವಹಾರಗಳಿಂದ ಅರಣ್ಯ ನಾಶವಾಗುತ್ತಿದೆಯೇ ವಿನಾ ಬುಡಕಟ್ಟು ಸಮುದಾಯಗಳಿಂದಲ್ಲ. ಆದ್ದರಿಂದ ಕಾಡನ್ನು ರಕ್ಷಿಸುತ್ತಾ ಅರಣ್ಯೋತ್ಪನ್ನಗಳಿಂದ ಜೀವನ ಮಾಡಿ ಅರಣ್ಯದಲ್ಲಿರುವ ಆಯುರ್ವೇದಕ್ಕೆ ಸಂಬಂಧಿಸಿದ ಪ್ರತಿಯೊಂದು ಗಿಡದ ಹೆಸರನ್ನು ಹೇಳುವಾಗ ಹಾಗೂ ಅಧಿಕಾರಿಗಳಿಗಿಂತ ಹೆಚ್ಚಾಗಿ ತಮ್ಮ ಬದುಕಿನ ದೇವತೆಯೆಂದು ಕಾಡನ್ನು ಉಳಿಸಿ ಬೆಳೆಸಿಕೊಂಡು ಬಂದಿರುವ ಬುಡಕಟ್ಟುಗಳಿರುವಾಗ ರಾಷ್ಟ್ರೀಯ ಉದ್ಯಾನ ಏಕೆ ಬೇಕು ಎಂಬುದನ್ನು ಕುರಿತು ಚರ್ಚಿಸಬೇಕಾದ ಅನಿವಾರ್ಯತೆ ಇದೆ.''[೨]

ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಬುಡಕಟ್ಟು ಸಮುದಾಯಗಳ ಬದುಕನ್ನು ಸರ್ಕಾರ ಮತ್ತು ಪರೋಕ್ಷ ಬಂಡವಾಳಶಾಹಿ ನೀತಿಯು ಕಸಿದುಕೊಳ್ಳುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳುವಳಿಕೆಗೆ ಬಂದಿದೆ. ಈ ಹಿನ್ನೆಲೆಯನ್ನು ಗಮನಿಸಿದರೆ ಬುಡಕಟ್ಟು ಸಮುದಾಯಗಳು ಅವರಾಗಿಯೇ ಸಮಾಜದ ಮುಖ್ಯವಾಹಿನಿಗೆ ಬರುವವರೆಗೆ ಕಾಯಬೇಕು ಎಂಬ ನೆಹರು ಅವರ ಮಾತುಗಳನ್ನು ಯಾವುದೇ ಅಧ್ಯಯನಕಾರ ಮರೆಯುವಂತಿಲ್ಲ ಎಂಬುದನ್ನು ಗಮನಿಸಬೇಕಾಗಿದೆ. ಆದರೆ ಸ್ವಾತಂತ್ರ್ಯ ಬಂದು ೬೩ ವರ್ಷ ಕಳೆದರು ಈ ಜನರ ಬದುಕು ಮಾತ್ರ ಇನ್ನೂ ಅತಂತ್ರವಾಗಿರುವುದು ನಮ್ಮ ಸರ್ಕಾರಗಳ ವೈಫಲ್ಯವಾಗಿದೆ.

ದಟ್ಟ ಕಾಡಿನ ನಟ್ಟನಡುವೆ ಬದುಕುತ್ತಿರುವ ಗೌಡಾಲುಗಳು ಇಲ್ಲಿ ದೊರೆಯುವ ಕಿರು ಅರಣ್ಯ ಉತ್ಪನ್ನಗಳನ್ನು ಗಿಡಮೂಲಿಕೆಗಳನ್ನು ಸಂಗ್ರಹಿಸಿ ಮಾರಾಟ ಮಾಡಿ ಬಂದ ಹಣದಿಂದ ತಮ್ಮ ಬದುಕನ್ನು ರೂಪಿಸಿಕೊಳ್ಳುತ್ತಿರುವುದಲ್ಲದೆ ಕೂಲಿ ಕುಂಬಳ ಮಾಡಿ ಬದುಕು ಸಾಗಿಸುವವರಾಗಿದ್ದಾರೆ. ಗೌಡಾಲುಗಳು ವಾಸಿಸುವ ಹಳ್ಳಿಗಳಿಗೆ ಯಾವುದೇ ರೀತಿಯ ಪ್ರಾಥಮಿಕ ಸೌಲಭ್ಯಗಳು ದೊರೆಯದೆ ಇರುವುದು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಯಿತು. ೨೧ನೇ ಶತಮಾನದಲ್ಲಿ ನಾವೆಲ್ಲರೂ ನಾಡಿನಲ್ಲಿ ವಿಲಾಸಿ ಜೀವನ ಮಾಡುತ್ತಿರುವಾಗ ಕಾಡಿನಲ್ಲಿ ಯಾರಿಗೂ ಗೋಚರಿಸದೆ ಅವರದೇ ಆದ ಸಂಪ್ರದಾಯಗಳನ್ನು ತಮ್ಮಲ್ಲಿ ರೂಡಿಸಿಕೊಂಡು ರಸ್ತೆ, ಶಾಲೆ, ಆಸ್ಪತ್ರೆ, ಕರೆಂಟು, ಫೋನು ಮುಂತಾದ ಯಾವುದೇ ನಾಗರಿಕ ಸೌಲಭ್ಯಗಳಿಲ್ಲದೆ ಪ್ರತಿಭಟಿಸದೇ ಮೌನವಾಗಿ ಬದುಕುತ್ತಿದ್ದಾರೆ. ಅಧ್ಯಯನ ದೃಷ್ಟಿಯಿಂದ ಗಮನಿಸ ಬೇಕಾದುದು ಚಿಕ್ಕಮಗಳೂರು ಜಿಲ್ಲೆಯಲ್ಲಿ ಒಟ್ಟು ೧೮ ಆಶ್ರಮ ಶಾಲೆಗಳಿದ್ದರೂ ಅವು ಅನಾಥಾಲಯಗಳಂತೆ ಶೋಚನೀಯ ಸ್ಥಿತಿಯಲ್ಲಿವೆ. ಇನ್ನು ಮುಂಡಗಾರು, ಉಡಗುಂದ, ಗುರಿಗೆ ಮುಂತಾದ ಕಡೆ ಸರ್ಕಾರಿ ಶಾಲೆಗಳಿದ್ದರೂ ವ್ಯವಸ್ಥಿತವಾಗಿ ನಡೆಯುತ್ತಿಲ್ಲ. ಖಾಯಂ ಶಿಕ್ಷಕರಿಲ್ಲದಿದ್ದರೂ ಗೈರು ಹಾಜರಿ ಇದೆ. ಆದ್ದರಿಂದ ಗೌಡಾಲು ಸಮುದಾಯಕ್ಕೆ ಪ್ರಾಥಮಿಕ ಸೌಲಭ್ಯಗಳನ್ನು ಪಡೆಯುವುದು ಸವಾಲಾಗಿದೆ.

ಗೌಡಾಲುಗಳು ಮಳೆಗಾಲದಲ್ಲಿ ಬದುಕುವ ಪರಿಯನ್ನು ನೆನಸಿಕೊಂಡರೆ ರೋಮಾಂಚನವಾಗುತ್ತದೆ. ಮಳೆಗಾಲದಲ್ಲಿ ಹೊಳೆಗಳನ್ನು ದಾಟಲಾರದೆ, ಇಂಬಳಗಳ ಕಾಟವನ್ನು ತಾಳಲಾರದೆ ರೋಗರುಜಿನಗಳಿಗೆ ಆಸ್ಪತ್ರೆಗಳಿಲ್ಲದೆ, ಕೃಷಿಗೆ ಸುಧಾರಿಸಿದ ತರಬೇತಿ ಸೌಲಭ್ಯಗಳಿಲ್ಲದೆ ಹೇಗೋ ಕಾಡನ್ನೇ ನಂಬಿ ಶತಮಾನಗಳಿಂದ ಜೀವಿಸುತ್ತಿರುವ ಇವರಿಗೆ ಕುದುರೆಮುಖ ರಾಷ್ಟ್ರೀಯ ಉದ್ಯಾನ ಯೋಜನೆ ಎಂಬುದೊಂದು ಮಹಾ ವಿಪತ್ತು ಬಂದೊದಗಿದೆ. ಆದ್ದರಿಂದ ''ಗೌಡಾಲುಗಳಿಗೆ ಇದು ಕೂಡ ಒಂದು ಸವಾಲಾಗಿದೆ. ಪರಿಣಾಮವಾಗಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಗೌಡಾಲುಗಳು ಆದಿವಾಸಿ ಗಿರಿಜನರು ಬದುಕುವ ಹಕ್ಕನ್ನು ಮಾನ್ಯ ಮಾಡುವಂತೆ ಕೋರಿ ಚಿಕ್ಕಮಗಳೂರು ಜಿಲ್ಲಾ ಆದಿವಾಸಿ ಗಿರಿಜನ ಹಿತರಕ್ಷಣಾ ಸಮಿತಿಗಳನ್ನು ರಚನೆ ಮಾಡಿಕೊಂಡು ಹಲವಾರು ಬಾರಿ ಸರ್ಕಾರಕ್ಕೆ ಮನವಿ ಪತ್ರಗಳನ್ನು ಕೊಡುವುದರ ಮೂಲಕ ತಮ್ಮ ಅಳಲನ್ನು ತೋಡಿಕೊಂಡಿದ್ದಾರೆ. ಆದರೆ ಅರಣ್ಯ ಇಲಾಖೆಯು ಗೌಡಾಲುಗಳ ಮೇಲೆ ಸಣ್ಣ ಪುಟ್ಟ ವಿಚಾರಗಳಿಗೆಲ್ಲ ಕೇಸು ದಾಖಲೆ ಮಾಡುತ್ತಾ ದೌರ್ಜನ್ಯ ಮಾಡುತ್ತಿದೆ. ಗೌಡಾಲುಗಳಲ್ಲದೆ ಇತರೆ ಗಿರಿಜನರು ತಾವಾಗಿಯೇ ಕಾಡಿನಿಂದ ಹೊರಗೆ ಹೋಗಲಿ ಎಂದು ಸರ್ಕಾರದ ಎಲ್ಲಾ ಇಲಾಖೆಗಳವರೂ ಯೋಜಿತ ಸಂಚು ನಡೆಸುತ್ತಿರುವುದು ದುರಂತವೇ ಸರಿ.''[೩]

ಅರಣ್ಯದ ನಾಶಕ್ಕೆ ಬುಡಕಟ್ಟುಗಳು ಕಾರಣವಲ್ಲ. ಲೂಟಿಕೋರ ನಾಗರಿಕ ಶ್ರೀಮಂತ ವರ್ಗ ಹಾಗೂ ಅವರಿಗೆ ಶಾಮೀಲಾಗುವ ಅರಣ್ಯ ಇಲಾಖೆಯ ನೌಕರರು ಎಂಬುದು ಸಾರ್ವಜನಿಕರಿಗೆ ಹಾಗೂ ಸರ್ಕಾರಕ್ಕೆ ಮನವರಿಕೆಯಾಗಬೇಕಾಗಿದೆ. ಅಲ್ಲದೆ ಅಸಹಾಯಕ ಜನರನ್ನು ಇದುವರೆಗೆ ಭೂಮಾಲೀಕರು ಜೀತದಾಳುಗಳನ್ನಾಗಿ ದುಡಿಸಿಕೊಂಡು ಬಂದಿರುವುದರಿಂದ ಗೌಡಾಲುಗಳಿಗೆ ಭೂಮಾಲೀಕರನ್ನು ಪ್ರತಿಭಟಿಸುವುದು ಸವಾಲಾಗಿದೆ. ಆದರೆ ಕರ್ನಾಟಕದಲ್ಲಿ ದೇವರಾಜ ಅರಸರು ತಂದ ಭೂ ಸುಧಾರಣಾ ಶಾಸನ, ಜೀತಪದ್ಧತಿ ನಿಷೇಧ ಮುಂತಾದ ಪ್ರಗತಿಪರ ಶಾಸನಗಳ ಪರಿಣಾಮವಾಗಿ ಇಂದು ಬುಡಕಟ್ಟು ಸಮುದಾಯಗಳಲ್ಲಿ ಕೆಲವರಾದರೂ ತುಂಡು ತುಂಡು ಭೂಮಿಯನ್ನು ಹೊಂದಿದವರಾಗಿದ್ದಾರೆ. ಆದ್ದರಿಂದ ಗೌಡಾಲುಗಳ ಬದುಕು ಸವಾಲಿನ ಪ್ರಶ್ನೆಯಾಗಿದೆ.

ಭಾರತ ಸರ್ಕಾರವು ಅಂತಾರಾಷ್ಟ್ರೀಯ ಶೃಂಗಸಭೆಯ ನಿರ್ಣಯಕ್ಕೆ ಬದ್ಧರಾಗಿ ಬುಡಕಟ್ಟು ಸಮುದಾಯಗಳ ಹೆಸರಿನಲ್ಲಿ ಕೋಟ್ಯನುಕೋಟಿ ಹಣವನ್ನು ಬಿಡುಗಡೆ ಮಾಡುತ್ತದೆ. ಆದರೆ ಅದರಲ್ಲಿ ಯಾವುದೇ ಜನರು ನಾಗರಿಕ ಬದುಕು ಪುನರ್ವಸತಿಗೊಂಡಿರುವುದು ಕಡಿಮೆ ಪ್ರಮಾಣದಲ್ಲಿ ಎಂಬ ಮಾತು ಸತ್ಯವಾಗಿದೆ. ಆದರೆ ಸುಪ್ರೀಂಕೋರ್ಟ್‌ನ ಆದೇಶವನ್ನು ಮಾತ್ರ ಅರಣ್ಯ ಇಲಾಖೆಯು ಗಿರಿಜನರ ಮೇಲೆ ನಿಷ್ಠೆಯಿಂದ ಚಲಾಯಿಸುತ್ತಿರುವುದನ್ನು ಈ ದಿನಗಳಲ್ಲಿ ನೋಡಬಹುದು. ''ಇದಕ್ಕೆ ಸೂಕ್ತ ನಿದರ್ಶನವೆಂದರೆ ಮುತ್ತಂಗದ ಘಟನೆ ಹಾಗೂ ಕರ್ನಾಟಕದಲ್ಲಿ ಒತ್ತುವರಿ ಜಮೀನು ತೆರವು ಶಾಸನ ಅನ್ವಯ ಕಾರ್ಯಾಚರಣೆಯಿಂದ ದಾಂಡೇಲಿಯಿಂದ ಹಿಡಿದು ನಾಗರಹೊಳೆಯವರೆಗೆ ಪಶ್ಚಿಮಘಟ್ಟದಲ್ಲಿರುವ ಬುಡಕಟ್ಟು ಸಮುದಾಯಗಳು ನಿಜಕ್ಕೂ ಭಬಯಭೀತರಾಗಿರುವುದನ್ನು ಕ್ಷೇತ್ರಕಾರ್ಯದಲ್ಲಿ ಅವರ ಮನಸ್ಸಿನಿಂದ ಹೊರಬರುವ ದುಃಖದ ಮಾತುಗಳನ್ನು ಗ್ರಹಿಸಿದಾಗ ತಿಳಿಯುತ್ತದೆ.''[೪] ಈ ಪರಿಣಾಮ ಗೌಡಾಲುಗಳು ಸಹ ಈ ವ್ಯಾಪ್ತಿಯಲ್ಲಿ ಜೀವಿಸುವ ಬುಡಕಟ್ಟು ಸಮುದಾಯವಾಗಿರುವುದರಿಂದ, ವರ್ತಮಾನದಲ್ಲಿ ಬದುಕುವುದು ದುಸ್ತರವಾಗಿದೆ. ಈ ಹಿನ್ನೆಲೆಯಿಂದ

ಕೂಡಿರುವ ಬುಡಕಟ್ಟುಗಳಿಗೆ ಅವರ ಹಕ್ಕೊತ್ತಾಯದ ಪ್ರಕಾರ ಅವರನ್ನು ಇದ್ದಲ್ಲಿಯೇ ಉಳಿಸುವುದು ೧೯೮೦ರ ಸುಪ್ರೀಂಕೋರ್ಟ್ ಆದೇಶದಂತೆ ಒತ್ತುವರಿಗಳನ್ನು ಮಾನ್ಯ ಮಾಡಿ ಹಕ್ಕು ಪತ್ರಗಳನ್ನು ನೀಡಬೇಕಾಗಿದೆ. ಮುಂದೆ ಒತ್ತುವರಿಗಳು ಇತ್ಯಾದಿ ಆಗದಂತೆ ನಿರ್ಬಂಧಿಸಿದರೆ ಗೌಡಾಲುಗಳ ಜೊತೆಗೆ ಇತರೆ ಬುಡಕಟ್ಟು ಸಮುದಾಯಗಳ ಬದುಕಿಗೆ ರೂಪಕೊಟ್ಟಂತಾಗುತ್ತದೆ. ಇಲ್ಲಿ ಅರಣ್ಯ ಇಲಾಖೆಯವರು ಬುಡಕಟ್ಟುಗಳನ್ನು ಆಕ್ರಮಣಕಾರರು ಎಂದು ಭಾವಿಸದೇ ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡು ಕಾಡಿನ ರಕ್ಷಣೆಗೆ ಗೌಡಾಲುಗಳು ಸಹಕರಿಸುತ್ತಾರೆ ಎಂಬ ಭಾವನೆಯನ್ನು ಮೊದಲು ಮನವರಿಕೆ ಮಾಡಿಕೊಳ್ಳಬೇಕಾಗಿದೆ. ನಾಟ ಕಳ್ಳಸಾಗಾಣಿಕೆಯನ್ನು ತಡೆಯಲು, ಗಿಡಮೂಲಿಕೆಗಳನ್ನು ಪತ್ತೆ ಹಚ್ಚಲು ಬುಡಕಟ್ಟು ಸಮುದಾಯಗಳ ಪರಂಪರಾನುಗತವಾದ ಜ್ಞಾನವನ್ನು ಗುರುತಿಸಿ ಬುಡಕಟ್ಟುಗಳಲ್ಲಿರುವ ಸಸ್ಯ ಜಗತ್ತಿನ ಜ್ಞಾನಕ್ಕೆ ಗೌರವ ಕೊಡಬೇಕಾಗಿರುವುದರಿಂದ ಈ ರೀತಿಯ ಪರಿಪಾಟವನ್ನು ಸರ್ಕಾರದ ಅಧಿಕಾರಿಗಳು ತಿಳಿದುಕೊಂಡು ಇಡಿಯಾದ ಅಭಿವೃದ್ಧಿಯ ಬಗ್ಗೆ ಆಲೋಚಿಸಬೇಕಾದ ಅನಿವಾರ್ಯತೆಯಿದೆ. ಈ ಪ್ರದೇಶ ಹೆಸರುವಾಸಿಯಾಗಿರುವ ಸ್ಥಳವಾಗಿರುವುದರಿಂದ ಇಂದು ನಡೆಯುತ್ತಿರುವ ಪ್ರಗತಿಪರ ಹೋರಾಟವು ಸಮಸ್ಯೆಗಳಲ್ಲಿ ಬದುಕುವ ಗೌಡಾಲುಗಳನ್ನು ಬಲಿ ತೆಗೆದುಕೊಂಡಿದೆ ಎನ್ನುವುದಕ್ಕಿಂತ ಸರ್ಕಾರವು ನಕ್ಸಲ್ ಹೋರಾಟದ ಹೆಸರಿನಲ್ಲಿ ಗೌಡಾಲುಗಳ ಸಮುದಾಯದ ಸಾಮಾನ್ಯ ಹಾಗೂ ಮುಗ್ಧ ಮನಸ್ಸುಗಳನ್ನು ಹೊಂದಿರುವ ಜನರನ್ನು ಮಾನವೀಯತೆಯಿಂದ ನೋಡದೆ ನಿರ್ದಾಕ್ಷಿಣ್ಯವಾಗಿ ಹಾಡುಹಗಲೇ ಎನ್‌ಕೌಂಟರ್ ನೆಪದಲ್ಲಿ ಕೊಲೆಗಳನ್ನು ಮಾಡಿರುವುದು ದುರಂತವೇ ಸರಿ. ಆದ್ದರಿಂದ ಗೌಡಾಲು ಸಮುದಾಯವು ಅಧ್ಯಯನದ ದೃಷ್ಟಿಯಿಂದ ಇಂದು ಪ್ರಾಮುಖ್ಯತೆಯಿಂದ ಕೂಡಿದೆ.

ಗೌಡಾಲು ಸಮುದಾಯವು ಚಿಕ್ಕಮಗಳೂರು ಜಿಲ್ಲೆಯಲ್ಲಿ ತನ್ನ ಬದುಕನ್ನು ರೂಪಿಸಿಕೊಳ್ಳಲು ಹಾಗೂ ಸಮಾಜದಲ್ಲಿ ತನಗೆ ಮತ್ತು ಇತರರ ಸುಖಕ್ಕಾಗಿ ಅನೇಕ ಸಾಮಾಜಿಕ ಜಾಗೃತಿಯ ಹೋರಾಟಗಳನ್ನು ಮಾಡಿದೆ. ಅವುಗಳನ್ನು ಅಧ್ಯಯನ ದೃಷ್ಟಿಯಿಂದ ಇಲ್ಲಿ ಚರ್ಚಿಸುವುದು ಉಪಯುಕ್ತವಾಗಿದೆ.

ಭಾರತದಂತಹ ಬಡ ದೇಶಗಳಲ್ಲಿ ಜನಸಂಖ್ಯೆಯ ಬಹುಭಾಗ ಜೀವನಕ್ಕಾಗಿ ಭೂಮಿಯನ್ನು ಆಶ್ರಯಿಸಿದೆ. ಈ ಹಿನ್ನೆಲೆಯಲ್ಲಿ ಜಾತೀಯತೆ, ಮೌಢ್ಯತೆ, ಅನಕ್ಷರತೆ, ಊಳಿಗಮಾನ್ಯ ಪಂಜರದಲ್ಲಿ ಸಿಲುಕಿಕೊಂಡಿರುವ ಈ ಜನಗಳಲ್ಲಿ ಪ್ರತಿಭಟನೆಯ ಗುಣಗಳನ್ನು ಬಿತ್ತುವುದು ತುಂಬಾ ಕಷ್ಟದ ಕೆಲಸವೆಂದು ತಿಳಿಯಲಾಗಿದೆ. ಆದ್ದರಿಂದ ಆರ್ಥಿಕವಾಗಿ ತೀರಾ ದುರ್ಬಲರು ಜೀತಕ್ಕೆ ತಳ್ಳಲ್ಪಟ್ಟವರು ಸಾಲದ ಹೊರೆ ಹೊತ್ತವರು ಇಂತಹ ಸಮುದಾಯದಲ್ಲಿ ಹೋರಾಟದ ಮನೋಭಾವನೆ ಮೂಡಿಸುತ್ತಿಲ್ಲ.

''ಭೂಸುಧಾರಣೆಯು ವ್ಯಾಪಕವಾಗಿ ಅನುಷ್ಠಾನವಾಗದಿರುವುದರಿಂದ ಜನಸಂಖ್ಯೆಯ ಒಂದು ಮುಖ್ಯ ಭಾಗ ಬಡತನದ ರೇಖೆಯ ಕೆಳಗಿರುವುದರಿಂದ ಹಾಗೂ ಯಾವುದೇ ಪ್ರಗತಿಯ ಪ್ರಕ್ರಿಯೆಯಿಂದ ಹೊರಗಿರುವುದರಿಂದ ಜೀತಗಾರರು, ಕೊಳಚೆ ನಿವಾಸಿಗಳು, ಭೂಹೀನ ಬುಡಕಟ್ಟುಗಳು, ಅಸಂಘಟಿತ ಕಾರ್ಮಿಕರು, ದಲಿತರಿಂದ ಹೋರಾಟಗಳನ್ನು ನಿರೀಕ್ಷಿಸುವುದು ಕಷ್ಟಕರವಾಗಿದೆ. ಭಾರತದ ಸಾಮಾಜಿಕ ವ್ಯವಸ್ಥೆಯನ್ನು ನಾವು ಅವಲೋಕಿಸಿದರೆ ಸಾಮ್ರಾಜ್ಯಶಾಹಿಯ ಪ್ರಭುತ್ವ ತನ್ನದೇ ಆದ ಪ್ರಭಾವವನ್ನು ತಳ ಸಮುದಾಯಗಳ ಮೇಲೆ ಬೀರುತ್ತ ಬಂದಿದೆ

ಎಂಬುದು ಸತ್ಯ ಸಂಗತಿಯಾಗಿದೆ. ಆದ್ದರಿಂದ ಭಾರತದಲ್ಲಿ ೧೯ನೇ ಶತಮಾನದ ಮಧ್ಯಭಾಗದಿಂದ ಆಧುನಿಕ ಉದ್ಯಮಗಳು ತಲೆಯೆತ್ತಿದ್ದರಿಂದ ಅನೇಕ ಹೋರಾಟಗಳು ನಡೆಯಲು ನಾಂದಿಯಾಯಿತು.''

ಮಾನವ ಜೀವಿಯ ಉಗಮ ಯಾವಾಗ ಸೃಷ್ಟಿಯಾಯಿತೋ ಅಂದೇ ಬದುಕಿನ ಹೋರಾಟ ಪ್ರಾರಂಭವಾಯಿತು. ಆದ್ದರಿಂದ ಬದುಕಿಗಾಗಿ, ಪ್ರಭುತ್ವದ ಉಳಿವಿಗಾಗಿ, ಸಮಾಜದ ಹಿತಕ್ಕಾಗಿ, ರಾಷ್ಟ್ರಕ್ಕಾಗಿ, ಸಿದ್ಧಾಂತಕ್ಕಾಗಿ, ಬಂಡವಾಳಶಾಹಿಗಳ ಧೋರಣೆಗಳ ವಿರುದ್ಧ ಈ ರಾಷ್ಟ್ರದಲ್ಲಿ ಅನೇಕ ಹೋರಾಟಗಳು ನಡೆದಿರುವುದನ್ನು ನೋಡಬಹುದು. ಈ ಹಿನ್ನೆಲೆಯಲ್ಲಿ ಹೋರಾಟಗಾರರು ಎಂದ ತಕ್ಷಣ ನಮಗೆ ವಿವಿಧ ರೀತಿಯ ಆಲೋಚನೆಗಳು ಬರುತ್ತವೆ. ಆದ್ದರಿಂದ ಹೋರಾಟವೆಂದರೆ ಯಾವ ಹಿನ್ನೆಲೆಯಿಂದ ಕೂಡಿರುತ್ತದೆ. ದಂಗೆ, ಕ್ರಾಂತಿ, ಹೋರಾಟ, ಚಳುವಳಿಗಳ ಗ್ರಹಿಕೆ ಯಾವ ರೂಪದ್ದು ಎಂಬ ಚಿಂತನೆ ಪ್ರಾರಂಭವಾಗುತ್ತದೆ. ಹೀಗಾಗಿ ಭಾರತದ ಪ್ರಾಚೀನ ಕಾಲದಿಂದ ಪ್ರಸ್ತುತ ಕಾಲದವರೆಗೆ ನಡೆದಿರುವ ಹೋರಾಟಗಳನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸುವುದು ತುಂಬಾ ಉಪಯುಕ್ತವಾಗಿದೆ.

ಮೊದಲು ಬುಡಕಟ್ಟುಗಳ ಹೋರಾಟಗಳನ್ನು ಮೆಲುಕು ಹಾಕುವುದು ಮುಖ್ಯ. ಯಾವಾಗ ಕಾಡುಗಳಲ್ಲಿ ಆಹಾರ ಸಂಗ್ರಹಕ್ಕೆ, ಬೇಟೆಗೆ ಅಡೆತಡೆಗಳಾದವೋ ಅಂದಿನಿಂದ ಬುಡಕಟ್ಟುಗಳು ಸಮಸ್ಯೆಗೆ ಸಿಲುಕಿದವು. ಕಾಡಿನಲ್ಲಿ ಕುಮ್ರಿ ಬೇಸಾಯ ಪದ್ಧತಿಗೆ ತಡೆ ಉಂಟಾಯಿತು. ಅರಣ್ಯಗಳಲ್ಲಿ ಮರ ಕಡಿದು ಸಾಗಿಸಲು ಗುತ್ತಿಗೆದಾರರು ಬಂದು ಬುಡಕಟ್ಟುಗಳನ್ನು ವಂಚಿಸಿ ಸಾಲಗಾರರನ್ನಾಗಿ ಮಾಡಿ ಅವರ ಹೆಂಗಸರ ಮೇಲೆ ದೌರ್ಜನ್ಯಗಳನ್ನು ಮಾಡಿದರು. ಜೊತೆಗೆ ಕ್ರೈಸ್ತಮತ ಪ್ರಚಾರಕರು ಬಂದು ಪರಂಪರಾಗತವಾಗಿ ಬಂದ ದೇವರು ದೇವತೆಗಳನ್ನು ಅವಹೇಳನ ಮಾಡಿದರು. ಅಲ್ಲಿಯ ಜನರನ್ನು ಭೂಮಿಯಲ್ಲಿ ದುಡಿಯುವ ಜೀತಗಾರರನ್ನಾಗಿ ಮಾಡಿದರು.

ಬ್ರಿಟಿಷರ ಆಳ್ವಿಕೆಯಿಂದ ಹಿಡಿದು ಪ್ರಸ್ತುತ ಕಾಲದ ಬಂಡವಾಳಶಾಹಿ, ಭೂಮಾಲೀಕರ ರಾಜಕಾರಣಿಗಳ ಕೈಯಲ್ಲಿ ಸಿಕ್ಕಿ ಬುಡಕಟ್ಟು ಜನರು ಭೀಕರವಾದ ತುಳಿತಕ್ಕೆ ಒಳಗಾದರು. ಈ ದೇಶದ ಬುಡಕಟ್ಟು ಸಮುದಾಯಗಳು ಒಂದಲ್ಲ ಒಂದು ರೀತಿಯ ಸಮಸ್ಯೆಯ ಬದುಕಿಗೆ ಬಲಿಯಾಗಿ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆ ನಾಶವಾಗುತ್ತ ಬಂತು. ಈ ಹಿನ್ನೆಲೆಯಿಂದ ವಸಾಹತುಶಾಹಿಯ ಭೂಮಾಲೀಕರ ದೌರ್ಜನ್ಯ ಮನೋಭಾವನೆಯ ಸರ್ಕಾರದ ವಿರುದ್ಧ ಹೋರಾಟಗಳನ್ನು ಮಾಡಲು ಪ್ರಾರಂಭಿಸಿದರು.

ಭಾರತೀಯ ಬುಡಕಟ್ಟುಗಳಂತೆಯೇ ಪ್ರಪಂಚದ ಎಲ್ಲ ದೇಶಗಳ ಬುಡಕಟ್ಟುಗಳು ಪಾಶ್ಚಾತ್ಯ ವಾಣಿಜ್ಯ, ವಸಾಹತುಶಾಹಿಯ ದಾಳಿಯನ್ನು ಸಹಿಸದೆ ಹೋರಾಟಗಳನ್ನು ಮಾಡಿದ್ದಾರೆ. ಆದರೆ ಈ ಹೋರಾಟಗಳು ಯಾವಾಗಲೂ ನಡೆದಿರುವುದು ಜಮೀನ್ದಾರರು, ಸಾಹುಕಾರರು, ಗುತ್ತಿಗೆದಾರರು, ಶೋಷಕರ ವಿರುದ್ಧ ಎಂಬುದನ್ನು ನಾವು ಮರೆಯುವಂತಿಲ್ಲ.

''ಭಾರತದಲ್ಲಿ ಬುಡಕಟ್ಟುಗಳು ಮಾಡಿದ ಹೋರಾಟಗಳು ಸ್ವಾತಂತ್ರ್ಯ ಪೂರ್ವದಿಂದಲೇ ನಡೆದಿವೆ ಎಂಬುದಕ್ಕೆ ಇತಿಹಾಸದ ದಾಖಲೆಗಳಿವೆ. ಉದಾಹರಣೆಯಾಗಿ ೧೮೩೧ರ ಕೋಲರ ದಂಗೆ, ೧೮೫೫ರ ಸಂತಾಲರ ದಂಗೆ, ೧೮೯೯ರ ಮುಂಡರ ದಂಗೆ, ೧೯೨೨-೨೪ರ ಆಂಧ್ರದಲ್ಲಿ ರಂಪ ಚೋಡಾವರಂನ ದಂಗೆ, ೧೯೬೭ರ ಪಶ್ಚಿಮ

ಬಂಗಾಳದ ನಕ್ಸಲ್‌ಬಾರಿ, ಡಾರ್ಜಿಲಿಂಗ್ ಜಿಲ್ಲೆ ಬುಡಕಟ್ಟುಗಳ ದಂಗೆ, ೧೯೭೦ರ ಆಂಧ್ರದ ಕಡಪ ಜಿಲ್ಲೆಯ ನಲ್ಲಮಲೈ ವಾರ್ಲಿ ಬುಡಕಟ್ಟುಗಳ ದಂಗೆ. ಇಂಥ ಹೋರಾಟಗಳು ದೇಶದ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ನಡೆದವುಗಳಾಗಿರುವುದರಿಂದ ಕಾಲಾನುಕ್ರಮದಲ್ಲಿ ಬುಡಕಟ್ಟುಗಳ ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಗಾಗಿವೆ.

ಭಾರತದಲ್ಲಿ ಜಲ, ನೆಲ, ಪರಿಸರ ಕುರಿತು ಬುಡಕಟ್ಟುಗಳು ಹೋರಾಟ ಮಾಡಿರುವುದನ್ನು ತಿಳಿಯಲಾಗಿದೆ. ತುಂಗಾ ಮೂಲ ಉಳಿಸಿ ಚಳುವಳಿಯು ಗೌಡಾಲು ಬುಡಕಟ್ಟುಗಳ ಸಹಕಾರದೊಂದಿಗೆ ನಡೆದಿರುವುದನ್ನು ಸ್ಮರಿಸಬಹುದಾಗಿದೆ. ದಕ್ಷಿಣ ಭಾರತದ ಜನಜೀವನದ ಮೇಲೆ ಪಶ್ಚಿಮ ಘಟ್ಟಗಳು ಪ್ರಭಾವ ಬೀರಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಿಸಿದಂತೆ ಐವತ್ತು ಮಿಲಿಯ ವರ್ಷಗಳ ಇತಿಹಾಸವನ್ನು ಪಶ್ಚಿಮಘಟ್ಟಗಳು ಹೊಂದಿರುವುದನ್ನು ನೋಡಬಹುದು. ಸುಮಾರು ೧೦೦೦ ಕಿ.ಮೀ. ವಿಸ್ತೀರ್ಣದಷ್ಟು ಪಶ್ಚಿಮಘಟ್ಟ ಕರ್ನಾಟಕದಲ್ಲಿ ಹರಡಿದೆ.''[೬] ಆದ್ದರಿಂದ ಈ ಭಾಗದಲ್ಲಿ ಪರಿಸರ ಕುರಿತು ಹೋರಾಟಗಳಲ್ಲಿ ಕುದುರೆಮುಖ ಗಣಿಗಾರಿಕೆ ವಿರುದ್ಧ ನಡೆದ ಹೋರಾಟಗಳು ಮತ್ತು ಕುದುರೆಮುಖ ರಾಷ್ಟ್ರೀಯ ಉದ್ಯಾನ ನಿರ್ಮಾಣದ ವಿರುದ್ಧ ನಡೆಯುತ್ತಿರುವ ಚಳುವಳಿಗಳು ಬುಡಕಟ್ಟುಗಳ ಸ್ಥಿತಿಗತಿಯನ್ನು ಕುರಿತಾಗಿವೆ ಎಂಬುದನ್ನು ಯಾವುದೇ ಅಧ್ಯಯನಕಾರರು ಅರ್ಥ ಮಾಡಿಕೊಳ್ಳಬೇಕು. ಇಲ್ಲಿ ಸರ್ಕಾರದ ರಾಷ್ಟ್ರೀಯ ಉದ್ಯಾನವನದ ಯೋಜನೆಯು ಬುಡಕಟ್ಟು ಸಮುದಾಯಗಳಿಗೆ ನುಂಗಲಾರದ ತುತ್ತಾಗಿದೆ. ಈ ಹಿನ್ನೆಲೆಯಲ್ಲಿ ''ಕಾಡಿನಲ್ಲಿ ವಾಸಿಸುವ ಬುಡಕಟ್ಟುಗಳನ್ನು ಒಕ್ಕಲೆಬ್ಬಿಸುವ ಪ್ರಯತ್ನವನ್ನು ಸರ್ಕಾರ ಮಾಡುತ್ತಿದೆ ಎಂಬುದು ಯಾವುದೇ ಅಧ್ಯಯನಕಾರರಿಗೆ, ಮಾನವತಾವಾದಿಗಳಿಗೆ, ಪರಿಸರವಾದಿಗಳೆಂದು ಹೇಳಿಕೊಂಡು ನಗರದಲ್ಲಿ ವಿಲಾಸಿ ಜೀವನವನ್ನು ಮಾಡುವ ಚಳುವಳಿಗಾರರಿಗೆ, ಅರಣ್ಯ ಅಧಿಕಾರಿಗಳಿಗೆ, ಬುದ್ಧಿಜೀವಿಗಳಿಗೆ ಅರ್ಥವಾಗದೆ ಇರುವುದರಿಂದ ಸರ್ಕಾರ ಪಶ್ಚಿಮಘಟ್ಟದ ಸಂಪತ್ತನ್ನು ಬಂಡವಾಳವಾಗಿ ಮಾಡಿಕೊಂಡು ಈ ಭಾಗದಲ್ಲಿ ರೆಸಾರ್ಟ್‌ಗಳನ್ನು ಪ್ರಾರಂಭಿಸಿ ವಿದೇಶಿಯರನ್ನು ಆಹ್ವಾನಿಸಿ ಸರ್ಕಾರ ಲಾಭವನ್ನು ಮಾಡಿಕೊಂಡು, ಪಶ್ಚಿಮ ಘಟ್ಟವನ್ನು ವಿದೇಶಿಯರಿಗೆ ಮಾರಾಟ ಮಾಡುವುದರ ಮೂಲಕ ಬುಡಕಟ್ಟು ಸಮುದಾಯಗಳನ್ನು ಬೀದಿಪಾಲಾಗಿ ಮಾಡುವ ಪರೋಕ್ಷ ನೀತಿಯನ್ನು ಅನುಸರಿಸುತ್ತಿದೆ. ಆದ್ದರಿಂದ ಈ ಭಾಗದಲ್ಲಿ ಗಿರಿಜನರ ಹಿತಾಸಕ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಹೋರಾಟಗಳು ನಡೆಯುತ್ತಿವೆ.''[೭] ಈ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಗಿರಿಜನರ ಸಂಘಟನೆಗಳು ಪ್ರಾರಂಭವಾಗಿವೆ. ಅವುಗಳಲ್ಲಿ ಗಿರಿಜನ ಸಂಘ, ಗಿರಿಜನ ಹಿತರಕ್ಷಣ ಸಂಘ, ಗಿರಿಜನ ಹೋರಾಟ, ಕುದುರೆಮುಖ ರಾಷ್ಟ್ರೀಯ ಉದ್ಯಾನ ವಿರೋಧಿ ಒಕ್ಕೂಟ, ಮಹಿಳಾ ಜಾಗೃತಿ ಹೋರಾಟ ವೇದಿಕೆ, ಚಿಕ್ಕಮಗಳೂರು ಜಿಲ್ಲೆಯ ಗಿರಿಜನರ ಒಕ್ಕೂಟದ ಹೋರಾಟಗಳೆಲ್ಲವೂ ಈ ಜಿಲ್ಲೆಯ ಬುಡಕಟ್ಟುಗಳಾದ ಗೌಡಾಲು, ಮಲೆಕುಡಿಯರು, ನಾಯಕರು, ಮಲೇರು, ಹಸಲರು ಸೇರಿ ಪಶ್ಚಿಮಘಟ್ಟವನ್ನು ಉಳಿಸಿ ಎಂದು ಹೋರಾಟ ಮಾಡುತ್ತಾ ಇರುವುದನ್ನು ತಿಳಿಯಬಹುದು. ಈ ಹೋರಾಟಗಳೆಲ್ಲವು ಸರ್ಕಾರದ ನೀತಿ ಧೋರಣೆಗಳನ್ನು ಪರಿಶೀಲಿಸುವ ಹೋರಾಟಗಳಾಗಿವೆ ವಿನಾ ಬಂದೂಕನ್ನು ಹಿಡಿದು ಮಾಡುವ ಹೋರಾಟಗಳಲ್ಲವೆಂದು ಕ್ಷೇತ್ರಕಾರ್ಯದಲ್ಲಿ ಪಡೆದ ಮಾಹಿತಿಯು ತಿಳಿಸುತ್ತದೆ.

ಚಿಕ್ಕಮಗಳೂರು ಜಿಲ್ಲೆ ಮತ್ತು ಪಶ್ಚಿಮಘಟ್ಟದ ವ್ಯಾಪ್ತಿಯ ಒಳಗಡೆ ಬರುವ ಎಲ್ಲ ಜಿಲ್ಲೆಗಳಲ್ಲಿ ಸಂಪದ್ಭರಿತ ಸಸ್ಯರಾಶಿ ಇರುವುದನ್ನು ನೋಡಿದರೆ ದೇಶ ಮತ್ತು ರಾಜ್ಯಗಳ ವಾಣಿಜ್ಯ ಕೇಂದ್ರವಾಗಿ ಪಶ್ಚಿಮಘಟ್ಟ ಆಯುರ್ವೇದ ಸಸ್ಯಗಳಿಂದ ಶ್ರೀಮಂತವಾಗಿದೆ. ಈ ಭಾಗದಲ್ಲಿ ಯಾವುದೇ ಸಂಘಟನೆಗಳು ಸ್ವಾರ್ಥ ಮನೋಭಾವನೆಯಿಂದ ಕೂಡಿರದೇ ಸಮಾಜ ಮತ್ತು ಜನಪರ ಸಂಘಟನೆಗಳಾಗಿರುತ್ತವೆ.

ಪಶ್ಚಿಮಘಟ್ಟದಲ್ಲಿ ಬುಡಕಟ್ಟು ಸಮುದಾಯಗಳಿಂದ ನಡೆದ ಹೋರಾಟಗಳನ್ನು ಇತರರು ಮಾಡುತ್ತಿರುವುದು ಬುಡಕಟ್ಟು ಸಮುದಾಯಗಳ ಮೇಲೆ ಯಾವ ರೀತಿಯಲ್ಲಿ ಪ್ರಭಾವ ಬೀರಿವೆ ಎಂಬುದು ಇಲ್ಲಿ ಮುಖ್ಯ. ಈ ಹಿನ್ನೆಲೆಯಲ್ಲಿ ಇಡೀ ಪಶ್ಚಿಮ ಘಟ್ಟವನ್ನು ಅವಲೋಕಿಸಿದರೆ ನಕ್ಸಲರು ಎಂದು ಕರೆಸಿಕೊಳ್ಳುವ ಹೋರಾಟಗಾರರು ಕಾಡಿನೊಳಗೆ ಸೇರಿಕೊಂಡು ಬುಡಕಟ್ಟುಗಳಿಗೆ ಸಾಮಾಜಿಕ ನ್ಯಾಯವನ್ನು ದೊರೆಯುವಂತೆ ನಿಮ್ಮ ಜೊತೆಗೂಡಿ ಸಾಮಾಜಿಕ ಹೋರಾಟವನ್ನು ಮಾಡುತ್ತವೆ ಎಂದು ಹೇಳುತ್ತಾರೆ. ಬುಡಕಟ್ಟುಗಳ ಗುಡಿಸಲುಗಳಿಗೆ ಹೋಗಿ ಸಾಮಾಜಿಕ ಜಾಗೃತಿಯನ್ನು ಮೂಡಿಸುತ್ತೇವೆ ಎಂದು ಹೇಳುತ್ತಾ ನಮ್ಮ ಹೋರಾಟ ನಿಮಗಾಗಿ, ನೀವು ನಮಗೆ ಸಹಕಾರವನ್ನು ನೀಡಿ ಎನ್ನುತ್ತಾರೆ. ಬೆಟ್ಟ, ಸರೋವರ, ಮಳೆ, ಗಾಳಿಯನ್ನದೆ ಗಿರಿಜನರ ಹಿತಕ್ಕಾಗಿ ಹೋರಾಟ ಮಾಡಿ ವೀರ ಮರಣವನ್ನು ಹೊಂದುತ್ತಿದ್ದಾರೆ. ಇನ್ನೊಂದು ಕಡೆ ಬುಡಕಟ್ಟುಗಳಿಗೆ ಯಾವುದೇ ಸೌಲಭ್ಯಗಳನ್ನು ಕೊಡದೆ ಕಾಡುವಾಸಿಗಳನ್ನು ಕಾಡಿನಿಂದ ಎತ್ತಂಗಡಿ ಮಾಡಿ ಭೂಮಾಲೀಕರಿಗೆ ಆಶ್ರಯವನ್ನು ನೀಡಿ ಬಂಡವಾಳಶಾಹಿಗಳನ್ನು ಹುಟ್ಟುಹಾಕಿ ಇಡೀ ಪಶ್ಚಿಮ ಘಟ್ಟವನ್ನು ಗೊಂದಲದ ಮತ್ತು ಬಂಡವಾಳ ಶಾಹಿಗಳ ಪ್ರದೇಶವಾಗಿ ಮಾಡುತ್ತ, ಭಾರತ ಸರ್ಕಾರ ಮತ್ತು ಕರ್ನಾಟಕ ಸರ್ಕಾರಗಳೆರಡು ಸೇರಿ ರಕ್ಷಣಾ ಇಲಾಖೆಯವರನ್ನು ಕಾಡಿಗೆ ಕಳಿಸಿ ನಕ್ಸಲರನ್ನು ಮತ್ತು ಬುಡಕಟ್ಟು ಸಮುದಾಯದವರನ್ನು ದಮನ ಮಾಡುತ್ತಿವೆ.

ಈ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಅಮ್ಮಡ್ಲುವಿನಲ್ಲಿ ಗಿರಿಜನರನ್ನು ರಕ್ಷಣಾ ಇಲಾಖೆಯವರು ನಕಲಿ ಎನ್‌ಕೌಂಟರ್ ಮಾಡಿ ಕೊಲೆ ಮಾಡಿರುವ ಘಟನೆಯನ್ನು ನಾವು ನೆನಪಿಸಿಕೊಂಡರೆ ಆಶ್ಚರ್ಯವಾಗುತ್ತದೆ. ಆದ್ದರಿಂದ ಯಾವುದೇ ಸರ್ಕಾರದ ನೀತಿ ನಿಯಮಗಳು ಜನಸಾಮಾನ್ಯರ ಹಿತಕ್ಕಾಗಿ ಇರಬೇಕು ವಿನಾ ಸಾಮಾನ್ಯ ಜನರನ್ನು ಹಿಂಸೆ ಮಾಡುವಂತೆ ಇರಬಾರದು. ಈ ದೇಶದ ಬಂಡವಾಳಶಾಹಿಯ ನೀತಿ ನಿಲುವುಗಳು ಮತ್ತು ದೇಶದ ಅಭಿವೃದ್ಧಿಗಾಗಿ ರೂಪಿತವಾದ ಸರ್ಕಾರದ ನಿಯಮಗಳು ಸೇರಿಕೊಂಡು ಪಶ್ಚಿಮಘಟ್ಟದಲ್ಲಿ ಯಾವುದೇ ಸೌಲಭ್ಯಗಳನ್ನು ಕೇಳದೆ ತಮ್ಮ ಪಾಡಿಗೆ ತಾವು ಬದುಕನ್ನು ಮಾಡುತ್ತಿರುವ ಮುಗ್ಧರನ್ನು ಹಿಂಸೆ ಮಾಡುತ್ತಿರುವುದು ಎಷ್ಟರ ಮಟ್ಟಿಗೆ ಸರಿ ಎಂಬುದು ಇಲ್ಲಿ ಮುಖ್ಯವಾದ ಚರ್ಚೆಯಾಗಿದೆ.

ಯಾವುದೇ ಸರ್ಕಾರ ಆಡಳಿತ ಮಾಡುತ್ತಿದೆ ಎಂದರೆ ಕೂಲಿಕಾರರ, ಬುಡಕಟ್ಟುಗಳ ಮತ್ತು ತಳಸಮುದಾಯಗಳ ಸ್ಥಿತಿಗತಿಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡರೆ ಒಳ್ಳೆಯದು. ಸರ್ಕಾರದ ನಿಲುವು ಯಾವಾಗಲೂ ಆಲೋಚನೆಯಿಂದ ಕೂಡಿರಬೇಕು ಮತ್ತು ಪ್ರಜಾಪ್ರಭುತ್ವದ ಸಿದ್ಧಾಂತದ ಹಿನ್ನೆಲೆಯಲ್ಲಿರಬೇಕು ಹಾಗಾದಾಗ ಮಾತ್ರ ಸುವ್ಯವಸ್ಥಿತ ಸಮಾಜದ ನಿರ್ಮಾಣ ಸಾಧ್ಯವಾಗುತ್ತದೆ. ಆದರೆ ಸರ್ಕಾರಗಳು ಜಮೀನ್ದಾರರು ಮತ್ತು ಬಂಡವಾಳಶಾಹಿಗಳ ಪರವಾಗಿದ್ದು ಬುಡಕಟ್ಟು ಸಮುದಾಯಗಳಿಗೆ ಈ ಭಾಗದಲ್ಲಿ ತೊಂದರೆಯನ್ನು

ಕೊಡುತ್ತಿರುವುದು ಅಲ್ಲದೆ, ನಕ್ಸಲರ ಪಟ್ಟಿಗೆ ಸೇರಿಸುತ್ತಿದ್ದಾರೆ. ಆದ್ದರಿಂದ ಸಮುದಾಯಗಳನ್ನು ಅಧ್ಯಯನ ಮಾಡುವಂತೆ ಯಾವುದೇ ಸಂಶೋಧಕರಿಗೆ, ಬರಹಗಾರರಿಗೆ, ಸರ್ಕಾರದ ಧೋರಣೆ ಅರ್ಥವಾಗಬೇಕಾಗಿದೆ.

ಈ ದೇಶದಲ್ಲಿ ಕೋಮುವಾದ ಪಕ್ಷವಿಲ್ಲವೆಂದು ಹೇಳುವ ಗಣ್ಯವ್ಯಕ್ತಿಗಳ ಮಾತುಗಳ ಅರ್ಥ ದೇಶದಲ್ಲಿ ಸಮಸ್ಯೆಗಳಿಲ್ಲವೆಂದೇ ತಿಳಿಯುತ್ತದೆ. ಇದರಿಂದ ಇಲ್ಲಿ ತಿಳಿಯುವುದೇನೆಂದರೆ ಯಾವುದೇ ಒಂದು ಕ್ರಿಯೆ ನಡೆದಿದೆ ಎಂದರೆ ಅದಕ್ಕೆ ಪೂರಕ ಮತ್ತು ಮಾರಕ ಲಕ್ಷಣಗಳು ಸಂಖ್ಯಾತ್ಮಕವಾಗಿ ಎಷ್ಟು ಇರುತ್ತವೆ ಎಂದು ತಿಳಿಯಬೇಕಾಗಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಬುಡಕಟ್ಟು ಸಮುದಾಯಗಳ ಎನ್‌ಕೌಂಟರ್ ಗಮನಿಸಿದರೆ ಈ ದೇಶದಲ್ಲಿ ಯಾವುದೇ ಹೋರಾಟಕ್ಕೆ ಮೂಲಕಾರಣವಾಗಿ ರಾಜಕೀಯ ಮತ್ತು ಆರ್ಥಿಕ ಅಂಶಗಳು ಮುಖ್ಯವಾಗಿರುತ್ತವೆ ಎಂಬ ಮಾತು ಸತ್ಯ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ಬುಡಕಟ್ಟುಗಳ ಮೇಲೆ ಕಾನೂನು ಕ್ರಮ ಕೈಗೊಂಡು ಬುಡಕಟ್ಟು ಸಮುದಾಯದವರನ್ನು ಬಂಧನದಲ್ಲಿಟ್ಟು ಸರ್ಕಾರ ಮಾನವೀಯ ಮೌಲ್ಯಗಳನ್ನು ಗಾಳಿಗೆ ತೂರಿರುವುದು ಎಲ್ಲರಿಗೂ ಗೋಚರಿಸುತ್ತದೆ. ಮೆಣಸಿನಾಡ್ಯದಲ್ಲಿ ರಾಮೆಗೌಡ್ಲುವಿನ ಮನೆತನವನ್ನು ನಾಶ ಮಾಡಿ ಸರ್ಕಾರ ಪಶ್ಚಿಮಘಟ್ಟದ ಇಳಿಜಾರುಗಳಲ್ಲಿ ವಾಸ ಮಾಡುವ ಯಾವುದೇ ಬುಡಕಟ್ಟು ಸಮುದಾಯಗಳನ್ನು ನಿದ್ರೆ ಮಾಡಲು ಬಿಡದೇ ಪದೇ ಪದೇ ಹಾಡಿಗಳಿಗೆ ಹೋಗಿ ತೊಂದರೆಯನ್ನು ಕೊಡುತ್ತಿರುವುದು ಅಲ್ಲದೇ, ಹಾಡಿಗಳಿಗೆ ಹೋಗಿ ವಿಚಾರಣೆಯನ್ನು ಮಾಡುತ್ತಿದೆ. ಇದರಿಂದಾಗಿ ಬುಡಕಟ್ಟುಗಳ ದಿನ ನಿತ್ಯದ ಬದುಕು ನುಂಗಲಾರದ ತುತ್ತಾಗಿದೆ. ಬುಡಕಟ್ಟು ಸಮುದಾಯಗಳಿಗೆ ಅರಣ್ಯ ಅಧಿಕಾರಿಗಳು, ರಕ್ಷಣಾ ಇಲಾಖೆಯವರು ಕೊಡುತ್ತಿರುವ ತೊಂದರೆಗಳನ್ನು ಯಾರೂ ಹೇಳಲಿಕ್ಕಾಗದ ಸ್ಥಿತಿಯಲ್ಲಿದ್ದಾರೆ. ಈ ಹಿನ್ನೆಲೆಯಲಿ ಬುಡಕಟ್ಟು ಸಮುದಾಯದ ಗೌಡಾಲುಗಳು ಮತ್ತು ಇತರ ತಳಸಮುದಾಯಗಳು ನಮ್ಮ ಅರಣ್ಯವೇ ನಮ್ಮ ರಾಷ್ಟ್ರ, ರಾಜ್ಯ ಎಂದು ತಿಳಿದು ಅವರದೇ ನ್ಯಾಯಯುತವಾದ ಪಂಚಾಯಿತಿಯ ಕಾನೂನುಗಳನ್ನು ರಚನೆ ಮಾಡಿಕೊಂಡಿರುವ ಬುಡಕಟ್ಟುಗಳಾಗಿರುವುದರಿಂದ ಅರಣ್ಯದ ಉತ್ಪನ್ನಗಳನ್ನು ಸಂಗ್ರಹಿಸಿಕೊಂಡು ಬದುಕಿನ ದಾರಿಯನ್ನು ಕಟ್ಟಿಕೊಂಡವರಾಗಿದ್ದಾರೆ.

ಆದ್ದರಿಂದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಬುಡಕಟ್ಟುಗಳು ತಮ್ಮ ಪಾಡಿಗೆ ತಮ್ಮನ್ನು ಬಿಡಿ ಎಂದು ಅಂಗಲಾಚಿ ಬೇಡಿಕೊಳ್ಳುತ್ತಿದ್ದಾರೆ. ಆದರೆ ಸರ್ಕಾರ ಈ ಸಮುದಾಯಗಳು ತಾವೇ ತಾವಾಗಿ ಕಾಡಿನಿಂದ ಎತ್ತಂಗಡಿಯಾಗಬೇಕು ಎಂದು ಬಂಡವಾಳಶಾಹಿಯನ್ನು ಇಟ್ಟುಕೊಂಡು ಪರೋಕ್ಷ ನೀತಿ, ನಿರ್ಬಂಧನೆಗಳನ್ನು ಹಾಕುತ್ತಿದೆ.

ಚಿಕ್ಕಮಗಳೂರು ಜಿಲ್ಲೆ ಮತ್ತು ಪಶ್ಚಿಮಘಟ್ಟದ ಇತರೆ ಜಿಲ್ಲೆಗಳ ಬುಡಕಟ್ಟುಗಳಿಗೆ ಸರಿಯಾದ ಒಂದು ಪ್ರಾಥಮಿಕ ಶಾಲೆಯನ್ನೂ ಕೊಡದೆ, ಪಶ್ಚಿಮಘಟ್ಟವನ್ನು ಸರ್ಕಾರ ವಾಣಿಜ್ಯ ಕೇಂದ್ರವಾಗಿ ಮಾಡಿಕೊಂಡಿದೆ. ಅಲ್ಲದೆ ಈ ಭಾಗಗಳಲ್ಲಿ ವಿದೇಶಿಯರನ್ನು ಆಹ್ವಾನಿಸಿ ರಾಜಕಾರಣಿಗಳಿಗೆ, ಭೂಮಾಲೀಕರಿಗೆ, ಕೈಗಾರಿಕೆಯ ಮಾಲೀಕರಿಗೆ ಲಾಭ ಮಾಡಿ ಇಡೀ ಭಾರತವನ್ನು ಮಾಲೀಕರು ಮತ್ತು ಕಾರ್ಮಿಕರು ಎಂಬ ನೆಲೆಯಲ್ಲಿ ರೂಪಿಸಲು ಪ್ರಯತ್ನಿಸುತ್ತಿದೆಯೆಂದು ತಿಳಿಯಬಹುದಾಗಿದೆ.

ಮಲೆನಾಡಿನ ದಟ್ಟ ಅರಣ್ಯಭಾಗದಲ್ಲಿ ನೆಲೆಸಿರುವ ಗೌಡಾಲು ಬುಡಕಟ್ಟು ಜನರು ಹತ್ತು ಹಲವಾರು ಸಮಸ್ಯೆಗಳನ್ನು ಒಳಗೊಂಡಿದ್ದು, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಹೀಗೆ ಹಲವಾರು ಸಮಸ್ಯೆಗಳನ್ನು ಇವರು ಎದುರಿಸುತ್ತಿರುವುದು ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯದವರು ಆರ್ಥಿಕವಾಗಿ ಹಿಂದೆ ಉಳಿದಿದ್ದು, ಬಡತನವನ್ನು ಎದುರಿಸುತ್ತಿದ್ದಾರೆ. ನಿರುದ್ಯೋಗ ಇವರಲ್ಲಿ ಕಂಡುಬರುತ್ತದೆ. ಹೆಚ್ಚಿನವರು ಕೃಷಿ ಕಾರ್ಮಿಕರಾಗಿದ್ದು, ಕೆಲವರು ಕೃಷಿ, ಕೂಲಿ, ಬೇಟೆಗಾರಿಕೆ, ಪಶುಪಾಲನೆ ಮಾಡುತ್ತಿದ್ದಾರೆ. ಇಂದಿಗೂ ಇವರಲ್ಲಿ ಕೆಲವರು ಪಕ್ಷಿ, ಪ್ರಾಣಿ ಮತ್ತು ಮೀನು ಬೇಟೆಯಾಡುವುದು ಕಂಡುಬರುತ್ತದೆ. ಬೇಟೆಗೆ ಬಿಲ್ಲು, ಬಾಣ, ಬಲೆ, ಬಡಿಗೆಗಳನ್ನು ಬಳಸುತ್ತಾರೆ. ಕೋಳಿ, ಕುರಿ, ಹಂದಿ, ಜೇನು, ದನ ಇತ್ಯಾದಿಗಳ ಸಾಕಣೆಯೂ ಇವರ ಆರ್ಥಿಕತೆಯನ್ನು ಅವಲಂಬಿಸಿದ್ದು, ಅಲ್ಪಪ್ರಮಾಣದಲ್ಲಿ ಸರಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಜನರಲ್ಲಿ ಕಂಡುಬರುವ ಇನ್ನೊಂದು ಸಮಸ್ಯೆ ಎಂದರೆ ಅದು ಸಾಮಾಜಿಕ ಸಮಸ್ಯೆ. ಇವರಲ್ಲಿ ಮೂಢನಂಬಿಕೆ, ಕೌಟುಂಬಿಕ ಸಮಸ್ಯೆ ಮಹಿಳೆಯರಿಗೆ ಸಮಾಜದಲ್ಲಿ ಸರಿಯಾದ ಸ್ಥಾನಮಾನ ಇಲ್ಲದೆ ಇರುವುದು, ಪುರುಷಪ್ರಧಾನ ಸಮಾಜಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತಿರುವುದು, ಕುಟುಂಬದ ಯಾವುದೇ ತೀರ್ಮಾನ ತೆಗೆದುಕೊಳ್ಳಬೇಕಾದರೂ ಅಲ್ಲಿ ಪುರುಷರ ಪಾತ್ರವೇ ಹೆಚ್ಚು ಇರುವುದನ್ನು ಕಾಣಬಹುದು. ದೈವಗಳ ಆರಾಧನೆ, ಕೆಲವೊಂದು ದೈವಗಳ ಬಗ್ಗೆ ಮೂಢನಂಬಿಕೆ ಇರುವುದು, ಪ್ರಾಣಿಬಲಿ, ಹರಕೆ, ಕಾಯಿಲೆಗಳು ಬಂದಾಗ ವೈದ್ಯರ ಬಳಿ ಹೋಗದೆ ಇರುವುದು, ಕೆಲವರಲ್ಲಿ ಅಲೆಮಾರಿ ಜೀವನವಿದ್ದು, ಸಮಾಜದ ಮುಖ್ಯವಾಹಿನಿಯಿಂದ ದೂರ ಉಳಿದಿರುವುದು ಹೀಗೆ ಹಲವಾರು ರೀತಿಯ ಸಾಮಾಜಿಕ ಸಮಸ್ಯೆಗಳನ್ನು ಇವರು ಹೊಂದಿದ್ದಾರೆ.

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಕಂಡುಬರುವ ಇನ್ನೊಂದು ಮುಖ್ಯ ಸಮಸ್ಯೆ ಎಂದರೆ ಅದು ಶೈಕ್ಷಣಿಕ ಸಮಸ್ಯೆ. ಇವರಲ್ಲಿ ಶಿಕ್ಷಣದ ಪ್ರಮಾಣವು ಕಡಿಮೆ ಇದ್ದು, ಪುರುಷರಿಗೆ ಹೋಲಿಸಿದರೆ ಸ್ತ್ರೀಯರ ಶಿಕ್ಷಣದ ಪ್ರಮಾಣವು ಕಡಿಮೆ ಇದೆ. ಆದರೆ ಇವರು ತಮ್ಮ ಮಕ್ಕಳಿಗೆ ಶಿಕ್ಷಣವನ್ನು ನೀಡಲು ಬಯಸುತ್ತಾರಾದರೂ, ಮನೆಯಲ್ಲಿ ಇರುವ ಹಿರಿಯರಿಗೇ ಶಿಕ್ಷಣದ ಕೊರತೆ ಇರುವುದು ಕಂಡುಬರುತ್ತದೆ. ಈ ಕಾರಣದಿಂದಾಗಿ ಇವರಿಗೆ ಸಮಾಜದ ಮುಖ್ಯವಾಹಿನಿಗೆ ಬರಲು ಆಗುತ್ತಿಲ್ಲ. ದೂರದ ನಗರಗಳಿಗೆ ಕಳುಹಿಸಿ ಮಹಿಳೆಯರಿಗೆ ಶಿಕ್ಷಣ ಕೊಡಿಸುವ ನಿಲುವು ಇವರಲ್ಲಿ ಕಡಿಮೆ. ಕೆಲವರು ಶಿಕ್ಷಣ ಪಡೆದರೂ ಸಹ ಅದು ಪ್ರಾಥಮಿಕ ಮತ್ತು ಪ್ರೌಢಮಟ್ಟದ್ದಾಗಿರಬಹುದು. ಕಾಲೇಜು ಶಿಕ್ಷಣ ಅಥವಾ ವೃತ್ತಿ ಆಧಾರಿತ ಶಿಕ್ಷಣವನ್ನು ಪಡೆದವರ ಸಂಖ್ಯೆಯು ತುಂಬಾ ಕಡಿಮೆ ಇದೆ ಎನ್ನುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ತಮ್ಮದೇ ಆದಂತಹ ಸಂಸ್ಕೃತಿಯನ್ನು ಹೊಂದಿರುವ ಇವರು ತಮ್ಮ ಸಂಸ್ಕೃತಿಯನ್ನು ಇತರೆ ಸಂಸ್ಕೃತಿಗಳಲ್ಲಿ ವಿಲೀನ ಮಾಡಿಕೊಳ್ಳುವಲ್ಲಿಯ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಇಂದಿನ ದಿನಗಳಲ್ಲಿ ಗೌಡಾಲು ಸಂಸ್ಕೃತಿಯ ಮೇಲೆ ಇತರೆ ಸಮುದಾಯದವರ ಸಂಸ್ಕೃತಿ ಪರಿಣಾಮ ಬೀರುತ್ತಾ ಇದೆ. ಇತ್ತೀಚಿನ ದಿನಗಳಲ್ಲಿ ಗೌಡಾಲು ಜನರು ತಮ್ಮ ವಿವಾಹದ ಕಾರ್ಯಗಳಲ್ಲಿ, ಕೌಟುಂಬಿಕ ಶಾಸ್ತ್ರಗಳಲ್ಲಿ, ಹಬ್ಬ ಹರಿದಿನಗಳ ಸಂದರ್ಭದಲ್ಲಿ

ಬ್ರಾಹ್ಮಣರ, ಒಕ್ಕಲಿಗ, ಗೌಡ ಸಮುದಾಯದವರ ಮತ್ತು ಇತರೆ ಸಮುದಾಯದ ಜನರ ಸಂಪ್ರದಾಯವನ್ನು ಅನುಸರಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ಕೆಲವೊಂದು ಕಡೆಗಳಲ್ಲಿ ನೆಲೆಸಿರುವ ಗೌಡಾಲು ಜನರು ತಮ್ಮ ಜಾತಿ 'ಗೌಡ' ಎಂದು ಹೇಳಿದ್ದಾರೆ. ಹಾಗಾಗಿ ಇವರ ಮೂಲ ಸಂಸ್ಕೃತಿಯು ಬದಲಾವಣೆಯನ್ನು ಹೊಂದಿ, ಇತರ ಜನರ ಸಂಸ್ಕೃತಿಯನ್ನು ಅವಡಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.[೯]

ಗೌಡಾಲು ಜನರಲ್ಲಿ ಸಂಖ್ಯೆ ದೃಷ್ಟಿಯಿಂದ ನೋಡುವುದಾದರೆ ೧೯೭೧ರ ಜನಗಣತಿಯ ಪ್ರಕಾರ ೫೧೪೬ ಜನರಿದ್ದರೆ, ೧೯೮೧ರ ಜನಗಣತಿಯ ಪ್ರಕಾರ ೬೨೨೩ ಜನರಿದ್ದರು. ಈಗ ಸುಮಾರು ೧೦,೦೦೦ಕ್ಕೂ ಅಧಿಕ ಜನರು ಕರ್ನಾಟಕದಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಈ ಅಲ್ಪಸಂಖ್ಯಾತ ಬಲವನ್ನು ಹೊಂದಿರುವ ಇವರಲ್ಲಿ ರಾಜಕೀಯದಲ್ಲಿ ತೊಡಗಿಸಿಕೊಂಡಿರುವವರ ಸಂಖ್ಯೆ ತುಂಬಾ ಕಡಿಮೆ. ಕೆಲವರು ಮಾತ್ರ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿಯ ಸದಸ್ಯರಾಗಿದ್ದಾರೆಯೇ ಹೊರತಾಗಿ MLA, MP ಅಥವಾ ಜಿಲ್ಲಾ ಪಂಚಾಯಿತಿಯವರೆಗೆ ರಾಜಕೀಯದಲ್ಲಿ ಗುರುತಿಸಿಕೊಂಡವರ ಸಂಖ್ಯೆ ಇಲ್ಲ. ಇವರ ಯಾವುದೇ ಸಮಸ್ಯೆ ಅರ್ಥ ಮಾಡಿಕೊಳ್ಳಲು ರಾಜಕೀಯ ಕ್ಷೇತ್ರದಲ್ಲಿ ಈ ಸಮುದಾಯದವರ ಸಂಖ್ಯೆಯು ಇಲ್ಲದೇ ಇರುವ ಕಾರಣದಿಂದಾಗಿ ಇವರ ಬೇಡಿಕೆಗಳನ್ನು ಈಡೇರಿಸಲು ಅಥವಾ ಕಾರ್ಯರೂಪಕ್ಕೆ ತರಲು ಆಗುತ್ತಿಲ್ಲ ಎಂಬುದು ಇಲ್ಲಿ ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಜನರು ನೆಲೆಸಿರುವ ಪ್ರದೇಶಗಳು ಗುಡ್ಡಗಾಡು, ಅರಣ್ಯಪ್ರದೇಶ, ಕಣಿವೆಯ ಪ್ರದೇಶ, ಗಿರಿಧಾಮಗಳಾಗಿದ್ದು, ಇವರು ವಾಸವಾಗಿರುವ ಪ್ರದೇಶಗಳಿಗೆ ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆಯು ಅಷ್ಟೊಂದು ಸಮರ್ಪಕವಾಗಿಲ್ಲ. ಅದಕ್ಕೆ ಕಾರಣ ರಸ್ತೆಗಳು ಸರಿಯಾಗಿ ಇಲ್ಲದೇ ಇರುವುದು. ಗೌಡಾಲು ಬುಡಕಟ್ಟು ಜನರು ವಾಸವಾಗಿರುವ ಪ್ರದೇಶವು ನಗರಗಳಿಂದ ಮತ್ತು ಪಟ್ಟಣಗಳಿಂದ ಬಹಳಷ್ಟು ದೂರವಿದ್ದು, ಇವರು ವಾಸವಾಗಿರುವ ಮನೆಗಳು ಒಂದೇ ಕಡೆಗೆ ಕೇಂದ್ರೀಕರಿಸಿಲ್ಲ. ಒಂದು ಮನೆ ಒಂದು ಸ್ಥಳದಲ್ಲಿ ಇದ್ದರೆ ಇನ್ನೊಂದು ಮನೆ ಅದರಿಂದ ಎಷ್ಟೋ ಅಂತರದಲ್ಲಿ ಇರುವುದನ್ನು ಕಾಣುತ್ತೇವೆ. ದಟ್ಟನೆಯ ಅರಣ್ಯ ಪ್ರದೇಶಗಳಲ್ಲಿ ವಾಸವಾಗಿರುವ ಇವರಿಗೆ ರಸ್ತೆಗಳ ಸಂಪರ್ಕ ತುಂಬಾ ಕಡಿಮೆ ಇದೆ. ಹಾಗೆಯೇ ಕಾಲು ನಡಿಗೆಯಿಂದಲೇ ತಾವು ನೆಲೆಸಿರುವ ಜಾಗಗಳಿಗೆ ಓಡಾಡುತ್ತಾರೆ. ಹಾಗಾಗಿ ಇವರಿಗೆ ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆಯ ಸಮಸ್ಯೆ ಇದೆ. ಇವರು ನೆಲೆಸಿರುವ ಜಾಗಗಳಿಗೆ ಫೋನ್ ಮತ್ತು ಮೊಬೈಲ್ ಸಂಪರ್ಕವು ಸಿಗುವುದು ಕಷ್ಟಕರವಾಗಿದೆ. ಹಾಗಾಗಿ ಇವರಲ್ಲಿ ಸಾರಿಗೆ ಮತ್ತು ಸಂಪರ್ಕದ ಕೊರತೆ ಇದೆ ಎಂಬುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಆರೋಗ್ಯ ಮತ್ತು ನೈರ್ಮಲ್ಯದ ಸಮಸ್ಯೆಯು ಬಹಳ ಹಿಂದಿನಿಂದಲೂ ಇದೆ. ಅವರು ವಾಸಿಸುವ ಪರಿಸರ ಹಾಗೂ ಪರಿಸ್ಥಿತಿಗಳ ಪ್ರಭಾವದಿಂದಾಗಿ ಅನೇಕ ರೋಗ-ರುಜಿನಗಳಿಗೆ ತುತ್ತಾಗಿದ್ದಾರೆ. ಗೌಡಾಲು ಜನರ ಮನೆಗಳಲ್ಲಿ ಸರಿಯಾದ ಗಾಳಿ, ಬೆಳಕು ಹಾಗೂ ನೈರ್ಮಲ್ಯದ ವ್ಯವಸ್ಥೆ ಇರುವುದಿಲ್ಲ. ಮಲೇರಿಯಾ, ಕ್ಷಯ, ವಿಷಮಶೀತ ಜ್ವರ, ಕುಷ್ಠರೋಗ, ಚರ್ಮರೋಗ, ಮಂಗನ ಕಾಯಿಲೆ, ಸಿಡುಬು ಮುಂತಾದ ರೋಗಗಳಿಗೆ ಅವರು ಬಲಿಯಾಗುತ್ತಿದ್ದಾರೆ. ಜೀವನಾವಶ್ಯಕತೆಗಳ ಕೊರತೆ,

ಪೌಷ್ಟಿಕ ಆಹಾರದ ಕೊರತೆ, ಕಡುಬಡತನ ಅವರ ಆರೋಗ್ಯವನ್ನು ಇನ್ನೂ ಹೆಚ್ಚಿಸಿದೆ. ಆದಿವಾಸಿಗಳಲ್ಲಿ ಆಧುನಿಕ ವೈದ್ಯಕೀಯ ಸೌಲಭ್ಯಗಳ ಬಗ್ಗೆ ಶಂಕೆ ಇರುವುದರಿಂದ ಭೂತ-ಪ್ರೇತ, ಮಾಟ-ಮಂತ್ರ ಮುಂತಾದ ದುಷ್ಟಶಕ್ತಿಗಳನ್ನು ನಂಬಿ ಅವುಗಳ ಆಶ್ರಯ ಪಡೆಯುವುದು ಸಾಮಾನ್ಯವಾಗಿದೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿ ಇಟ್ಟುಕೊಂಡು ನೋಡುವುದಾದರೆ ಗೌಡಾಲು ಬುಡಕಟ್ಟು ಜನರು ಆರೋಗ್ಯ ಮತ್ತು ನೈರ್ಮಲ್ಯದ ಸಮಸ್ಯೆಯನ್ನು ಹೊಂದಿದ್ದು, ಈ ಎಲ್ಲ ಸಮಸ್ಯೆಗಳ ಬಗ್ಗೆ ಇವರಲ್ಲಿ ಸರಿಯಾದ ತಿಳುವಳಿಕೆ ಇಲ್ಲ ಎಂಬ ಅಂಶ ಈ ಸಂಶೋಧನೆಯಿಂದ ಕಂಡುಬರುತ್ತದೆ.

'ಅಪರಾಧಿ ಆದಿವಾಸಿಗಳ ಕಾಯ್ದೆ' (Criminal Tribes Act) ಅಡಿಯಲ್ಲಿ ಆದಿವಾಸಿಗಳು ಅಥವಾ ಬುಡಕಟ್ಟು ಜನರು ಅಪರಾಧಿಗಳಲ್ಲ,. ಸಮಾಜ ವಿರೋಧಿಗಳೂ ಅಲ್ಲ ಎಂಬ ನಿಲುವಿನ ಅನ್ವಯ ಗೌಡಾಲು ಬುಡಕಟ್ಟು ಜನರು ಪ್ರತ್ಯೇಕತಾ ಭಾವನೆಯನ್ನು ಹೊಂದಬಾರದು ಎಂಬ ಅಭಿಪ್ರಾಯವಿದ್ದರೂ ಇವರು ಪ್ರತ್ಯೇಕತಾ ಭಾವನೆ ಹೊಂದಿರುತ್ತಾರೆ. ಏಕೆಂದರೆ ಸಮಾಜದ ಮುಖ್ಯವಾಹಿನಿಯಿಂದ ದೂರ ಉಳಿದಿರುವ ಇವರು ಇತರೆ ಜನರ ಜೊತೆಯಲ್ಲಿ ಬೆರೆಯುವುದಿಲ್ಲ. ಗೌಡಾಲು ಜನರಲ್ಲಿ ತಾವು ಇತರೆ ವರ್ಗದವರಿಗಿಂತ ಭಿನ್ನರು, ಇತರರ ಜೊತೆಯಲ್ಲಿ ಬೆರೆಯುವ ಸಾಮರ್ಥ್ಯ ನಮ್ಮಲ್ಲಿ ಇಲ್ಲ ಎಂಬ ಮನೋಭಾವನೆ ಬೇರುಬಿಟ್ಟಿದೆ. ಹೀಗಾಗಿ ಇವರಲ್ಲಿ ಪ್ರತ್ಯೇಕತಾ ಭಾವನೆಯು ಇರುವುದನ್ನು ಕಾಣಬಹುದು.

''ರಾಷ್ಟ್ರೀಯ ಉದ್ಯಾನವನ ನೀತಿಯನ್ನು ಕೇಂದ್ರ ಸರಕಾರವು ಜಾರಿಗೆ ತಂದಿದ್ದು, ಈ ಕಾನೂನು ಇತ್ತೀಚಿನ ದಿನಗಳಲ್ಲಿ ಗೌಡಾಲು ಬುಡಕಟ್ಟು ಜನರ ಮೇಲೆ ಹಲವಾರು ರೀತಿಯ ಪರಿಣಾಮಗಳನ್ನು ಬೀರಿದ್ದು, ಅವುಗಳಲ್ಲಿ ಒಳ್ಳೆಯ ಪರಿಣಾಮಗಳಿಗಿಂತಲೂ ಕೆಟ್ಟ ಪರಿಣಾಮಗಳೆ ಹೆಚ್ಚಾಗಿವೆ. ಈ ನೀತಿಯಿಂದ ಇವರು ಜೀವನ ನಡೆಸುವುದು ಸಹ ಕಷ್ಟಕರವಾಗಿದೆ. ಸ್ಥಳಾಂತರ ಮಾಡಿಸುವ ಭೀತಿಯು ಇವರಲ್ಲಿ ಇರುವ ಮೊದಲನೆಯ ಸಂಶಯ. ಹಾಗೆಯೇ ಇವರು ನೆಲೆಸಿರುವ ಜಾಗಗಳಲ್ಲಿ ಯಾವುದೇ ರೀತಿಯ ಸೌಲಭ್ಯಗಳನ್ನು ಸರಿಯಾಗಿ ಒದಗಿಸಿಕೊಡದೆ ಇರುವುದು ಈ ನೀತಿಯನ್ನು ಇವರು ವಿರೋಧಿಸಲು ಮುಖ್ಯಕಾರಣವಾಗಿದೆ. ರಾಷ್ಟ್ರೀಯ ಉದ್ಯಾನವನ ನೀತಿಯ ಪರಿಣಾಮ ನೂರಾರು ಗೌಡಾಲು ಬುಡಕಟ್ಟು ಜನರು ತಮ್ಮ ಭೂಮಿಯನ್ನು ಕಳೆದುಕೊಳ್ಳುವ ಸಾಧ್ಯತೆಗಳಿವೆ. ಕುದುರೆಮುಖ ವ್ಯಾಪ್ತಿಯಲ್ಲಿ ಮತ್ತು ಮೂಡಿಗೆರೆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗೌಡಾಲು ಜನರು ಈ ಕಾನೂನಿನಿಂದಾಗಿ ತಮ್ಮ ಭೂಮಿಯನ್ನು ಕಳೆದುಕೊಂಡಿದ್ದಾರೆ. ಕಳೆದುಕೊಂಡವರಿಗೆ ಕೆಲವರಿಗೆ ಮಾತ್ರ ಅಲ್ಪ ಪ್ರಮಾಣದಲ್ಲಿ ಪರಿಹಾರ ದೊರೆತಿದ್ದರೂ, ಇನ್ನೂ ಉಳಿದವರಿಗೆ ಯಾವುದೇ ರೀತಿಯ ಪರಿಹಾರಗಳು ಇಲ್ಲಿಯವರೆಗೂ ದೊರಕಲಿಲ್ಲ. ಗೌಡಾಲು ಜನರು ಮಾನಸಿಕವಾಗಿ ಕುಗ್ಗಿದ್ದಾರೆ. ಇವರು ತಮ್ಮ ನೋವನ್ನು ಯಾರ ಹತ್ತಿರ ವ್ಯಕ್ತಪಡಿಸಿದರೂ ಅದಕ್ಕೆ ಪರಿಹಾರ ಎಳ್ಳಷ್ಟೂ ಸಿಗುತ್ತಿಲ್ಲ ಎಂದು ತಮ್ಮ ಅಳಲನ್ನು ವ್ಯಕ್ತಪಡಿಸುತ್ತಾರೆ. ಈ ರಾಷ್ಟ್ರೀಯ ಉದ್ಯಾನವನ ಕಾನೂನು ಬಳಸಿಕೊಂಡು ಗೌಡಾಲು ಜನರು ಇರುವ ಸ್ಥಳಗಳಿಗೆ ರಸ್ತೆ, ನೀರು, ವಿದ್ಯುಚ್ಛಕ್ತಿ, ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆ ಮಾಡಿಕೊಡುವುದರತ್ತ ಸರ್ಕಾರ ಗಮನ ಹರಿಸುತ್ತಿಲ್ಲ. ಗೌಡಾಲು ಜನರು ಮಾಡುವ ವೃತ್ತಿಯ ಬಗ್ಗೆ, ಹಾಗೂ ಕಾಡಿನಿಂದ ಏನಾದರೂ ವಸ್ತುಗಳನ್ನು ಸಂಗ್ರಹಿಸುತ್ತಾರೋ ಅಥವಾ

ಕಾಡಿನ ಸಂಪತ್ತಿಗೆ ತೊಂದರೆ ಏನಾದರೂ ಮಾಡುತ್ತಾರೋ ಎಂಬ ಸಂಶಯ ಅಧಿಕಾರಿಗಳಲ್ಲಿ ಇದೆ. ಗದ್ದೆಗಳಿಗೆ, ತಮ್ಮ ಜಾಗಗಳಿಗೆ ಬೇಲಿಯನ್ನು ಹಾಕಲು ಬಿಡುತ್ತಿಲ್ಲ. ಹೀಗಾಗಿ ಈ ಬುಡಕಟ್ಟು ಜನರು ನೆಮ್ಮದಿಯಿದ ಇರುವ ಹಾಗೂ ಇಲ್ಲ, ಬೇರೆ ಕಡೆಗೆ ಹೊರಟು ಹೋಗುವ ಹಾಗೆಯೂ ಇಲ್ಲ. ಇದು ಇವರಲ್ಲಿ ಇರುವಂತಹ ಪ್ರಮುಖ ಸಮಸ್ಯೆಯಾಗಿದೆ ಎಂಬ ವಿಚಾರ ಈ ಸಂಶೋಧನೆಯಿಂದ ತಿಳಿದುಬರುತ್ತದೆ.''[೮]

ಮಲೆನಾಡು ಪ್ರದೇಶದಲ್ಲಿ ನೆಲಿಸಿರುವ ಈ ಬುಡಕಟ್ಟು ಜನರು ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ ವಸತಿ ಸೌಲಭ್ಯದಿಂದಲೂ ವಂಚಿತರಾಗಿದ್ದಾರೆ. ಈ ವಲಯದಲ್ಲಿಯ ಬುಡಕಟ್ಟು ಜನರನ್ನು ಕುರಿತು ನೋಡುವುದಾದರೆ ಹೆಚ್ಚಿನ ಜನರು ಹೆಂಚಿನ ಮನೆಗಳಲ್ಲಿ, ಕೆಲವರು ಗುಡಿಸಲು ಮನೆಗಳಲ್ಲಿ ವಾಸವಾಗಿದ್ದಾರೆ. ಪ್ರಕೃತಿಯ ಮಡಿಲಿನಲ್ಲಿ ವಾಸವಾಗಿರುವ ಇವರು ಐಶಾರಾಮಿ ಜೀವನವನ್ನು ನಡೆಸಲು ಇಚ್ಛಿಸುವುದಿಲ್ಲ. ಹಾಗೆಯೇ ಆ ಸಾಮರ್ಥ್ಯವೂ ಇವರಲ್ಲಿ ಇಲ್ಲ. ಕೆಲವರಿಗೆ ಸಣ್ಣಪುಟ್ಟ ಮನೆಗಳು ಇದ್ದರೂ ಸಹ ಅದರ ಒಳಗೆ ಗಾಳಿ ಬೆಳಕು, ಬಾಗಿಲು, ಕಿಟಕಿ ಸ್ವಚ್ಛತೆ ಇಲ್ಲದೇ ಇರುವುದು ಕಾಣಬಹುದು. ಕೆಲವೊಂದು ಜನರು ಗುಡಿಸಲು ವ್ಯವಸ್ಥೆಯನ್ನೂ ಹೊಂದಿಲ್ಲದೆ, ಟೆಂಟ್‌ಗಳಲ್ಲಿ ವಾಸವಾಗಿರುವುದು ಗೋಚರವಾಗುತ್ತದೆ.

ಹೀಗೆ ಹಲವಾರು ಸಮಸ್ಯೆಗಳನ್ನು ಹೊಂದಿರುವ ಈ ಜನರು ದಿನನಿತ್ಯ ಜೀವನದಲ್ಲಿ ಪ್ರತಿಯೊಂದು ಹಂತದಲ್ಲಿಯೂ ಸಮಸ್ಯೆಗಳನ್ನು ಎಂದುರಿಸುತ್ತಿದ್ದಾರೆ. ಮೇಲಿನ ಸಮಸ್ಯೆಗಳಷ್ಟೇ ಅಲ್ಲದೆ ಇನ್ನೂ ಹಲವಾರು ಸಮಸ್ಯೆಗಳನ್ನು ಹೊಂದಿದ್ದಾರೆ. ಉದ್ಯೋಗದ ಸಮಸ್ಯೆ, ಮಹಿಳೆಯರ ಸ್ಥಾನಮಾನದಲ್ಲಿಯ ಸಮಸ್ಯೆ, ಆಹಾರದ ಸಮಸ್ಯೆ, ಪೌಷ್ಟಿಕಾಂಶಗಳ ಸಮಸ್ಯೆ, ವೈದ್ಯಕೀಯ ಸಮಸ್ಯೆ, ಮಕ್ಕಳ ಲಾಲನೆ-ಪಾಲನೆಯಲ್ಲಿಯ ಸಮಸ್ಯೆ, ಜನಸಂಖ್ಯಾ ಸಮಸ್ಯೆ, ಹೊಂದಾಣಿಕೆಯ ಸಮಸ್ಯೆ, ಸ್ವಾಂಗೀಕರಣದ ಸಮಸ್ಯೆ ಹೀಗೆ ಹಲವಾರು ಸಮಸ್ಯೆಗಳಿಂದ ಬಳಲುತ್ತಿರುವ ಇವರು ಹೊಂದಿರುವ ಈ ಸಮಸ್ಯೆಗಳಿಗೆ ಹಲವಾರು ಕಾರಣಗಳನ್ನು ಈ ಮುಂದಿನಂತೆ ಕಂಡುಕೊಳ್ಳಬಹುದಾಗಿದೆ.

ಗೌಡಾಲು ಬುಡಕಟ್ಟು ಜನರು ಹೊಂದಿರುವ ಸಮಸ್ಯೆಗಳಿಗೆ ಹಲವಾರು ಕಾರಣಗಳು ಇವೆ. ಅವುಗಳಲ್ಲಿ ಶೈಕ್ಷಣಿಕ ಕೊರತೆಯು ಮುಖ್ಯವಾದ ಸಮಸ್ಯೆಯಾಗಿದೆ. ಶಿಕ್ಷಣಮಟ್ಟ ಕಡಿಮೆ ಇರುವ ಕಾರಣದಿಂದಾಗಿ ಇವರು ಪ್ರಗತಿ ಹೊಂದಲಿಲ್ಲ. ಮಾಹಿತಿದಾರರ ಶಿಕ್ಷಣ ಕಡಿಮೆ ಇದೆ. ಕೆಲವರು ಶಿಕ್ಷಣ ಪಡೆದರೂ ಸಹ ಅದು ಪ್ರಾಥಮಿಕ ಮತ್ತು ಪ್ರೌಢ ಹಂತದವರೆಗೆ ಮಾತ್ರ. ಇತ್ತೀಚಿನ ದಿನಗಳಲ್ಲಿ ಮಾತ್ರ ಮಾಹಿತಿದಾರರ ಮಕ್ಕಳು ವಿದ್ಯೆಯನ್ನು ಪಡೆಯುತ್ತಿದ್ದಾರೆ. ಹೀಗೆ ಕಡಿಮೆ ಶಿಕ್ಷಣ ಇರುವ ಕಾರಣದಿಂದಾಗಿ ಇವರಲ್ಲಿ ಹಲವಾರು ಸಮಸ್ಯೆಗಳು ಕಂಡುಬರುತ್ತವೆ ಎಂಬುದನ್ನು ಕಂಡುಕೊಳ್ಳಬಹುದು. ಹಾಗೆಯೇ ಇನ್ನೊಂದು ಕಾರಣ ಬಡತನ. ಇವರು ಈ ಕಾರಣದಿಂದಾಗಿ ತಮ್ಮ ಬೇಡಿಕೆಯನ್ನು ಈಡೇರಿಸಲು ಸಾಧ್ಯವಾಗುತ್ತಿಲ್ಲ. ಇವರು ಹಿಂದೆ ಉಳಿಯಲು ಇನ್ನೂ ಒಂದು ಪ್ರಮುಖ ಕಾರಣವೆಂದರೆ, ಸರಕಾರದ ಕಾನೂನುಗಳು ಮತ್ತು ಯೋಜನೆಗಳು ಸರಿಯಾಗಿ ಜಾರಿಗೆ ಬಾರದೇ ಇರುವುದು ಮತ್ತು ಸಮರ್ಪಕ ರೀತಿಯಲ್ಲಿ ಜನರಿಗೆ ತಲುಪದೇ ಇರುವುದು. ಉದಾಹರಣೆಗೆ ಸರಕಾರದಿಂದ ಈ ಬುಡಕಟ್ಟು ಜನರಿಗೆ ಆರ್ಥಿಕ ಸಹಕಾರ, ನೀರು ರಸ್ತೆ, ವಸತಿ ಸೌಕರ್ಯ, ವಿದ್ಯುಚ್ಛಕ್ತಿ, ಜೇನು ಪೆಟ್ಟಿಗೆ,

ಟೈಲರಿಂಗ್ ಮಿಷಿನ್, ಹಳೆಮನೆ ರಿಪೇರಿ, ಹೆಂಚುಗಳ ಸಹಾಯ, ಸಿಮೆಂಟು ಮನೆ ಕಟ್ಟಲು ಸಾಲದ ವ್ಯವಸ್ಥೆ ಇಂತಹ ಸರಕಾರದ ಯೋಜನೆಗಳಿದ್ದರೂ ಅವು ಸರಿಯಾದ ರೀತಿಯಲ್ಲಿ ತಲುಪುತ್ತಿಲ್ಲ ಎಂಬುದನ್ನು ಕಂಡುಕೊಳ್ಳಬಹುದು. ಅದೇ ರೀತಿ ರಾಜಕೀಯ ಅಂಶವು ಇದಕ್ಕೆ ಕಾರಣವಾಗಿದೆ. ರಾಜಕಾರಣಿಗಳು ಮತ್ತು ರಾಜಕೀಯ ಪಕ್ಷದವರು ಈ ಬುಡಕಟ್ಟು ಜನರ ಪ್ರಗತಿಗಾಗಿ ಶ್ರಮಿಸುತ್ತಿಲ್ಲ ಎಂಬ ನಿಲುವನ್ನು ಮಾಹಿತಿದಾರರು ವ್ಯಕ್ತಪಡಿಸುತ್ತಾರೆ.

ಇವರ ಅಭಿವೃದ್ಧಿಗಾಗಿ ತೊಡಗಿಸದ ಹಣ ಅಪವ್ಯಯವಾಗುತ್ತ ಇದೆ. ಎಷ್ಟು ಹಣ ಕಳುಹಿಸಿದರೂ ಅದು ಅಧಿಕಾರಿಗಳ ದುರಾಡಳಿತದಿಂದ ಸರಿಯಾಗಿ ಬಳಕೆಯಾಗುತ್ತಿಲ್ಲ. ತಾಲ್ಲೂಕು ಪಂಚಾಯಿತಿ, ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಯೋಜನೆಗಳು ಫಲಕಾರಿಯಾಗುತ್ತಿಲ್ಲ ಎಂದು ಮಾಹಿತಿದಾರರು ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಕೆಲವೊಂದು ಯೋಜನೆಗಳು ಗೌಡಾಲು ಜನರು ಇರುವ ಸ್ಥಳಗಳಿಗೆ ತಲುಪುತ್ತಿಲ್ಲ. ಅದೇ ರೀತಿ ಕೆಲವು ಗೌಡಾಲು ಜನರು ವಾಸವಾಗಿರುವ ನೆಲೆಗಳು ಅಥವಾ ಪ್ರದೇಶಗಳು ಪಟ್ಟಣಗಳಿಂದ ಅಥವಾ ಮುಖ್ಯರಸ್ತೆಗಳಿಂದ ತುಂಬಾ ಒಳಗೆ ಇರುವ ಕಾರಣದಿಂದ, ಅಲ್ಲಿಗೆ ಸಾರಿಗೆ ಮತ್ತು ಸಂಪರ್ಕ ಕಲ್ಪಿಸಲು ಕಷ್ಟಕರವಾದ ಕಾರಣದಿಂದ ಈ ಯೋಜನೆಗಳನ್ನು ತಲುಪಿಸಲು ಆಗುತ್ತಿಲ್ಲ. ಹೀಗಾಗಿ ಈ ಬುಡಕಟ್ಟು ಜನರಲ್ಲಿ ಅಭಿವೃದ್ಧಿಯನ್ನು ತರುವುದು ಸುಲಭದ ಕೆಲಸವಲ್ಲ ಎಂಬುದನ್ನು ಈ ಸಂಶೋಧನೆಯಿಂದ ಕಂಡುಕೊಳ್ಳಬಹುದು.

ಗೌಡಾಲು ಬುಡಕಟ್ಟು ಜನರು ಹಿಂದೆ ಉಳಿಯಲು ಮುಖ್ಯವಾದ ಕೆಲವು ಕಾರಣಗಳಲ್ಲಿ ಇವರಲ್ಲಿ ಇರುವ ಸ್ವಾವಲಂಬಿ ಮನೋಭಾವನೆಯು ಒಂದಾಗಿದೆ. ಇವರು ಬೇರೆಯವರ ಮೇಲೆ ಅವಲಂಬಿತರಾಗಿಲ್ಲ. ದಿನನಿತ್ಯ ದುಡಿದು ಜೀವನ ನಡೆಸುತ್ತಿದ್ದಾರೆ. ಸ್ವಾಭಿಮಾನಿ ಗುಣಗಳನ್ನು ಹೊಂದಿರುವ ಇವರು ಇತರೆ ಜನರ ಜೊತೆಯಲ್ಲಿ ಅಷ್ಟೊಂದು ಬೆರೆಯಲು ಸಾಧ್ಯವಾಗುತ್ತಿಲ್ಲ. ಹಾಗೆಂದು ಇದರಲ್ಲಿ ಇವರ ತಪ್ಪು ಇಲ್ಲ. ಹಿಂದಿನಿಂದಲೂ ಇದೇ ಸ್ವಭಾವವನ್ನು ಈ ಸಮುದಾಯದವರು ಹೊಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ಸಮಾಜದ ಅಥವಾ ಬೇರೆ ವರ್ಗದ ಜನರ ಜೊತೆಯಲ್ಲಿ ಸ್ವಲ್ಪಮಟ್ಟಿಗೆ ಬೆರೆಯುತ್ತಿರುವುದು ಕಂಡುಬರುತ್ತದೆ. ಹೀಗೆ ಸಂಕುಚಿತ ಮನೋಭಾವನೆ ಹೊಂದಿರುವ ಇವರು ಸಮಾಜದ ಮುಖ್ಯವಾಹಿನಿಗೆ ಬಂದು ಬೆರೆಯಲು ಹಿಂದೇಟು ಹಾಕುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಧುನೀಕರಣದ ಪರಿಣಾಮದಿಂದಾಗಿ ಇವರ ಜೀವನ ವಿಧಾನದಲ್ಲಿ, ಮನೋಭಾವನೆಯಲ್ಲಿ ಬದಲಾವಣೆಯಾಗುತ್ತಿರುವುದು ಕ್ರೋಡೀಕರಿಸಿದ ವಿಷಯಗಳಿಂದ ತಿಳಿದುಬರುತ್ತದೆ.

ಬುಡಕಟ್ಟುಗಳಲ್ಲಿ ಇರುವಂತಹ ಪ್ರಾದೇಶಿಕತೆಯ ನಿಲುವು ಗಾಢವಾಗಿದೆ. ಇವರು ನಾವು, ನಮ್ಮವರು ಎಂಬ ನಿಲುವನ್ನು ಹೊಂದಿದ್ದು, ಇವರು ಇರುವಂತಹ ಪ್ರದೇಶವು ಅಥವಾ ಪರಿಸರವು ಇವರಿಗೆ ಅನುಕೂಲಕರವಾಗಿದೆ. ಹಾಗೆಯೇ ತಮ್ಮ ಮೂಲ ಸ್ವರೂಪವನ್ನು ಬಿಟ್ಟುಕೊಡಲು ಇವರು ಬಯಸುವುದಿಲ್ಲ. ಉತ್ತಮ ಪರಿಸರ, ಪ್ರಾಣಿ, ಪಕ್ಷಿಗಳು, ಬೆಟ್ಟ ಗುಡ್ಡಗಳ ಮಧ್ಯದಲ್ಲಿ ನೆಲೆಸಿರುವ ಇವರು ಅದನ್ನು ಬಿಟ್ಟು ಬರಲು ಒಪ್ಪುವುದಿಲ್ಲ ಎಂಬುದು ಕಂಡುಬರುತ್ತದೆ.

ಇವರು ವಾಸವಾಗಿರುವ ಪ್ರದೇಶದ ಪರಿಸರಕ್ಕೆ, ಪ್ರಕೃತಿಗೆ ಈ ಜನರು ಸಂಪೂರ್ಣವಾಗಿ ಹೊಂದಿಕೊಂಡಿದ್ದು, ಆ ಪರಿಸರವನ್ನು ಬಿಟ್ಟು ನಗರ ಪ್ರದೇಶಗಳಿಗೆ ಬಂದು ನೆಲೆಸಲು ಇವರು ಒಪ್ಪುವುದಿಲ್ಲ. ಆದ್ದರಿಂದ ಇವರಿಗೆ

ಆಧುನಿಕ ಸಮಾಜದ ಎಲ್ಲ ಸವಲತ್ತುಗಳನ್ನು ಒದಗಿಸಿಕೊಡಲೂ ಸಾಧ್ಯವಾಗುತ್ತಿಲ್ಲ, ಹಾಗೆಯೇ ಕೆಲವೊಂದು ಅವಕಾಶಗಳು ಕೊಟ್ಟರೂ ಸಹ ಅವು ಈ ಜನರಿಗೆ ತಲುಪುವಲ್ಲಿ ತೊಡಕಾಗುತ್ತಿದೆ. ಈ ಒಂದು ಕಾರಣದಿಂದಾಗಿ ಇವರಲ್ಲಿ ಹಲವಾರು ಸಮಸ್ಯೆಗಳು ಕಂಡುಬರುತ್ತಿವೆ. ಅದೇ ರೀತಿ ಈ ಸಮಸ್ಯೆಗಳನ್ನು ಸಂಪೂರ್ಣವಾಗಿ ನಿವಾರಿಸುವುದು ಕಷ್ಟಸಾಧ್ಯ ಎಂಬ ನಿಲುವು ಈ ಅಧ್ಯಯನದಿಂದ ತಿಳಿದುಬರುತ್ತದೆ.

**೪.೧. ರಾಜಕೀಯ**

ಬುಡಕಟ್ಟು ಸಮುದಾಯಗಳಲ್ಲಿ ರಾಜಕೀಯ ಮನೋಭಾವನೆಯನ್ನು ಕುರಿತು ಚರ್ಚಿಸುತ್ತಾ ಹೊರಟರೆ ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಸಮುದಾಯದೊಳಗೆ ಒಳ ಆಡಳಿತ ವ್ಯವಸ್ಥೆಯನ್ನು ಅವರದೇ ಆದ ಮನೋಭಾವನೆಯಲ್ಲಿ ರೂಢಿಗತ ಮಾಡಿಕೊಂಡು ಬಂದಿರುವುದು ತಿಳಿಯುತ್ತದೆ. ಆದ್ದರಿಂದ ರಾಜಕೀಯ ಪ್ರಜ್ಞೆಯು ಗೌಡಾಲು ಬುಡಕಟ್ಟಿನಲ್ಲಿ ಸಾಂಪ್ರದಾಯಿಕ ಹಿನ್ನೆಲೆಯಲ್ಲಿ ಬಂದಿದ್ದರೂ ಇತ್ತೀಚಿನ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಮುದಾಯದ ಪಾತ್ರವು ರಾಜಕೀಯದಲ್ಲಿ ಎಷ್ಟರ ಮಟ್ಟಿಗೆ ಇದೆ ಎಂದು ಗುರುತಿಸುವುದು ಮುಖ್ಯ. ಆಧುನಿಕ ಸಂದರ್ಭದಲ್ಲಿ ಬದಲಾವಣೆಯ ಒಂದು ರೂಪವಾಗಿ ಬಂದ ರಾಜಕಾರಣ, ರಾಜಕೀಯ ಈ ಸಮುದಾಯದಲ್ಲಿ ಪ್ರಾರಂಭದಿಂದಲೂ ಅಸ್ತಿತ್ವದಲ್ಲಿದೆ. ಇಲ್ಲಿ ಸ್ಥಳೀಯ ಪಂಚಾಯತ್ ವ್ಯವಸ್ಥೆ ನ್ಯಾಯಗಳಿವೆ. ಇವುಗಳಿಗೆ ನ್ಯಾಯ ಪಂಚಾಯಿತಿ, ದೈವದ ಮನೆ, ದೈವದ ಚಾವಡಿ, ಜಾತಿ ಪಂಚಾಯಿತಿ ಕಟ್ಟೆ ಹೀಗೆ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಇವು ರಾಜಕೀಯದ ಅಂಗಗಳಂತೆ ಕಾರ್ಯ ನಿರ್ವಹಿಸುತ್ತಿವೆ. ಈ ಸಮುದಾಯದಲ್ಲಿ ಪಂಚಾಯಿತಿ ಅಥವಾ ರೀಜಕೀಯ ವ್ಯವಸ್ಥೆ ಒಂದು ಭಾಗವಾಗಿ ಇವರಲ್ಲಿ ಉಂಟಾಗುವ ಸಮಸ್ಯೆಗಳನ್ನು ಕುರಿತು ನ್ಯಾಯ ಪಂಚಾಯತಿಗಳು ಪಂಚಾಯತ್ ರಾಜ್ಯ ವ್ಯವಸ್ಥೆಯ ರೂಪದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಅಂದರೆ ಇಂದಿನ ಚುನಾಯಿತ ಪ್ರತಿನಿಧಿಗಳಿಂದ ಕೂಡಿರುವಂತ ವ್ಯವಸ್ಥೆಗಿಂತ ಶ್ರೇಷ್ಠವಾಗಿದೆ. ಇಲ್ಲಿ ಸಮುದಾಯದ ಹಿರಿಯ ಮುಖಂಡರನ್ನು ಸೇರಿಸಿ, ಸಮುದಾಯದ ಒಪ್ಪಂದದ ಮೇರೆಗೆ ಪಂಚರನ್ನು ನೇಮಕ ಮಾಡಿಕೊಂಡು ಸದಸ್ಯರ ಅಧಿಕಾರಕ್ಕೆ ಅವಧಿಗಳನ್ನು ಗುರುತುಪಡಿಸುವ ಮೂಲಕ ಇವರ ಅಧಿಕಾರದ ವ್ಯಾಪ್ತಿಗೆ ಬರುವ ವ್ಯಾಜ್ಯಗಳನ್ನು ನ್ಯಾಯಗಳನ್ನು ಬಗೆಹರಿಸುವುದು ಇಲ್ಲಿ ನಡೆಯುತ್ತದೆ. ಯಾವುದೇ ನಿರ್ಣಯವನ್ನು ಮುಖಂಡರು ಸೇರಿ ನಡೆಸುತ್ತಾರೆ. ಅಲ್ಲದೆ ಈ ತೀರ್ಮಾನವು ಸರ್ವವಿಧದಲ್ಲಿಯೂ ಸಮುದಾಯದ ಪ್ರತಿಯೊಬ್ಬ ಸದಸ್ಯರ ಮನಸ್ಸಿಗೆ ಒಪ್ಪಿಗೆಯಾಗುವಂತೆ ಇರುತ್ತದೆ. ಈ ಸಮುದಾಯದಲ್ಲಿ ಹಿರಿಯರು ಸೇರಿ ಮಾಡಿದ ಪಂಚಾಯಿತಿಯನ್ನು ಚಾಚೂತಪ್ಪದೆ ಪಾಲಿಸುತ್ತಾರೆ. ಒಂದು ಪಕ್ಷ ಮುಖಂಡರು ಮಾಡಿದ ನಿಯಮಗಳನ್ನು ಪಾಲಿಸದೆ ಇದ್ದರೆ ಜಾತಿ ಬಹಿಷ್ಕಾರದಂತ ಶಿಕ್ಷೆಯನ್ನು ನೀಡುವ ಮೂಲಕ ಸಮುದಾಯದಲ್ಲಿನ ಜನರನ್ನು ಹಾಗೂ ವ್ಯವಸ್ಥೆಯನ್ನು ಮಾಡುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಸ್ವಾತಂತ್ರ್ಯ ಮತ್ತು ಪೌರ ಹಕ್ಕುಗಳು ಕಾಪಾಡಿಕೊಳ್ಳುವಂತ ವ್ಯವಸ್ಥೆ ಗೌಡಾಲುಗಳಲ್ಲಿ ಹಿಂದಿನಿಂದಲೂ ಇದೆ. ಸಮುದಾಯದ ಸ್ವಾಯತ್ತತೆ ಮತ್ತು ನಾಗರಿಕ ಹಕ್ಕುಗಳನ್ನು ಕಾಪಾಡಿಕೊಳ್ಳಲು ಮೇಲ್ವರ್ಗದ ಜನರಿಂದ ರಕ್ಷಣೆ ಪಡೆಯಲು ಈ ವ್ಯವಸ್ಥೆ ಶಾಸಕಾಂಗದ ಒಂದು ಭಾಗದಂತೆ ಕೆಲಸ ಮಾಡುತ್ತಿದೆ. ಆದ್ದರಿಂದ ಸಂವಿಧಾನದಂತಿರುವ ನ್ಯಾಯ ವ್ಯವಸ್ಥೆ ಅಥವಾ ಪಂಚಾಯತ್

ವ್ಯವಸ್ಥೆ ಆಧುನಿಕ ಸಂವಿಧಾನದ ಪ್ರತಿರೂಪದಂತಿರುವ ವ್ಯವಸ್ಥೆಯಾಗಿದೆ. ಈ ವ್ಯವಸ್ಥೆಯ ಮೂಲಕ ಸಮುದಾಯವು ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಮೂಡಿಸುವ ಸಾಮಾಜಿಕ ಹೊಣೆಗಾರಿಕೆ ಜೀವನ ನಡೆಸಲುಕ್ಕೆ ಅವಕಾಶ ಕಲ್ಪಿಸಿದೆ.

ಗೌಡಾಲುಗಳಲ್ಲಿ ರಾಜಕೀಯ ಪ್ರಜ್ಞೆ ಎನ್ನುವುದು ಗುಂಪುಗಾರಿಕೆಯಾಗಿದ್ದು, ಸಾಮುದಾಯಿಕವಾಗಿದೆ. ಮಾನವ ಸಮಾಜದಲ್ಲಿ ರಾಜಕೀಯ ಪ್ರಜ್ಞೆ ಎನ್ನುವುದು ಉತ್ಪಾದನ ವಿಧಾನದ ಆಧಾರದ ಮೇಲೆ ಅಥವಾ ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆ ನಿರ್ಧರಿತವಾಗುವಂತದ್ದು. ಯಾವಾಗ ಮಾನವನ ಉತ್ಪಾದನೆಯ ಫಲಿತತೆ ಹೆಚ್ಚಳವಾಯಿತೋ ಆಗ ಅವನಲ್ಲಿ ಸ್ಪರ್ಧೆ ಏರ್ಪಟ್ಟಿತು. ಸ್ಪರ್ಧೆ ಒಂದರ್ಥದಲ್ಲಿ ಮೇಲು ಕೀಳು ಎನ್ನುವ ಭಾವನೆ ಹುಟ್ಟಿಸಿತು. ಇದೇ ಕಾರಣಕ್ಕೆ ಬಲಿಷ್ಠವಾದ ಅಥವಾ ಚಾಣಾಕ್ಷನಾದ ವ್ಯಕ್ತಿ ಸಮುದಾಯವನ್ನು ಆಳಲು ಪ್ರಾರಂಭಿಸಿದ. ಹೀಗೆ ಆಳುವುದು ಒಂದು ರೀತಿಯಲ್ಲಿ ಮಾನವನಲ್ಲಿ ರಾಜಕೀಯ ಮನೋಭಿಲಾಷೆಯನ್ನು ಬೆಳೆಸಿತ್ತು. ಅಲ್ಲದೆ ಹೆಚ್ಚಿನ ಅಧಿಕಾರ ವ್ಯಕ್ತಿಯನ್ನು ಸಮಾಜದ ಮೇಲೆ ಪ್ರಭುತ್ವ ಸಾಧಿಸುವ ನಿಟ್ಟಿನಲ್ಲಿ ಪ್ರಯತ್ನಿಸುವಂತೆ ಮಾಡಿತು. ಈ ಹಿನ್ನೆಲೆಯಿಂದ ಬುಡಕಟ್ಟುಗಳಲ್ಲಿ ರಾಜಕೀಯ ಪ್ರಜ್ಞೆ ಎನ್ನುವುದು ಸಾಮುದಾಯಿಕವಾಗಿತ್ತು. ಸಮುದಾಯದಲ್ಲಿ ಅವನನ್ನು ಹಿರಿಯ, ಮುಖಂಡ ಸಮುದಾಯ ಒಪ್ಪಿತ ನಾಯಕ ಅಥವಾ ವ್ಯಕ್ತಿ ಎಂದು ಗುರುತಿಸಲಾಗಿದೆ. ಮುಖಂಡರು ರಾಜಕೀಯದಲ್ಲಿ ಜನರ ಸಮ್ಮತಿ ಮೇರೆಗೆ ಆಯ್ಕೆ ಆಗಿ ಜನರ ಕಷ್ಟಗಳಿಗೆ ಸಮಸ್ಯೆಗಳಿಗೆ ಸ್ಪಂದಿಸುವ ಮೂಲಕ ನಾಯಕನಾಗಿರುವುದಲ್ಲದೆ ಈ ವ್ಯಕ್ತಿ ತೆಗೆದುಕೊಳ್ಳುವ ತೀರ್ಮಾನಗಳು ಇಡೀ ಸಮುದಾಯವು ಸ್ವೀಕರಿಸುತ್ತದೆ. ಈ ನಿಟ್ಟಿನಲ್ಲಿ ೧೭ನೇ ಶತಮಾನದ ಬ್ರಿಟಿಷರ ಒಡೆದು ಆಳುವ ನೀತಿ ಬುಡಕಟ್ಟು ಸಮುದಾಯಗಳಲ್ಲಿನ ರಾಜಕೀಯ ಪ್ರಜ್ಞೆಯನ್ನು ಅಸ್ಥಿರಗೊಳಿಸಿದವು. ಮುಖಂಡ, ನಾಯಕ ಎಂದು ಗುರುತಿಸಿಕೊಳ್ಳುತ್ತಿದ್ದ ವ್ಯಕ್ತಿ ವೈಯಕ್ತಿಕ ಹಿತಾಸಕ್ತಿಯಾಗಲಿ ಅಥವಾ ಕೌಟುಂಬಿಕ ರಕ್ಷಣೆ, ಸ್ವಾರ್ಥ ಮನೋಭಿಲಾಷೆಯಾಗಲಿ ಹೊಂದಿರುತ್ತಿರಲಿಲ್ಲ. ಮುಖಂಡನು ಸಮುದಾಯ ಒಪ್ಪಿತನಾಗಿರುತ್ತಾನೆ. ಯಾವಾಗ ಬ್ರಿಟಿಷರ ಒಡೆದು ಆಳುವ ನೀತಿ ಬುಡಕಟ್ಟುಗಳ ನಡುವೆ ಬಂತೋ ಅಂದಿನಿಂದ ನ್ಯಾಯಯುತ ರಾಜಕೀಯ ಪ್ರಜ್ಞೆಗೆ ಪೆಟ್ಟಾಯಿತು. ಬ್ರಿಟಿಷರು ತಮ್ಮ ಸಾಮ್ರಾಜ್ಯದ ವಿಸ್ತರಣೆಗಾಗಿ ದೊಡ್ಡ ಸವಾಲಾಗಿದ್ದ ಬುಡಕಟ್ಟುಗಳನ್ನು ವ್ಯವಸ್ಥಿತವಾಗಿ ಒಕ್ಕಲೆಬ್ಬಿಸುವ ಕಾರ್ಯಕ್ಕೆ ನಿಂತವು. ಒಕ್ಕಲೆಬ್ಬಿಸುವ ಮೂಲಕ ಇವರ ಪಾರಂಪರಿಕ ನ್ಯಾಯ ಪದ್ಧತಿ, ಪಂಚಾಯತ್ ವ್ಯವಸ್ಥೆ, ಸಾಮುದಾಯಿಕ ನ್ಯಾಯ ಹಾಗೂ ಸಾಮಾಜಿಕ ನಿಯಂತ್ರಣ ಸಂಸ್ಥೆಗಳನ್ನು ತಮ್ಮ ಹೊಸ ಕಾನೂನು, ಶಾಸನ, ರಾಜಕೀಯ ಆಡಳಿತದ ಮೂಲಕ ನಿಯಂತ್ರಿಸಿದರು. ಅಲ್ಲದೇ ಅಭಿವೃದ್ಧಿಯ ಹೆಸರಿನಲ್ಲಿ ಬುಡಕಟ್ಟು ಸಮುದಾಯಗಳ ಹಾಡಿಗಳನ್ನು ಪ್ರವೇಶಿಸಿದ ಬ್ರಿಟಿಷರು ರಸ್ತೆ ಸಂಪರ್ಕ ಕಲ್ಪಿಸುವ ನೆಪದಲ್ಲಿ ಕಾಡುಗಳಲ್ಲಿ ಕಾಫಿ ಎಸ್ಟೇಟ್‌ಗಳಾಗಿ ಕಾರ್ಖಾನೆಗಳನ್ನು, ತಮಗೆ ಅನುಕೂಲವಾದ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪರಿಸರ ಸಂರಕ್ಷಣೆಯಂತಹ ಕಾನೂನುಗಳನ್ನು ಜಾರಿಗೆ ತರುವ ಮೂಲಕ ಕಾಡುಗಳನ್ನು ಹಾಡಿಗಳಾಗಿ ಪರಿವರ್ತಿಸಿದರು. ಹಾಡಿಗಳಲ್ಲಿನ ಬುಡಕಟ್ಟುಗಳ ಸ್ವಚ್ಛಂದವಾದ ಜೀವನಕ್ಕೆ ಕಡಿವಾಣ ಹಾಕಿದರು. ಪ್ರಾರಂಭದಲ್ಲಿ ಬ್ರಿಟಿಷರ ವಿರುದ್ಧ ಸಿಡಿದು ನಿಂತ ಬುಡಕಟ್ಟುಗಳು ಆಧುನಿಕತೆ ಮತ್ತು ಜಾಗತೀಕರಣದ

ಪರಿಣಾಮವಾಗಿ ತಂತ್ರಜ್ಞಾನದ ಬೆಳವಣಿಗೆಯ ಕಾರಣದಿಂದ ಬ್ರಿಟಿಷರ ಸುಧಾರಿತ ಯುದ್ಧ ಸಾಮಗ್ರಿಗಳ ಶಸ್ತ್ರಾಸ್ತ್ರಗಳನ್ನು ಮೆಟ್ಟಿ ನಿಲ್ಲುವಲ್ಲಿ ಬುಡಕಟ್ಟು ಸಮುದಾಯಗಳು ವಿಫಲವಾದವು. ಈ ಕಾರಣದಿಂದ ಅನಿವಾರ್ಯವಾಗಿ ಬ್ರಿಟಿಷ್ ಸರ್ಕಾರದ ನೂತನ ಕಾನೂನುಗಳು, ಕಾಯ್ದೆಗಳನ್ನು, ಶಾಸನಗಳನ್ನು ಒಪ್ಪಲೇಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಆದರಿಂದಾಗಿ ಬುಡಕಟ್ಟು ಸಮುದಾಯಗಳಲ್ಲಿ ರಾಜಕೀಯ ಬದಲಾವಣೆಯು ಪ್ರಮುಖ ಅಸ್ತ್ರವಾಗಿ ಹೊರಹೊಮ್ಮಿತು.

ಬ್ರಿಟಿಷರ ಕಾಲದಲ್ಲಿ ಭಾರತದ ರಾಜಕೀಯ ವ್ಯವಸ್ಥೆಯೆನ್ನುವುದು ಇದ್ದವರ ಅಥವಾ ಉಳ್ಳವರ ಕೈ ಗೊಂಬೆಯಾಯಿತು. ಇಲ್ಲಿದ್ದ ಕೆಳಸ್ತರದ ಸಮುದಾಯಗಳನ್ನು ನಿಯಂತ್ರಿಸುವ ಸಲುವಾಗಿಯೇ ನೂತನ ವ್ಯವಸ್ಥೆಯೊಂದನ್ನು ಹುಟ್ಟುಹಾಕುವ ಮೂಲಕ ಸಮುದಾಯಗಳಿಗೆ ಕಡಿವಾಣ ಹಾಕಲಾಯಿತು. ಅಪರಾಧಿ ಕಾಯ್ದೆ, ಕಾನೂನುಗಳು, ಶಾಸನಗಳು, ಪರಿಸರ ಕಾಯ್ದೆ, ಸಂರಕ್ಷಣೆ ಕಾಯ್ದೆಯಂತ ಹೊರಡಿಸಿದ ಆಜ್ಞೆಗಳನ್ನು ಉಲ್ಲಂಘಿಸಿದರೆ ಅದಕ್ಕೊಂದು ಕಾನೂನು ಕಂದಾಯ, ಮುಂತಾದವುಗಳನ್ನು ತಂದು ಹೆಜ್ಜೆ ಹೆಜ್ಜೆಗೂ ಕಾನೂನುಗಳನ್ನು ಕಾಯ್ದೆಗಳನ್ನು ಜನರ ಮೇಲೆ ಹೇರುವ ಮೂಲಕ ಅವರಲ್ಲಿನ ಬುಡಕಟ್ಟುಗಳಲ್ಲಿನ ರಾಜಕೀಯ ಪ್ರಜ್ಞೆ ಮರೆಯಾಗುವಂತೆ ಮಾಡಿದರು. ಅಲ್ಲಿ ಸುಧಾರಿತ ಬುಡಕಟ್ಟುಗಳನ್ನು ತಮ್ಮ ರಾಜಕೀಯದ ಲಾಲಸೆಗೆ ಬಲಿ ತೆಗೆದುಕೊಳ್ಳಲಾಯಿತು. ಸಮುದಾಯಗಳ ವಿರುದ್ಧ ಸಮುದಾಯಗಳನ್ನು ಎತ್ತಿಕಟ್ಟುವ ಮೂಲಕ ಸಮುದಾಯಗಳನ್ನು ಸಂಘರ್ಷಕ್ಕೆ ಇಳಿಸಿದವು. ಮತಾಂತರ, ಸೈನಿಕ ಸೇವೆ, ನೌಕರಿಯಂತಹ ಆಮಿಷಗಳನ್ನು ತೋರಿಸುವ ಮೂಲಕ ಕೆಲವು ಸಮುದಾಯಗಳನ್ನು ಸಂಪೂರ್ಣವಾಗಿ ತಮ್ಮ ಕೈ ಗೊಂಬೆಗಳನ್ನಾಗಿ ಮಾಡಿಕೊಳ್ಳುವುದರಿಂದ ಬುಡಕಟ್ಟುಗಳಲ್ಲಿದ್ದ ಸಾಮುದಾಯಿಕ ಭಾವನೆಯನ್ನು ಒಡೆದು ಹಾಕಿ ಸ್ವಾರ್ಥ, ವೈಯಕ್ತಿಕ ಹಿತಾಸಕ್ತಿಗಳಿಗೆ ಬಲಿಯಾಗುವಂತೆ ಮಾಡಲಾಯಿತು. ಇಲ್ಲಿಯವರೆಗೆ ಸಮುದಾಯಗಳು ಒಪ್ಪಿತ ನಾಯಕರಾಗಿದ್ದ ಮುಖಂಡರು ಬ್ರಿಟಿಷ್ ಒಪ್ಪಿತ ನಾಯಕನಾಗುವ ಮೂಲಕ ತಾವೇ ಮಾಡಿಕೊಂಡ ಪಂಚಾಯತ್ ವ್ಯವಸ್ಥೆಯನ್ನು ತಾವೇನೇ ನೀಡಿದ ತೀರ್ಪುಗಳನ್ನು ವ್ಯಾಜ್ಯಗಳನ್ನು ಮುರಿದು ಬ್ರಿಟಿಷ್ ಸರ್ಕಾರದ ರಾಜಕೀಯ ಮನೋಭಾವನೆ ಬೇರು ಬಿಟ್ಟಿತು.

ಪ್ರಸ್ತುತ ಗೌಡಾಲು ಬುಡಕಟ್ಟು ಜನರು ಗ್ರಾಮಾಡಳಿತದ ಮೂಲಕ ರಾಜಕೀಯ ಪ್ರಜ್ಞೆಯನ್ನು ಹೊಂದಿದ್ದಾರೆ. ಇವರು ಪ್ರಜಾಪ್ರಭುತ್ವ ತತ್ವಗಳಿಗೆ ಬದ್ಧರಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಆಧುನೀಕರಣದ ಪ್ರಭಾವದಿಂದಾಗಿ ಇವರಲ್ಲಿ ರಾಜಕೀಯ ಪ್ರಜ್ಞೆ ಬೆಳೆಯುತ್ತಿರುವುದು ಕಂಡುಬರುತ್ತದೆ. ಇವರಲ್ಲಿ ಇಲ್ಲಿಯವರೆಗೆ ಯಾರೂ ಎಂ.ಎಲ್.ಎ. ಅಥವಾ ಎಂ.ಪಿಗಳಾಗಿ ಅಥವಾ ಮಂತ್ರಿಗಳಾಗಿ ಆಯ್ಕೆಯಾಗಿಲ್ಲ. ತಾಲ್ಲೂಕು ಪಂಚಾಯತ್, ಮತ್ತು ಗ್ರಾಮ ಪಂಚಾಯತ್ ಮಟ್ಟದ ರಾಜಕೀಯದಲ್ಲಿ ಸದಸ್ಯರಾಗಿ, ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಈಗಲೂ ಕೆಲವೊಂದು ಕಡೆ ಗೌಡಾಲು ಬುಡಕಟ್ಟು ಜನರು ರಾಜಕೀಯದ ವಿವಿಧ ಹಂತಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅವರು ಹೊಂದಿರುವ ರಾಜಕೀಯ ಹಿತಾಸಕ್ತಿಯ ಕುರಿತು ಈ ಸಂಶೋಧನೆಯಲ್ಲಿ ಮಾಹಿತಿಯನ್ನು ಸಂಗ್ರಹಿಸಿದ್ದು, ಅದನ್ನು ಈ ಕೆಳಗಿನ ಕೋಷ್ಟಕದಲ್ಲಿ ಕ್ರೋಡೀಕರಿಸಲಾಗಿದೆ.

**ಕೋಷ್ಟಕ ೬.೧೦**

**ಗೌಡಾಲು ಸಮುದಾಯದ ರಾಜಕೀಯ ಹಿತಾಸಕ್ತಿ**

| ಆಸಕ್ತಿ ಇರುವ ಕ್ಷೇತ್ರಗಳು | ಒಟ್ಟು ಸಂಖ್ಯೆ | ಶೇಕಡಾವಾರು |
|---|---|---|
| ಮತದಾರನಾಗಿ ಭಾಗವಹಿಸುವುದು | ೮೯ | ೬೧.೩೭ |
| ಪಕ್ಷದ ಕಾರ್ಯಕರ್ತನಾಗಿ | ೨೧ | ೧೪.೪೮ |
| ಪಕ್ಷದ ಸಂಘಟಕರಾಗಿ | ೧೭ | ೧೧.೭೨ |
| ಸ್ಪರ್ಧಿಗಳಾಗಿ | ೪ | ೨.೭೫ |
| ಪಕ್ಷದ ಸದಸ್ಯರಾಗಿ | ೧೪ | ೯.೬೫ |
| ಒಟ್ಟು | ೧೪೫ | ೧೦೦.೦೦ |

ಮೇಲಿನ ಕೋಷ್ಟಕದಲ್ಲಿ ಕಂಡುಬರುವ ಸಂಗತಿ ಎಂದರೆ ೮೯(ಶೇ.೬೧.೩೭)ರಷ್ಟು ಗೌಡಾಲು ಜನರು ಮತದಾರರಾಗಿ ಭಾಗವಹಿಸಲು ಆಸಕ್ತಿ ಹೊಂದಿದ್ದಾರೆ. ೨೧(ಶೇ.೧೪.೪೮)ರಷ್ಟು ಜನರು ಪಕ್ಷದ ಕಾರ್ಯಕರ್ತರಾಗಿ ಕಾರ್ಯವನ್ನು ಮಾಡುತ್ತಿದ್ದಾರೆ. ೧೭(ಶೇ.೧೧.೭೨) ಜನರು ಪಕ್ಷದ ಸಂಘಟಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ೦೪ ಶೇ. ೨.೭೫ರಷ್ಟು ಜನರು ಸ್ಪರ್ಧಿಗಳಾಗಿ ಕಣಕ್ಕೆ ಇಳಿಯುತ್ತಿದ್ದರೆ, ಕೊನೆಯದಾಗಿ ೧೪ ಶೇ.೯.೬೫ ರಷ್ಟು ಜನರು ಪಕ್ಷದ ಸದಸ್ಯರಾಗಿ ರಾಜಕೀಯದಲ್ಲಿ ಭಾಗಿಗಳಾಗಿದ್ದಾರೆ.

ಕೋಷ್ಟಕದಲ್ಲಿ ಇರುವಂತೆ ಅತಿ ಹೆಚ್ಚು ಜನ ಶೇ.೬೧.೩೭ರಷ್ಟು ಜನರು ಮತದಾರರಾಗಿ ಭಾಗವಹಿಸುವ ಮನೋಭಾವನೆ ಹೊಂದಿರುತ್ತಾರೆ. ನಂತರ ಶೇ. ೧೪.೪೮ರಷ್ಟು ಜನರು ಪಕ್ಷದ ಕಾರ್ಯಕರ್ತರಾಗಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಅತಿ ಕಡಿಮೆ ಅಂದರೆ ಶೇ.೨.೭೫ ಜನರು ಸ್ಪರ್ಧಿಗಳಾಗಿ ರಾಜಕೀಯದಲ್ಲಿ ಭಾಗವಹಿಸುತ್ತಿರುವುದು ಕಂಡುಬರುತ್ತದೆ. ಗೌಡಾಲು ಜನರು ರಾಜಕೀಯದ ಬಗ್ಗೆ ಅಷ್ಟೊಂದು ತಿಳುವಳಿಕೆ ಹೊಂದಿಲ್ಲದಿದ್ದರೂ ಸಹ ಅವರ ಸಂಖ್ಯೆಯು ರಾಜಕೀಯ ಕ್ಷೇತ್ರದಲ್ಲಿ ಗಣನೀಯವಾಗಿದೆ. ಈ ಕೋಷ್ಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ ಕೆಲವು ತಿಳುವಳಿಕೆದಾರರು ಒಂದಕ್ಕಿಂತ ಹೆಚ್ಚು ಆಸಕ್ತಿಯ ಕ್ಷೇತ್ರವನ್ನು ಹೊಂದಿರುವ ಕಾರಣದಿಂದಾಗಿ ಕೋಷ್ಟಕದ ಒಟ್ಟು ಮೊತ್ತವು ಮಾದರಿಯನ್ನು ಮೀರಿದೆ. ಎಲ್ಲ ಹಿನ್ನೆಲೆಯಿಂದ ತಿಳುವಳಿಕೆಗೆ ಬರುವುದೇನೆಂದರೆ ೨೧ನೇ ಶತಮಾನದ ರಾಜಕೀಯ ವ್ಯವಸ್ಥೆಯಲ್ಲಿ ಗೌಡಾಲುಗಳಿಗೆ ರಾಜಕೀಯ ಸ್ಥಾನಮಾನಗಳು ದೊರೆಯದೆ ಇರುವುದಾಗಿದೆ.

**೪.೨ ಭೂ ಸ್ವಾಧೀನ ಹಕ್ಕು**

ಆದಿಮಾನವನ ಬದುಕು ಪ್ರಾರಂಭವಾದ ಬಗೆಯನ್ನು ನಾವು ಈ ಸಂದರ್ಭದಲ್ಲಿ ಚರ್ಚಿಸಬೇಕಾಗುತ್ತದೆ. ಯಾವುದೇ ಸ್ವಂತ ಆಸ್ತಿಯ ಕಲ್ಪನೆಯಿಲ್ಲದೆ, ಮಾನವನ ಅರಿವಿಗೆ ಬಾರದೆ, ಅವೈಜ್ಞಾನಿಕತೆಯ ವ್ಯವಸ್ಥೆಯಲ್ಲಿ ಬದುಕು ಛಿದ್ರಛಿದ್ರವಾಗಿ ಸ್ಥಾಪನೆಗೊಳ್ಳುತ್ತಾ ಬಂದು ವಸ್ತು ವಿನಿಮಯ ಪದ್ಧತಿಯಲ್ಲಿ ಜೀವನ ನಿರ್ಮಾಣಗೊಂಡಿರುವ ಹಂತವನ್ನು ನಾವು ಮರೆಯುವಂತಿಲ್ಲ.

ವೇದ ಪೂರ್ವಕಾಲದಲ್ಲಿದ್ದ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಚರ್ಚೆ ಮಾಡುತ್ತಾ ಹೊರಟರೆ ಮಾನವನ ಮಾನಸಿಕ ವಿಕಾಸವಾಗಿರದೆ ಆದಿಮಾನವ ಸಣ್ಣ ಸಣ್ಣ ಗುಂಪುಗಳಲ್ಲಿ ವಾಸಿಸುತ್ತ, ಬೇಟೆಯಾಡುತ್ತಾ, ಹಣ್ಣುಗಳು ಮತ್ತು ಗೆಡ್ಡೆಗೆಣಸುಗಳನ್ನು ಸಂಗ್ರಹಿಸಿ ಜೀವಿಸುತ್ತಿದ್ದರೆಂಬುದು ಚರಿತ್ರೆಯಿಂದ ತಿಳಿಯುತ್ತದೆ. ಶಿಲಾಯುಗದ ಕೊನೆಯಲ್ಲಿ ಮತ್ತು ಲೋಹಯುಗದ ಆರಂಭದಲ್ಲಿ, ಮಾನವನು ಆಹಾರ ಉತ್ಪಾದನೆಮಾಡಿ ಮನೆಗಳಲ್ಲಿ ವಾಸಿಸುವುದನ್ನು ಕಲಿತ. ಬೆಟ್ಟಗಳು ಮತ್ತು ನದಿಗಳಿಗೆ ಸಮೀಪ ಬದುಕನ್ನು ಕಟ್ಟಿಕೊಂಡು ಅಲೆಮಾರಿ, ಅರೆ ಅಲೆಮಾರಿಯಾಗಿ ಬದುಕಿದ. ಬುಡಕಟ್ಟು ಸಮುದಾಯಗಳು ಕಾಡನ್ನು ಬಿಟ್ಟು ಹೊರಗೆ ಬರದೆ ಅರಣ್ಯದ ಪರಿಸರಕ್ಕೆ ಹೊಂದಾಣಿಕೆ ಮಾಡಿಕೊಂಡು ಬಂದಿದ್ದರಿಂದ ಬುಡಕಟ್ಟುಗಳ ಕುರಿತ ಅಧ್ಯಯನಗಳು ಈ ದಿನಮಾನಗಳಲ್ಲಿ ಮುಖ್ಯವಾಗುತ್ತವೆ. ಈ ಹಿನ್ನೆಲೆಯ ಬದುಕನ್ನು ಗೌಡಾಲು ಬುಡಕಟ್ಟು ರೂಢಿಸಿಕೊಂಡು ಬಂದಿರುವುದು ಇಲ್ಲಿ ವಿಶೇಷವಾಗಿದೆ.

ಕ್ರಿ.ಶ.೫ನೆಯ ಶತಮಾನದಿಂದ ಇಲ್ಲಿಯವರೆಗೆ ಸಮುದಾಯಗಳು ವಿಭಿನ್ನವಾದ ಸಮಸ್ಯೆಗಳಲ್ಲಿ ಸಿಲುಕಿಕೊಂಡಿರುವುದು ತಿಳಿದುಬರುತ್ತದೆ. ಈ ಕಾಲದಲ್ಲಿ ಭೂಮಾನ್ಯ ನೀಡುವ ಪದ್ಧತಿಯು ಆರಂಭವಾಗಿ ಯಾವುದೇ ಕಂದಾಯ ಹಾಗೂ ತೆರಿಗೆಗಳ ಹೊರೆಯಿಲ್ಲದಂತೆ ಹಳ್ಳಿಗಳನ್ನು ಬ್ರಾಹ್ಮಣರಿಗೆ ನೀಡಿರುವುದರಿಂದ ಹಳ್ಳಿಯಿಂದ ರಾಜರಿಗೆ ಸಂದಾಯವಾಗಬೇಕಾಗಿದ್ದ ಕಂದಾಯಗಳೆಲ್ಲವು ಬ್ರಾಹ್ಮಣರಿಗೆ ವರ್ಗಾಯಿಸಲ್ಪಟ್ಟಿದ್ದರಿಂದ ಗ್ರಾಮಗಳ ಆಡಳಿತವೆಲ್ಲವೂ ಬ್ರಾಹ್ಮಣರಿಗೆ ಸೇರಿತು. ಪರಿಣಾಮವಾಗಿ ಗುಪ್ತರ ಮತ್ತು ಮೌರ್ಯರ ಕಾಲದಲ್ಲಿ ಬುಡಕಟ್ಟು ಸಮುದಾಯಗಳು ಮತ್ತು ತಳಮಟ್ಟದ ಸಮುದಾಯಗಳು ಭೂಮಿಯ ಒಡೆಯರಾಗಿರದೆ ಬೇರೊಬ್ಬರ ಅಧೀನದಲ್ಲಿ ಬದುಕುವ ವಾತಾವರಣ ಸೃಷ್ಟಿಯಾಗಿದ್ದು ದುರಂತವೇ ಸರಿ. ಏಕೆಂದರೆ ಯಾರ ಭಯವೂ ಇಲ್ಲದೆ ತಾವೇ ರಾಜರು ಎಂದು ಬದುಕುವ ಗಿರಿಜನರಿಗೆ ಎಲ್ಲಿಂದ ಸಂತೋಷವಾಗಬೇಕು.

ಋಗ್ವೇದದ ಕಾಲದಲ್ಲಿ ಮಾನವರು ಭಾಗಶಃ ಅಲೆಮಾರಿಗಳಾಗಿದ್ದು ದನಗಳ ಹಿಂಡು ಹಾಗೂ ಕುದುರೆಗಳೇ ಅವರ ಪ್ರಮುಖ ಆಸ್ತಿಯಾಗಿದ್ದವು. ಆದ್ದರಿಂದಲೇ ಈ ಹಂತದಲ್ಲಿ ಕೃಷಿಯ ಪಾತ್ರವು ಅಪರೂಪವಾಗಿದೆ. ಇಲ್ಲಿ ಬುಡಕಟ್ಟುಗಳು ಏಕೆ ದನಗಳನ್ನು ಸಾಕುತ್ತಿದ್ದಾರೆ ಎಂಬುದನ್ನು ನಾವು ಚರ್ಚಿಸುತ್ತ ಹೊರಟರೆ ದನಗಳು ಅವರಿಗೆ ಹಾಲು, ಮೊಸರು, ತುಪ್ಪಗಳನ್ನು ಕೊಡುತ್ತಿದ್ದವು. ಆದ್ದರಿಂದ ಅವರ ಬದುಕು ಸಾಗುತ್ತಿತ್ತು. ಆದರೆ ಕಾಡಿನಲ್ಲಿ ಸೊಪ್ಪು ಹುಲ್ಲುಗಳನ್ನು ತಂದು ದನಗಳಿಗೆ ಹಾಕುವುದು ಸಾಮಾನ್ಯವಾಗಿತ್ತು. ಈ ಹಿನ್ನೆಲೆಯಿಂದ ಬುಡಕಟ್ಟು ಸಮುದಾಯಗಳು ಅರಣ್ಯವನ್ನು ಬದುಕಲು ಆಯ್ಕೆ ಮಾಡಿಕೊಂಡಿರುವುದು ತಿಳಿಯುತ್ತದೆ. ಈ ಹಂತದಲ್ಲಿ ಬುಡಕಟ್ಟು ಸಮುದಾಯಗಳು ತಮ್ಮ ದಿನದ ಬದುಕಿಗಾಗಿ ಮಾತ್ರ ಉತ್ಪಾದಿಸುವ ಪರಿಪಾಟವನ್ನು ಹೊಂದಿದ್ದರು. ಆದರೆ ಉಳಿತಾಯದ ಮನೋಭಾವನೆಯಿರಲಿಲ್ಲವೆಂಬುದು ಎಲ್ಲರಿಗೂ ತಿಳಿದ ಸಂಗತಿ.

ಪ್ರಾಚೀನ ಸಮಾಜವು ವರ್ಣವಿಭಜಿತ ಸಮಾಜದ ಆಧಾರದ ಮೇಲೆ ರಚನೆಗೊಂಡಿದೆ. ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ರೈತರು ಮತ್ತು ಶೂದ್ರರ ಉತ್ಪಾದನಾ ಕ್ರಿಯೆಗಳ ಆಧಾರದ ಮೇಲೆ ಸಮಾಜದ ಅಭಿವೃದ್ಧಿ ನಿಂತಿತ್ತು ಎಂಬುದು ಮುಖ್ಯವಾಗುತ್ತದೆ. ಭೂ ಸ್ವಾಧೀನ ಹಕ್ಕು ಬುಡಕಟ್ಟು ಸಮುದಾಯಗಳಿಗೆ ಸಿಗದೆ

ಪರಂಪರಾನುಗತವಾಗಿ ಕೆಳವರ್ಗಗಳ ಮೇಲೆ ತಮ್ಮ ಹಿಡಿತವನ್ನು ಮೇಲ್ವರ್ಗದವರು ಇಟ್ಟುಕೊಂಡಿರುವುದಲ್ಲದೆ ದುಬಾರಿ ಕಂದಾಯಗಳು ಹಾಗೂ ದಂಡಗಳನ್ನು ಹೇರುತ್ತಾ ಬಂದಿರುವುದು ೨೧ನೇ ಶತಮಾನದ ಕಾಲವಾದ ಇಂದೂ ನಿಂತಿಲ್ಲವೆಂಬುದು ಕ್ಷೇತ್ರಕಾರ್ಯದ ಸಮಯದಲ್ಲಿ ಗೌಡಾಲು ಸಮುದಾಯವನ್ನು ಅಧ್ಯಯನ ಮಾಡಿದಾಗ ಮನವರಿಕೆಯಾಗಿದೆ. ಈ ಪರಿಣಾಮವಾಗಿ ಭೂ ಸ್ವಾಧೀನ ಹಕ್ಕನ್ನು ಕುರಿತು ಚರ್ಚಿಸಬೇಕಾದ ಅನಿವಾರ್ಯತೆಯಿದೆ.

ಇಲ್ಲಿ ಕೃಷಿಯ ಅರ್ಥ ವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯಗಳಿಗೆ ಯಾವುದೇ ಪೂರಕ ಬೆಳವಣಿಗೆಯಾಗಿರದೆ ಭೂಮಿಯನ್ನು ಹೊಂದಿದವರು ತಾವೇ ಸ್ವತಃ ಕೃಷಿಯನ್ನು ಮಾಡುವಂತಿರಲಿಲ್ಲವೆಂಬುದು ಗಮನಾರ್ಹವಾದ ಸಂಗತಿ. ಈ ಕಾಲದಲ್ಲಿ ಬೇಸಾಯದ ಕೆಲಸವನ್ನು ಬುಡಕಟ್ಟುಗಳಿಗೆ ಹಾಗೂ ಕೆಳವರ್ಗದವರಿಗೆ ವಹಿಸಲ್ಪಟ್ಟಿತ್ತು. ಆದರೆ ಕಾಯಿದೆಯ ಅನ್ವಯವಾಗಿ ಯಾವುದೇ ಭೂಮಿಯ ಒಡೆಯರಾಗಲಿಕ್ಕೆ ಅವಕಾಶಗಳು ಇರಲಿಲ್ಲ. ೬ನೇ ಶತಮಾನದಲ್ಲಿ ಬುಡಕಟ್ಟುಗಳು ಅರಣ್ಯದ ಪ್ರದೇಶಗಳಲ್ಲಿ ಕೃಷಿ ಮಾಡುತ್ತಿದ್ದರೂ ಭೂಮಿಯ ಹಕ್ಕು ದೊರೆಯದೆ ಅತಂತ್ರ ಸ್ಥಿತಿಯಲ್ಲಿ ಬದುಕನ್ನು ರೂಪಿಸಿಕೊಂಡಿದ್ದರು ಎಂಬ ಮಾತು ನಿಜವಾಗಿದೆ.

ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ಪ್ರಾರಂಭಿಸಿದರೆ ಈ ದೇಶದ ಸಾಮಾಜಿಕ ವ್ಯವಸ್ಥೆಯು ಬೆಳೆದು ಬಂದ ಬಗೆಯನ್ನು ಚರ್ಚಿಸಬೇಕಾಗುತ್ತದೆ. ಇತರೆ ದೇಶಗಳಲ್ಲಿ ವರ್ಗಗಳು ತಲೆಯೆತ್ತಲು ಯಾವ ರೀತಿಯ ವ್ಯವಸ್ಥೆ ಕಾರಣವಾಯಿತೋ ಅದೇ ವ್ಯವಸ್ಥೆಯು ಭಾರತದಲ್ಲಿ ಭಾಗಶಃ ವರ್ಣ ವ್ಯವಸ್ಥೆಯ ಸೃಷ್ಟಿಗೆ ಕಾರಣವಾಗಿದೆ ಎಂದರೆ ತಪ್ಪಾಗಲಾರದು. ಈ ವ್ಯವಸ್ಥೆಯು ಉಗಮವಾಗಲು ಆರ್ಥಿಕ ಕಾರಣಗಳೇ ಮುಖ್ಯವಾಗಿವೆ ಎಂದರೆ ಅಭ್ಯಂತರವಿರಲಾರದು. ಚರಿತ್ರೆಯ ಪುಟಗಳನ್ನು ತೆರೆದು ನೋಡಿದಾಗ ವೈವಿಧ್ಯತೆಯಲ್ಲಿ ಏಕತೆಯೆಂದು ಸಾರುವ ನಮ್ಮ ದೇಶದಲ್ಲಿ ಬುಡಕಟ್ಟು ಸಮುದಾಯಗಳನ್ನು ಎಷ್ಟರ ಮಟ್ಟಿಗೆ ಶೋಷಣೆ ಮಾಡುತ್ತಾ ಬಂದಿದ್ದಾರೆ ಎಂಬುದು ಮನವರಿಕೆಯಾಗುತ್ತದೆ. ಈ ಹಿನ್ನೆಲೆಯನ್ನು ಅವಲೋಕಿಸುತ್ತಾ ಹೊರಟರೆ ಶೋಷಕ ಮತ್ತು ಶೋಷಿತ ವರ್ಗಗಳ ಮಧ್ಯೆ ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಹೋರಾಟಗಳು ನಡೆದಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಉತ್ಪಾದಕ ಶಕ್ತಿಗಳು ಬುಡಕಟ್ಟು ಸಮುದಾಯಗಳು ಮತ್ತು ಕೆಳವರ್ಗಗಳಾಗಿರುವುದರಿಂದ ಸಾಮಾಜಿಕ ಸ್ತರವಿನ್ಯಾಸದ ವ್ಯವಸ್ಥೆಯಲ್ಲಿ ಸಂಘರ್ಷಗಳು ಮಂದಗತಿಯಲ್ಲಿ ನಡೆಯುತ್ತಾ ಬಂದು ೨೧ನೇ ಶತಮಾನದ ಕಾಲವಾದ ಇಂದು ಕೂಡ ಪ್ರಭುತ್ವವು ಕೆಳವರ್ಗದವರನ್ನು ಹೀನಾಯವಾಗಿ ಕಾಣುತ್ತಿರುವುದು ಗೋಚರಿಸುತ್ತದೆ. ಆದ್ದರಿಂದ ಜಾಗತೀಕರಣದ ವ್ಯವಸ್ಥೆಯನ್ನು ಮುಂದೆ ಇಟ್ಟು ಸಮುದಾಯಗಳನ್ನು ಪರೋಕ್ಷವಾಗಿ ಶೋಷಣೆ ಮಾಡುತ್ತಿರುವುದು ಎಲ್ಲರಿಗೂ ಗೊತ್ತಿದ್ದರೂ ಸಮುದಾಯಗಳ ಸದಭಿರುಚಿಯ ಅಧ್ಯಯನಕಾರರ ಅವಶ್ಯಕತೆ ಬಹುಮುಖ್ಯವಾಗಿದೆ.

ಪ್ರಾಚೀನ ಕಾಲದಲ್ಲಿ ಯಾವುದೇ ಭೂಮಿಯ ಹಕ್ಕು ಪತ್ರಗಳನ್ನು ತಳಸಮುದಾಯಗಳಿಗೆ ಕೊಡದೆ ಮೇಲುವರ್ಗದವರು ಆರ್ಥಿಕತೆಯ ಮೂಲಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಇಡೀ ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡು ಬಂದಿದ್ದಾರೆ. ಅಲ್ಲದೆ ಧರ್ಮ ಗುರುಗಳ ತಂತ್ರ

ಕುತಂತ್ರಗಳು ಬುಡಕಟ್ಟು ಮತ್ತು ತಳಸಮುದಾಯಗಳ ಬದುಕನ್ನು ಗುಲಾಮಗಿರಿ ಎಂಬ ವ್ಯವಸ್ಥೆಗೆ ಬಲವಂತವಾಗಿ ನೂಕಿರುವುದನ್ನು ಗಮನಿಸಿದರೆ ಭೂ ಸ್ವಾಧೀನ ಹಕ್ಕನ್ನು ಪುರಾತನ ಕಾಲದಿಂದ ಇಲ್ಲಿಯವರೆಗೆ ಸ್ವ ಇಚ್ಛೆಯಿಂದ ಕೊಟ್ಟಿರುವುದು ತುಂಬ ವಿರಳವೆಂದು ಹೇಳಲಾಗುವುದು.

ಮಧ್ಯಯುಗದಲ್ಲಿ ಸಾಮಂತ ಪರಿವಾರಗಳೆಲ್ಲವು ಮೇಲುವರ್ಗದವರ ಆಳ್ವಿಕೆಗೆ ಒಳಪಟ್ಟಿದ್ದ ಕಾಲವಾಗಿತ್ತು. ಅಲ್ಲದೆ ಅಂದಿನ ಸಾಮಾಜಿಕ ವ್ಯವಸ್ಥೆಯು ಬಂಡವಾಳಶಾಹಿಗಳ ಹಿಡಿತದಲ್ಲಿತ್ತು. ಪರಿಣಾಮವಾಗಿ ಶ್ರಮಜೀವಿಗಳು ಇವರ ಶೋಷಣೆಗೆ ಒಳಪಟ್ಟುರುವುದಲ್ಲದೆ ಶ್ರಮಿಕ ಸಮುದಾಯಗಳನ್ನು ದುರುಪಯೋಗ ಪಡಿಸಿಕೊಂಡಿರುವುದು ಹಾಗೂ ಅವರು ದುಡಿದು ಬಂದ ಫಲವನ್ನು ಮತ್ತು ಲಾಭವನ್ನು ಬಂಡವಾಳಶಾಹಿಗಳು ಕಸಿದುಕೊಂಡು ತಮ್ಮ ದುಡಿಮೆಯ ಫಲವೆಂದು ಪರಿಭಾವಿಸಿಕೊಂಡರು. ಇದರಿಂದ ತಿಳಿಯುವುದೇನೆಂದರೆ ಪ್ರಾಚೀನ ಕಾಲದಲ್ಲಿ ಗುಲಾಮರ ಪದ್ಧತಿಯ ರೂಪದಲ್ಲಿ ಶೋಷಣೆ ತಾಂಡವವಾಡಿರುವುದು ಚರಿತ್ರೆಯಿಂದ ತಿಳಿಯುತ್ತದೆ. ಆದ್ದರಿಂದ ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಗೌಡಾಲು ಸಮುದಾಯವು ಕೂಡ ವಿಭಿನ್ನವಾದ ಸಮಸ್ಯೆಯ ಸೆರೆಗಿನಲ್ಲಿ ಸಿಕ್ಕಿಕೊಂಡು ತಲತಲಾಂತರದಿಂದ ಬಳಲುತ್ತಾ ಯಾವುದೇ ಭೂಸ್ವಾಧೀನ ಹಕ್ಕು ಪತ್ರಗಳು ಸಿಗದೆ ಕಾಡಿನಲ್ಲಿ ಹೇಳಲಿಕ್ಕೂ ಆಗದೆ ಇರುವಂತಹ ಗೊಂದಲದ ಸ್ಥಿಯಲ್ಲಿ ಬದುಕು ರೂಪಿಸಿಕೊಳ್ಳುತ್ತಿದ್ದಾರೆ.

ಮಾನವನ ಬದುಕು ಪ್ರಾರಂಭವಾಗಿರುವುದೇ ಬೇಟೆ, ಪಶುಪಾಲನೆ, ಕುಮ್ರಿ ಕೃಷಿ ಅಥವಾ ಬೇಸಾಯದಿಂದ ಎಂಬುದು ಅರ್ಥಗರ್ಭಿತವಾದ ಸಂಗತಿ. ಭೂಮಿಯ ಕಲ್ಪನೆಯಿಲ್ಲದ ಬದುಕು ಬುಡಕಟ್ಟು ಸಮುದಾಯದಾಗಿತ್ತು. ಆದ್ದರಿಂದ ಇಲ್ಲಿ ಬುಡಕಟ್ಟುಗಳು ಆಸ್ತಿಯನ್ನು ಮಾಡಿಕೊಳ್ಳದೆ ದಿನದ ಊಟಕ್ಕಾಗಿ ಮಾತ್ರ ಬದುಕಿದವರಾಗಿದ್ದರು. ಆದರೆ ಭಾರತೀಯ ಮೇಲುವರ್ಗದ ನರನಾಡಿಗಳಲ್ಲಿ ಪ್ರಭುತ್ವದ ಮನೋಭಾವನೆಯು ಬೇರು ಬಿಟ್ಟು ಬುಡಕಟ್ಟುಗಳ ಸ್ವತಂತ್ರ ಮತ್ತು ನೈಸರ್ಗಿಕ ಸ್ಥಾನಮಾನಗಳನ್ನು ದೊರಕಿಸಿಕೊಡದೆ ಗುಲಾಮರಾಗಿ ಮಾಡಿಕೊಂಡು ಬಂದ ಸಾಮಾಜಿಕ ಏಣಿಶ್ರೇಣಿ ವ್ಯವಸ್ಥೆಯು ಪುರಾತನ ಕಾಲದಿಂದ ಇಲ್ಲಿಯವರೆಗೆ ಹೆಣೆದುಕೊಂಡು ಬಂದ ಸಂಗತಿಯನ್ನು ನಾವು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕಾಗಿದೆ.

ಸಾಮಾಜಿಕ ಪರಿವರ್ತನೆಯಲ್ಲಿ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯನ್ನು ಕುರಿತು ಮಾತನಾಡುತ್ತಿರುವಾಗ ಇಲ್ಲಿಯವರೆಗೆ ಯಾವುದೇ ಭೂಮಿಯ ಹಕ್ಕು ಪತ್ರವನ್ನು ಕೊಡದೆ ಮತ್ತು ಸರ್ಕಾರದ ಯಾವುದೇ ಸೌಲಭ್ಯಗಳು ಬುಡಕಟ್ಟುಗಳಿಗೆ ದೊರೆಯದೆ ಇರುವುದನ್ನು ನೆನಪಿಸಿಕೊಂಡರೆ ಭಾರತೀಯ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯು ಟೊಳ್ಳಾಗಿದೆ ಎಂದು ಅರ್ಥೈಸಬೇಕಾಗಿದೆ.

ಪ್ರತಿಯೊಂದು ದೇಶದ ಬುಡಕಟ್ಟು ಸಮುದಾಯಗಳ ಬದುಕು ರೂಪಗೊಂಡಿರುವುದು ಕಾಡು ಮತ್ತು ಭೂಮಿಯಿಂದ ಎಂಬುದು ಸತ್ಯವಾಗಿರುವುದರಿಂದ ಯಾವುದೇ ಬುಡಕಟ್ಟು ತನ್ನ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಭೂಮಿಯ ಮತ್ತು ಕಾಡಿನ ಸಂಬಂಧಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡಿವೆ. ಇದರ ಫಲವಾಗಿಯೇ ಸಮುದಾಯಗಳ ಸಂಸ್ಕೃತಿಯ ವಿಕಾಸಶೀಲ ಪ್ರವೃತ್ತಿಯಿಂದ ಕೂಡಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ.

''ಅರ್ಥವ್ಯವಸ್ಥೆಯಲ್ಲಿ ಭೂಮಿಯ ನಂತರದ ವ್ಯವಸ್ಥೆಯೇ ಶ್ರಮ.ು ಈ ಶ್ರಮವನ್ನು ಹಣದ ಉದ್ದೇಶಕ್ಕಾಗಿ ಎಲ್ಲ ವರ್ಗಗಳು ಯಾವಾಗಲೂ ಮಾಡುತ್ತಿರಲಿಲ್ಲ. ಸೇವೆಯೂ ಪ್ರಮುಖ ಸ್ಥಾನವಾಗಿತ್ತು. ಬುಡಕಟ್ಟು

ಸಮುದಾಯಗಳಲ್ಲಿ ವೈಯಕ್ತಿಕ, ಕೌಟುಂಬಿಕ ಹಾಡಿ ಹಾಡಿಗಳ ನಡುವೆ ನಡೆಯುವ ಯಾವುದೇ ಸಂದರ್ಭಗಳಲ್ಲಿ ಆರ್ಥಿಕತೆಯ ಸ್ಥಾನವನ್ನು ಸೇವೆಯು ತುಂಬುತ್ತಿತ್ತು. ಅಲ್ಲದೆ ಈಗಲೂ ಬುಡಕಟ್ಟು ಸಮುದಾಯಗಳಲ್ಲಿ ವಸ್ತುವಿನಿಮಯ ಪದ್ಧತಿಯು ಇರುವುದು ಅಲ್ಲಲ್ಲಿ ಗೋಚರಿಸುತ್ತದೆ.''

ಗೌಡಾಲು ಬುಡಕಟ್ಟಿನ ಸಮಾಜದಲ್ಲಿ ಆರ್ಥಿಕ ಪ್ರಭಾವಕ್ಕಿಂತ ಇತರೆ ಮೇಲುವರ್ಗದವರ ಶೋಷಣೆ ಎದ್ದು ಕಾಣುತ್ತದೆ. ಚಿಕ್ಕಮಗಳೂರು ಜಿಲ್ಲೆಯು ಕಾಫಿ, ಟೀ, ಏಲಕ್ಕಿ, ಶುಂಠಿ, ಬಾಳೆ, ಅಡಿಕೆ ಬೆಳೆಯುವ ಪ್ರದೇಶವಾಗಿರುವುದರಿಂದ ಈ ಭಾಗದ ಭೂಮಿಯು ಮೇಲ್ವರ್ಗದವರ ಪಾಲಾಗಿದೆ. ಆದರೆ ಬುಡಕಟ್ಟುಗಳು ಮತ್ತು ತಳಸಮುದಾಯಗಳ ಯಾವುದೇ ಸಾಂಪ್ರದಾಯಿಕ ಆಚರಣೆಗಳೆಲ್ಲವೂ ಭೂಮಿಯ ಮತ್ತು ಕಾಡಿನ ಸಂಬಂಧಕ್ಕೆ ಪೂರಕವಾಗಿ ಸೃಷ್ಟಿಯಾಗಿವೆ ಎಂಬುದನ್ನು ಸರ್ಕಾರ ಮತ್ತು ಭೂಮಾಲೀಕರು ಅರ್ಥ ಮಾಡಿಕೊಳ್ಳದೆ ತಾವೇ ಭೂಮಿಯ ಒಡೆತನವನ್ನು ಹೊಂದಿ ಗೌಡಾಲು ಸಮುದಾಯದ ಮುಗ್ಧ ಮನಸ್ಸುಗಳನ್ನು ಕೂಲಿ ಆಳುಗಳಾಗಿ ದುಡಿಸಿಕೊಳ್ಳುತ್ತಿರುವುದು ಪ್ರಸ್ತುತ ಅಧ್ಯಯನಕ್ಕೆ ಮುಖ್ಯವಾಗಿದೆ.

''ಯಾವುದೇ ಸಮುದಾಯದ ಅಧ್ಯಯನಗಳಿಗಿಂತ ಬುಡಕಟ್ಟು ಸಮುದಾಯಗಳ ಅಧ್ಯಯನ ಮುಖ್ಯವೆನ್ನುವುದಕ್ಕೆ ಬುಡಕಟ್ಟುಗಳು ಬದುಕಿನ ಉದ್ದಕ್ಕೂ ಅನುಭವಿಸುತ್ತಾ ಬಂದಿರುವ ದುಃಖ ದುಮ್ಮಾನಗಳೇ ಸಾಕ್ಷಿಯಾಗಿ ನಿಲ್ಲುತ್ತವೆ. ಬೇಟೆ ಮತ್ತು ಕುಮ್ರಿ ಬೇಸಾಯದ ಮೂಲಕ ಜೀವಿಸುತ್ತಿರುವ ಬುಡಕಟ್ಟುಗಳಿಗೆ ಪುರೋಹಿತಶಾಹಿ ವರ್ಗವು ಹಲವು ರೀತಿಯಲ್ಲಿ ತೊಂದರೆ ಕೊಡುತ್ತಾ ಬಂದಿರುವುದು ಗಮನಾರ್ಹವಾಗಿದೆ. ಕಲ್ಲಿನ ಆಯುಧಗಳ ಮೂಲಕ ಸ್ಥಳಾಂತರ ಬೇಸಾಯ ಮಾಡುತ್ತಿದ್ದ ಬುಡಕಟ್ಟುಗಳಿಗೆ ಹಂತ ಹಂತವಾಗಿ ಭೂಮಿಯು ದೊರಕದಂತೆ ಕೆಲವು ಧಾರ್ಮಿಕ ವಿಧಿಗಳನ್ನು ಬಲವಂತವಾಗಿ ಹೇರುವುದರ ಮೂಲಕ ತೆರಿಗೆಗಳನ್ನು ಕೊಡಲು ಆಗದೆ ಇರುವ ಸಾಮಾಜಿಕ ವ್ಯವಸ್ಥೆಯನ್ನು ಸೃಷ್ಟಿ ಮಾಡಿದ ಪುರೋಹಿತಶಾಹಿಯ ಜೊತೆಗೂಡಿ ಬಂಡವಾಳಶಾಹಿಯು ತನ್ನ ಪ್ರಭುತ್ವ ಮನೋಭಾವನೆಯಿಂದ ಬುಡಕಟ್ಟುಗಳನ್ನು ತಮ್ಮ ಅಧೀನಕ್ಕೆ ತಂದುಕೊಂಡು ಬುಡಕಟ್ಟುಗಳನ್ನು ಭೂಹೀನರಾಗಿ ಮಾಡಿದರು. ಅಲ್ಲದೆ ಪಶ್ಚಿಮ ಘಟ್ಟದಲ್ಲಿ ನೀರಿನ ಇಳಿಜಾರು ಇರುವ ಹಾಗೂ ಫಲವತ್ತಾದ ಭೂಮಿಯ ಒಡೆಯರು ಮೇಲುವರ್ಗದವರಾದರೂ, ಬುಡಕಟ್ಟುಗಳನ್ನು ನಿಕೃಷ್ಟವಾಗಿ ನೋಡಲು ಪ್ರಾರಂಭಿಸಿದರು.''[೧೦] ಇದರ ಪರಿಣಾಮವಾಗಿ ಬುಡಕಟ್ಟುಗಳು ಅದರಲ್ಲೂ ಚಿಕ್ಕಮಗಳೂರು ಜಿಲ್ಲೆಯಲ್ಲಿಯೇ ಹೆಚ್ಚಾಗಿರುವ ಗೌಡಾಲು ಸಮುದಾಯವು ತಮ್ಮ ಬದುಕಿನ ಬವಣೆಯನ್ನು ಅನುಭವಿಸ ಬೇಕಾಯಿತು.

ಭಾರತದ ಕೆಲವು ಕಡೆ ಬುಡಕಟ್ಟುಗಳು ಕಾಡಿನ ಮಧ್ಯೆ ಯಾರ ಕಣ್ಣಿಗೂ ಬೀಳದಂತೆ ಇದ್ದಾರೆ. ಗೌಡಾಲುಗಳಲ್ಲಿ ಅರಣ್ಯ ಇಲಾಖೆಯ ಕಾನೂನು ಮತ್ತು ಭೂಮಾಲೀಕರ ನಿಯಮಗಳಿಂದಾಗಿ ಭೂಮಿಯನ್ನು ಕಳೆದುಕೊಂಡಿರುವವರ ಸಂಖ್ಯೆಯು ಹೆಚ್ಚಾಗಿದೆ. ಬುಡಕಟ್ಟುಗಳಿಗೆ ಭೂಮಿಯು ಕಾನೂನುಬದ್ಧ ಹಕ್ಕು ಎಂಬ ಅರಿವು ಕೂಡ ಇಲ್ಲದೇ ಇರುವುದರಿಂದ ಕಾಡಿನಲ್ಲಿ ಅವರ ಶಕ್ತಿಗೆ ಅನುಗುಣವಾಗಿ ೧ ಎಕರೆ ಅಥವಾ ೨ ಎಕರೆಯ ತುಂಡು ತುಂಡು ಭೂಮಿಯನ್ನು ನೀರು ಹರಿಯುವ ಬೆಟ್ಟ ಇಳಿಜಾರುಗಳಲ್ಲಿ ಮಾಡಿಕೊಂಡಿದ್ದಾರೆ. ಆದರೆ ಸರ್ಕಾರ ಇದು ಅರಣ್ಯಕ್ಕೆ

ಸೀಮಿತವಾದ ಭೂಮಿಯೆಂದು ಯಾವುದೇ ಹಕ್ಕು ಪತ್ರಗಳನ್ನು ಕೊಟ್ಟಿಲ್ಲದೇ ಇರುವುದು ಮತ್ತು ಗೌಡಾಲುಗಳು ವಾಸಿಸುವ ಮನೆಗಳಿಗೆ ಯಾವುದೇ ಪರವಾನಿಗೆ ಇಲ್ಲದೆ ಇರುವುದು ಕ್ಷೇತ್ರಕಾರ್ಯದಲ್ಲಿ ತಿಳಿದ ಮಾಹಿತಿಯಾಗಿದೆ. ಆದ್ದರಿಂದ ಗೌಡಾಲುಗಳಲ್ಲದೆ ಇತರ ಬುಡಕಟ್ಟು ಸಮುದಾಯಗಳ ಸ್ಥಿತಿಯು ಪಶ್ಚಿಮಘಟ್ಟದಲ್ಲಿ ವಿಭಿನ್ನವಾಗಿರದೆ ಇರುವ ಸಂಗತಿಯನ್ನು ಗಮನಿಸಲಾಗುವುದು.

ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಗೌಡಾಲು ಬುಡಕಟ್ಟಿನ ಬಗ್ಗೆಯಾಗಲಿ ಅಥವಾ ಪಶ್ಚಿಮ ಘಟ್ಟದ ಅರಣ್ಯ ಸಂಪತ್ತಿನ ಬಗ್ಗೆಯಾಗಲಿ ಪ್ರಜಾಪ್ರಭುತ್ವ ಸರ್ಕಾರವೆಂದು ಹೇಳುತ್ತಿರುವ ರಾಜಕೀಯ ವ್ಯವಸ್ಥೆಯು ಈ ಭಾಗದಲ್ಲಿ ಬುಡಕಟ್ಟುಗಳನ್ನು ಹಾಗೂ ಪ್ರಾಣಿ ಸಂಕುಲಗಳನ್ನು ಒಕ್ಕಲೆಬ್ಬಿಸುತ್ತಿರುವುದನ್ನು ಗಮನಿಸಿದರೆ ಎಂತವರಿಗೂ ರೋಮಗಳು ನೆಟ್ಟಗಾಗದೆ ಇರದು. ಒಂದು ಕಡೆ ಸರ್ಕಾರದ ಅಧಿಕಾರಿಗಳ ಕಿರುಕುಳವಾದರೆ ಮತ್ತೊಂದು ಕಡೆ ಭೂಮಾಲೀಕರ ದರ್ಪವು ಯಾರಿಗೂ ಗೊತ್ತಾಗದಂತೆ ಪ್ರಸ್ತುತ ಸಂದರ್ಭದಲ್ಲಿ ಗೌಡಾಲು ಸಮುದಾಯವನ್ನು ಜಿಗಣೆ ಹುಳಗಳಂತೆ ರಕ್ತವನ್ನು ಹೀರುತ್ತಿವೆ. ಆದ್ದರಿಂದ ಕ್ಷೇತ್ರಕಾರ್ಯದಲ್ಲಿ ಮಾಹಿತಿದಾರರು ತಮ್ಮ ಕಷ್ಟಗಳನ್ನು ಎಳೆ ಎಳೆಯಾಗಿ ತೆರೆದಿಡುತ್ತಾರೆ. ಅದರಂತೆ ಇಂದಿನ ಸರ್ಕಾರಗಳು ಸಮಾಜವಾದಿ ಪ್ರಜಾಪ್ರಭುತ್ವವೆಂದು ಹೇಳುತ್ತಾ ಬಂದಿರುವ ಆಳುವ ವ್ಯವಸ್ಥೆಯ ಕುತಂತ್ರವನ್ನು ಬುಡಕಟ್ಟುಗಳು ತಮ್ಮ ಕಣ್ಣೀರಿನ ಮೂಲಕ ತೋಡಿಕೊಂಡಿದ್ದಾರೆ. ಈ ಹಿನ್ನೆಲೆಯಿಂದ ಗೌಡಾಲುಗಳು ಭೂಮಿಯಿಂದ ವಂಚಿತರಾಗಿದ್ದಾರೆ. ಇವುಗಳೆಲ್ಲವನ್ನು ಗಮನಿಸಿದ ಈ ಭಾಗದ ಹೋರಾಟಗಾರರು ಬುಡಕಟ್ಟುಗಳ ಅಸಹಾಯಕತೆಯನ್ನು ಗ್ರಹಿಸಿ ಪ್ರಜಾಸರ್ಕಾರದ ವೈಫಲ್ಯವನ್ನು ಎತ್ತಿ ಸಮಾಜಕ್ಕೆ ತೋರಿಸುತ್ತಿವೆ. ಇಲ್ಲಿ ಯಾವುದೇ ಬುಡಕಟ್ಟು ಸಮುದಾಯಗಳಿಗೆ ಭೂಮಿಯ ಹಕ್ಕು ಪತ್ರ ಕೊಡದೆ ಸರ್ಕಾರ ಕುದುರೆಮುಖ ಗಣಿಗಾರಿಕೆಯನ್ನು ಸ್ಥಾಪಿಸಿ ಇಲ್ಲಿನ ಸಂಪತ್ತಿನಿಂದ ಕೂಡಿದ ಅರಣ್ಯವನ್ನು ನಾಶ ಮಾಡಿ ಸಮುದಾಯಗಳಿಗೆ ಆಶ್ರಯತಾಣವಾಗಿದ್ದ ಅರಣ್ಯ ಮತ್ತು ಭೂಮಿಯನ್ನು ಕಬಳಿಸಿ ಸುಮಾರು ೫೦ ವರ್ಷಗಳ ಕಾಲ ಬುಡಕಟ್ಟುಗಳ ಬದುಕನ್ನು ತಲ್ಲಣಗೊಳಿಸಿದ ಬಗೆಯನ್ನು ಗೌಡಾಲು ಸಮುದಾಯದವರೂ ಇನ್ನು ಮರೆತಿಲ್ಲ ಎಂಬ ಮಾತು ನಿಜ ಸಂಗತಿಯಾಗಿದೆ. ಆದ್ದರಿಂದ ಇಲ್ಲಿ ಬಂಡವಾಳಶಾಹಿ ವ್ಯವಸ್ಥೆಯು ಬುಡಕಟ್ಟುಗಳನ್ನು ಒಕ್ಕಲೆಬ್ಬಿಸಿ ತಮ್ಮ ಇಚ್ಛೆಗೆ ಅನುಗುಣದ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮಾಣ ಮಾಡಿಕೊಂಡಿದೆ.

ಭಾರತದ ಪಶ್ಚಿಮಘಟ್ಟಗಳಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳು ಹೆಚ್ಚಿನ ಪ್ರಮಾಣದಲ್ಲಿ ತಮ್ಮ ಬದುಕಿಗಾಗಿ ಭೂಮಿಯನ್ನೇ ಆಶ್ರಯಿಸಿಕೊಂಡು ತಲತಲಾಂತರವಾಗಿ ಅರಣ್ಯದಲ್ಲಿ ಜೀವಿಸುತ್ತಿರುವವರಾಗಿರುವುದರಿಂದ ಭೂಮಿಯನ್ನು ಉಳಿಸಿಕೊಳ್ಳುವುದು ಅನಿವಾರ್ಯವಾಗಿದೆ. ಆದ್ದರಿಂದ ಈ ದೇಶದ ನೈಸರ್ಗಿಕ ಸಂಪತ್ತಿನ ರಕ್ಷಣೆಗೆ ಹಾಗೂ ದೇಶದ ರಕ್ಷಣೆಗೆ ಮೊದಲಿನಿಂದಲೂ ಹೋರಾಟ ಮಾಡುತ್ತಿರುವವರು ಬುಡಕಟ್ಟು ಸಮುದಾಯಗಳೇ ಎಂಬುದನ್ನು ಯಾರು ಮರೆಯುವಂತಿಲ್ಲ. ಪ್ರಸ್ತುತ ಸಮಾಜದಲ್ಲಿ ಚಿಕ್ಕಮಗಳೂರು ಹಾಗೂ ಪಶ್ಚಿಮಘಟ್ಟದ ಜಿಲ್ಲೆಗಳಲ್ಲಿ ನಡೆಯುತ್ತಿರುವ ಹೋರಾಟಗಳು ಕುದುರೆಮುಖ ಗಣಿಗಾರಿಕೆಯನ್ನು ಮುಚ್ಚಿಸುವುದರಿಂದ ಪ್ರಾರಂಭವಾಗಿ ಇಲ್ಲಿಯವರೆಗೆ ನಿಲ್ಲದೆ ವಿವಿಧ ದೃಷ್ಟಿಕೋನದಲ್ಲಿ ನಡೆಯುತ್ತಿರುವುದು ಇಂದು ಗಮನಾರ್ಹವಾದ ಸಂಗತಿಯಾಗಿದೆ. ಗೌಡಾಲು ಸಮುದಾಯದವರು

ಪರಿಸರ ಉಳಿಸಿ ಚಳುವಳಿಯಿಂದ ಇಲ್ಲಿಯವರೆಗೆ ಸಮಾಜದ ಶ್ರೇಯೋಭಿವೃದ್ಧಿಗಾಗಿ ಅನೇಕ ಹೋರಾಟಗಳನ್ನು ಮಾಡಿದ್ದಾರೆ. ಈ ಸಂದರ್ಭದಲ್ಲಿ ನಾವು ಬಿಹಾರದ ರಾಂಚಿ ಜಿಲ್ಲೆಯಲ್ಲಿ ೧೮೯೫-೧೯೦೦ರ ವರೆಗೆ ನಡೆಸಿ ಭಗವಾನ್ ಬಿರ್ಸಾ ಮುಂಡನ ಹೋರಾಟವನ್ನು ನೆನಪಿಸುವುದು ಉಪಯುಕ್ತವಾಗಬಹುದು. ಏಕೆಂದರೆ ಬ್ರಿಟಿಷರ ಮತ್ತು ಭೂಮಾಲಿಕರ ಶೋಷಣೆಯನ್ನು ಸಹಿಸಲಾರದೆ ಮುಂಡ ಬುಡಕಟ್ಟಿನ ಮುಗ್ಧ ಮನಸ್ಸುಗಳನ್ನು ಒಂದೆಡೆ ಕಲೆಹಾಕಿ ಬಂಡವಾಳಶಾಹಿಯ ವಿರುದ್ಧ ನಡು ಕಟ್ಟಿ ಬುಡಕಟ್ಟುಗಳ ಭೂಮಿಯ ಬಾಡಿಗೆ ಮತ್ತು ಕ್ರಮಗಳನ್ನು ದುರುಪಯೋಗಪಡಿಸಿಕೊಳ್ಳದಂತೆ ಹೋರಾಟ ಮಾಡಿದ ರೀತಿಯಲ್ಲಿಯೇ (ಭಗವಾನ್ ಬಿರ್ಸಾ ಮುಂಡ, ಎನ್ ಚಂದ್ರಪ್ಪ, ೨೦೦೦) ಗೌಡಾಲು ಸಮುದಾಯದಲ್ಲಿ ಸ್ವಾತಂತ್ರ್ಯಕ್ಕಾಗಿ, ಒಕ್ಕಲೆಬ್ಬಿಸುವುದರ ವಿರುದ್ಧ, ರಾಷ್ಟ್ರೀಯ ನ್ಯಾಷನಲ್ ಪಾರ್ಕನ ವಿರುದ್ಧ ಜೀವನದ ಪ್ರಾಥಮಿಕ ಸೌಲಭ್ಯಗಳನ್ನು ಪಡೆಯುವುದಕ್ಕಾಗಿ ಚಳುವಳಿಗಳು ನಡೆದಿರುವುದನ್ನು ಯಾರೂ ಮರೆಯುವಂತಿಲ್ಲ.

ಚರಿತ್ರೆಯನ್ನು ಗಮನಿಸಿದರೆ ಬುಡಕಟ್ಟು ಸಮುದಾಯಗಳು ಸಾರ್ವತ್ರಿಕ ಸಾಮ್ಯತೆಯ ನೆಲೆಯಲ್ಲಿ ತಮ್ಮ ಹೋರಾಟಗಳನ್ನು ಮಾಡಿರುವುದು ಮುಖ್ಯವಾಗಿದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ನಡೆದ ಮತ್ತು ನಡೆಯುತ್ತಿರುವ ಹೋರಾಟಗಳಿಗೆ ಪಶ್ಚಿಮ ಬಂಗಾಳದ ಡಾರ್ಜಲಿಂಗ್ ಜಿಲ್ಲೆಯ ನಕ್ಸಲ್‌ಬರಿ ಊರಿನಲ್ಲಿ ೧೯೬೭ರಲ್ಲಿ ಪ್ರಾರಂಭವಾದ ಬುಡಕಟ್ಟುಗಳ ಹೋರಾಟ ಹಾಗೂ ಮುಂಡರ ನಾಯಕನಾದ ಬಿರ್ಸಾ ಮುಂಡನ ನಾಯಕತ್ವದಲ್ಲಿ ಬಿಹಾರದ ರಾಂಚಿ ಜಿಲ್ಲೆಯ ಹುಲಿಹದ್ದು ಎಂಬಲ್ಲಿ ಪ್ರಾರಂಭವಾದ ಬುಡಕಟ್ಟುಗಳ ಹೋರಾಟ, ಕೋಲರು ೧೮೫೫, ಸಂತಾಲರು ೧೮೯೯ರ ಹೋರಾಟಗಳೆಲ್ಲವು ಬಂಡವಾಳಶಾಹಿ ಮತ್ತು ಭೂಮಾಲೀಕರ ವಿರುದ್ಧ ನಡೆದ ಹೋರಾಟಗಳಾಗಿರುವುದರಿಂದ ಈ ತೆರನಾದವುಗಳೆಲ್ಲವೂ ಕರ್ನಾಟಕದಲ್ಲಿರುವ ಗೌಡಾಲು ಮತ್ತು ಇತರ ಬುಡಕಟ್ಟುಗಳ ಪರಿಸರ, ಜಲ ಮತ್ತು ಭೂ ಹೋರಾಟಗಳಿಗೆ ಸ್ಫೂರ್ತಿಯಾಗಿ ನಿಂತಿರುವುದು ನಿಜ ಸಂಗತಿಯಾಗಿದೆ.''[೧೯]

ಭಾರತದ ಸಾಮಾಜಿಕ ವ್ಯವಸ್ಥೆಯನ್ನು ಅವಲೋಕಿಸಿದರೆ ಭಾರತಕ್ಕೆ ವ್ಯಾಪಾರಿಯ ಮನೋಭಾವನೆಯನ್ನು ಇಟ್ಟುಕೊಂಡು ಬಂದು ಇಡೀ ದೇಶವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ನಮ್ಮ ಸಮುದಾಯಗಳನ್ನು ಗುಲಾಮರಾಗಿ ಮಾಡಿದ ಯುರೋಪಿಯನ್ನರು ಹಾಗೂ ನಮ್ಮ ಪುರೋಹಿತಶಾಹಿಯ ವರ್ಗವು ಯಜಮಾನಿಕೆಯನ್ನು ಬುಡಕಟ್ಟುಗಳು ಹಾಗೂ ದಲಿತ ಸಮುದಾಯಗಳ ಮೇಲೆ ತೋರಿಸಿರುವುದನ್ನು ನಾವು ಈ ಸಂದರ್ಭದಲ್ಲಿ ನೆನಪಿಸದಿದ್ದರೆ ಅರ್ಥರಹಿತವಾಗುತ್ತದೆ. ಆದ್ದರಿಂದ ಈಶಾನ್ಯ ಭಾಗದ ಅರಣ್ಯ ಪ್ರದೇಶದಂತೆ ಕರ್ನಾಟಕದ ಪಶ್ಚಿಮ ಘಟ್ಟಗಳು ಬುಡಕಟ್ಟುಗಳ ಆಶ್ರಯ ತಾಣವಾಗಿರುವುದರಿಂದ ದಾಂಡೇಲಿಯಿಂದ ನಾಗರಹೊಳೆಯವರೆಗೆ ಬುಡಕಟ್ಟುಗಳ ಬದುಕು ಡೋಲಾಯಮಾನದ ಸ್ಥಿತಿಯಲ್ಲಿ ಇರುವುದು ನಿಜವಾಗಿದೆ. ಈ ರೀತಿಯ ಬದುಕಿಗೆ ಗೌಡಾಲುಗಳು ಹೊರತಾಗಿಲ್ಲವೆಂದು ಕ್ಷೇತ್ರಕಾರ್ಯದಲ್ಲಿ ತಿಳಿಯಲಾಯಿತು.

ಭಾರತದ ಆದಿವಾಸಿಗಳು ಅಥವಾ ಬುಡಕಟ್ಟುಗಳಂತೆಯೇ ಪ್ರಪಂಚದ ಯಾವುದೇ ಖಂಡಗಳ ಬುಡಕಟ್ಟುಗಳು ಪಾಶ್ಚಿಮಾತ್ಯರ ವಾಣಿಜ್ಯ ವಸಾಹತುಶಾಹಿಯ ದಾಳಿ ಮತ್ತು ಅವರ ಮನೋಭಾವನೆಯನ್ನು ಸಹಿಸದೆ ಚಳುವಳಿಯನ್ನು ಮಾಡಿರುವುದು ತಿಳಿಯುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ನಡೆದ ಬುಡಕಟ್ಟುಗಳ ಹೋರಾಟಗಳೆಲ್ಲವು ಭಾರತದಲ್ಲಿ ಬ್ರಿಟಿಷ್ ಸರ್ಕಾರದ ಅಧಿಕಾರಿಗಳನ್ನು ಮುಖ್ಯವಾಗಿ ಇಟ್ಟುಕೊಂಡಿರದೆ ಭಾರತದಲ್ಲಿರುವ ಜಮೀನ್ದಾರರು, ಸಾಹುಕಾರರು, ಕಂಟ್ರಾಕ್ಟರರ ವಿರುದ್ಧ ಎಂಬಂತೆ ಇಲ್ಲಿಯ ಪ್ರಭುತ್ವದ ವಿರುದ್ಧ ಹೋರಾಟಗಳು ನಡೆದಿವೆ. ಗೌಡಾಲು ಮತ್ತು ಚಿಕ್ಕಮಗಳೂರು ಜಿಲ್ಲೆಯ ಶೋಷಿತ ಸಮುದಾಯಗಳು ಇಂದಿಗೂ ಹೋರಾಟ ಮಾಡುತ್ತಿರುವುದು ಮುಖ್ಯವಾಗುತ್ತದೆ.

ಬ್ರಿಟಿಷರು ಭಾರತಕ್ಕೆ ಬಂದಾಗ ಮೊದಲು ಎಲ್ಲಿ ಎಲ್ಲಿ ವಾಣಿಜ್ಯ ಬೆಳೆಗಳ ತಾಣಗಳಿವೆ ಎಂಬುದನ್ನು ತಿಳಿದು ಅಲ್ಲಿ ತಮ್ಮ ಕೇಂದ್ರ ಕಂಪನಿಗಳನ್ನು ಮಾಡಿಕೊಂಡರು. ಪರಿಣಾಮವಾಗಿ ಕಾಡನ್ನು ತಾಯಿಯೆಂದು ನಂಬಿಕೊಂಡು ಬದುಕುತ್ತಿದ್ದ ಬುಡಕಟ್ಟು ಸಮುದಾಯಗಳು ಬಲವಂತವಾಗಿ ಕಾಡಿನಿಂದ ಹೊರಹಾಕಲ್ಪಟ್ಟರು. ಆಹಾರ ಸಂಗ್ರಹಣೆಗೆ, ಬೇಟೆಗೆ ಅಡ್ಡಿಗಳುಂಟಾದವು. ಬುಡಕಟ್ಟುಗಳ ಕುಮ್ರಿ ಬೇಸಾಯಕ್ಕೆ ತೊಂದರೆಯಾಯಿತು. ಆದ್ದರಿಂದ ಬುಡಕಟ್ಟುಗಳು ಸಾಲಗಾರರಾಗಿ ಭೂಮಾಲೀಕರ ಜೀತದಾಳುಗಳಾಗಬೇಕಾಯಿತು. ಈ ಸ್ಥಿತಿಯನ್ನು ನಾವು ಗೌಡಾಲು ಸಮುದಾಯಕ್ಕೆ ಹೋಲಿಸಿ ಅಧ್ಯಯನ ಮಾಡಿದಾಗ ಗೌಡಾಲು ಬುಡಕಟ್ಟು ಕೂಡ ಈ ಎಲ್ಲ ಸಮಸ್ಯೆಗಳಲ್ಲಿ ಬಳಲುತ್ತಿರುವುದು ಗೋಚರಿಸುತ್ತದೆ. ಇಲ್ಲಿ ಬುಡಕಟ್ಟುಗಳು ಅಲ್ಪಸ್ವಲ್ಪ ಮಾಡಿದ ತುಂಡುಭೂಮಿಗಳನ್ನು ಅಲ್ಲಿಯ ಭೂಮಾಲೀಕರು ಆಕ್ರಮಿಸಿಕೊಂಡು ಇವರನ್ನು ತಮ್ಮ ತೋಟ ಗದ್ದೆಗಳಲ್ಲಿ ಕೂಲಿ ಕೆಲಸ ಮಾಡಿಸಿಕೊಳ್ಳುತ್ತಿರುವುದನ್ನು ಗಮನಿಸಿದಾಗ ಬುಡಕಟ್ಟು ಸಮುದಾಯಗಳನ್ನು ಪ್ರಜಾ ಸರ್ಕಾರಗಳು ಎಷ್ಟರ ಮಟ್ಟಿಗೆ ನಡೆಸಿಕೊಳ್ಳುತ್ತಿವೆ ಎಂಬುದು ಚರ್ಚೆಯ ಮುಖ್ಯ ವಿಷಯವಾಗುತ್ತದೆ.

''ಬುಡಕಟ್ಟುಗಳ ಭೂಸ್ವಾಧೀನದ ಮೇಲೆ ವಸಾಹತುಶಾಹಿ ವ್ಯವಸ್ಥೆ ಮತ್ತು ಮಧ್ಯಮ ವರ್ಗವೆಂದು ಹೇಳಿಕೊಂಡು ಪ್ರಭುತ್ವದ ಎಲ್ಲ ಸವಲತ್ತುಗಳನ್ನು ಅನುಭವಿಸುತ್ತಿರುವ ವರ್ಗಗಳು ತಮ್ಮದೇ ಅಸ್ತಿತ್ವವನ್ನು ಇಟ್ಟುಕೊಂಡು ಬಂದಿರುವುದು ಈ ದಿನಮಾನಗಳಲ್ಲಿ ಗೋಚರಿಸುತ್ತಿರುವುದು ವಿಪರ್ಯಾಸವೇ ಸರಿ. ಆದ್ದರಿಂದ ಇವರಿಗೆ ಹೊಸ ಹೊಸ ಅರಣ್ಯ ಕಾಯಿದೆಗಳು ಕೂಡ ಭೂಹೀನರಾಗಿ ಮಾಡಿವೆಯೆಂದರೆ ತಪ್ಪಾಗಲಾರದು. ಬುಡಕಟ್ಟು ಸಮುದಾಯಗಳನ್ನು ಹತ್ತಿರದಿಂದ ನೋಡಿದ್ದ ಬ್ರಾಹ್ಮಣರು ಮತ್ತು ಮಧ್ಯಮ ವರ್ಗದ ಭೂಮಾಲೀಕರು ವಸಾಹತುಶಾಹಿಯ ವ್ಯವಸ್ಥೆಗೆ ಪೂರಕವಾಗಿ ಕೆಲಸ ಮಾಡಿದ್ದರಿಂದ ಬುಡಕಟ್ಟುಗಳ ಭೂಮಿಯು ಕೈಬಿಟ್ಟು ಹೋಯಿತು. ಆಚಾರ ವಿಚಾರಗಳನ್ನು ಕುರಿತ ಭಾರತೀಯರ ಮೂಲ ಬದುಕಾಗಿದ್ದ ಸಾಂಪ್ರದಾಯಿಕ ಅಂಶಗಳು ಮಾಯವಾದವು. ಇದರಿಂದ ಇಡೀ ದೇಶವೇ ಇನ್ನೊಬ್ಬರ ಅಧೀನವಾಗಲು ಅವಕಾಶವಾಯಿತು. ಆದರೆ ಬುಡಕಟ್ಟುಗಳು ತಮ್ಮ ಬದುಕಿನಲ್ಲಿ ದೈವತ್ವದ ಕಲ್ಪನೆಯನ್ನು ಪವಿತ್ರವೆಂದು ಪರಿಭಾವಿಸಿಕೊಂಡಿದ್ದು ತಮ್ಮ ಜೀವನವನ್ನು ಕೃಷಿ ಹಾಗೂ ದೈವಗಳ ಮೂಲಕ ರೂಪಿಸಿಕೊಂಡು ಅವರದೇ ಆದ ಪರಂಪರೆಯಲ್ಲಿ ಬದುಕು ಸಾಗಿಸುತ್ತಿದ್ದರು. ವಸಾಹತುಶಾಹಿಯ ನೀತಿಯಿಂದ ಬುಡಕಟ್ಟುಗಳು ತಲ್ಲಣಗೊಂಡಿವೆ. ಸಮುದಾಯಗಳ ಸಾಮಾಜಿಕ ಬೇರುಗಳಲ್ಲಿ ತಾಯಿಬೇರು ತನ್ನ ಮೂಲವನ್ನು ಉಳಿಸಿಕೊಳ್ಳಲು ಆಗದೆ ಇರುವ ಸ್ಥಿತಿ ಬಂದು ತಲುಪಿರುವುದು ಗಮನಾರ್ಹವಾಗಿದೆ. ಗೌಡಾಲುಗಳು ಬದಲಾಗುತ್ತಿರುವ ಸಮಾಜಕ್ಕೆ ಹೊಂದಿಕೊಳ್ಳಲಾಗದ ಪರಿಸ್ಥಿತಿಯನ್ನು ತಲುಪಿರುವುದು ಕಂಡುಬರುತ್ತದೆ. ಬುಡಕಟ್ಟುಗಳು ಮತ್ತು ಕೆಳಜಾತಿಗಳು ಕಾಲದಿಂದ ಕಾಲಕ್ಕೆ

ಭಿನ್ನವಾದ ಸಮಸ್ಯೆಗಳಿಂದ ಬಳಲುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿ. ಗೌಡಾಲು ಬುಡಕಟ್ಟು ತನ್ನ ಉತ್ಪಾದನಾ ವ್ಯವಸ್ಥೆಯಿಂದ ಬಹುದೂರ ಹೋಗುತ್ತಿದೆ ಎಂಬ ಆತಂಕಕ್ಕೊಳಗಾಗಿದೆ. ಅಲ್ಲದೆ ತಮ್ಮ ಬದುಕಿನ ಸ್ಥಿತ್ಯಂತರವನ್ನು ಕುರಿತು ಮುಂದಿನ ಹಂತವನ್ನು ತಲುಪಿದೆ.''[೨]

ಬುಡಕಟ್ಟು ಸಮುದಾಯದ ಅಂತರಾಳದ ಸಂಸ್ಕೃತಿಯನ್ನು ನಾಶ ಮಾಡಲು ಹೊರಟಿರುವ ವಸಾಹತುಶಾಹಿ ಮತ್ತು ಪುರೋಹಿತಶಾಹಿಯ ದೌರ್ಜನ್ಯವನ್ನು ಗೌಡಾಲುಗಳು ಸಹಿಸದಾಗಿದ್ದಾರೆ. ಚರಿತ್ರೆಯ ಪುಟಗಳನ್ನು ಅವಲೋಕಿಸುತ್ತ ಹೊರಟರೆ ಬುಡಕಟ್ಟುಗಳು ತಮ್ಮ ಮೂಲಕ್ಕೆ ಕೊಡಲಿಪೆಟ್ಟನ್ನು ಹಾಕುವಂತಹ ಯಾವುದೇ ವ್ಯವಸ್ಥೆಯ ವಿರುದ್ಧ ಹೋರಾಟ ಮಾಡದೆ ಇರಲಾರರು ಎಂಬುದು ತಿಳಿಯುತ್ತದೆ. ಈ ಹಿನ್ನೆಲೆಯನ್ನು ನಾವು ಚರ್ಚಿಸುತ್ತ ಹೊರಟರೆ ಬ್ರಿಟಿಷರ ಸೈನ್ಯ ಮತ್ತು ಭೂಮಾಲೀಕರ ಬುದ್ಧಿವಂತಿಕೆಯು ಬುಡಕಟ್ಟುಗಳ ಬಿಲ್ಲು ವಿದ್ಯೆಗೆ ಸರಿಹೊಂದದೆ ಅನೇಕ ಕಡೆ ಭೂಮಾಲೀಕತ್ವವು ಸೇರಿ ಪ್ರಭುತ್ವವೆನ್ನುವುದು ತನ್ನ ಸೋಲನ್ನು ಒಪ್ಪಿಕೊಂಡಿರುವುದು ಮುಖ್ಯವಾದ ಅಂಶವಾಗುತ್ತದೆ. ಆದರೆ ಆರ್ಥಿಕವಾಗಿ ಬಲಿಷ್ಠರಾಗಿರದ ಆದಿವಾಸಿಗಳು ಯಾವುದೇ ಗೆರಿಲ್ಲಾ ಯುದ್ಧ ನೀತಿಯನ್ನು ಅನುಸರಿಸಿದರೂ ಪ್ರಭುತ್ವಕ್ಕೆ ಮಣಿಯಬೇಕಾದ ಸಂದಿಗ್ಧತೆ ಬಂದು ಒದಗಿರುವುದು ವಿಪರ್ಯಾಸವೇ ಸರಿ. ಬ್ರಿಟಿಷರು ಭಾರತಕ್ಕೆ ಬಂದಂದಿನಿಂದ ಪಶ್ಚಿಮ ಘಟ್ಟದಲ್ಲಿ ನೈಸರ್ಗಿಕ ಸಂಪತ್ತು ಮತ್ತು ಭಾರತದ ಬುಡಕಟ್ಟು ಸಮುದಾಯಗಳ ದೇವರು ಹಾಗೂ ದೇವತೆಗಳೆಲ್ಲವೂ ರೈಲುಗಾಡಿಯಲ್ಲಿ ಇಂಗ್ಲೆಂಡಿಗೆ ಹೋದವು. ಪರಿಣಾಮವಾಗಿ ಭಾರತವು ಬ್ರಿಟಿಷರಿಗೆ ಹಾಲು ಕೊಡುವ ಹಸುವಿನಂತೆ ಆಯಿತು ಎಂದು ಹೇಳಿದ ಇತಿಹಾಸಕಾರರಾದ ಈಶ್ವರ ಪ್ರಸಾದರ ಹೇಳಿಕೆಯು ಅರ್ಥಪೂರ್ಣವಾಗಿದೆ.

''ಭಾರತದಲ್ಲಿ ಅರಣ್ಯದ ಬೆಳೆಗಳಾದ ಅಡಿಕೆ, ಲವಂಗ, ಮೆಣಸು, ಚೆಕ್ಕೆ, ಗೋಡಂಬಿ, ದ್ರಾಕ್ಷಿ ಹಾಗೂ ಗಿಡಮೂಲಿಕೆಯ ಸಸ್ಯ ಸಂಕುಲಗಳು ಬ್ರಿಟಿಷರ ನಾಡಾದ ಇಂಗ್ಲೆಂಡಿಗೆ ಹೋಗಿದ್ದಲ್ಲದೆ ಭಾರತೀಯ ಭೂಮಾಲೀಕರು ಕಾಡಿನಲ್ಲಿ ವಾಸ ಮಾಡುತ್ತಿದ್ದ ಬುಡಕಟ್ಟುಗಳಿಂದ ಭೂಮಿಯನ್ನು ಕಸಿದುಕೊಳ್ಳಲು ಅನೇಕ ಕಾನೂನುಗಳನ್ನು ಜಾರಿಗೆ ತಂದರು. ಪರಿಣಾಮವಾಗಿ ಬುಡಕಟ್ಟುಗಳು ತಮ್ಮ ಮಾನ, ಪ್ರಾಣ ಹಾಗೂ ಪಾರಂಪರಿಕ ಬದುಕನ್ನು ಕಳೆದುಕೊಂಡರು. ಭೂಮಾಲೀಕರು ಬಲಿಷ್ಠಗೊಂಡು ಬುಡಕಟ್ಟುಗಳನ್ನು ಗುಲಾಮರಾಗಿ ಮಾಡಿಕೊಂಡರಲ್ಲದೆ ಕೃಷಿಯ ದಿನಗೂಲಿಗಳಾಗಿ, ಜೀತದಾಳುಗಳಾಗಿ, ಪ್ರಭುತ್ವದ ಆಳುಗಳಾಗಿ ರೂಪಾಂತರವಾದರು. ಬುಡಕಟ್ಟುಗಳು ತಮಗಾಗಿ ದುಡಿಯದೆ ಭೂಮಾಲೀಕರ ಶ್ರೀಮಂತಿಕೆಯ ಅಭಿವೃದ್ಧಿಗಾಗಿ ದುಡಿಯುವ ಮಕ್ಕಳಾದರು. ಈ ಕಾರಣದಿಂದಾಗಿ ಭಾರತೀಯ ಸಾಮಾಜಿಕ ರಚನೆಯಲ್ಲಿ ಇಂತಹ ವ್ಯವಸ್ಥೆಯನ್ನು ಒಪ್ಪಿಕೊಳ್ಳುವುದು ಬುಡಕಟ್ಟು ಸಮುದಾಯಗಳಿಗೆ ಅನಿವಾರ್ಯವಾಯಿತು. ಆದರೆ ದೇಶದಲ್ಲಿ ಭೂಮಾಲೀಕ ವರ್ಗವು ತನ್ನ ವ್ಯಾಪ್ತಿಯನ್ನು ವಿಶಾಲ ಮಾಡಿಕೊಳ್ಳುತ್ತಾ ಬಂದಿರುವುದು ಕಂಡುಬರುತ್ತದೆ.''[೩] ಆದ್ದರಿಂದ ಈ ರೀತಿಯ ಸಾಮಾಜಿಕ ವ್ಯವಸ್ಥೆಯಲ್ಲಿ ಗೌಡಾಲು ಸಮುದಾಯವು ಕೂಡ ತನ್ನ ಬದುಕನ್ನು ರೂಢಿಗತವಾಗಿ ಮಾಡಿಕೊಂಡು ಜೀವಿಸುತ್ತಿದೆ. ಗೌಡಾಲುಗಳ ವಿಶಿಷ್ಟತೆಯೆಂದರೆ ಪ್ರಾಚೀನ ಕಾಲದಿಂದಲೂ ಬಿಟ್ಟಿ ಕೆಲಸ ಮಾಡುತ್ತ ೨೧ನೇ ಶತಮಾನದ ಕಾಲದವರೆಗೆ ಉಳಿದುಕೊಂಡು ಬಂದಿರುವುದು. ಇದರಿಂದ ಭೂಮಾಲೀಕರ ಪ್ರಭುತ್ವವು

ಎಷ್ಟರ ಮಟ್ಟಿಗೆ ಪ್ರಭಾವ ಬೀರಿದೆಯೆಂಬುದು ತಿಳಿಯುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ವ್ಯಕ್ತಿಗಳನ್ನು ಅಧ್ಯಯನ ಮಾಡಿದಾಗ ತಿಳಿದ ಮಾಹಿತಿಯ ಹಿನ್ನೆಲೆಯಲ್ಲಿ ಹೇಳುವುದಾದರೆ ಭಾರತದಲ್ಲಿರುವ ಪ್ರಕೃತಿ ಸಂಪತ್ತು ಮತ್ತು ಮಾನವ ಸಂಪತ್ತನ್ನು ಅವಲಂಬಿಸಿ ವಸಾಹತುಶಾಹಿಯು ಇಲ್ಲಿ ಆಡಳಿತದ ವ್ಯವಸ್ಥೆಯನ್ನು ಭದ್ರಪಡಿಸಿಕೊಂಡಿರುವುದು ತಿಳಿಯುತ್ತದೆ.

ಭಾರತದಲ್ಲಿ ವಸಾಹತುಶಾಹಿಯು ತನ್ನ ಆಡಳಿತದ ಕೇಂದ್ರ ಕಛೇರಿಗಳನ್ನು ಸ್ಥಾಪಿಸಲು ಬುಡಕಟ್ಟು ಸಮುದಾಯಗಳನ್ನು ಶೋಷಣೆ ಮಾಡುತ್ತಲೆ ಇದೆ. ಇನ್ನೊಂದು ಕಡೆ ಭೂಮಾಲೀಕರು ಹಾಗೂ ದೇಶದ ಪ್ರಾಂತೀಯ ಅರಸರು ತಮ್ಮ ರಾಜಕೀಯ ಪ್ರಭುತ್ವದ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯಗಳನ್ನು ಹಾಗೂ ಕೆಳಜಾತಿಗಳನ್ನು ಶೋಷಣೆ ಮಾಡುತ್ತಾ ಬಂದಿದ್ದಾರೆ. ಬುಡಕಟ್ಟುಗಳನ್ನು ಮತಾಂತರ ಮಾಡಿದ ಪರಿಣಾಮವಾಗಿ ತಮ್ಮ ಮೂಲ ಸಾಂಪ್ರದಾಯಿಕ ಬದುಕಿನಲ್ಲಿ ಸಮುದಾಯಗಳು ರೂಪಾಂತರಗೊಂಡವು. ಇಲ್ಲಿ ಚರ್ಚಿಸಬೇಕಾದ ಸಂಗತಿಯೆಂದರೆ ದೈವತ್ವದ ಪರಂಪರೆಯಾದ ಗಣದ ವ್ಯವಸ್ಥೆಯಿಂದ ಹಾಗೂ ಭೂಮಿಯಿಂದ ತಮ್ಮ ಜೀವನದ ಕೊಂಡಿಯನ್ನು ಬುಡಕಟ್ಟುಗಳು ಕಳೆದುಕೊಂಡವು. ಗೌಡಾಲು ಬುಡಕಟ್ಟಿನ ನ್ಯಾಯ ಪಂಚಾಯಿತಿ ಮತ್ತು ಸಮುದಾಯದ ಅಂತರಾಳದಲ್ಲಿರುವ ಯಜಮಾನಿಕೆಯನ್ನು ಅವಲೋಕಿಸಿದರೆ ಗೌಡಾಲು ಯಾವ ರೂಪದಲ್ಲಿ ಪರಂಪರಾಗತವಾಗಿ ಶೋಷಣೆಗೆ ಒಳಗಾಗಿದ್ದಾರೆ ಎಂಬುದು ತಿಳಿಯುತ್ತದೆ.

''೧೮ ಮತ್ತು ೧೯ನೇ ಶತಮಾನದಲ್ಲಿ ವಸಾಹತುಶಾಹಿಯು ಭೂ ಸುಧಾರಣೆ ಮತ್ತು ಕಂದಾಯ ಪದ್ಧತಿಗೆ ಸಂಬಂಧಿಸಿದಂತೆ ಕಾನೂನು ಜಾರಿ ಮಾಡಿತು. ತತ್ಪರಿಣಾಮವಾಗಿ ಬುಡಕಟ್ಟುಗಳ ಸ್ಥಿತಿಯು ಅರಣ್ಯದಲ್ಲಿ ಗಂಭೀರವಾಯಿತು. ರಬ್ಬರ್, ನೀಲಿ, ಕಾಫಿ, ಟೀ, ರೇಷ್ಮೆ ಮುಂತಾದ ವಾಣಿಜ್ಯ ಒಡೆತನ ಮೇಲ್ವರ್ಗದವರ ಪಾಲಾಯಿತು. ಮೇಲ್ವರ್ಗದ ಕಾಟವನ್ನು ಸಹಿಸದಾದರು. ನೀರಾವರಿಯಂತಹ ಯೋಜನೆಗಳು ಹಾಗೂ ನವೀನ ಕೃಷಿಯ ಬದುಕು ಬಂಡವಾಳಶಾಹಿ ವ್ಯವಸ್ಥೆಯನ್ನು ಸೃಷ್ಟಿ ಮಾಡಿದವು. ಪರಿಣಾಮವಾಗಿ ವಾಣಿಜ್ಯ ಬೆಳೆಗಳಂತಹ ಉತ್ಪಾದನೆಯನ್ನು ಸೃಷ್ಟಿ ಮಾಡಿದವು. ಇದರ ಲಾಭಗಳೆಲ್ಲವೂ ಭೂಮಾಲೀಕರ ಮತ್ತು ಬಂಡವಾಳಗಾರರ ಕೈ ಸೇರಿದವು. ಎಲ್ಲಿ ಬುಡಕಟ್ಟುಗಳು ಕುಮ್ರಿ ಬೇಸಾಯ ಮಾಡುತ್ತಿದ್ದರೊ ಅವುಗಳೆಲ್ಲವೂ ಭೂಮಾಲೀಕರ ತೋಟಗಳಾಗಿ ಮಾರ್ಪಾಟಾದವು. ಆದರೆ ಬುಡಕಟ್ಟುಗಳು ಈ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಲು ಪ್ರಾರಂಭಿಸಿದರೆ ಅವರ ಪ್ರತಿಭಟನೆಗೆ ದೊರೆತ ಫಲವೆಂದರೆ ಜೀತದಾಳುಗಳಾಗಿ ದುಡಿಯುವುದಾಗಿತ್ತು.''[೮] ಕರ್ನಾಟಕದಲ್ಲಿರುವ ಪಶ್ಚಿಮ ಘಟ್ಟದ ಗೌಡಾಲು ಮತ್ತು ಇತರ ಬುಡಕಟ್ಟುಗಳು ಈಗಲೂ ಭೂಮಾಲೀಕರ ತೋಟಗಳಲ್ಲಿ, ಗದ್ದೆಗಳಲ್ಲಿ, ಎಸ್ಟೇಟ್‌ಗಳಲ್ಲಿ ದಿನಗೂಲಿಗಳಾಗಿ, ಜೀತದಾಳುಗಳಾಗಿ ದುಡಿಯುತ್ತಿರುವುದು ಪ್ರಸ್ತುತ ಅಧ್ಯಯನಕ್ಕೆ ನಿದರ್ಶನವಾಗುತ್ತದೆ.

''೨೧ನೇ ಶತಮಾನದಲ್ಲಿ ಬುಡಕಟ್ಟುಗಳನ್ನು ಅಧ್ಯಯನದ ಹಿನ್ನೆಲೆಯಲ್ಲಿ ಅವಲೋಕಿಸುತ್ತ ಹೊರಟರೆ ಬ್ರಿಟಿಷರಿಂದ ಇಲ್ಲಿಯವರೆಗೆ ಜಾರಿಗೆ ಬಂದಿರುವ ೨೦೦೬ ಮತ್ತು ೨೦೦೭ರ ಅರಣ್ಯ ಕಾಯಿದೆಗಳೆಲ್ಲವೂ ಬುಡಕಟ್ಟುಗಳ ಬದುಕಿನ ಶ್ರೇಯೋಭಿವೃದ್ಧಿಗೆ ಪೂರಕವಾಗಿರದೆ ಮಾರಕವಾಗಿರುವುದು ಕಂಡುಬರುತ್ತದೆ. ಆದ್ದರಿಂದ

ಬುಡಕಟ್ಟು ಸಮುದಾಯಗಳು ಇಂದು ಕೂಡ ಭೂಮಾಲೀಕರ ಕೈಗೊಂಬೆಯಾಗಿರುವಂತಹ ಕಾನೂನುಗಳು ಜಾರಿಗೆ ಬರುವುದು ಗಮನಿಸಿದರೆ ಪ್ರಜಾಪ್ರಭುತ್ವ ಸರ್ಕಾರವೆಂದರೆ ಯಾವುದು ಎಂದು ಆಲೋಚಿಸುವ ವೇದಿಕೆಗಳು ಪ್ರಸ್ತುತ ಸಮಾಜದಲ್ಲಿ ನಿರ್ಮಾಣವಾಗಬೇಕಾಗುತ್ತದೆ. ಯಾವುದೇ ಕಾಲಘಟ್ಟದಲ್ಲಿ ಬುಡಕಟ್ಟುಗಳು ಮತ್ತು ಕೆಳಜಾತಿಗಳಿಂದ ಕಂದಾಯವನ್ನು ಬಲವಂತವಾಗಿ ವಸೂಲಿ ಮಾಡಿದ ಇತಿಹಾಸವಿದೆ ವಿನಾ ಶ್ರೀಮಂತರಿಗೆ ಮತ್ತು ಮಧ್ಯಮ ವರ್ಗದವರಿಗೆ ಆ ರೀತಿಯ ನಿಯಮಗಳಿಲ್ಲ ಎಂಬ ಮಾತು ನಿಜ ಸಂಗತಿಯಾಗಿದೆ.''[೧೫] ಇಂದು ಗೌಡಾಲು ಬುಡಕಟ್ಟು ಕಾಡಿನಲ್ಲಿ ಅರಣ್ಯೋತ್ಪನ್ನಗಳನ್ನು ಸಂಗ್ರಹಿಸಿ Lamp Societyಯ ಮೂಲಕ ಮಾರಾಟ ಮಾಡಿ ಬದುಕು ದೂಡುತ್ತಿದೆ. ಆದರೆ ಸರ್ಕಾರಗಳು ಜಾರಿಗೆ ತಂದಿರುವ ಅರಣ್ಯ ಕಾಯಿದೆಗಳು ಬುಡಕಟ್ಟುಗಳು ಕಾಡಿನಿಂದಲೇ ಹೊರಬರುವಂತೆ ಇರುವುದು ದುರಂತವೇ ಸರಿ. ಇದಕ್ಕೆ ಸಾಕ್ಷಿಯಾಗಿ ಗೌಡಾಲು ಸಮುದಾಯವಿದೆ. ಇಲ್ಲಿಯ ಭೂಮಾಲೀಕರು ತಮ್ಮದೇ ಆದ ಎಸ್ಟೇಟುಗಳನ್ನು ಮಾಡಿಕೊಂಡು ಅವರ ಭೂಮಿಯಲ್ಲಿ ಗೌಡಾಲುಗಳನ್ನು ಕೃಷಿ ಕೂಲಿಕಾರರಾಗಿ ಮಾಡಿಕೊಂಡು ದುಡಿಸಿಕೊಳ್ಳುತ್ತಿರುವುದು ಅಲ್ಲದೆ ಗೌಡಾಲುಗಳಿಗೆ ಯಾವುದೇ ಸೌಲಭ್ಯವನ್ನು ಕೊಡದೆ ದಿನದ ೨೪ ಗಂಟೆಗಳಲ್ಲಿ ಹೆಚ್ಚುವರಿ ಕೂಲಿಯನ್ನು ಮಾಡಿಸಿಕೊಳ್ಳುತ್ತಿದ್ದಾರೆ. ಆದರೆ ಕಾಡಿನ ಅರಣ್ಯ ಇಲಾಖೆಯ ಅಧಿಕಾರಗಳಿಂದ ಮುಗ್ಧ ಹೆಣ್ಣುಮಕ್ಕಳ ಅತ್ಯಾಚಾರವಾಗುತ್ತಿದೆ. ಅಲ್ಲದೇ ಕಾಡಿನಲ್ಲಿ ಯಾವುದೇ ಉರುವಲು ಕಟ್ಟಿಗೆಗಳನ್ನು ತರದಂತೆ ತಡೆಯೊಡ್ಡಿದ್ದಾರಲ್ಲದೆ ದಿನದ ಬದುಕಿಲ್ಲಿ ಚಿತ್ರ ಹಿಂಸೆಯನ್ನು ಕೊಡುತ್ತಿರುವ ಅರಣ್ಯ ಇಲಾಖೆಯು ಯಾವುದೇ ಕಾರಣವಿಲ್ಲದೆ ಗೌಡಾಲುಗಳ ಮೇಲೆ ಕೇಸು ದಾಖಲಿಸುತ್ತಿದೆ. ಆದ್ದರಿಂದ ಗೌಡಾಲುಗಳು ಬದುಕುವುದು ದುಸ್ತರವಾಗಿರುವುದು ಕ್ಷೇತ್ರಕಾರ್ಯದಲ್ಲಿ ಮನವರಿಕೆಯಾಗಿರುವುದು ಮುಖ್ಯವಾಗುತ್ತದೆ.

ಗೌಡಾಲುಗಳು ಕರ್ನಾಟಕದಲ್ಲಿ ಒಂದು ವಿಶಿಷ್ಟ ಮತ್ತು ಹೋರಾಟದ ಮನೋಭಾವನೆಯನ್ನು ರಕ್ತಗತವಾಗಿ ಮಾಡಿಕೊಂಡು ಬಂದ ಬುಡಕಟ್ಟಾಗಿದೆ. ``ಸಾಮ್ರಾಜ್ಯಶಾಹಿ ಜಾಗತೀಕರಣವು ನಮ್ಮಂತಹ ಬಡದೇಶಗಳ ಮುಂದಿಟ್ಟಿರುವ ಸವಾಲುಗಳಲ್ಲಿ ಪರಿಸರದ ಸಂರಕ್ಷಣೆಯ ಸವಾಲೂ ಒಂದಾಗಿದೆ. ಆದರೆ ಮುಂದುವರಿದ ಶ್ರೀಮಂತ ದೇಶಗಳು ತಮ್ಮ ಲಾಭಕೋರ ಆರ್ಥಿಕತೆಗಾಗಿ ಬಡದೇಶಗಳ ಸಂಪನ್ಮೂಲಗಳನ್ನು ಲೂಟಿ ಮಾಡಿ ಘೋರ ವಿಪತ್ತುಗಳನ್ನು ಸೃಷ್ಟಿಸುತ್ತಿದೆ. ಪ್ರಪಂಚದಾದ್ಯಂತ ಇದರ ವಿರುದ್ಧ ರಾಜಿರಹಿತ ಹೋರಾಟಗಳು ನಡೆಯುತ್ತಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಆದ್ದರಿಂದ ಎಲ್ಲ ಕಡೆ ಪರಿಸರ ಸಂರಕ್ಷಣೆ ಕುರಿತ ಕಾಳಜಿ, ಜಾಗೃತಿ ಹೆಚ್ಚುತ್ತಿರುವುದು ಮುಖ್ಯವಾಗುತ್ತದೆ. ಪರಿಸರ ಸಂರಕ್ಷಣೆಯೆಂದರೆ ಅದು ಪ್ರಕೃತಿ ಹಾಗೂ ಅಲ್ಲಿನ ಜೀವ ಸಂಕುಲ ಇವುಗಳೊಂದಿಗೆ ಅನ್ಯೋನ್ಯ ಸಂಬಂಧವಿರಿಸಿಕೊಂಡಿರುವ ಇಡೀ ಮಾನವ ಕುಲವನ್ನೊಳಗೊಂಡ ಬುಡಕಟ್ಟುಗಳ ಜಗತ್ತಿನ ಬದುಕು ಭವಿಷ್ಯಗಳ ರಕ್ಷಣೆ ಎಂಬ ತಿಳುವಳಿಕೆಯನ್ನಾಧರಿಸಿರುವಂತದ್ದು ಎಂಬ ಮನಸ್ಸುಗಳ ಸೃಷ್ಟಿಯಾಗಬೇಕಾಗಿದೆ.''[೧೬] ಇಲ್ಲಿ ಗಮನಿಸಿಲೇಬೇಕಾದ ಸಂಗತಿಯೆಂದರೆ ಮೇಲ್ವರ್ಗದವರು ಬುಡಕಟ್ಟುಗಳಿಗೂ ಮತ್ತು ಪ್ರಕೃತಿಗೂ ಇರುವ ಅವಿನಾಭಾವ ಸಂಬಂಧದ ಬಗೆಗೆ ಆಲೋಚಿಸದೆ ಜಾಣ ಕುರುಡತನವನ್ನು ಪ್ರದರ್ಶಿಸುತ್ತ ಬಂದಿರುವುದು ದುರಂತವೇ ಸರಿ. ವಸಾಹತು ಶಾಹಿ ಮತ್ತು ಬಂಡವಾಳಶಾಹಿಗಳು

ಆದಿವಾಸಿ ಸಮುದಾಯಗಳನ್ನು ಕಾಡಿಗೆ ಹೋಗದಂತೆ, ಅಲ್ಲಿ ಸೊಪ್ಪು ಸೊದೆ ಮುಟ್ಟಬಾರದು, ಅರಣ್ಯೋತ್ಪನ್ನವನ್ನು, ಉರುವಲುಗಳನ್ನು ಸಂಗ್ರಹಿಸಬಾರದು, ದನ ಕರು ಮೇಯಿಸಬಾರದು ಎಂಬ ವಾದವನ್ನು ಸರ್ಕಾರದ ಜೊತೆ ಸೇರಿ ತಮಗೆ ಅನುಕೂಲವಾಗುವಂತೆ ನಿಯಮಗಳನ್ನು ರೂಪಿಸಿ ಕಾಡಿನಿಂದ ಗೌಡಾಲು ಮತ್ತು ಇತರ ಬುಡಕಟ್ಟುಗಳನ್ನು ಒಕ್ಕಲೆಬ್ಬಿಸುತ್ತಿದ್ದಾರೆ.

ಗೌಡಾಲುಗಳು ಕರ್ನಾಟಕದಲ್ಲಿ ಪ್ರಭುತ್ವದ ಅಧಿಕಾರದ ದರ್ಪವನ್ನು ಸಹಿಸದೆ ಹಾಗೂ ಕುದುರೆಮುಖ ಪರಿಸರ ಉಳಿಸಿ, ನದಿಗಳನ್ನು ಉಳಿಸಿ ಎಂಬ ವಾದಗಳನ್ನು ಮುಂದೆ ಇಟ್ಟುಕೊಂಡು ೯೦ರ ದಶಕದಲ್ಲಿ ತುಂಗಾಮೂಲ ಉಳಿಸಿ ಹೋರಾಟವನ್ನು ಮಾಡಿದಾಗ ಈ ಹೋರಾಟದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದಾರೆ. ಕುದುರೆಮುಖ ಗಣಿಗಾರಿಕೆ ನಿಲ್ಲುವತನಕ ಹೋರಾಟ ಮಾಡಿ ಗಂಗಡಿ ಕಲ್ಲು ಮತ್ತು ನಲ್ಲೀಬೀಡು ಬೆಟ್ಟಗಳಿಗೆ ಯಾವುದೇ ಬಂಡವಾಳಶಾಹಿ ಗಣಿಗಾರಿಕೆಯ ಬಗ್ಗೆ ತಲೆಕೆಡಿಸಿಕೊಳ್ಳದಂತೆ ಎಚ್ಚರಿಕೆ ವಹಿಸಿರುವುದರ ಕುರಿತು ಈಗಲೂ ಗೌಡಾಲು ಸಮುದಾಯದ ಮುಗ್ಧ ಮನಸ್ಸುಗಳು ಸಂದರ್ಶನ ಸಮಯದಲ್ಲಿ ಹೇಳುತ್ತಿರುವುದನ್ನು ಗ್ರಹಿಸಿದರೆ ಎಂತವರಿಗೂ ಮೈ ರೋಮಾಂಚನವಾಗದೆ ಇರದು.

ಗೌಡಾಲು ಸಮುದಾಯವು ಕರ್ನಾಟಕದಲ್ಲಿ ಅವರ ಅಸ್ತಿತ್ವಕ್ಕೆ ಹೋರಾಟ ಮಾಡದೆ ತುಂಗ ಮತ್ತು ಭದ್ರ ನದಿಗಳನ್ನು ಆಶ್ರಯಿಸಿ ಬದುಕುತ್ತಿರುವ ಎಲ್ಲ ಸಮುದಾಯಗಳ ಅಸ್ತಿತ್ವ ಮತ್ತು ದನ ಕರುಗಳ, ಪರಿಸರ ಕಾಳಜಿಯ ಕುರಿತು ಹೋರಾಟದಲ್ಲಿ ಭಾಗವಹಿಸಿ ಯಶಸ್ವಿಯಾಗುರುವುದು ಈ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಈ ಹಿನ್ನೆಲೆಯ ಹೋರಾಟದಲ್ಲಿ ಗೌಡಾಲುಗಳು ಭಾಗವಹಿಸಿದ್ದು ಏಕೆ ಎಂದು ಕೇಳಿದರೆ ''ನಮ್ಮ ಪರಂಪರಾನುಗತವಾದ ಬದುಕನ್ನು ಬಂಡವಾಳಶಾಹಿಗಳು ಕಸಿದುಕೊಂಡರು. ನಮ್ಮ ಜೀವಕ್ಕೆ ಆಶ್ರಯವಾಗಿದ್ದ ತುಂಡು ತುಂಡು ಭೂಮಿಯನ್ನು ಕಸಿದು ಅನಾಥರಾಗಿ ಮಾಡಿದ್ವಲ್ಲದೆ, ಇಲ್ಲಿಂದ ಒಕ್ಕಲೆಬ್ಬಿಸುತ್ತಿರುವಾಗ ಮತ್ತು ನಮ್ಮ ನಾಡಿನ ಪರಿಸರವನ್ನು ಮಲಿನಗೊಳಿಸುತ್ತಿರುವಾಗ ನಾವುಗಳೆಲ್ಲರು ಸುಮ್ಮನೇ ಕುಳಿತರೆ ನಮ್ಮ ತಾಯಿಯಾದ ವನದೇವತೆ ಸುಮ್ಮನೆ ಇರುವುದಿಲ್ಲ. ಆದ್ದರಿಂದ ನಮ್ಮ ತಾಯಿಯನ್ನು ಕಾಪಾಡುವುದು ನಮ್ಮ ಧರ್ಮ ಎಂಬಂತೆ ಕ್ಷೇತ್ರಕಾರ್ಯದಲ್ಲಿ ಗೌಡಾಲುಗಳು ಮನಬಿಚ್ಚಿ ಮಾತಾಡುತ್ತಾರೆ.

ದಿನಮಾನಗಳಲ್ಲಿ ಪಶ್ಚಿಮಗಟ್ಟದಲ್ಲಿ ನಡೆಯುತ್ತಿರುವ ಸಮಾಜಪರ ಹೋರಾಟಗಳು, ಸರ್ಕಾರ ಮತ್ತು ಗೌಡಾಲುಗಳ ಸ್ಥಿತಿಗತಿಯನ್ನು ಕುರಿತು ಚರ್ಚಿಸುವುದು ಅಧ್ಯಯನಕ್ಕೆ ಪೂರಕವಾಗುತ್ತದೆ ಎಂದರೆ ತಪ್ಪಾಗಲಾರದು. ಆದ್ದರಿಂದ ಭೂ ಸ್ವಾಧೀನತೆ ಮತ್ತು ಪಶ್ಚಿಮಘಟ್ಟದ ಸ್ಥಿತಿಯನ್ನು ಅರಿತ ನಕ್ಸಲ್ ಹೋರಾಟವು ಮೊದಲು ಹೈದರಾಬಾದ್ ಕರ್ನಾಟಕದಲ್ಲಿ ತಳವೂರಿದ್ದು ಈಗ ಹಚ್ಚ ಹಸಿರಿನ ಮಲೆನಾಡಲ್ಲಿ ತನ್ನ ಬಿಡಾರವನ್ನು ಬೀಡುಬಿಟ್ಟಿದೆ. ನಕ್ಸಲರು ಮಲೆನಾಡಿಗೆ ಬಂದಿದ್ದೇಕೆ ಎಂದು ಯಾವುದೇ ಸಂಶೋಧಕರು ಪ್ರಶ್ನೆ ಹಾಕಿಕೊಂಡರೆ ಉತ್ತರ ಸಿಗುವುದು ಕಷ್ಟ. ಏಕೆಂದರೆ ಅವರು ಅದಕ್ಕೆ ನೀಡುವ ಕಾರಣ, ಕೂಲಿ ಕಾರ್ಮಿಕರಾದ ಬುಡಕಟ್ಟುಗಳ ಮೇಲೆ ಭೂಮಾಲೀಕರ ದಬ್ಬಾಳಿಕೆ, ಶೋಷಣೆ ಹಾಗೂ ಪರಿಸರದ ನಾಶವಾಗುತ್ತಿರುವ ಕಾರಣಗಳಿರಬಹುದು. ಮಲೆನಾಡು ಹೊರಗಿನ ನೋಟಕ್ಕೆ ಅಥವಾ ಪ್ರಪಂಚಕ್ಕೆ ಎಷ್ಟು ಸುಂದರವೋ ಅಷ್ಟೇ ಕಟುಗ್ರವೂ ಆಗಿದೆ.

ಸಾವಿರಾರು ಎಕರೆ ಒಡೆತನದ ಭೂಮಾಲೀಕರಿಗೆ ಮಲೆನಾಡು ಸ್ವರ್ಗವಾಗಿದೆ. ಇವರ ಕಾಫಿ, ಅಡಿಕೆ, ತೋಟಗಳಲ್ಲಿ ದುಡಿಯುವ ಬುಡಕಟ್ಟುಗಳಿಗೆ ಶೋಷಣೆ, ದಬ್ಬಾಳಿಕೆಯ ಬೀಡು. ಗೌಡಾಲು ಬುಡಕಟ್ಟು ಹಿಂದಿನಿಂದ ಬದುಕಿ ಬಾಳಿದ್ದೇ ಕಾಡಿನೊಂದಿಗೆ ಅವರು ಇದರೊಂದಿಗೆ ಅವಿನಾಭಾವ ನಂಟನ್ನು ಇಟ್ಟುಕೊಂಡಿದೆ. ಅಧ್ಯಯನ ಕ್ಷೇತ್ರದ ಕೊಪ್ಪ, ಶೃಂಗೇರಿ ಕಳಸವನ್ನು ದೊಡ್ಡ ಪೇಟೆಗಳೆಂದು ತಿಳಿದವರು ಹೆಚ್ಚಾಗಿ ಗೌಡಾಲುಗಳಲ್ಲಿದ್ದಾರೆ. ಈ ಬುಡಕಟ್ಟಿಗೆ ಅರಣ್ಯ ಕಾಯ್ದೆಗಳ ಗಂಧ ಗಾಳಿ ತಿಳಿಯದು. ಕಾಡು ನಾವು ಹುಟ್ಟಿ ಬೆಳೆದ ನಾಡು, ನಮ್ಮ ನೆಲ. ನಾವು ಇದನ್ನು ಬಿಟ್ಟುಕೊಡಬೇಕ್ಯಾಕೆ ಎಂಬ ಗೌಡಾಲುಗಳ ಮುಗ್ಧ ಪ್ರಶ್ನೆಗೆ ಜಾಗತೀಕರಣ, ನಗರೀಕರಣವೆಂಬ ಉತ್ತರಗಳು ಗಾಳಿಯಲ್ಲಿ ಕೈಗುದ್ದಿಕೊಂಡಂತೆ. ಅದನ್ನೆಲ್ಲ ಗೌಡಾಲುಗಳಿಗೆ ವಿವರಿಸಿ ಹೇಳುವ ಯಾವುದೇ ಮನಸುಗಳಾಗಲಿ, ಸರ್ಕಾರವಾಗಲಿ ಬುಡಕಟ್ಟುಗಳ ಮನಸಿನ ಅಂತರಾಳವನ್ನು ಮುಟ್ಟದೆ ಇರುವುದು ಕ್ಷೇತ್ರಕಾರ್ಯದಲ್ಲಿ ಗೋಚರಿಸುತ್ತದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನ, ಕುವೆಂಪು ಜೈವಿಕ ಮೀಸಲು ಅರಣ್ಯ ಇತ್ಯಾದಿಗಳು ಮಲೆನಾಡಿಗೆ ಬಂದಿರುವುದರಿಂದ ಇಷ್ಟು ದಿನ ಬದುಕಿ ಬಾಳಿದ ಕಾಡಿಗೆ ಹೋಗುವಂತಿಲ್ಲ, ಸೌದೆ ಕಡಿಯುವಂತಿಲ್ಲ, ಜೇನು ಇಳಿಸುವಂತಿಲ್ಲ ಎಂಬ ಹೊಸ ಕಾನೂನುಗಳು ಗಿರಿಜನರನ್ನು ಕೆರಳಿಸುತ್ತಿವೆ. ಈ ಪರಿಣಾಮವಾಗಿ ಪಶ್ಚಿಮ ಘಟ್ಟದಲ್ಲಿ ಬುಡಕಟ್ಟುಗಳ ಹಿತವನ್ನು ಕುರಿತು ಹೋರಾಟ ಮಾಡಲೆಂದು ಪ್ರಾಣವನ್ನು ಪಣಕ್ಕೆ ಇಡಲು ಬಂದ ನಕ್ಸಲ್ ಹೋರಾಟವು ದಿನಮಾನಗಳಲ್ಲಿ ಸಾಮಾಜಿಕ ಸಮಾನತೆಯಲ್ಲಿ ಅಸಮಾನತೆ ತಾಂಡವವಾಡುತ್ತಿದೆ. ಆದ್ದರಿಂದ ಈ ಭಾಗದ ಸಮುದಾಯಗಳ ಬದುಕಿಗೆ ಬೆಲೆ ಕೊಟ್ಟು ಗಿರಿಜನರ ಬೇಡಿಕೆಗಳನ್ನು ಈಡೇರಿಸುವಂತಹ ಕಾನೂನುಗಳು ಜಾರಿಗೆ ಬರಬೇಕಾಗಿರುವ ಹಿನ್ನೆಲೆಯಲ್ಲಿ ತಮ್ಮ ನಿಲುವನ್ನು ಸಾಬೀತುಪಡಿಸುತ್ತಿರುವ ಸಂದಿಗ್ಧತೆಯಲ್ಲಿ ಗೌಡಾಲುಗಳು, ನಕ್ಸಲರು ಮತ್ತು ಸರ್ಕಾರಗಳ ಮಧ್ಯೆ ಸಿಕ್ಕಿಹಾಕಿಕೊಂಡಿರುವುದಲ್ಲದೆ ಅವರ ಜೀವನದಲ್ಲಿ ನೆಮ್ಮದಿಯಿಲ್ಲದೆ ಅತಂತ್ರರಾಗಿದ್ದಾರೆ.

ಇಲ್ಲಿ ಗಮನಿಸಬೇಕಾಗಿರುವ ಸಂಗತಿಯೆಂದರೆ ಗಿರಿಜನರ ಬೇಡಿಕೆಗಳು ಮತ್ತು ಸೌಲಭ್ಯಗಳು, ಒಕ್ಕಲೆಬ್ಬಿಸುವಿಕೆ, ರಾಷ್ಟ್ರೀಯ ಉದ್ಯಾನವನ ಯೋಜನೆಗಳ ವಿರುದ್ಧ ಹೋರಾಟವನ್ನು ಮಾಡಲು ಬಂದಿದ್ದ ನಕ್ಸಲರು ತಮ್ಮ ಗುರಿಯನ್ನು ತಪ್ಪಿದಂತೆ ಕಾಣುತ್ತದೆ. ಗೌಡಾಲುಗಳು ಮತ್ತು ಇತರ ಬುಡಕಟ್ಟು ಸಮುದಾಯಗಳು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳದೆ ವ್ಯವಸ್ಥೆಯ ಒಳಗೆ ಸಿಕ್ಕಿಹಾಕಿಕೊಂಡಿರುವುದು ತಿಳಿಯುತ್ತದೆ. ನಕ್ಸಲರು ಕರ್ನಾಟಕದ ಪಶ್ಚಿಮಘಟ್ಟಕ್ಕೆ ಬಂದ ಮೇಲೆ ಮಲೆನಾಡಿನ ತಿಳಿಯದ ವಾತಾವರಣದಲ್ಲಿ ತಮ್ಮದೇ ಆದ ಬದುಕನ್ನು ಸಾಗಿಸುತ್ತಿದ್ದ ಬುಡಕಟ್ಟುಗಳು ಭಯದ ನೆರಳಲ್ಲಿ ಬದುಕಬೇಕಾಗಿದೆ. ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಬಂದೆವೆಂದು ನಕ್ಸಲರು ಹೇಳಿಕೊಳ್ಳುತ್ತಾ ಜೀವದ ಹಂಗು ತೊರೆದು ಕಾಡು ಸೇರಿರುವ ಇವರು ಅನ್ನ, ನೀರು, ಬೇಡಲು ಬಂದಾಗ ಇಲ್ಲ ಎನ್ನಲಾಗದೆ, ಬುಡಕಟ್ಟುಗಳಿಗೆ ಇನ್ನೊಂದೆಡೆ ಪೊಲೀಸರು ನಕ್ಸಲರ ಬಗ್ಗೆ ವಿಚಾರಿಸಲು ಬಂದಾಗ ದೂರು ನೀಡಿದರೆ ಎಷ್ಟರ ಮಟ್ಟಿಗೆ ಸರಿಯೆಂದು ಆಲೋಚಿಸಲಿಕ್ಕೆ ಆಗದೆ ಇರುವ ಸ್ಥಿತಿಯಲ್ಲಿ ಬದುಕು ಸಾಗಿಸುವವರಾಗಿದ್ದಾರೆ. ಈ ಹಿನ್ನೆಲೆಯಿಂದ ಬುಡಕಟ್ಟುಗಳಿಗೆ ಸರ್ಕಾರದ ತಾಕೀತಿನಂತೆ ಕಾಡಿನಿಂದ ಹೊರಬಂದು ಪುನರ್ವಸತಿ ಪ್ಯಾಕೇಜ್ ಒಪ್ಪಿಕೊಳ್ಳುವುದೋ ಅಥವಾ ಕೋರ್ಟ್ ಕಟಕಟೆಯೇರಿದರೂ ಸರಿ ಅಜ್ಜಂದಿರ

ಕಾಲದಿಂದಲೂ ಬದುಕಿ ಬಾಳಿದ ಕಾಡಿನ ನಂಟು ಉಳಿಸಿಕೊಳ್ಳಲು ಹೋರಾಡುವುದೋ ಎಂಬುದೆಲ್ಲವೂ ಅಯೋಮಯವಾಗಿವೆ. ಇದರಿಂದ ಪಶ್ಚಿಮ ಘಟ್ಟದ ಕಾನನಗಳಲ್ಲಿ ತಲತಲಾಂತರದಿಂದ ಸಾಗಿ ಬಂದಿರುವ ಗೌಡಾಲುಗಳ ಬದುಕು ಈಗ ಇಂತಹ ಅಡ್ಡಕತ್ತರಿಯಲ್ಲಿ ಸಿಲುಕಿದೆ.

''ಪಶ್ಚಿಮಘಟ್ಟಕ್ಕೆ ನಕ್ಸಲರು ಹೋರಾಟಕ್ಕೆ ಬಂದ ಮೇಲೆ ನಡೆದ ಘಟನೆಗಳನ್ನು ಅವಲೋಕಿಸದರೆ ೬.೮.೨೦೦೨ ಸಿಂಗ್‌ಸಾರ ಅರಣ್ಯದಲ್ಲಿ ಅರಣ್ಯ ಇಲಾಖೆ ಸಿಬ್ಬಂದಿ ಮತ್ತು ನಕ್ಸಲೀಯರ ನಡುವೆ ಮೊದಲು ಗುಂಡಿನ ಚಕಮಕಿ ನಡೆಯಿತು. ೨೦೦೩ರಲ್ಲಿ ಪಾರ್ವತಿಯ ಹತ್ಯೆಯಾಯಿತು. ೨೦೦೪ರಂದು ಶೃಂಗೇರಿ ತಾಲೂಕಿನ ಸೂಜಿಗುಡ್ಡ ಬಳಿ ಪೊಲೀಸರು ನಕ್ಸಲೀಯರ ನಡುವೆ, ೨೦೦೪ರಲ್ಲಿ ಮೆಘೋ ಬೈಲಿನಲ್ಲಿ ಪೇದೆ ಮುದ್ದಪ್ಪ ಮತ್ತು ಆಧುನಿಕ ರೈಫಲ್ ಅಪಹರಣ, ಅದೇ ೨೦೦೪ರಲ್ಲಿಯೇ ಬರ್ಕಣದಲ್ಲಿ ಗುಂಡಿನ ಚಕಮಕಿ ಒಬ್ಬ ನಕ್ಸಲೀಯನಿಗೆ ಗುಂಡೇಟು, ನಕ್ಸಲೀಯರಿಂದ ಪೋಲಿಸ್ ಮಾಹಿತಿದಾರ ಚಂದ್ರಕಾಂತ್ ಮೇಲೆ ಹಲ್ಲೆ ೨೦೦೫ ಮೂಡಿಗೆರೆ ತಾಲೂಕಿನ ಬಲಿಗೆಯಲ್ಲಿ ನಕ್ಸಲ್ ನಾಯಕ ಸಾಕೇತ ರಾಜನ್, ಶಿವಲಿಂಗು ಹತ್ಯೆ. ೨೦೦೫ ನಕ್ಸಲೀಯರಿಂದ ಪೊಲೀಸ್ ಮಾಹಿತಿದಾರರೆಂದು ಗುರುತಿಸಿದ ಗೌಡ್ಲು ಸಮುದಾಯದ ಶೇಷಯ್ಯನ ಹತ್ಯೆ. ೨೦೦೫ ಉಡುಪಿ ವ್ಯಾಪ್ತಿಯ ದೇವರಬಾಳುವಿನಲ್ಲಿ ನಕ್ಸಲ್ ಸಬಿ ಉಮೇಶ್, ಅಜಿತ್ ಕುಸುಬಿ ಹತ್ಯೆ. ೨೦೦೫ ಹೆಬ್ರಿಯೆಲ್ಲಿ ನೆಲಬಾಂಬ್ ಪತ್ಯೆ, ೨೦೦೫ ಶೃಂಗೇರಿ ಬಳಿ ಅರಣ್ಯ ಇಲಾಖೆಯ ತನಿಖಾ ಠಾಣೆ ಸ್ಫೋಟ. ೨೦೦೫ ನಕ್ಸಲ್ ಮಲ್ಲಿಕಾ ಬಂಧನ, ೨೦೦೬ ಕೊಪ್ಪ ತಾಲೂಕಿನ ಕೃಷಿಕರೊಬ್ಬರ ಮನೆಯಿಂದ ಬಂದೂಕು ಅಪಹರಣ. ೨೦೦೬ ಸಾರ್ಗೋಡು ಮಾಸಲು ಅರಣ್ಯದಲ್ಲಿ ಅರಣ್ಯ ಇಲಾಖೆಯ ಚೆಕ್‌ಪೋಸ್ಟ್ ಮೇಲೆ ದಾಳಿ. ೨೦೦೬ ಶೃಂಗೇರಿ ತಾಲೂಕಿನ 'ಕಿಗ್ಗ' ಬಳಿ ನಕ್ಸಲ್ ದಿನಕರ್ ಹತ್ಯೆ, ೨೦೦೭ ನಕ್ಸಲೀಯರಿಂದ ಶೃಂಗೇರಿ ತಾಲೂಕಿನ ವೆಂಕಟೇಶ್ ಹತ್ಯೆ.''[೨] ಈ ಎಲ್ಲ ಘಟನೆಗಳ ಗೌಡಾಲು ಬುಡಕಟ್ಟು ಮತ್ತು ಇತರ ಆದಿವಾಸಿಗಳ ಬದುಕು ಸಿಕ್ಕಿಕೊಂಡಿರುವುದು ಈ ಅಧ್ಯಯನ ದೃಷ್ಟಿಯಿಂದ ವಿಶೇಷವಾಗಿದೆ. ಇಲ್ಲಿ ಗೌಡಾಲುಗಳು ಸಮಸ್ಯೆಯಲ್ಲಿ ಸಿಕ್ಕಿ ಹಾಕಿಕೊಂಡು ಬಿಡಿಸಲಿಕ್ಕೆ ಆಗದೆ ಇರುವ ಸ್ಥಿತಿಯಲ್ಲಿ ಇದ್ದಾರೆ. ಇದಕ್ಕೆ ಪೂರಕವಾಗಿ ಹೇಳುವುದಾದರೆ, ೧೦.೭.೨೦೦೭ರಲ್ಲಿ ನಕ್ಸಲ್ ಗೌತಮನ ಜೊತೆಯಲ್ಲಿ ಪೊಲೀಸರು ಗೌಡಾಲು ಬುಡಕಟ್ಟಿನ ಸಾಮಾಜಿಕ ಹಾಗೂ ರಾಷ್ಟ್ರೀಯ ಉದ್ಯಾನವನ ವಿರೋಧ ಒಕ್ಕೂಟದ ಸದಸ್ಯನಾದ ಪರಮೇಶನನ್ನು ಹತ್ಯೆಮಾಡಿದ್ದಾರೆ. ಇದರ ನಡುವೆ ಅಮ್ಮಡ್ಡುವಿನಲ್ಲಿ ನಡೆದ ಎನ್‌ಕೌಂಟರ್‌ನಲ್ಲಿ ಐದು ಮಂದಿ ಒಟ್ಟಿಗೆ ಪೊಲೀಸ್ ಗುಂಡಿಗೆ ಬಲಿಯಾಗಿದ್ದು ಇದರಲ್ಲಿ ಗೌಡಾಲುಗಳು ನಾಲ್ವರು ಸೇರಿದ್ದಾರೆ. ಪರಿಣಾಮವಾಗಿ ಗೌಡಾಲುಗಳ ಜಂಘಾಬಲವನ್ನೇ ಉಡುಗಿಸಿದೆ. ಕಾಡಿನ ನಡುವೆ ಶಾಂತಿಯುತ ಬದುಕು ನಡೆಸುತ್ತಿದ್ದ ಗೌಡಾಲುಗಳು ಇತ್ತೀಚಿನ ವರ್ಷಗಳಲ್ಲಿ ಕಳೆದುಕೊಂಡಿದ್ದ ನೆಮ್ಮದಿ ಇನ್ನಷ್ಟು ಛಿದ್ರವಾಗಿದೆ. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಹಿಂದೆ ನಡೆದ ಎನ್‌ಕೌಂಟರ್‌ಗಳಿಗಿಂತ ಅಮ್ಮಡ್ಡು ಘಟನೆಯು ಗಿರಿಜನರನ್ನು ರೊಚ್ಚಿಗೆಬ್ಬಿಸಿದೆ. ಈ ಪರಿಣಾಮವಾಗಿ ನಮ್ಮ ಪಾಡಿಗೆ ನಮಗೆ ಬದುಕಲು ಬಿಡಿ ಎನ್ನುವ ಹಂತವನ್ನು ಪಶ್ಚಿಮ ಘಟ್ಟದ ಮೂಲ ನಿವಾಸಿಗಳಾದ ಗೌಡಾಲು ಬುಡಕಟ್ಟು ಮತ್ತು ಇತರ ಬುಡಕಟ್ಟುಗಳೆಲ್ಲವು ಬದುಕಿನ ದಾರಿಯನ್ನು ಹುಡುಕುತ್ತಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿರುವಂತೆ ಸರ್ಕಾರವು ನಕ್ಸಲರ ಹಿಂಸೆಗೆ ಉತ್ತರವಾಗಿ ಹಿಂಸೆ ಮಾಡುತ್ತಿದೆ. ಆದರೆ ಈ ಭಾಗದ ಬುಡಕಟ್ಟುಗಳ ಬದುಕು ಯಾವ ಸ್ವರೂಪದ್ದು ಅವರ ಸಮಸ್ಯೆಗಳೇನು? ಕಾಡಿನಲ್ಲಿ ವಾಸವಾಗಿರುವ ಗಿರಿಜನರ ಮನೋಭಾವನೆಗಳು ಯಾವ ಹಿನ್ನೆಲೆಯಿಂದ ಹೆಣೆದುಕೊಂಡಿವೆ ಎಂಬುದನ್ನು ಅರ್ಥ ಮಾಡಿಕೊಳ್ಳದ ಸರ್ಕಾರದ ಅಧಿಕಾರಿಗಳು ಇದ್ದಾರೆ ಎಂಬುದು ಇಲ್ಲಿ ಗಮನಾರ್ಹವಾಗಿದೆ.

ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ, ಕೊಪ್ಪ, ಮೂಡಿಗೆರೆ ತಾಲೂಕಿನಲ್ಲಿ ಗೌಡಾಲುಗಳಿಗೆ ಬೆರಳೆಣಿಕೆಯಷ್ಟು ಮಾತ್ರ ಒಂದಷ್ಟು ರಸ್ತೆಗಳು, ಸೋಲಾರ್ ದೀಪ ಕೆಲವು ಮಂದಿಗೆ ಹಕ್ಕು ಪತ್ರ ದೊರೆತಿದೆ ವಿನಾ ಅದು ಬಿಟ್ಟರೆ ಕಾಡಿನಲ್ಲಿ ಯಾವುದೇ ಭರವಸೆಯಿಲ್ಲದೆ ನೂರಾರು ವರ್ಷಗಳಿಂದ ತಮ್ಮದಾಗಿದ್ದ ಜಾಗಕ್ಕೆ ಹಕ್ಕು ಪತ್ರ, ರಸ್ತೆ, ವಿದ್ಯುತ್‌ನಂತಹ ಮೂಲ ಸೌಲಭ್ಯದ ಪ್ರಮುಖ ಬೇಡಿಕೆಗಳಾವುವೂ ಈಡೇರಿಲ್ಲ. ಅವೆಲ್ಲ ನಿಂತ ನೀರಿನಂತೆ ಅಲ್ಲಲ್ಲೇ ನಿಂತಿವೆ. ಸರ್ಕಾರ ಒಂದೊಂದು ಬಾರಿ ಎನ್‌ಕೌಂಟರ್ ಮಾಡಿದಾಗಲೂ ಘೋಷಿಸಿದ ಪ್ಯಾಕೇಜ್‌ಗಳು ಮೂಲೆ ಸೇರಿವೆ. ಗಿರಿಜನರ ಹೆಸರಿನಲ್ಲಿ ಇದುವರೆಗೆ ಬಂದ ೩ ಕೋಟಿ ರೂಪಾಯಿಯೆಲ್ಲ ಸರ್ಕಾರಿ ವಾಹನಗಳು ಓಡಾಡಲು ಅನುವಾಗುವಂತೆ ಅಲ್ಲಲ್ಲಿ ಕೆಲ ರಸ್ತೆಗಳಾಗಿದ್ದು ಬಿಟ್ಟರೆ ಸುಮಾರು ೫೦೦ ಜನರಿದ್ದರೂ ಎಡಗುಂದದಂತಹ ಕುಗ್ರಾಮಗಳಿಗೆ ಇನ್ನೂ ಒಂದು ರಸ್ತೆ, ಸೇತುವೆಯೂ ಆಗದೆ ಇರುವುದು ದುರಂತವೇ ಸರಿ. ಜಿಲ್ಲಾಡಳಿತದಿಂದ ಅಡುಗೆ ತರಬೇತಿ ಪಡೆದಿದ್ದ ೨೮ ಗೌಡಾಲು ಸಮುದಾಯದವರಲ್ಲಿ ಕೇವಲ ಇಬ್ಬರಿಗೆ ಕೆಲಸ ಸಿಕ್ಕಿದೆ. ಇವುಗಳೆಲ್ಲಕ್ಕಿಂತ ಮಿಗಿಲಾಗಿ ವ್ಯವಸ್ಥೆಯ ಬಗ್ಗೆ ಕಟು ವಾಸ್ತವಗಳ ಬಗ್ಗೆ ಜನರಿಂದ, ಜನರಿಗಾಗಿ ಇರುವ ಸರ್ಕಾರದ ಬಗ್ಗೆ ಗಿರಿಜನರಲ್ಲಿ ವಿಶ್ವಾಸವಿಲ್ಲವಾಗಿದೆ. ಇಲ್ಲಿ ಗೌಡಾಲುಗಳು ಅನುಭವಿಸುತ್ತಿರುವ ಕಷ್ಟಗಳನ್ನು ಅರಿತ ನಕ್ಸಲ್ ಹೋರಾಟಗಾರರು ಸರ್ಕಾರವನ್ನು ಕುರಿತು ತಮಗೆ ಏನು ಕೇಳದೇ ಸರ್ಕಾರವು ತನ್ನ ಜನವಿರೋಧಿ ನೀತಿಗಳನ್ನು ಬದಲಾಯಿಸಿಕೊಳ್ಳಬೇಕು. ಸಾಮ್ರಾಜ್ಯಶಾಹಿ ಹಿತಾಸಕ್ತಿಗೆ ಕಾಡನ್ನೇ ನಂಬಿ ಬದುಕಿರುವ ಆದಿವಾಸಿ ಗಿರಿಜರ ಎತ್ತಂಗಡಿಯನ್ನು ಕೈಬಿಡಬೇಕು ಎಂಬ ಬೇಡಿಕೆಗಾಗಿ ಅರೆಹೊಟ್ಟೆಯಲ್ಲಿರುವ ಬುಡಕಟ್ಟುಗಳ ಪರವಾಗಿ ಈ ಭಾಗದಲ್ಲಿ ಹೋರಾಟವನ್ನು ಮಾಡುತ್ತಿದ್ದಾರೆ. ಹೋರಾಟದ ಬಗ್ಗೆ ಅವಲೋಕಿಸಿದರೆ ಇಲ್ಲಿ ಊಳಿಗಮಾನ್ಯ ಪದ್ಧತಿಯು ಜೀವಂತಿಕೆ ಪಡೆದಿದೆ. ಇದಕ್ಕೆ ಸಾಕ್ಷಿಯಾಗಿ ಕಡತಗಳಿಗಷ್ಟೇ ಸೀಮಿತವಾಗಿರುವ ಭೂಸುಧಾರಣೆ ಸಾಮ್ರಾಜ್ಯಶಾಹಿ ಹಸ್ತಕ್ಷೇಪ ರಾಷ್ಟ್ರೀಯ ಉದ್ಯಾನ ಹಾಗೂ ಸರ್ಕಾರದ ದಮನಕಾರಿ ನೀತಿ, ರಾಷ್ಟ್ರೀಯ ಉದ್ಯಾನದ ನೆಪದಲ್ಲಿ ಗಿರಿಜನರನ್ನು ಕಾಡಿನಿಂದ ಹೊರದಬ್ಬಿ ಗೌಡಾಲುಗಳನ್ನು ನಿರಾಶ್ರಿತಗೊಳಿಸುವ ಸಂಚು, ಪ್ರಜಾತಾಂತ್ರಿಕ ಹಕ್ಕುಗಳಿಗೆ ಹೋರಾಟ ಮಾಡುತ್ತಿರುವವರನ್ನು ಗಮನಿಸಲು ನಿಂತ ಸರ್ಕಾರ ಇಂತಹ ಹಲವಾರು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿರುವ ಮಲೆನಾಡಿನ ಗಿರಿಜನರ ಬದುಕು ಅತಂತ್ರವಾಗಿದೆ.

ಗೌಡಾಲು ಬುಡಕಟ್ಟಿನ ಸಾರ್ವತ್ರಿಕ ಹಾಗೂ ಸದಬಿರುಚಿಯ ಹೋರಾಟಗಾರನಾದ ಮೇಗೂರಿನ ಪರಮೇಶ ಅವರು ಇಡೀ ಪಶ್ಚಿಮಘಟ್ಟದ ಪರಿಸರ ಮತ್ತೆ ಭೂಮಾಲೀಕರ ವಿರುದ್ಧ ಅನೇಕ ಪ್ರತಿಭಟನೆಗಳನ್ನು ಮಾಡಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವಿರೋಧಿ ಸಮಿತಿಯಲ್ಲಿ ಕ್ರಿಯಾಶೀಲವಾಗಿ ಕೆಲಸ ಮಾಡಿದ ಗೌಡಾಲು

ನಾಯಕನನ್ನು ಇಲ್ಲಿ ನೆನಪಿಸಬೇಕಾಗುತ್ತದೆ. ಸರ್ಕಾರ ಮತ್ತು ನಕ್ಸಲರ ಮಧ್ಯೆ ಅಮಾಯಕ ಮನಸ್ಸೊಂದು ಬಿಟ್ಟು ಹೋದ ಬಗೆಯನ್ನು ಗೌಡಾಲು ಬುಡಕಟ್ಟಿನ ಜನರು ಮರೆಯುವುದಾದರು ಹೇಗೆ? ಆದ್ದರಿಂದ ಇಡೀ ಪಶ್ಚಿಮ ಘಟ್ಟದ ಪರಿಚಯ ಪರಮೇಶಿಯವರಿಗೆ ಚೆನ್ನಾಗಿ ತಿಳಿದಿತ್ತು. ಕ್ಷೇತ್ರಕಾರ್ಯದ ಸಮಯದಲ್ಲಿ ಗೌಡಾಲುಗಳಿರುವ ಎಲ್ಲ ಹಳ್ಳಿಗೆ ನನ್ನನ್ನು ಪರಿಚಯಿಸಿದ ಸಮಾಜಪರದ ಮನಸ್ಸುಳ್ಳವರು. ಸರ್ಕಾರದ ಕಿಂಚಿತ್ತು ಸವಲತ್ತಿಲ್ಲದೆ ಫಾರಿನ್ ಫಂಡ್‌ಗಳ ಸಹಾಯವಿಲ್ಲದೆ ಈ ಜಗತ್ತಿನಲ್ಲಿ ಬದುಕುತ್ತಿರುವ ಏಕೈಕ ಜನಾಂಗಗಳೆಂದರೆ ಪಶ್ಚಿಮಘಟ್ಟದಲ್ಲಿ ಬದುಕುತ್ತಿರುವ ಬುಡಕಟ್ಟುಗಳು ಮಾತ್ರ ಎಂಬುದನ್ನು ಮರೆಯಬಾರದು. ಮಲೆನಾಡಿನ ದಟ್ಟ ಕಾನನದ ನಡುವೆ ಒಂದೊಂದೇ ಮನೆಗಳಲ್ಲಿ, ಜೋರು ಮಳೆ, ಇಂಬಳ ಪ್ರಕೃತಿ ವಿಕೋಪಗಳ ನಡುವೆ ಹೇಗೋ ಹೊಂದಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಕುಡಿಯುವ ನೀರು, ನಡೆದಾಡುವ ರಸ್ತೆ ವಿದ್ಯುಚ್ಛಕ್ತಿಗಳಂತಹ ಮೂಲಭೂತ ಸೌಕರ್ಯಗಳಿಲ್ಲದೆ ಕೇವಲ ಚಿಮಣಿ ದೀಪದ ಬೆಳಕಿನಲ್ಲೇ ಬದುಕು ಸಾಗಿಸುತ್ತಿದ್ದಾರೆ. ಗೌಡಾಲುಗಳ ಬದುಕನ್ನು ಲೆಕ್ಕಕ್ಕಿಟ್ಟುಕೊಳ್ಳದ ಪುಢಾರಿಗಳು, ರಾಜಕಾರಣಿಗಳು, ಬುಡಕಟ್ಟುಗಳನ್ನು ಹತ್ತಿರದಿಂದ ನೋಡುವುದಿರಲಿ ಅವರು ವಾಸಿಸುವ ಸ್ಥಳಗಳ ಕಡೆ ಮುಖ ಮಾಡಿಲ್ಲ. ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಿ ಇಲ್ಲಿ ಸ್ಥಳೀಯ ಭೂಮಾಲೀಕರ ಹೊಲಗಳಲ್ಲಿ ಹತ್ತಾರು ಕಿ.ಮೀ. ನಡೆದುಹೋಗಿ ಕೂಲಿನಾಲಿ ಮಾಡಿ ಬಂದ ಪುಡಿಗಾಸಿನಲ್ಲಿ ಸೀಮೆ ಎಣ್ಣೆ, ಕುಚುಲಕ್ಕಿ ಕೊಂಡು ಜೀವನ ಸಾಗಿಸುತ್ತಿದ್ದಾರೆ. ಗೌಡಾಲು ಸಮುದಾಯವು ಭೂಸ್ವಾಧೀನದ ಹಕ್ಕಿನಲ್ಲಿ ನ್ಯಾಯಯುತವಾದ ಸೌಲಭ್ಯಗಳು ಸಿಗದೇ ಇರುವುದು ಹಾಗೂ ಇಲ್ಲಿಯವರೆಗೆ ಹಕ್ಕು ಪತ್ರಗಳು ದೊರೆಯದೇ ಇರುವುದರಿಂದ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗಿದೆ.

ಭೂಸ್ವಾಧೀನ ಹಕ್ಕಿನ ದೃಷ್ಟಿಯಿಂದ ಚರ್ಚಿಸಲು ಪ್ರಾರಂಭಿಸಿದರೆ ೧೯೯೧ರಲ್ಲಿ ಭಾರತವು ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಆಧಾರಿತ ಹೊಸ ಆರ್ಥಿಕ ನೀತಿಯನ್ನು ಒಪ್ಪಿಕೊಂಡ ಪರಿಣಾಮವಾಗಿ ಕೃಷಿ ಉತ್ಪನ್ನಗಳ ಎಲ್ಲ ಹಂತದ ಉತ್ಪತ್ತಿ, ಸೇವನೆ ಮತ್ತು ಮಾರುಕಟ್ಟೆ ವ್ಯವಸ್ಥೆಯಲ್ಲಿ ಸರ್ಕಾರ ಭಾಗಿದಾರಿಯಾಗಿರುವುರಿಂದ ಪ್ರತಿವರ್ಷ ೨ ಮಿಲಿಯನ್ ಸಣ್ಣ ಮತ್ತು ಅತಿಸಣ್ಣ ರೈತರು ತೊಂದರೆಗೊಳಗಾಗಿ ತಮ್ಮ ಭೂಮಿಯನ್ನು ಕಳೆದುಕೊಳ್ಳುವುದಲ್ಲದೆ ನಿರಾಶ್ರಿತರಾಗುತ್ತಿದ್ದಾರೆ. ಕಳೆದ ಕೆಲವು ದಶಕಗಳಲ್ಲಿ ಗ್ರಾಮೀಣ ಭಾರತದಲ್ಲಿ ಭೂ ರಹಿತ ಸಮುದಾಯಗಳ ಸಂಖ್ಯೆಯು ದ್ವಿಗುಣಗೊಳ್ಳುತ್ತಿದೆ. ಅಲ್ಲದೆ ಭೂಮಿಯನ್ನು ಕೆಲವು ಶ್ರೀಮಂತ ಕಂಪನಿಗಳು ಆಕ್ರಮಿಸಿಕೊಂಡು ಬುಡಕಟ್ಟು ಸಮುದಾಯಗಳನ್ನು ಅನಾಥವಾಗಿ ಮಾಡುತ್ತಿವೆ. ೧೯೭೪-೭೫ರಲ್ಲಿ ದಲಿತ ಹಾಗೂ ಬುಡಕಟ್ಟು ದಿನಗೂಲಿ ಕುಟುಂಬಗಳ ಭೂ ಒಡೆತನವು ೪೪.೩೮ರಷ್ಟು ಇದ್ದದ್ದು ೧೯೯೩-೯೪ರ ವೇಳೆಗೆ ಅವರ ಸಂಖ್ಯೆಯು ೩೫.೦೫ಕ್ಕೆ ಇಳಿದಿದೆ. ಮತ್ತೊಂದೆಡೆ ಗ್ರಾಮೀಣ ಪ್ರದೇಶಗಳಲ್ಲಿ ಭೂರಹಿತ ಬುಡಕಟ್ಟು ದಿನಗೂಲಿಗಳ ಸಂಖ್ಯೆ ಕಡಿಮೆಯಾಗಿರುವುದಲ್ಲದೆ ದಿನದ ಬದುಕಿಗಾಗಿ ಹೋರಾಟವನ್ನು ಮಾಡಬೇಕಾದ ವಾತಾವರಣ ಸೃಷ್ಟಿಯಾಗಿದೆ. ಈ ಹಿನ್ನೆಲೆಯಿಂದ ಸರ್ಕಾರವು ಯಾವುದೇ ಯೋಜನೆಗಳನ್ನು ರೂಪಿಸಬೇಕಾದರೆ ಪೂರ್ವಭಾವಿಯಾಗಿ ಆಲೋಚಿಸಿ ಯೋಜನೆಗಳನ್ನು ಜಾರಿಗೆ ತರಬೇಕಾದ ಅನಿವಾರ್ಯತೆಯಿದೆ.

ಭಾರತದಲ್ಲಿ ಕೃಷಿಯ ದೃಷ್ಟಿಯಿಂದ ಆಲೋಚಿಸಿದರೆ ಬುಡಕಟ್ಟುಗಳಿಗೆ ಯಾವುದೇ ಭೂಸ್ವಾಧೀನ ಹಕ್ಕು ದೊರೆಯದೆ ಇರುವುದು ಪ್ರಸ್ತುತ ಕಾಲದವರೆಗೆ ಗೋಚರಿಸುತ್ತಿರುವುದು ದುರಂತವೇ ಸರಿ. ಏಕೆಂದರೆ ಸ್ವಾತಂತ್ರ್ಯದ

ಪೂರ್ವದಲ್ಲಿ ಜಮೀನ್ದಾರಿ ಪದ್ಧತಿ, ರೈತವಾರಿ ಪದ್ಧತಿ, ಮಹಲ್ವಾರಿ ಪದ್ಧತಿಗಳಂತೆ ಗೌಡಾಲು ಬುಡಕಟ್ಟನ್ನು ಭೂಮಾಲೀಕರು ಕೆಲವು ನಿಯಮಗಳನ್ನು ಹಾಕಿಕೊಂಡು ಗೇಣಿ ಪದ್ಧತಿಯಂತಹ ಅನಿಷ್ಟ ಪದ್ಧತಿಯಿಂದ ಗೌಡಾಲು ಸಮುದಾಯ ಶೋಷಣೆಗೆ ಒಳಗಾಗುತ್ತಿದೆ. ಪಶ್ಚಿಮಘಟ್ಟದಲ್ಲಿ ಬುಡಕಟ್ಟು ಸಮುದಾಯಗಳು ಭೂಮಿಯ ಒಡೆತನದ ಹಕ್ಕು ಸಿಗದೆ ತಾತ್ಕಾಲಿಕ ಹಕ್ಕಿನ ಗೇಣಿದಾರರಾಗಿ ಭೂಮಿಯನ್ನು ಉಳುಮೆ ಮಾಡುತ್ತಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದ ಮಾಹಿತಿಯಾಗಿದೆ. ಆದ್ದರಿಂದ ಸರ್ಕಾರವು ಗೌಡಾಲುಗಳಂತಹ ಅನೇಕ ಬುಡಕಟ್ಟುಗಳಿಗೆ ಭೂಸ್ವಾಧೀನ ಹಕ್ಕನ್ನು ಕೊಡಬೇಕಾಗಿದೆ. ಇವರಿಗೆ ತುಂಡು ತುಂಡು ಭೂಮಿಯ ಹಕ್ಕು ಪತ್ರ ದೊರೆಯದೆ ಶ್ರೀಮಂತ ಭೂಮಾಲೀಕರಿಗೆ ಭೂಸ್ವಾಧೀನ ಪತ್ರಗಳು ದೊರೆತು ಇವರು ದಿನಗೂಲಿಗಳಾಗಿ, ಕೃಷಿಕಾರ್ಮಿಕರಾಗಿ ದುಡಿಯಬೇಕಾದ ಸ್ಥಿತಿಯು ಬಂದಿದೆ. ಆದ್ದರಿಂದ ಇಂದು ಸರ್ಕಾರ ಬುಡಕಟ್ಟುಗಳಿಗೆ, ಅಲೆಮಾರಿಗಳಿಗೆ ಹಾಗೂ ದಲಿತರಿಗೆ ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಸಂವಿಧಾನಾತ್ಮಕವಾದ ಹಕ್ಕನ್ನು ನೀಡಿದಾಗ ಇದರ ಬದುಕ ಹಸನಾಗುತ್ತದೆ.

**೪.೪. ಗೌಡಾಲು ಸಮುದಾಯದ ಅಭಿವೃದ್ಧಿಯಲ್ಲಿ ಇತರೆ ಸಂಘ ಸಂಸ್ಥೆಗಳ ಪಾತ್ರ**

ಭಾರತೀಯ ಸಮಾಜದ ಸಂಸ್ಕೃತಿಗಳ ವೈಶಾಲ್ಯತೆಯ ಹಿರಿಮೆಯೆಂದರೆ ಇವುಗಳ ವೈವಿಧ್ಯತೆ ಮತ್ತು ಸೂಕ್ಷ್ಮ ಒಳಪದರುಗಳು. ಈ ಸಾಮಾಜಿಕ ರಚನೆಯಲ್ಲಿ ಗ್ರಾಮ ನಗರಗಳ ಸಮ್ಮೇಳನದ ಸಂಕೀರ್ಣತೆಯೊಂದಿಗೆ ಬಹು ಹಂತಗಳ ಸಾಮಾಜಿಕ ಸ್ತರವಿನ್ಯಾಸದ ಆಯಾಮವೂ ಜಾತಿ ಪದ್ಧತಿಯ ಸ್ವರೂಪದಲ್ಲಿ ಸೇರಿದೆ. ಬಡತನ ಶ್ರೀಮಂತಿಕೆಗಳು ಅಕ್ಕ ಪಕ್ಕದಲ್ಲಿಯೇ ಇದ್ದು ತಮ್ಮ ಸಹಜ ಪ್ರವೃತ್ತಿ ಮತ್ತು ವ್ಯಾಪ್ತಿಗಳನ್ನು ತೆರೆದಿಡುತ್ತವೆ. ಈ ಎಲ್ಲ ಕ್ಲಿಷ್ಟಕರ ಆಯಾಮಗಳ ಅರ್ಥೈಸುವಿಕೆ ಸುಲಭ ಸಾಧ್ಯವಲ್ಲ. ಆದ್ದರಿಂದಲೇ ನಮ್ಮ ದೇಶದ ಸಂಸ್ಕೃತಿಯ ಪರಿವಿಮರ್ಶೆ ಸಮಾಜ ವಿಜ್ಞಾನಿಗಳಿಗೆ ಒಂದು ಸಂಕಟ ತರುವ ಸವಾಲೂ ಹೌದು, ಅದ್ಭುತ ಅವಕಾಶವೂ ಹೌದು.

ಒಂದು ಕಡೆ ಇಂದಿನ ಜಗತ್ತು ಆಧುನಿಕೋತ್ತರ ಸಮಾಜವಾಗಿ ಮಾರ್ಪಾಡಾಗುತ್ತಾ ವೇಗದ ಯುಗವಾಗಿ ಮಾಹಿತಿಯ ಯುಗವಾಗಿ ಸ್ಪರ್ಧೆಯ ಯುಗವಾಗಿ ಹಾಗೂ ವ್ಯಾಪಾರೀ ಮನೋಧರ್ಮದ ಯುಗವಾಗಿ ಮಾರ್ಪಡುತ್ತಿದ್ದಾರೆ. ಮತ್ತೊಂದೆಡೆ ವಿಶ್ವದ ನಾನಾ ಮೂಲೆಗಳಲ್ಲಿ ೨೦೦ ದಶಲಕ್ಷಕ್ಕೂ ಹೆಚ್ಚಿನ ಜನರು ಕಾಡಿನ ಮರೆಯಲ್ಲಿ ಗುಡ್ಡಗಳ ತಪ್ಪಲಿನಲ್ಲಿ ಹಿಂದುಳಿದವರು, ಕಾಡುಜನರು, ಅನಾಗರಿಕರು, ಆದಿವಾಸಿಗಳು ಮುಂತಾದ ಹಣೆಪಟ್ಟಿಗಳೊಂದಿಗೆ ಜೀವನ ನಡೆಸುವ ಹೋರಾಟದಲ್ಲಿ ತೊಡಗಿದ್ದಾರೆ. ಈ ಸಾಂಸ್ಕೃತಿಕ ಸಮೂಹಗಳ ಸಾಮಾಜಿಕ ರಚನೆ ವೈಯಕ್ತಿಕ ಆಶೋತ್ತರಗಳು, ಜೀವನಶೈಲಿ, ಅಂತರ್‌ಕ್ರಿಯೆಯ ವ್ಯವಸ್ಥೆಗಳು ಸಾಂಕೇತಿಕ ವಿಧಾನಗಳೆಲ್ಲವು ನಾವು ಬದುಕುತ್ತಿರುವ ಆಧುನಿಕ ಸಾಮಾಜಿಕ ವ್ಯವಸ್ಥೆಯಿಂದ ಸಾಕಷ್ಟು ಭಿನ್ನವಾದವುಗಳು. ತಮ್ಮ ಪರಿಸರದೊಂದಿಗೆ ಅನನ್ಯ ಹಾಗೂ ಅನ್ಯೋನ್ಯ ಸಂಬಂಧವನ್ನು ಇಟ್ಟುಕೊಂಡಿರುವ ಇಂತಹ ಸಮುದಾಯಗಳನ್ನು ನಮ್ಮ ನಾಗರಿಕ ಸಮಾಜ ಪೂರ್ವಗ್ರಹಗಳಿಲ್ಲದೇ ಅರ್ಥ ಮಾಡಿಕೊಳ್ಳುವುದು ಜಾಗತಿಕ ಸಮಾಜದ ಭವಿಷ್ಯದ ಹಿತದೃಷ್ಟಿಯಿಂದ ಬಹಳ ಅಗತ್ಯವಾದ ಕೆಲಸ ಎಂದರೆ ಜಗತ್ತಿನಾದ್ಯಂತ ನೆಲಸಿರುವ ಬುಡಕಟ್ಟುಗಳ ಸಂಗ್ರಹ, ಅಧ್ಯಯನ ಮತ್ತು

ಅವರೊಂದಿಗೆ ಸಾಮಾಜಿಕ ಮುಖ್ಯವಾಹಿನಿಯ ಗಾಢವಾದ ಸಕಾರಾತ್ಮಕ ಸಂಬಂಧಗಳು ಅಭಿವೃದ್ಧಿಯ ದಾರಿಯಲ್ಲಿ ನಡೆಯಬೇಕಾದ ಮಹತ್ವದ ಕೆಲಸಗಳು. ಭಾರತದ ಸಾಮಾಜಿಕ ಸಂದರ್ಭದಲ್ಲಿಯಂತೂ ಇದು ನೆನಪಿಡಲೇಬೇಕಾದ ಮಾತು. ನಮ್ಮ ದೇಶದ ಅನೇಕ ಭಾಗಗಳಲ್ಲಿ ಕಾಡು ಮೇಡುಗಳು ಮತ್ತು ಅಲ್ಲಿ ಗಿರಿಜನರು ಇರುವುದು ಸರ್ವ ವಿದಿತ. ಪರಸರದೊಂದಿಗೆ ಒಂದಾದ ಇವರಿಗೆ ನಾಡಿಗಿಂತ ಜೀವನದ ಆಧಾರಸ್ತಂಭವಾದ ಕಾಡು ಹೆಚ್ಚು ಪ್ರಿಯವಾದ ತಾಣ. ಊರಿಂದ ದೂರ ಬೇರೂರಿರುವ ಇಂತಹ ಸಾಮಾಜಿಕ ಗುಂಪುಗಳಿಗೆ ಪ್ರಾದೇಶಿಕವಾಗಿ ವೈವಿಧ್ಯಮಯ ಮತ್ತು ಅರ್ಥಪೂರ್ಣ ಹೆಸರುಗಳಿವೆ. ಈ ಸಮುದಾಯವನ್ನು ಇಡಿಯಾಗಿ ಚರ್ಚಿಸುವಾಗ ಕನ್ನಡದಲ್ಲಿ ಬುಡಕಟ್ಟುಗಳು, ಆದಿವಾಸಿಗಳು, ಗಿರಿಜನರು ಮುಂತಾದ ಪದಗಳ ಸಾಮಾನ್ಯ ಬಳಕೆಯನ್ನು ಕಾಣುತ್ತೇವೆ. ಭಾರತ ಉಪಖಂಡದ ಅನೇಕ ಕಡೆಗಳಲ್ಲಿ ವಿಶೇಷವಾಗಿ, ಮಧ್ಯ ಪ್ರದೇಶ, ಅಸ್ಸಾಂ, ಒರಿಸ್ಸಾ, ಹಿಮಾಚಲ ಪ್ರದೇಶ, ಆಂಧ್ರ ಪ್ರದೇಶ, ಮಹಾರಾಷ್ಟ್ರ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಇಂತಹ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತೇವೆ. ಇವೆಲ್ಲವೂ ತಮ್ಮ ಸ್ವತಂತ್ರ ಉಪಸಂಸ್ಕೃತಿಗಳನ್ನು ಹೊಂದಿದ್ದು ನಮ್ಮ ದೇಶದ ಜನ ಜೀವನದ ಸಾಮಾನ್ಯ ಸಾಂಸ್ಕೃತಿಕ ಜೀವನಕ್ರಮಗಳ ಮೇಲೆ ಸತತ ಪ್ರಭಾವ ಬೀರುತ್ತಿವೆ.

ಈ ಬುಡಕಟ್ಟು ಸಮುದಾಯ ತಮ್ಮ ಜೀವನಕ್ರಮ ಮತ್ತು ಅನುಭವಗಳ ದೃಷ್ಟಿಯಿಂದ ಅತ್ಯಂತ ಸ್ವಯಂಪ್ರೇರಿತ ಮತ್ತು ಸತ್ವಪೂರ್ಣ ಗುಣಲಕ್ಷಣಗಳನ್ನು ಪಡೆದಿವೆ ಎಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ. ಈ ರೀತಿಯ ಬುಡಕಟ್ಟು ಸಮುದಾಯ ದೇಶದ ಒಟ್ಟು ಜನಸಂಖ್ಯೆಯ ಗಾತ್ರದ ದೃಷ್ಟಿಯಿಂದ ನೋಡಿದಾಗ ಪ್ರಮಾಣದಲ್ಲಿ ಬಹಳ ದೊಡ್ಡವಲ್ಲದಿದ್ದರೂ ನಾಡಿನ ಸಂಸ್ಕೃತಿಗೆ ಇದರ ಕೊಡುಗೆ ಅಪಾರ ಮತ್ತು ವೈವಿಧ್ಯಮಯ. ಬುಡಕಟ್ಟಿನ ಜನರು ನಮ್ಮ ದೇಶದ ಸರಿಸುಮಾರು ಪ್ರತಿಶತ ಲಕ್ಕಿಂತ ಹೆಚ್ಚಿರಬಹುದೆಂದು ಜನಗಣತಿಯ ಮೂಲಕ ಅಂದಾಜು ಮಾಡಲಾಗಿದೆ. ಪ್ರಮುಖ ಬುಡಕಟ್ಟುಗಳಾದ ನಾಗಗಳು, ಸಂತಾಲರು, ಒರ್ರಾನರು, ಮುಂಡಾಗಳು, ಗಾರೋ, ಖಾಸಿ, ಭಿಲ್ಲರು, ತೊಡವರು ಮುಂತಾದವು ಸಾಕಷ್ಟು ದೊಡ್ಡ ಸಂಖ್ಯೆಯಲ್ಲಿ ಸದಸ್ಯರನ್ನು ಹೊಂದಿದ್ದಾರೆ.  ಆದರೆ ಅಸುರ್, ಪರ್‌ಹೊರ್, ಸಿದ್ದಿ ಈ ಮೊದಲಾದ ನೂರಾರು ಬುಡಕಟ್ಟುಗಳ ಸದಸ್ಯರ ಸಂಖ್ಯೆಯನ್ನು ನೂರು ಅಥವಾ ಸಾವಿರಗಳಲ್ಲಿಯಷ್ಟೇ ಎಣಿಸಲು ಶಕ್ಯ. ಆದ್ದರಿಂದ ಬುಡಕಟ್ಟು ಭಾಷೆ, ಸಂಪ್ರದಾಯ, ಜನಪದೀಯ ಸಾಹಿತ್ಯ ಕಲೆ, ನೂರಾರು ವರ್ಷಗಳ ಜೀವನಾನುಭವದಿಂದ ಸಂಗ್ರಹಿಸಿ ಕಲೆಹಾಕಿಟ್ಟ ಜ್ಞಾನಶಾಲೆಗಳು, ನಮ್ಮ ದೇಶವು ಹೆಮ್ಮೆಪಡುವ ಅಪಾರವಾದ ಸಂಪತ್ತಿನ ಭಂಡಾರ. ಬುಡಕಟ್ಟು ಸಮೂಹಗಳು ಸರಳವೂ ಸ್ವಯಂಪೂರ್ಣವೂ ಆದ ಸಾಮಾಜಿಕ ಗುಂಪುಗಳನ್ನು ಪ್ರತಿನಿಧಿಸುತ್ತವೆ. ಹಾಗೆಂದು ಬುಡಕಟ್ಟುಗಳನ್ನು ಒಂದೇ ಬುಟ್ಟಿಯಲ್ಲಿಟ್ಟು ಅವುಗಳನ್ನೆಲ್ಲ ಏಕರೂಪಿ ಗುಂಪೆಂದು ವರ್ಗೀಕರಿಸುವುದು ಸಮಾಜಶಾಸ್ತ್ರೀಯವಾಗಿ ಅವೈಜ್ಞಾನಿಕವೂ ಅಸಾಧುವು ಆದ ವಿಚಾರ. ಆದರೆ ಅಮೂರ್ತ ಸ್ವರೂಪದ ಸೈದ್ಧಾಂತಿಕ ಚರ್ಚೆಯಲ್ಲಿ ಕೆಲವು ಸಾಮಾನ್ಯ ಅಂಶಗಳನ್ನು ಗುರುತಿಸಿ ಪ್ರತಿಪಾದಿಸುವುದು ಅನಿವಾರ್ಯವಾಗುತ್ತದೆ.

ಬುಡಕಟ್ಟು ಸಮುದಾಯಗಳು ದೇಶದ ಅಭಿವೃದ್ಧಿಯ ಒಳಗಡೆ ಬರುವುದರಿಂದ ನಾವು ಇಲ್ಲಿ ಬುಡಕಟ್ಟುಗಳ ಅಭಿವೃದ್ಧಿ ಕುರಿತು ವಿಶೇಷವಾಗಿ ಆಲೋಚಿಸಿದ್ದು ಕಡಿಮೆ ಎಂದು ಹೇಳಬಹುದು. ಏಕೆಂದರೆ ಇಡೀ ರಾಷ್ಟ್ರದ

ಅಭಿವೃದ್ಧಿಯಲ್ಲಿ ಬುಡಕಟ್ಟುಗಳು ಅಂತರ್ಗತವಾಗಿಯೇ ಬಿಟ್ಟಿರುವುದು ನಿಜ ಸಂಗತಿಯಾಗಿದೆ. ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ನಾಗರಿಕ ಸಮಾಜ ಮತ್ತು ಅನಾಗರಿಕ ಸಮಾಜವೆಂದು ಬೇರ್ಪಡಿಸಿ ಶ್ರೇಣೀಕೃತವಾದ ಸಾಮಾಜಿಕ ವ್ಯವಸ್ಥೆಯು ಇರುವುದರಿಂದ ಬುಡಕಟ್ಟುಗಳು ಅಲಕ್ಷಿತವಾಗಿ ಮೂಲೆಗುಂಪಾಗಿವೆ. ಪರಿಣಾಮವಾಗಿ ದಿನಮಾನಗಳಲ್ಲಿ ಬುಡಕಟ್ಟು ಸಮುದಾಯಗಳನ್ನು ಗುರುತಿಸುವುದಷ್ಟೇ ಅಲ್ಲ, ಅವರ ದಿನನಿತ್ಯದ ಬದುಕಿನ ಬಗ್ಗೆ ಚರ್ಚಿಸಿ ಸರ್ಕಾರದ ಯೋಜನೆಗಳನ್ನು ಅವರ ಮನೆಯ ಬಾಗಿಲಿಗೆ ಹಾಗೂ ಮನಸ್ಸಿಗೆ ಮುಟ್ಟಿಸಬೇಕಾಗಿದೆ. ಭಾರತದ ಚರಿತ್ರೆಯನ್ನು ನಾವು ಗಮನಿಸಿದರೆ ಬುಡಕಟ್ಟುಗಳ ಅಭಿವೃದ್ಧಿ ಹೆಚ್ಚಿನ ಪ್ರಮಾಣದಲ್ಲಿ ನಡೆಯದೆ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಶೋಷಣೆಗೆ ಒಳಗಾಗುತ್ತಾ ಬಂದಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಆದ್ದರಿಂದ ದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ ಮುಂತಾದ ಅಧ್ಯಯನ ಶಿಸ್ತುಗಳು ಸಮುದಾಯಗಳನ್ನು ಅಧ್ಯಯನದ ವಿಷಯದ ವಸ್ತುವಾಗಿ ಗ್ರಹಿಸುವಲ್ಲಿ ವಿಫಲವಾಗಿರುವುದರಿಂದ ಇಂದು ನಡೆಯುವ ಸಂಶೋಧನೆಗಳಾದರೂ ನೈಜತೆಯಿಂದ ಕೂಡಿರಬೇಕಾದ ಅನಿವಾರ್ಯತೆಯಿದೆ.

ಕಾಡಿನ ತೋಪು, ಪೊಟರೆಗಳಲ್ಲಿ ಯಾರಿಗೂ ಗೊತ್ತಿರದಂತೆ ವನಸಿರಿಯ ಮಧ್ಯೆ ಬದುಕನ್ನು ಸಾಗಿಸುವ ಬುಡಕಟ್ಟುಗಳು ಅವರದೇ ಆದ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಮೈಗೂಡಿಸಿಕೊಂಡಿದ್ದಾರೆ. ಪಶ್ಚಿಮ ಘಟ್ಟದ ನಿತ್ಯಹರಿದ್ವರ್ಣದ ಕಾಡುಗಳ ಮಧ್ಯೆ ಕಂಡುಬರುವ ಶೋಲಾ ಹುಲ್ಲುಗಾವಲುಗಳು ಆದಿವಾಸಿಗಳಿಗೆ ಆಶ್ರಯತಾಣಗಳಾಗಿರುವುದರಿಂದ ಗೌಡಾಲು ಬುಡಕಟ್ಟಿನಂತಹ ಅನೇಕ ಆದಿವಾಸಿ ಸಮುದಾಯಗಳು ಅಭಿವೃದ್ಧಿಯೆಂದರೆ ಏನು ಎಂದು ತಮ್ಮನ್ನು ತಾವು ಅರಿಯದವರಾಗಿದ್ದಾರೆ.

ಗೌಡಾಲುಗಳು ತಮ್ಮ ಉಳಿವಿಗಾಗಿ ಅನೇಕ ಹೋರಾಟಗಳನ್ನು ಮಾಡುತ್ತಾ ತಮ್ಮ ಅಭಿವೃದ್ಧಿಯ ಬಗ್ಗೆ ಆಲೋಚಿಸದೆ ಪರಂಪರಾನುಗತವಾದ ಸಾಮಾಜಿಕ ವ್ಯವಸ್ಥೆಯೇ ಶ್ರೇಷ್ಠವೆಂದು ನಡೆದು ಬಂದಿದ್ದಾರೆ. ಆದರೆ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯು ಮುಖ್ಯವಾಹಿನಿಗೆ ತರುವ ಹಿನ್ನೆಲೆಯಿಂದ ಪ್ರಾರಂಭವಾಗುತ್ತದೆ. ಆದ್ದರಿಂದ ಬುಡಕಟ್ಟು ಅಭಿವೃದ್ಧಿಯನ್ನು ಕುರಿತು ಚರ್ಚಿಸುವುದು ಇಂದು ಅನಿವಾರ್ಯವಾಗುತ್ತದೆ. ವಸಾಹತು ಸಂದರ್ಭದಲ್ಲಿ ಬುಡಕಟ್ಟಿನವರನ್ನು ಮಾತ್ರ ಯಾಕೆ ಭಾರತದ ಎಲ್ಲ ಸಮುದಾಯಗಳನ್ನು ನಾಗರಿಕರನ್ನಾಗಿಸುವ ಜವಾಬ್ದಾರಿ ಹೊತ್ತು ಮುಖ್ಯವಾಹಿನಿಗೆ ತರುವಂತಹ ಕಾರ್ಯ ಕೈಗೊಂಡಿರುವ ವ್ಯವಸ್ಥೆಯನ್ನು ಪ್ರಶ್ನೆ ಮಾಡುತ್ತ ಹೊರಟರೆ ಯಾವುದೇ ತಳ ಸಮುದಾಯಕ್ಕೆ ಅಭಿವೃದ್ಧಿಯ ಕಲ್ಪನೆ ಮನಸಿನಲ್ಲಿ ಮೂಡಬೇಕಾದರೆ ಆರ್ಥಿಕ ಅಂಶಗಳೇ ಮುಖ್ಯವಾಗುತ್ತವೆ. ವಸಾಹತು ಕಾಲಘಟ್ಟದಿಂದ ಅರಣ್ಯ ಇಲಾಖೆಯವರ ವ್ಯವಹಾರಕ್ಕೆ ಅಡ್ಡಿ ಆತಂಕ ಆಗದಂತೆ ಬುಡಕಟ್ಟು ಸಮುದಾಯವನ್ನು ನಿರ್ವಹಿಸುವುದು ಸರ್ಕಾರದ ಮುಖ್ಯ ಕೆಲಸವಾಗಿತ್ತು. ಟೀ, ಕಾಫಿ, ಪ್ಲಾಂಟರುಗಳ ಉದ್ಯಮ ಊರಿನ ವ್ಯಾಪಾರಿಗಳ ವ್ಯವಹಾರಕ್ಕೆ ತೊಂದರೆಯಾಗದಂತೆ ನೋಡಿಕೊಳ್ಳುವುದು ಕೂಡ ಅಂದಿನ ವಸಾಹತು ಸರಕಾರದ ಜವಾಬ್ದಾರಿಯಾಗಿತ್ತು. ಅದಕ್ಕಾಗಿ ಅಂದು ಬುಡಕಟ್ಟು ಸಮುದಾಯವನ್ನು ಅಭಿವೃದ್ಧಿ ಮಾಡಬೇಕು ಎಂಬ ಆಲೋಚನೆಯ ಕ್ರಮವು ಸೃಷ್ಟಿಯಾಯಿತು. ನಂತರ ಬಂದ ಇತ್ತೀಚಿನ ಆಧುನೀಕರಣ ಸಮಾಜವು ಎಲ್ಲರನ್ನೂ ಆಧುನೀಕರಣಗೊಳಿಸುವ ಉದ್ದೇಶದಿಂದ ಅನೇಕ ಯೋಜನೆಗಳನ್ನು

ಜಾರಿಗೆ ತಂದಿತು. ಪರಿಣಾಮವಾಗಿ ಶಾಲೆ, ರಸ್ತೆ, ಅಭಿವೃದ್ಧಿ ಯೋಜನೆಯಲ್ಲಿ ಸೇರಿಕೊಂಡವು. ಇದರಿಂದ ಬುಡಕಟ್ಟು ಸಮುದಾಯದ ಅವರದೆ ಆದ ಅಭಿವೃದ್ಧಿ ಕ್ರಮಕ್ಕೆ ಧಕ್ಕೆ ಬಂದಿತಲ್ಲದೆ ಸರಳವಾದ ಜೀವನ ಶೈಲಿಯಲ್ಲಿಯೇ ಬದುಕನ್ನು ಮಾಡುತ್ತಿದ್ದ ಪ್ರಕೃತಿಯ ಮಕ್ಕಳಾಗಿದ್ದ ಬುಡಕಟ್ಟು ಮನಸ್ಸು ಘರ್ಷಣೆಗೆ ಒಳಗಾಯಿತು. ಅಲ್ಲದೆ ಆಧುನಿಕ ಸಂಪರ್ಕವು ಹೆಚ್ಚಾಗುತ್ತಿದಂತೆ ಪರಂಪರಾನುಗತವಾಗಿದ್ದ ಜೀವನವು ತಲ್ಲಣಗೊಳ್ಳಲು ಪ್ರಾರಂಭಿಸಿದೆ. ಈ ಹಿನ್ನೆಲೆಯಿಂದ ಬುಡಕಟ್ಟುಗಳ ಅಭಿವೃದ್ಧಿಯೆಂದರೆ ಯಾವುದೆಂದು ಇಂದಿನ ದಿನಮಾನಗಳಲ್ಲಿ ವಿಶ್ಲೇಷಿಸಬೇಕಾದ ಅನಿವಾರ್ಯತೆಯಿದೆ. ಏಕೆಂದರೆ ನಾಡಿನ ಜನರು ಬುಡಕಟ್ಟುಗಳ ಬದುಕನ್ನು ಅವೈಜ್ಞಾನಿಕವೆಂದು ಕರೆದಿದ್ದಾರೆ. ಆದರೆ ಅವ್ಯವಸ್ಥೆಯಲ್ಲಿ ವೈಜ್ಞಾನಿಕತೆಯನ್ನು ಮೈಗೂಡಿಸಿಕೊಂಡು ದುಡಿತದ ಆಧಾರದ ಮೇಲೆ ಬದುಕು ರೂಪಿಸಿಕೊಂಡವರಾಗಿದ್ದಾರೆ. ಆದ್ದರಿಂದ ಯಾವುದೇ ಹೊರಗಿನ ಸಂಘ ಸಂಸ್ಥೆಗಳು ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿ ಮಾಡುತ್ತೇವೆಂದು ಬಂದರೂ ಕೂಡ ಅದು ನೈಜತೆಯಿಂದ ಕೂಡಿರದೆ ಇರುವುದರಿಂದ ಆದಿವಾಸಿಗಳು ಅಭಿವೃದ್ಧಿಯ ಕಲ್ಪನೆ ಹೇಗೆ ಇರಬೇಕು ಎಂದು ಆಲೋಚಿಸುವುದು ಪ್ರಸ್ತುತ ಸರ್ಕಾರಕ್ಕೆ ಅತ್ಯಗತ್ಯವೆಂದು ಅರ್ಥವಾಗಬೇಕಾಗಿದೆ.

ಬುಡಕಟ್ಟುಗಳ ಅಭಿವೃದ್ಧಿಯೆಂದು ಕೂಗಿಕೊಳ್ಳುವ ಸರ್ಕಾರ, ಎನ್.ಜಿ.ಒ. ಬಂಡವಾಳಶಾಹಿ ವ್ಯವಸ್ಥೆಗಳು ಪರಂಪರಾಗತವಾಗಿ ಬುಡಕಟ್ಟುಗಳನ್ನು ವಿಷಯ ವಸ್ತುವಾಗಿ ಮಾಡಿಕೊಂಡು ದುರುಪಯೋಗಪಡಿಸಿಕೊಳ್ಳುತ್ತಲೇ ಬಂದಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿರುವುದರಿಂದ ತಳ ಸಮುದಾಯಗಳು ಕಾಡಿನಲ್ಲಿ ಜೀವನಕ್ಕಾಗಿ ಆಶ್ರಯಿಸಿಕೊಂಡಿದ್ದ ಫಲವತ್ತಾದ ಭೂಮಿಯೆಲ್ಲವೂ ಭೂಮಾಲೀಕರ ಕಾಫಿ, ಟೀ, ತೋಟಗಳಾಗಿ ಪರಿವರ್ತನೆಯಾಗಿ ಆದಿವಾಸಿಗಳನ್ನು ದಿನಗೂಲಿಕಾರರಾಗಿ ನಿರ್ಮಾಣ ಮಾಡಿದ್ದಲ್ಲದೆ ಅವರಿಗೆ ಯಾವುದೇ ಸೌಲಭ್ಯಗಳನ್ನು ಕಲ್ಪಿಸಿಕೊಡದೆ ಇರುವಾಗ ಅಭಿವೃದ್ಧಿಯ ಬಗ್ಗೆ ಹೇಗೆ ಮಾತಾಡಲು ಸಾಧ್ಯವಾಗುತ್ತದೆ ಎಂಬುದು ಇಲ್ಲಿ ಮುಖ್ಯ ಚರ್ಚೆಯಾಗುತ್ತದೆ. ಈ ಹಿನ್ನೆಲೆಯಿಂದ ಕ್ಷೇತ್ರಕಾರ್ಯದ ಮಾಹಿತಿಯನ್ನು ಹೋಲಿಸಿ ನೋಡಿದಾಗ ವಸಾಹತು ಕಾಲಘಟ್ಟದಿಂದ ಇಲ್ಲಿಯವರೆಗೆ ಒಂದಲ್ಲ ಒಂದು ರೀತಿಯಲ್ಲಿ ಬುಡಕಟ್ಟು ಸಮುದಾಯಗಳು ಶೋಷಣೆಯನ್ನು ಅನುಭವಿಸುತ್ತಿರುವುದನ್ನು ಗಮನಿಸಿದರೆ ಗೌಡಾಲು ಅಭಿವೃದ್ಧಿಯಲ್ಲಿ ಇತರೆ ಸಂಘ ಸಂಸ್ಥೆಗಳ ಪಾತ್ರ ಯಾವ ರೂಪದ್ದು ಎಂದು ಅರ್ಥವಾಗುತ್ತದೆ.

ಪ್ರಾಚೀನ ಕಾಲ, ಬ್ರಿಟಿಷರ ಕಾಲ ಹಾಗೂ ಇತ್ತೀಚಿನ ಆಧುನೀಕರಣದ ಕಾಲದಲ್ಲಿ ಬುಡಕಟ್ಟುಗಳ ಅಭಿವೃದ್ಧಿಯು ಯಾವ ತೆರನಾಗಿ ಹೆಣೆದುಕೊಂಡು ಬಂದಿದೆಯೆಂಬುದನ್ನು ವಿಮರ್ಶಿಸಬೇಕಾಗಿದೆ. ಏಕೆಂದರೆ ಬುಡಕಟ್ಟುಗಳ ಅಭಿವೃದ್ಧಿಯ ಬಗ್ಗೆ ಮಾತಾಡುವ ಯಾವುದೇ ಮನಸ್ಸು ಆದಿವಾಸಿಗಳಿರುವ ಸ್ಥಳಗಳಿಗೆ ಹೋಗಿ ಸಹಭಾಗಿ ಅವಲೋಕನದಿಂದ ತಿಳಿದಾಗ ನಿಜವಾದ ಚಿತ್ರಣ ಸಿಗುವುದಲ್ಲದೆ ಸಮುದಾಯಗಳಿಗೆ ಸರ್ಕಾರದಿಂದ ಯಾವ ರೀತಿಯ ಸೌಲಭ್ಯಗಳನ್ನು ಕೊಡಬೇಕಾಗುತ್ತದೆ. ಎಂಬುದು ತಿಳಿಯುವುದಲ್ಲದೆ ಸರ್ಕಾರಕ್ಕೆ ನೈಜರೂಪದ ವರದಿಯನ್ನು ಕೊಡುವುದರ ಮೂಲಕ ಬುಡಕಟ್ಟುಗಳಿಗೆ ಸರಿಯಾದ ನ್ಯಾಯ ಕೊಡುವುದು ಸಾಧ್ಯವಾಗುತ್ತದೆ.

ಬುಡಕಟ್ಟುಗಳ ಅಭಿವೃದ್ಧಿಯನ್ನು ಕುರಿತು ಪ್ರಸ್ತುತ ವಿಷಯಕ್ಕೆ ಅನುಗುಣವಾಗಿ ಚರ್ಚಿಸಲೇಬೇಕಾದ ಸನ್ನಿವೇಶ ಉಂಟಾಗಿದೆ. ಆದ್ದರಿಂದ ಭಾರತದಲ್ಲಿ ವಸಾಹತು ಸರಕಾರ ಹೋದ ನಂತರ ಆದಿವಾಸಿಗಳು ನೆಮ್ಮದಿಯಿಂದ

ಬದುಕಬಹುದು ಎಂದು ನಂಬಿಕೆಯನ್ನು ಇಟ್ಟುಕೊಂಡಿದ್ದ ಮುಗ್ಧತೆಯ ಮನಸ್ಸುಗಳಿಗೆ ನಿರಾಶದಾಯಕವಾಯಿತು. ಏಕೆಂದರೆ ವಸಾಹತು ಸರ್ಕಾರ ತನ್ನ ಬೊಕ್ಕಸ ತುಂಬಿಸ್ಲೆ ಎಗ್ಗಿಲ್ಲದೆ ಅರಣ್ಯ ನಾಶ ಮಾಡಿದರೆ ಸ್ವಾತಂತ್ರ್ಯ ನಂತರ ನಮ್ಮ ಸರ್ಕಾರ ಅಭಿವೃದ್ಧಿ ಹೆಸರಿನಲ್ಲಿ ಅದೇ ಕೆಲಸವನ್ನು ಮಾಡಿದೆ. ರೈಲ್ವೆ ಹಳಿಗಳನ್ನು ಹಾಕುವುದು. ಡ್ಯಾಮ್ ಮತ್ತು ಕೈಗಾರಿಕೆಗಳನ್ನು ನಿರ್ಮಾಣ ಮಾಡಲು ಅರಣ್ಯವನ್ನು ನಾಶ ಮಾಡುತ್ತಲೇ ಇದೆ. ಪರಿಣಾಮವಾಗಿ ಅರಣ್ಯವನ್ನು ನಂಬಿಕೊಂಡು ತಮ್ಮ ಪರಂಪರಾಗತವಾದ ನಂಬಿಕೆಗೆ ಧಕ್ಕೆ ಬಂದಿರುವುದಲ್ಲದೆ, ಆದಿವಾಸಿಗಳು ಅತಂತ್ರರಾಗಿದ್ದಾರೆ. ಅಂದರೆ ತಮ್ಮ ಮೂಲ ಬದುಕನ್ನು ಕಳೆದುಕೊಂಡ ಸಮುದಾಯಗಳು ಸರ್ಕಾರದ ಯೋಜನೆಗಳಿಗೆ ಬೆಲೆ ಕೊಟ್ಟು ಸುಳ್ಳು ಭರವಸೆಗಳಿಗೆ ಬಲಿಯಾಗಿ ಕಾಡಿನಿಂದ ನಾಡಿಗೆ ಬಂದ ಆದಿವಾಸಿಗಳು ಸರ್ಕಾರ ಕೊಟ್ಟ ಯೊಜನೆಗಳಿಂದ ಬದುಕು ರೂಪಿಸಿಕೊಳ್ಳಲಿಕ್ಕೆ ಆಗದೆ ಬೀದಿಯ ಮಕ್ಕಳಾಗುತ್ತಿರುವುದಲ್ಲದೆ ಕ್ರಿ.ಪೂ. ೬ ಮತ್ತು ೭ನೇ ಶತಮಾನದಲ್ಲಿ ಗುಲಾಮರಾಗಿದ್ದ ಪರಿಯನ್ನು ಮತ್ತೆ ಮರುಕಳಿಸಿಕೊಂಡಿರುವ ವ್ಯವಸ್ಥೆಯಲ್ಲಿ ಬುಡಕಟ್ಟುಗಳ ಅಭಿವೃದ್ಧಿ ಎಂದರೆ ಹೇಗೆ ಎಂಬುದು ಇಲ್ಲಿ ಮುಖ್ಯ ಚರ್ಚೆಯ ವಿಷಯವಾಗುತ್ತದೆ.

ಆಧುನಿಕ ಸರ್ಕಾರ ರೂಪಿಸಿದ ಯೋಜನೆಗಳೆಲ್ಲವೂ ಬುಡಕಟ್ಟುಗಳ ಮನಸ್ಸನ್ನು ಮುಟ್ಟುವುದಿರಲಿ ಅವರಿಗೆ ಅರ್ಥವಾಗದೆ ಇರುವುದು ತಿಳಿಯುತ್ತದೆ. ಆದ್ದರಿಂದ ಕಾಡಿನಿಂದ ಹೊರಹಾಕಲ್ಪಟ್ಟಿರುವುದಲ್ಲದೆ ಬದುಕಿನ ಹೊಟ್ಟೆಯ ಪಾಡಿಗಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಅನ್ನವನ್ನು ಹುಡುಕಿಕೊಂಡು ಅಲೆಮಾರಿಗಳಾಗಿ ಹೋಗುತ್ತಿದ್ದಾರೆ. ಆದರೆ ಈ ತೆರನಾದ ವಿಷಯಗಳ ಕಡೆ ಭಾರತ ಸರ್ಕಾರವಾಗಲಿ, ಕರ್ನಾಟಕ ಸರ್ಕಾರವಾಗಲಿ ಸಕಾರಾತ್ಮಕವಾಗಿ ಆಲೋಚಿಸದೆ ನಕಾರಾತ್ಮಕ ಮನೋಭಾವನೆಯನ್ನು ತೋರುತ್ತಿರುವುದು ಇಂದು ಬುಡಕಟ್ಟುಗಳ ಪಾಲಿಗೆ ದುರಂತವೇ ಸರಿ. ಸರ್ಕಾರವು ಜಾರಿಗೆ ತರುತ್ತಿರುವ ಕಾನೂನುಗಳು ಎಷ್ಟರ ಮಟ್ಟಿಗೆ ಜನರ ಅಭಿವೃದ್ಧಿಗೆ ಪೂರಕವಾಗುತ್ತವೆ ಎಂಬುದನ್ನು ಅಧಿಕಾರಿಗಳು ಮತ್ತು ಬುಡಕಟ್ಟು ಸಂಶೋಧಕರು ತಿಳಿಯಬೇಕಾದ ವಾತಾವರಣ ಸೃಷ್ಟಿಯಾಗಿರುವುದು ಸಮಾಜದ ಅಸ್ಥಿರತೆಯನ್ನು ತೋರಿಸುತ್ತಿದೆಯೇ ವಿನಾ ಭದ್ರತೆಯನ್ನು ಸೃಷ್ಟಿ ಮಾಡಲಾರದು. ಮುಖ್ಯ ಬುಡಕಟ್ಟುಗಳ ಅಭಿವೃದ್ಧಿಯ ಬಗ್ಗೆ ಮಾತಾಡುವುದನ್ನು ಪ್ರಾರಂಭಿಸಿದರೆ ಕೆಲವೊಂದು ವಿಚಾರಗಳಲ್ಲಿ ಮತ್ತು ಕೆಲವೊಂದು ಪ್ರದೇಶಗಳಲ್ಲಿ ಸರಕಾರ ಬುಡಕಟ್ಟು ಜನರ ಪಾರಂಪರಿಕ ಹಕ್ಕುಗಳನ್ನು ಮನ್ನಿಸಿ ಅದಕ್ಕೆ ಅನುಗುಣವಾದ ನೀತಿಗಳನ್ನು ಜಾರಿಗೆ ತಂದಿರುವುದನ್ನು ಮರೆಯುವಂತಿಲ್ಲ. ಇದಕ್ಕೆ ಪೂರಕವಾಗಿ ನಾಗಾಲ್ಯಾಂಡ್, ಮಣಿಪುರ ಮುಂತಾದ ಕಡೆಗಳಲ್ಲಿ ಸರಕಾರದ ರಕ್ಷಿತ ಅರಣ್ಯ ಕಾನೂನು ಶೇಕಡಾ ೧೦ರಷ್ಟು ಅರಣ್ಯ ಪ್ರದೇಶಗಳನ್ನು ಒಳಗೊಂಡಿಲ್ಲ. ಆದರೆ ಶೇಕಡಾ ೯೯ರಷ್ಟು ಅರಣ್ಯ ಪ್ರದೇಶ ಬುಡಕಟ್ಟು ಸಮುದಾಯದ ನೀತಿಗೆ ಅನುಗುಣವಾಗಿ ನಿರ್ವಹಣೆಗೊಳ್ಳುತ್ತಿದೆ. ಆದರೆ ಇದೇ ನೀತಿ ಭಾರತದ ಎಲ್ಲ ಕಡೆ ಇಲ್ಲವೆಂಬ ಮಾತು ಮಾತ್ರ ನಿಜ ಸಂಗತಿ. ನಮ್ಮ ರಾಜ್ಯದ ಪಶ್ಚಿಮಘಟ್ಟಗಳಲ್ಲಿರುವ ಬುಡಕಟ್ಟುಗಳು ಶತಮಾನಗಳಿಂದ ಬದುಕನ್ನು ಮಾಡುತ್ತಾ ಬಂದಿದ್ದರೂ ಕೂಡ ಅರಣ್ಯ ಪ್ರದೇಶದ ಮೇಲೆ ಯಾವುದೇ ಹಕ್ಕನ್ನು ಹೊಂದಿಲ್ಲದೇ ಇರುವುದು ತಿಳಿಯುತ್ತದೆ. ಕರ್ನಾಟಕದ ಕೆಲವು ಕಡೆ ITDPಯಂತಹ ಇಲಾಖೆಗಳು, Lamps Society,ಗಳು ಬುಡಕಟ್ಟುಗಳ ಅಭಿವೃದ್ಧಿಗೆ ಪೂರಕವಾದವುಗಳಾಗಿರುವುದು ಬಿಟ್ಟರೆ ಬೇರೆ ಯಾವುದೇ ಸಂಘ ಸಂಸ್ಥೆಗಳು ಸೃಷ್ಟಿಯಾಗದೆ ಇರುವುದು ಕಂಡುಬರುತ್ತದೆ. ಆದ್ದರಿಂದ ಭಾರತದ ಎಲ್ಲ ಬುಡಕಟ್ಟುಗಳಿಗೆ ಅನ್ವಯವಾಗುವ ಅಭಿವೃದ್ಧಿ ನೀತಿ ನಮ್ಮಲ್ಲಿ ಇಲ್ಲದಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಕರ್ನಾಟಕದಲ್ಲಿ ಬುಡಕಟ್ಟುಗಳ ಅಭಿವೃದ್ಧಿ ಕುರಿತಂತೆ ಒಂದೇ ನೀತಿಯಿರದೆ ಇರುವುದು ಕಂಡುಬಂದಿದೆ. ಸರ್ಕಾರ ಬುಡಕಟ್ಟುಗಳ ವಿವಿಧತೆಯನ್ನು ಗಮನಿಸಿ ನಿಯಮಗಳನ್ನು ಜಾರಿಗೆ ತರಬೇಕಾಗಿದೆ. ಆದರೆ ಯಾವ ಕಡೆ ಬುಡಕಟ್ಟುಗಳು ಸಂಘಟಿತರಾಗಿ ತಮ್ಮ ಹಕ್ಕಿಗೆ ಹೋರಾಡಿದ್ದರೂ ಅಂತಹ ಕಡೆ ಅವರಿಗೆ ಮುಖ್ಯವಾಹಿನಿಯ ಹಿಡಿತದಿಂದ ತಕ್ಕಮಟ್ಟಿನ ಬಿಡುಗಡೆ ದೊರೆತಿದೆ. ಆದರೆ ಯಾವುದೇ ಬುಡಕಟ್ಟುಗಳ ಹೋರಾಟ ನಡೆಯಬೇಕಾದರೆ ಸಂಖ್ಯೆಯ ಬಲ ಮುಖ್ಯ. ಹೆಚ್ಚು ಸಂಖ್ಯೆಯಲ್ಲಿ ಬುಡಕಟ್ಟುಗಳು ಇರುವ ಉತ್ತರ ಭಾರತದಲ್ಲಿ ಈ ಕ್ರಮದ ಪ್ರತ್ಯೇಕತೆ ಸಾಧ್ಯವಾಗಿದೆ. ಆದರೆ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಹಲವಾರು ಬುಡಕಟ್ಟುಗಳಿದ್ದಾರೆ. ಇಲ್ಲಿ ಗೌಡಾಲು ಮತ್ತು ಇತರ ಬುಡಕಟ್ಟುಗಳ ಅಭಿವೃದ್ಧಿಗೆ ಪೂರಕವಾಗಿರುವುವೆಂದರೆ Lamps Societyಯ ಜೊತೆಗೆ ಬುಡಕಟ್ಟು ಮಕ್ಕಳಿಗೆ ಮೀಸಲಿರುವ ಗಿರಿಜನ ಮಕ್ಕಳ ವಸತಿ ಶಾಲೆಯು ಇವರ ಅಭಿವೃದ್ಧಿಗೆ ಪೂರಕವಾಗಿದೆ. ಪರಿಣಾಮವಾಗಿ ಬುಡಕಟ್ಟುಗಳ ಅಭಿವೃದ್ಧಿಯು ಸಂಕೀರ್ಣ ಸಮಸ್ಯೆಯಾಗಿದೆ.

ಬುಡಕಟ್ಟುಗಳನ್ನು ಉದ್ಧಾರ ಮಾಡುವ ಕಾರ್ಯಕ್ರಮಗಳು ನಿಜವಾಗಿ ಇವರನ್ನು ಉದ್ಧಾರ ಮಾಡುತ್ತಿಲ್ಲ. ಬದಲಿಗೆ ಶೋಷಣೆ ಮಾಡುತ್ತಿವೆ. ಇದರ ಜೊತೆಗೆ ಚಾರಿತ್ರಿಕವಾಗಿ ಅವರು ರೂಢಿಸಿಕೊಂಡು ಬಂದ ಬದುಕಿಗೆ ಅನುಗುಣವಾಗಿ ಬದುಕಲು ಅಸಾಧ್ಯವಾದ ಸ್ಥಿತಿ ನಿರ್ಮಾಣವಾಗಿರುವುದು ತಿಳಿಯುತ್ತದೆ. ಇಂದು ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿಯತ್ತ ತೆಗೆದುಕೊಂಡು ಹೋಗಲು ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯೊಂದಿಗೆ ಪಶ್ಚಿಮದ ದೇಶಗಳು ಆಧುನೀಕರಣಗೊಂಡವು. ಈ ಕಾರಣದಿಂದಲೇ ಆಧುನಿಕ ತಂತ್ರಜ್ಞಾನಗಳನ್ನು ಯಾವುದೇ ಸಾಮಾಜಿಕ ಪರಿಸರದಲ್ಲಿ ಅಳವಡಿಸುವ ಮೂಲಕ ಸಮಾಜಗಳನ್ನು ಮೂಲಭೂತವಾಗಿ ಪರಿವರ್ತಿಸಬಹುದು ಎನ್ನುವ ಗ್ರಹಿಕೆ ಆಧುನೀಕರಣ ಚಿಂತನೆಯಲ್ಲಿ ಕೆಲಸ ಮಾಡಿರುವುದು ತಿಳಿದರೆ ಈ ಕಾರಣಕ್ಕಾಗಿಯೇ ಪ್ರಪಂಚದ ಬಹುತೇಕ ರಾಷ್ಟ್ರಗಳು ಈ ಬಗೆಯ ಆಧುನೀಕರಣಕ್ಕೆ ತಮ್ಮನ್ನು ತಾವೇ ಒಡ್ಡಿಕೊಂಡಿವೆ. ಆದರೆ ಈ ರೀತಿಯ ಆಧುನೀಕರಣದ ಹಿಂದಿರುವ ಒಂದು ಮೂಲಭೂತ ಗುಣದ ಬಗ್ಗೆ ಯಾರೂ ತಲೆಕೆಡಿಸಿಕೊಂಡಿಲ್ಲ. ಅದೇನೆಂದರೆ ಯಾವುದು ನಮ್ಮನ್ನು ಉದ್ಧಾರಮಾಡುವ ಮಾರ್ಗವೆಂದು ತುಂಬಾ ನಂಬಿಕೆಯಿಂದ ಒಪ್ಪಿಕೊಂಡಿದ್ದೇವೋ ಅದು ಅಂತರ್‌ಗತದಲ್ಲಿ ಬಂಡವಾಳಶಾಹಿ ವ್ಯವಸ್ಥೆಯಾಗಿದೆ. ಈ ಪರಿಣಾಮವಾಗಿ ಆಧುನೀಕರಣ ಅಥವಾ ಅಭಿವೃದ್ಧಿಯೆಂದರೆ ಯಾವುದೇ ಅನುಮಾನವಿಲ್ಲದೆ ಬಂಡವಾಳದ ವಿಸ್ತರಣೆಯೇ ಆಗಿದೆ. ಈ ರೀತಿಯ ಅಭಿವೃದ್ಧಿ ಮಾರುಕಟ್ಟೆ ಲಾಭಗಳೆಲ್ಲವೂ ಬಂಡವಾಳಶಾಹಿ ವ್ಯವಸ್ಥೆಗೆ ಮಹತ್ವವನ್ನು ಕೊಡುತ್ತಿವೆ.

ಅಭಿವೃದ್ಧಿ ಅಥವಾ ಆಧುನೀಕರಣದಲ್ಲಿ ವ್ಯಕ್ತಿ ಮತ್ತು ಒಟ್ಟು ವ್ಯವಸ್ಥೆಯ ನಡುವಿನ ಸಂಬಂಧ ತುಂಬಾ ಸೀಮಿತವಾಗಿರುತ್ತದೆ. ಏಕೆಂದರೆ ಆಧುನೀಕರಣ ಅಮೂರ್ತ ಸ್ವರೂಪದ ವ್ಯಕ್ತಿಯನ್ನು ರೂಪಿಸಿದೆ. ಅಮೂರ್ತ ಸ್ವರೂಪದ ವ್ಯಕ್ತಿ ಇತರರೊಂದಿಗೆ ಕೇವಲ ಒಪ್ಪಂದ ಆಧಾರಿತ ಸಂಬಂಧ ಸೃಷ್ಟಿಯಾಗಿರುತ್ತದೆ. ಈ ರೀತಿಯ ಸಂಬಂಧ ಕೂಡ ತನ್ನ ವೈಯಕ್ತಿಕ ಲಾಭ ನಷ್ಟಗಳ ಲೆಕ್ಕಾಚಾರದಲ್ಲಿ ನಡೆಯುತ್ತದೆ. ಪರಿಣಾಮವಾಗಿ ಸಾಮುದಾಯಿಕ ಬದುಕೇ ನಾಶವಾಗುತ್ತಿದೆ. ಅಲ್ಲದೆ ಆಧುನಿಕ ಸಮಾಜದ ಮೌಲ್ಯಗಳು ಸಾಮಾಜಿಕ ವ್ಯವಸ್ಥೆಯಲ್ಲಿ ನೆಲೆಗೊಳ್ಳದಂತಾಗಿದೆ.

ಬುಡಕಟ್ಟು ಸಮುದಾಯಗಳು ತಮ್ಮ ನೆಲೆಗಳನ್ನು ಕಳೆದುಕೊಳ್ಳಲು ಪ್ರಾರಂಭಿಸಿದ್ದು ವಸಾಹತುಶಾಹಿ ಶಕ್ತಿಗಳು ನಮ್ಮ ನೆಲದ ಮೇಲೆ ತಮ್ಮ ಆಕ್ರಮಣವನ್ನು ಪ್ರಾರಂಭ ಮಾಡಿದಾಗಲೇ. ಇಂದು ನಾಡಿನ ಜನರೆಲ್ಲರೂ ಅನುಭವಿಸುತ್ತಿರುವ ಅನೇಕ ಸಂಪನ್ಮೂಲಗಳನ್ನು ಸೃಷ್ಟಿಸಿ, ಬೆಳೆಸಿ, ಉಳಿಸಿದವರು ಅರಣ್ಯವಾಸಿ ಬುಡಕಟ್ಟು ಸಮುದಾಯಗಳು ಎಂಬುದನ್ನು ಸರ್ಕಾರವಾಗಲಿ ನಾಗರಿಕ ಸಮುದಾಯಗಳಾಗಲಿ ಮರೆಯುವಂತಿಲ್ಲ. ಆದ್ದರಿಂದ ಬುಡಕಟ್ಟುಗಳು ಅವರದೇ ಆದ ಜ್ಞಾನ ಪರಂಪರೆಯನ್ನು ಇಟ್ಟುಕೊಂಡಿರುವುದಲ್ಲದೆ ಎಲ್ಲರ ಸುಖವನ್ನು ಬಯಸುವಂತ ಮುಗ್ಧ ಮನಸ್ಸಿನವರಾಗಿದ್ದಾರೆ.

ಭಾರತ ಸರ್ಕಾರವು ಬುಡಕಟ್ಟು ಜನರ ಅಭಿವೃದ್ಧಿಗಾಗಿ ಗಿರಿಜನ ಉಪಯೋಜನೆಯೊಂದನ್ನು ೧೯೭೪-೭೫ ರಲ್ಲಿ ಜಾರಿಗೆ ತಂದಿರುವುದನ್ನು ಈ ಸಂದರ್ಭದಲ್ಲಿ ನೆನಪಿಸುವುದು ಉಪಯುಕ್ತವಾಗುತ್ತದೆ. ಆದಿವಾಸಿಗಳ ಸರ್ವತೋಮುಖ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರವು ೧೯೭೬-೭೭ರಲ್ಲಿ ಗಿರಿಜನ ಉಪಯೋಜನೆಯನ್ನು ಜಾರಿಗೆ ತಂದು ರಾಜ್ಯದಲ್ಲಿ ಬುಡಕಟ್ಟು ಸಮುದಾಯಗಳು ಹೆಚ್ಚು ವಾಸಿಸುವ ಜಿಲ್ಲೆಗಳಾದ ಚಿಕ್ಕಮಗಳೂರು, ಮೈಸೂರು, ಕೊಡಗು ಜಿಲ್ಲೆಯ ಪೊನ್ನಂಪೇಟೆ, ಮೈಸೂರು ಜಿಲ್ಲೆಯ ಹೆಗ್ಗಡೆ ದೇವನಕೋಟೆ, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಮತ್ತು ಉಡುಪಿಗಳಲ್ಲಿ ಸಮಗ್ರ ಬುಡಕಟ್ಟು ಅಭಿವೃದ್ಧಿ ಯೋಜನೆ (ITDP)ಯ ಕೇಂದ್ರಗಳನ್ನು ಸ್ಥಾಪಿಸಿರುವುದು ಮುಖ್ಯವಾದರೂ ಬುಡಕಟ್ಟುಗಳ ಅಭಿವೃದ್ಧಿಗೆ ಪ್ರಸ್ತುತ ವ್ಯವಸ್ಥೆಯಲ್ಲಿ ವಸ್ತುನಿಷ್ಠತೆಯಿಂದ ಕಾರ್ಯಗತಗೊಳ್ಳದೆ ಇರುವುದು ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಸಮುದಾಯ ಮತ್ತು ಇತರೆ ಆದಿವಾಸಿಗಳಿಂದ (ITDP) ಬರುವ ಸೌಲಭ್ಯಗಳನ್ನು ಸರಿಯಾಗಿ ಬಳಸಿಕೊಳ್ಳುವ ಮನಸಿದ್ದರೂ ಈ ಯೋಜನೆಯು ಇಲ್ಲಿಯವರೆಗೆ ರಸ್ತೆ ಸೇತುವೆ, ಸೌರಶಕ್ತಿಯ ವಿದ್ಯುದೀಕರಣ, ಶಾಲೆಗಳ ನಿರ್ಮಾಣ, ವಸತಿನಿಲಯಗಳ ನಿರ್ಮಾಣ, ನೀರಾವರಿ ಸೌಲಭ್ಯದಂತಹವು ಬುಡಕಟ್ಟುಗಳನ್ನು ತಲುಪದೆ ಇರುವುದು ಕ್ಷೇತ್ರಕಾರ್ಯದಿಂದ ತಿಳುವಳಿಕೆಗೆ ಬಂದಿರುವುದರಿಂದ ಬುಡಕಟ್ಟುಗಳ ಅಭಿವೃದ್ಧಿಯ ಬಗ್ಗೆ ಸಂಘ ಸಂಸ್ಥೆಗಳ ಪಾತ್ರ ಹೆಚ್ಚಿನ ಪ್ರಮಾಣದಲ್ಲಿ ಆಗದೆ ಇರುವುದು ಗೋಚರಿಸುತ್ತದೆ.

ಪರಿಶಿಷ್ಟ ಪಂಗಡದವರ ಸರ್ವತೋಮುಖ ಅಭಿವೃದ್ಧಿಗಾಗಿ ಗಿರಿಜನ ಉಪಯೋಜನೆ ಅಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಸುಮಾರು ೨೮ ಅಭಿವೃದ್ಧಿ ಇಲಾಖೆ, ನಿಗಮ, ಮಂಡಳಿಗಳನ್ನು ಸ್ಥಾಪಿಸಿದೆ. ಅಲ್ಲದೆ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಹಲವಾರು ಆರ್ಥಿಕ ಸವಲತ್ತುಗಳ ಜೊತೆಗೆ ಶೈಕ್ಷಣಿಕ ಮತ್ತು ಸಾಮಾಜಿಕ ಸೌಲಭ್ಯಗಳನ್ನು ಒದಗಿಸುತ್ತವೆ ಎಂದು ಹೇಳುತ್ತದೆ. ಆದರೆ ಪಶ್ಚಿಮಘಟ್ಟದ ತಪ್ಪಲು ಪ್ರದೇಶಗಳಲ್ಲಿ ಕಾಡಿನ ಹೃದಯದ ಭಾಗದಲ್ಲಿ ಬದುಕನ್ನು ಸಾಗಿಸುವವರ ಸಮೀಕ್ಷೆಯನ್ನು ಮಾಡುವ ಸರ್ಕಾರ ಕೇವಲ ದಾಖಲೆಗಳಲ್ಲಿ ಮಾತ್ರ ಅಭಿವೃದ್ಧಿಯ ಅಂಕಿ ಸಂಖ್ಯೆಗಳನ್ನು ತೋರಿಸುತ್ತಿರುವುದು ದುರಂತವೇ ಸರಿ. ಬುಡಕಟ್ಟು ಸಮುದಾಯಗಳನ್ನು ಕುರಿತು ನೀರು ಪೂರೈಕೆ, ವಿದ್ಯುದೀಕರಣ ವೈದ್ಯಕೀಯ ಸೌಲಭ್ಯ, ವಸತಿ ಸಂಪರ್ಕ, ರಸ್ತೆ ಮುಂತಾದ ಮೂಲಭೂತ ಸೌಕರ್ಯಗಳಿಗೆ ಆದ್ಯತೆ ನೀಡುತ್ತೇವೆ ಎಂದು ಯಾವುದೇ ಸೌಲಭ್ಯಗಳು ಗೌಡಾಲು ಸಮುದಾಯವನ್ನು ತಲುಪದೆ ಇರುವುದು ಕಂಡುಬರುತ್ತದೆ. ಬುಡಕಟ್ಟುಪರ ಯೋಜನೆಗಳು ನೇರವಾಗಿ

ಫಲಾನುಭವಿಗಳಿಗೆ ಮುಟ್ಟಲು ಹಾಗೂ ಅನವಶ್ಯಕ ವಿಳಂಬವನ್ನು ತಪ್ಪಿಸಲು ಮತ್ತು ಪರಿಣಾಮಕಾರಿಯಾಗಿ ಯೋಜನೆಗಳನ್ನು ಪರಿವೀಕ್ಷಿಸಲು ಅನುಕೂಲವಾಗುವಂತೆ ಈ ಜವಾಬ್ದಾರಿಯನ್ನು ಜಿಲ್ಲಾ ಪಂಚಾಯತ್, ತಾಲೂಕ ಪಂಚಾಯತ್ ಮೂಲಕ ಕೇಂದ್ರ ಪುರಸ್ಕೃತ ಯೋಜನೆಗಳೆಂದು ವಿಭಜಿಸಿ ಅನುಷ್ಠಾನಗೊಳಿಸುತ್ತೇವೆ ಎನ್ನುವ ಸರ್ಕಾರ ಯಾವುದೇ ಯೋಜನೆಗಳನ್ನು ನೇರವಾಗಿ ಬುಡಕಟ್ಟು ಸಮುದಾಯಗಳಿಗೆ ತಲುಪಿಸದೆ ಮದ್ಯಸ್ಥಗಾರರಿಗೆ ಹಾಗೂ ಭ್ರಷ್ಟ ಅಧಿಕಾರಿಗಳಿಗೆ ತಿನ್ನಲು ಅವಕಾಶ ಮಾಡಿಕೊಟ್ಟು ನಿಜವಾದ ಫಲಾನುಭವಿಗಳಿಗೆ ಅಭಿವೃದ್ಧಿಯ ಯೋಜನೆಗಳು ತಲುಪದಂತೆ ಮಾಡಿದೆ.

ಸರ್ಕಾರವು ಬುಡಕಟ್ಟುಗಳ ಕಲ್ಯಾಣಕ್ಕಾಗಿ ೦೭.೦೧.೧೯೯೯ರಂದು ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯವನ್ನು ಸ್ಥಾಪಿಸಿ ಇದರ ಮೂಲಕ ಅನೇಕ ತರಬೇತಿಗಳನ್ನು ಬುಡಕಟ್ಟುಗಳಿಗೆ ನೀಡುತ್ತದೆ. ಇದರ ಲಾಭವನ್ನು ಪಡೆದುಕೊಂಡು ಬುಡಕಟ್ಟುಗಳು ಸರ್ವತೋಮುಖ ಅಭಿವೃದ್ಧಿಯಾಗುತ್ತವೆ ಎನ್ನುತ್ತದೆ. ಆದರೆ ಈ ಸಂಸ್ಥೆಯ ಅಭಿವೃದ್ಧಿಯ ಕಾರ್ಯಕ್ರಮಗಳು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಈಗಾಗಲೇ ಅಭಿವೃದ್ಧಿ ಹೊಂದಿ ನಾಡಿನಲ್ಲಿರುವ ಮತ್ತು ಸಮಾಜದ ಎಲ್ಲ ರಂಗಗಳಲ್ಲಿ ಗುರುತಿಸಿಕೊಂಡಿರುವ ಸಮುದಾಯಗಳಿಗೆ ಲಾಭವಾಗಿದೆ ವಿನಾ ನಾಡಿನ ಸಂಪರ್ಕವಿಲ್ಲದೆ ಅವರದೇ ಆದ ಪರಂಪರೆಯ ಬದುಕಿನ ಹೋರಾಟದಲ್ಲಿರುವ ಗೌಡಾಲುಗಳಂತಹ ಎಷ್ಟೋ ಮೂಲ ಬುಡಕಟ್ಟುಗಳಿಗೆ ತಲುಪದೇ ಇರುವುದು ವಿಪರ್ಯಾಸವಾಗಿದೆ.

ಕರ್ನಾಟಕದಲ್ಲಿ ಬುಡಕಟ್ಟುಗಳಿಗೆ ಸಂಬಂಧಿಸಿದಂತೆ ತೋಟಗಾರಿಕೆಯ ಬೆಳೆಗಳನ್ನು ಬೆಳೆಯುವುದಕ್ಕಾಗಿ ಪ್ರತಿ ಬುಡಕಟ್ಟು ಮನೆಗೆ ಎರಡು ತೆಂಗಿನ ಸಸಿಗಳನ್ನು ಉಚಿತವಾಗಿ ಪೂರೈಸುವ ಯೋಜನೆಯನ್ನು ಹೊಂದಿದೆ. ತುಂತುರು ನೀರಾವರಿ ಸೌಲಭ್ಯಕ್ಕಾಗಿ ಶೇ.೭೦ರಷ್ಟು ಸಹಾಯಧನವನ್ನು ನೀಡುವ ಗುರಿಯನ್ನು ಸರ್ಕಾರ ಹೊಂದಿದೆ ಆದರೆ ಈ ರೀತಿಯ ಯೋಜನೆಯು ಗೌಡಾಲುಗಳಂತಹ ಬುಡಕಟ್ಟು ಸಮುದಾಯಕ್ಕೆ ಸರಿಯಾಗಿ ತಲುಪದೇ ಇರುವುದನ್ನು ಗಮನಿಸಬಹುದು.

ಬುಡಕಟ್ಟುಗಳ ಆರ್ಥಿಕತೆಯ ಬೆಳವಣಿಗೆಯ ದೃಷ್ಟಿಯಿಂದ ಗಿರಿಜನ ಮೀನುಗಾರರನ್ನು ಗುರುತಿಸಿ ಅವರ ಸ್ವಾವಲಂಬನೆಯ ಜೀವನಕ್ಕೆ ಸಹಕಾರಿಯಾಗುವಂತೆ ಮೀನುಗಾರಿಕೆಯಲ್ಲಿ ತರಬೇತಿಯನ್ನು ನೀಡುತ್ತದೆ. ಆದರೆ ಕಾಡಿನಲ್ಲಿರುವ ಗೌಡಾಲು ಹುಟ್ಟಿನಿಂದಲೇ ಬೇಟೆಯನ್ನು ಮೈಗೂಡಿಸಿಕೊಂಡಿರುವುದರಿಂದಗೀ ತರಬೇತಿ ಉಪಯುಕ್ತವಾಗದು. ಆದ್ದರಿಂದ ಸರ್ಕಾರದ ಯೋಜನೆಗಳು ಆಯಾಯ ಬುಡಕಟ್ಟಿನ ವೃತ್ತಿಗೆ ಅನುಗುಣವಾಗಿರುವುದು ತುಂಬ ಉಪಯುಕ್ತವಾಗುತ್ತದೆ.

ಸರ್ಕಾರದಿಂದ ಹೈನುಗಾರಿಕೆಯಲ್ಲಿ ಆಸಕ್ತಿ ಹೊಂದಿರುವ ಬುಡಕಟ್ಟು ಸಮುದಾಯಗಳಿಗೆ ಪಶುಸಂಗೋಪನಾ ಇಲಾಖೆಯಿಂದ ಹಸುಗಳನ್ನು ಖರೀದಿಸಲು ಸಾಲವನ್ನು ಕೊಡುವ ಯೋಜನೆಯಿದೆ. ಆದರೆ ಈ ಯೋಜನೆಯು ನಾಡಿನ ಸಮುದಾಯಗಳಿಗೆ ಉಪಯೋಗವಾಗುತ್ತದೆ. ಆದರೆ ಕಾಡಿನಲ್ಲಿಯೇ ಪ್ರಾಚೀನ ಕಾಲದಿಂದಲೂ ಪಶುಸಂಗೋಪನೆಯನ್ನು ಬದುಕಿನ ಉದ್ದಕ್ಕೂ ರೂಢಿಸಿಕೊಂಡಿರುವವರಿಗೆ ಯಾವ ರೀತಿಯಲ್ಲೂ ವರದಾನವಾಗಲಾರದು. ಆದ್ದರಿಂದ ಪಶ್ಚಿಮಘಟ್ಟದಲ್ಲಿರುವ ಗೌಡಾಲು ಬುಡಕಟ್ಟಿನ ಮೂಲವೃತ್ತಿಯನ್ನು ಉಳಿಸಿ

ಬೆಳೆಸುವಂತಹ ಹಾಗೂ ಅವರ ಬದುಕಿನ ಹಿನ್ನೆಲೆಗೆ ಪೂರಕವಾದ ಯೋಜನೆಗಳನ್ನು ರೂಪಿಸಬೇಕಾದ ಅನಿವಾರ್ಯತೆಯಿದೆ.

ಅರಣ್ಯ ಇಲಾಖೆಯಿಂದ ಗಿರಿಜನ ಫಲಾನುಭವಿಗಳಿಗೆ ಭದ್ರತಾ ನೆಡುತೋಪು ನಿರ್ವಹಣೆಗಾಗಿ ಆರ್ಥಿಕ ಸಹಾಯವನ್ನು ನೀಡಲಾಗುತ್ತಿದೆ. ಆದರೆ ಈ ಯೋಜನೆಯು ಗೌಡಾಲು ಬುಡಕಟ್ಟು ಸಮುದಾಯಕ್ಕೆ ಯಾವುದೇ ರೂಪದಲ್ಲಿ ಪೂರಕವಾಗಿಲ್ಲ. ಏಕೆಂದರೆ ಬುಡಕಟ್ಟುಗಳು ಹುಟ್ಟಿ ಬೆಳೆದ ತಮ್ಮ ತಾಯಿನಾಡಿನಲ್ಲಿಯೇ ಅರಣ್ಯ ಅಧಿಕಾರಿಗಳು ಕಾಡಿನಲ್ಲಿ ನಡೆದಾಡಲು ಬಿಡದೆ ಇರುವಾಗ ಸರ್ಕಾರದ ಯೋಜನೆಗಳನ್ನು ತಲುಪಿಸುವುದು ಕನಸಿನ ಮಾತು. ಆದ್ದರಿಂದ ಗೌಡಾಲು ಬುಡಕಟ್ಟಿನ ಕರಕುಶಲ ಕಸುಬುದಾರರಿಗೆ ಬುಟ್ಟಿ ಹೆಣೆಯಲು ಮತ್ತು ಇತರೆ ಬಿದಿರಿನ ಕೆಲಸ ಮಾಡಲು ಬೇಕಾಗುವ ಬೆತ್ತ ಮತ್ತು ಬಿದಿರುಗಳನ್ನು ಉಚಿತವಾಗಿ ವಿತರಣೆ ಮಾಡುವ ಸರ್ಕಾರದ ಯೋಜನೆಯಿದ್ದರೂ ಅರಣ್ಯ ಅಧಿಕಾರಿಗಳು ಒಂದು ಸಣ್ಣ ತುಂಡು ಮರವನ್ನು ತರಲು ಬಿಡದವರಾಗಿದ್ದಾರೆ. ಆದ್ದರಿಂದ ಗೌಡಾಲು ಸಮುದಾಯಕ್ಕೆ ಇತರ ಸಂಘ ಸಂಸ್ಥೆಗಳ ಮೂಲಕ ಆಗುವಂತಹ ಅಭಿವೃದ್ಧಿಯ ಕ್ರಮ ಸಮರ್ಪಕವಾಗಿ ಆಗದೆ ಇರುವುದು ಗೋಚರಿಸುತ್ತದೆ.

ಭಾರತದ ಪಶ್ಚಿಮಘಟ್ಟದಲ್ಲಿ ವಾಸ ಮಾಡುತ್ತ ಬಂದಿರುವ ಗೌಡಾಲು ಬುಡಕಟ್ಟಿಗೆ ಸರ್ಕಾರದ ಉದ್ಯೋಗ ಮತ್ತು ತರಬೇತಿ ಯೋಜನೆಯಂತಹ ಸೌಲಭ್ಯವು ಬೆರಳೆಣಿಕೆಯಷ್ಟು ತಲುಪಿರುವುದು ಕಂಡುಬರುತ್ತದೆ. ಸರ್ಕಾರದಿಂದ ಗ್ರಾಮೀಣ ಪ್ರದೇಶದ ಬುಡಕಟ್ಟು ಪಂಗಡ ಬಾಲಕಿಯರಿಗೆ ಹಾಜರಾತಿ ವಿದ್ಯಾರ್ಥಿ ವೇತನ, ಕಷ್ಟದಲ್ಲಿರುವ ಬುಡಕಟ್ಟು ಮಹಿಳೆಯರಿಗೆ ಸಹಾಯಧನ, ಬುಡಕಟ್ಟು ವಿಧವೆಯರಿಗೆ ಸಹಾಯಧನ, ಬಾಲಕಾರ್ಮಿಕರ ಪುನರ್ ವಸತಿಗೆ ಸಹಾಯ ಧನಗಳು ಗೌಡಾಲುಗಳಿಗೆ ಬದುಕಿನ ಅಭಿವೃದ್ಧಿಗೆ ಸರಿಯಾದ ನೆಲೆಯಲ್ಲಿ ತಲುಪದೇ ಇರುವುದು ಕ್ಷೇತ್ರಕಾರ್ಯದಲ್ಲಿ ತಿಳಿದ ಮಾಹಿತಿಯಾಗಿದೆ.

ಸರ್ಕಾರದಿಂದ ಬುಡಕಟ್ಟುಗಳ ಅಭಿವೃದ್ಧಿಗೆಂದೇ ಕೊಡುವ ವಸತಿ ಗುಂಪು ಮನೆಗಳ ನಿರ್ಮಾಣ, ಕಾಲೇಜು ಶಿಕ್ಷಣ, ಸಾರ್ವಜನಿಕ ಶಿಕ್ಷಣ, ತಾಂತ್ರಿಕ ಶಿಕ್ಷಣಗಳು ಸರಿಯಾಗಿ ತಲುಪದೇ ಇರುವುದು ಕಂಡುಬರುತ್ತದೆ. ಅಲ್ಲದೆ ತಾಂತ್ರಿಕ ಶಿಕ್ಷಣದಿಂದ ಸಂಪೂರ್ಣವಾಗಿ ಗೌಡಾಲುಗಳು ವಂಚಿತರಾಗಿದ್ದಾರೆ. ಏಕೆಂದರೆ ನಮ್ಮ ಕನ್ನಡ ಭಾಷೆ ಕಲಿಕೆಯನ್ನು ಚೆನ್ನಾಗಿ ಕಲಿಸಲಾಗದೆ ಇರುವ ಸರ್ಕಾರಕ್ಕೆ ಕಾಡಿನಲ್ಲಿ ಶಿಕ್ಷಣದ ಕಲ್ಪನೆಯಿಲ್ಲದವರಿಗೆ ತಾಂತ್ರಿಕ ಶಿಕ್ಷಣ ಕಲಿಯುವುದು ಇರಲಿ, ನೋಡುವಂತಹ ವಾತಾವರಣವೇ ಸೃಷ್ಟಿಯಾಗದೆ ಇರುವುದು ತಿಳಿಯುತ್ತದೆ. ಅಲ್ಲದೆ ತಾಂತ್ರಿಕ ಶಿಕ್ಷಣ ಕೊಡುವುದಕ್ಕೆ ಸರಿಯಾದ ತಾಂತ್ರಿಕ ಶಿಕ್ಷಕರನ್ನು ಬುಡಕಟ್ಟುಗಳಿರುವ ಹಾಡಿಗೆ ಕಳಿಸದೆ ಇರುವುದು ಮತ್ತು ಬುಡಕಟ್ಟುಗಳ ಬಗ್ಗೆ ಆಸಕ್ತಿ ಇರುವ ತಾಂತ್ರಿಕ ತರಬೇತಿಯನ್ನು ಪಡೆದ ಶಿಕ್ಷಕರು ನಾಡಿನ ಬದುಕಿಗೆ ಮಾರು ಹೋಗಿ ಬುಡಕಟ್ಟು ಮಕ್ಕಳಿಗೆ ಸರಿಯಾದ ರೀತಿಯಲ್ಲಿ ತಾಂತ್ರಿಕ ಶಿಕ್ಷಣವನ್ನು ನೀಡದೆ ಇರುವುದು ಕಂಡುಬರುತ್ತದೆ.

ಯಾವುದೇ ಸಂಘ ಸಂಸ್ಥೆಗಳು ಗೌಡಾಲುವಿನ ಬದುಕಿಗೆ ಸರಿಯಾಗಿ ಸ್ಪಂದಿಸುತ್ತಿಲ್ಲ ಎಂಬ ಮಾತು ಮಾತ್ರ ನಿಜ ಸಂಗತಿಯಾಗಿದೆ. ಆರೋಗ್ಯವೇ ಸೌಭಾಗ್ಯವೆಂದು ಹೇಳುವ ಸರ್ಕಾರವಾಗಲಿ ಅಥವಾ ಸಂಘ ಸಂಸ್ಥೆಗಳಾಗಲಿ

ಬುಡಕಟ್ಟುಗಳ ಪ್ರಾಥಮಿಕ ಆರೋಗ್ಯದ ಬಗ್ಗೆ ಯಾವುದೇ ಕೆಲಸವನ್ನು ಮಾಡಿಲ್ಲ. ಚಿಕ್ಕಮಗಳೂರು, ಪಟ್ಟಣ, ಮೂಡಿಗೆರೆ, ಶೃಂಗೇರಿ, ಕೊಪ್ಪ, ಜೈಪುರಗಳಂತ ಮುಖ್ಯ ಪಟ್ಟಣಗಳನ್ನು ಬಿಟ್ಟರೆ ಗೌಡಾಲು ವಾಸ ಮಾಡುವಂತಹ ಕಾಡಿನೊಳಗೆ ಇರುವ ಹಾಡಿಗಳಲ್ಲಿ ಯಾವುದೇ ಆರೋಗ್ಯದ ಸೌಲಭ್ಯವಿಲ್ಲದಿರುವುದರಿಂದ ಈ ಬುಡಕಟ್ಟು ಸಮುದಾಯ ಎಲ್ಲಿಂದ ಅಭಿವೃದ್ಧಿಯಾಗಬೇಕು ಎಂಬ ಗೊಂದಲದಲ್ಲಿದೆ. ಅಲ್ಲದೆ ಕಾಡಿನ ಗಿಡಮೂಲಿಕೆಯಿಂದಲೇ ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುತ್ತಾ ಇರುವುದು ಕ್ಷೇತ್ರಕಾರ್ಯದಿಂದ ಮನರಿಕೆಗೆ ಬಂದ ಮಾಹಿತಿಯಾಗಿದೆ.

ಸರ್ಕಾರವು ಇದುವರೆಗೂ ಗೌಡಾಲುಗಳಿಗೆ BPLಕಾರ್ಡ್‌ಗಳನ್ನು ಸರಿಯಾಗಿ ವಿತರಿಸದೆ ಇರುವುದರಿಂದ ಸೀರೆ ಮತ್ತು ದೋತಿ ಯೋಜನೆಯ ಸೌಲಭ್ಯದಿಂದ ವಂಚಿತರಾಗಿದ್ದಾರೆ. ಗ್ರಾಮೀಣ ನೀರು ಪೂರೈಕೆಯ ಯೋಜನೆಯ ಅಡಿಯಲ್ಲಿ ಬುಡಕಟ್ಟುಗಳು ಹೆಚ್ಚಿಗೆ ಇರುವ ಸ್ಥಳಗಳಲ್ಲಿ ನೂರೈವತ್ತು ಜನಸಂಖ್ಯೆಗೆ ಒಂದು ಕೊಳವೆ ಬಾವಿಯನ್ನು ಕೊರೆಯಿಸಿ ಕಿರು ನೀರಿನ ಸೌಕರ್ಯವನ್ನು ಒದಗಿಸುವ ಯೋಜನೆಯಿದ್ದರೂ ಅದು ಸರಿಯಾಗಿ ತಲುಪದೆ ಇರುವುದರಿಂದ ಗೌಡಾಲುಗಳು ಯಾವ ರೂಪದಲ್ಲಿ ಅಭಿವೃದ್ಧಿಯಾಗಬೇಕು ಎಂಬುದು ಇಲ್ಲಿ ಚರ್ಚೆಯಾಗಬೇಕಾಗುತ್ತದೆ.

ಸರ್ಕಾರದಿಂದ ಕೊಡಲ್ಪಡುವ ಶೈಕ್ಷಣಿಕ ಸಂಕೀರ್ಣ ಯೋಜನೆಯು ಬುಡಕಟ್ಟುಗಳ ಹೆಣ್ಣು ಮಕ್ಕಳ ಸಾಕ್ಷರತಾ ಮಟ್ಟವನ್ನು ಸುಧಾರಿಸಲು ಕೇಂದ್ರ ಸರಕಾರವು ಎಜುಕೇಶನಲ್ ಕಾಂಪ್ಲೆಕ್ಸ್‌ಗಳನ್ನು ಜಾರಿಗೆ ತಂದಿದ್ದರೂ ಈ ಯೋಜನೆಯ ಫಲ ಗೌಡಾಲು ಹೆಣ್ಣು ಮಕ್ಕಳಿಗೆ ತಲುಪದೇ ಇರುವುದು ದುರಂತವೇ ಸರಿ.

ಭಾರತ ಸಂವಿಧಾನ ಅನುಚ್ಛೇದ ೨೭೫(೧)ರಡಿಯಲ್ಲಿ ೧೯೯೭-೯೮ನೇ ಸಾಲಿನಲ್ಲಿ ರಾಜ್ಯದಲ್ಲಿ ಬುಡಕಟ್ಟುಗಳಿಗೆ ಕೇಂದ್ರೀಯ ವಸತಿ ಶಾಲೆಗಳನ್ನು ಮಂಜೂರು ಮಾಡಿದೆ. ಬೆಳಗಾವಿ ಜಿಲ್ಲೆಯ ಗೋಕಾಕ್, ಕೊಡಗು ಜಿಲ್ಲೆಯ ವಿರಾಜಪೇಟೆಗಳಲ್ಲಿ ಮಾತ್ರ ಸ್ಥಾಪಿಸಲಾಗಿದೆ. ಆದರೆ ಮಲೆನಾಡು ಪ್ರದೇಶಗಳಲ್ಲಿ ಈ ತರಹದ ಶಾಲೆಗಳಿರದೆ ಇರುವುದರಿಂದ ಗೌಡಾಲು ಸಮುದಾಯ ತನ್ನ ಒಡಲಿನಲ್ಲಿಯೇ ಅಭಿವೃದ್ಧಿಯಿಂದ ಕುಂಠಿತಗೊಂಡಿದೆ.

ಬುಡಕಟ್ಟುಗಳ ನಿರುದ್ಯೋಗಿ ವಿದ್ಯಾವಂತ ಯುವಕ ಮತ್ತು ಯುವತಿಯರಿಗೆ ವಿವಿಧ ವೃತ್ತಿಗಳಲ್ಲಿ ನೈಪುಣ್ಯತೆ ಪಡೆಯಲು ಸಹಾಯವಾಗುವಂತೆ ವೃತ್ತಿ ತರಬೇತಿ ಕೇಂದ್ರಗಳನ್ನು ರಾಜ್ಯದಲ್ಲಿ ಕೆಲವು ಮಾತ್ರ ಸ್ಥಾಪಿಸಿದ್ದಾರೆ. ಆದರೆ ಗೌಡಾಲು ಮತ್ತು ಇತರೆ ಸಮುದಾಯಗಳು ವಾಸಿಸುವ ಮಲೆನಾಡು ಮತ್ತು ಪಶ್ಚಿಮ ಘಟ್ಟವಾದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಯಾವುದೇ ಕಾರ್ಯಕ್ರಮಗಳನ್ನು ಹಾಕಿಕೊಳ್ಳದೆ ಇರುವುದರಿಂದ ಗೌಡಾಲು ಸಮುದಾಯ ಮೂಲ ಕಾಡಿನಲ್ಲಿಯೇ ಉಳಿಯಬೇಕಾದ ವಾತಾವರಣ ಸೃಷ್ಟಿಯಾಗಿದೆ. ಸರ್ಕಾರದ ಯೋಜನೆಗಳು ಇವರು ವಾಸಿಸುವ ಹಳ್ಳಿಗಳಾದ ಮೆಗೂರು, ದೇವಿಸಾರು, ಅಡಿಕೇಸು, ಉಡುತ್ತಾಳ್, ಬಾಳಿಗೆರೆ, ನೆಮ್ಮಾರು, ಮಂದಲ್ಪೈ, ಬೈಲೂರು, ಆದಿ ಕರೆಹಟ್ಟಿಗಳಂತಹ ಕಾಡಿನಲ್ಲಿರುವ ಹಾಡಿಗಳಿಗೆ ಯಾವುದೇ ಸೌಲಭ್ಯಗಳಿರದೆ ಈಗಲೂ ಕೂಡ ಪ್ರಾಥಮಿಕ ಶಾಲೆ ಮತ್ತು ಅಂಗನವಾಡಿಗಳು ಇದ್ದರೂ ಸರಿಯಾಗಿ ಕಾರ್ಯ ನಿರ್ವಹಿಸದೆ ಇರುವುದು ಕಂಡುಬರುತ್ತದೆ. ಸಂವಿಧಾನದ ಎಲ್ಲ ಹಕ್ಕುಗಳನ್ನು ನಾಡಿನ ಜನತೆಗೆ ಕೊಟ್ಟಿರುವ ಸರ್ಕಾರ ಇದುವರೆಗೆ

ಕಾಡಿನಲ್ಲಿ ವಾಸ ಮಾಡುವ ಮೂಲ ನಿವಾಸಿಗಳಿಗೆ ಕೊಟ್ಟಿರದೆ ಇರುವುದು ದುರಂತವೇ ಸರಿ. ಏಕೆಂದರೆ ಸಾಮಾಜಿಕ ಕಳಕಳಿಯಿಂದ ಸಮಾನತೆಯನ್ನು ಸಾರುತ್ತೇವೆ ಎನ್ನುವಂತ ಸರ್ಕಾರ ಗೌಡಾಲು ಸಮುದಾಯಕ್ಕೆ ಸಾಮಾಜಿಕ ಸ್ಥಾನವನ್ನು ಕೊಡುವುದಕ್ಕೆ ಸಾಧ್ಯವಾಗಿದೆ. ಇವರಿಗೆ ಸಾಮಾಜಿಕ ಅಭಿವೃದ್ಧಿ ಹೇಗೆ ಸಾಧ್ಯವಾಗುತ್ತದೆ ಎಂಬುದು ಇಂದು ಗಂಭೀರವಾಗಿ ಚರ್ಚಿಸಬೇಕಾಗಿದೆ. ಆದ್ದರಿಂಚ ಪ್ರಸ್ತುತ ಗೌಡಾಲು ಬದುಕಿನ ಅಭಿವೃದ್ಧಿ ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಿಸಿದಂತೆ ಅನೇಕ ಸಂಘ-ಸಂಸ್ಥೆಗಳು ಈ ಬುಡಕಟ್ಟಿನ ಅಳಲನ್ನು ಗ್ರಹಿಸುತ್ತಿರುವುದಲ್ಲದೆ ಇವರಲ್ಲಿಯೂ ಅನೇಕ ಸಂಘಗಳು ಸೃಷ್ಟಿಯಾಗುತ್ತಿವೆ. ಈ ಹಿನ್ನೆಲೆಯಿಂದ ಮನವರಿಕೆಯಾಗುವುದೇನೆಂದರೆ ಪ್ರಾಚೀನ ಕಾಲದಿಂದಲೂ ಬುಡಕಟ್ಟುಗಳು ವ್ಯವಸ್ಥಿತವಲ್ಲದ ರೀತಿಯಲ್ಲಿ ತಮ್ಮ ತಮ್ಮ ಹಾಡಿಗಳಲ್ಲಿ ಗುಂಪಾಗಿ ಸೇರಿಕೊಂಡು ಯಾವುದೇ ತೀರ್ಮಾನವನ್ನು ತೆಗೆದುಕೊಂಡಿರುವುದರಿಂದ, ಬುಡಕಟ್ಟುಗಳ ಕಾಣದ ಕಲ್ಪನೆಯು ಅವರ ಮನಸ್ಸಿನಲ್ಲಿಯೇ ಬಚ್ಚಿಟ್ಟುಕೊಂಡು ಬಂದಿರುವುದು ತಿಳಿದ ಸಂಗತಿಯಾಗುತ್ತದೆ.

ಬುಡಕಟ್ಟುಗಳು ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ತಮ್ಮ ಬದುಕಿಗಾಗಿ ಹೋರಾಟ ಮಾಡುತ್ತಲೇ ಬಂದಿದ್ದಾರೆ. ಆದರೆ ಈ ಹೋರಾಟಗಳೆಲ್ಲವೂ ಅವರದೇ ಆದ ಸಂಘಟನೆಯ ಮನೋಭಾವನೆಯಿಂದ ಮಾತ್ರ ಆಗಿವೆ. ಆದರೆ ಇವು ಫಲದಾಯಕವಾಗಿರದೇ ಇರುವುದು ಒಂದು ಕಡೆ ದುರಂತವೇ ಸರಿ. ಬುಡಕಟ್ಟುಗಳು ಸಹಕಾರ, ಸಹಬಾಳ್ವೆ, ಒಟ್ಟುಗೂಡಿ ಬದುಕುವ ಮನೋಭಾವನೆ ಹಂಚಿಕೊಂಡು ತಿನ್ನುವ ಪರಿಪಾಟದವರಾಗಿರುವುದರಿಂದ ಇವರಲ್ಲಿ ಸಂಘಟನೆಯು ಆಧುನಿಕ ಜಗತ್ತಿನ ಸಂಘಟನೆಗಿಂತ ಬಲಿಷ್ಠವಾಗಿದೆ. ಆದ್ದರಿಂದ ಇವರ ಸಂಘಟನೆಯ ಶಕ್ತಿಯನ್ನು ಗ್ರಹಿಸಿ ಪ್ರಭುತ್ವವು ತನ್ನ ಒಳಿತಿಗಾಗಿ ಬಳಸಿಕೊಳ್ಳುತ್ತಿರುವುದು ಹೊಸದೇನಲ್ಲ ಕ್ಷೇತ್ರಕಾರ್ಯದಲ್ಲಿ ತಿಳಿವಳಿಕೆಗೆ ಬಂದ ಮಾಹಿತಿಯೇನೆಂದರೆ ಯಾವುದೇ ಸಂಘಟನೆಯು ಪ್ರಾರಂಭದಲ್ಲಿ ಗುರಿ ಉದ್ದೇಶಗಳನ್ನು ಆರೋಗ್ಯಕರವಾಗಿಟ್ಟುಕೊಂಡು ರಚನೆಗೊಂಡಿರುತ್ತದೆ. ಆದರೆ ಮುಂದೆ ಅದು ತನ್ನ ದಿಕ್ಕನ್ನು ಮರೆತು ಭಿನ್ನವಾದ ರೂಪವನ್ನು ಪಡೆಯುವುದು ಸಹಜವಾದ ಕ್ರಿಯೆಯಾಗಿದೆ. ತತ್ಪರಿಣಾಮವಾಗಿ ಗೌಡಾಲು ಸಮುದಾಯದಲ್ಲಿಯೇ ಇಂದು ಆದಿವಾಸಿ ಹಿತರಕ್ಷಣ ಸಂಘಗಳು ರಚನೆಗೊಂಡಿರುವುದಲ್ಲದೆ ತಮ್ಮ ಬದುಕಿಗಾಗಿ ಹೋರಾಟವನ್ನು ಮಾಡುತ್ತಿವೆ. ರಾಷ್ಟ್ರೀಯ ಉದ್ಯಾನವನ ವಿರೋಧಿ ಒಕ್ಕೂಟವು ರಚನೆಗೊಂಡಿದೆ ಮತ್ತು ಗೌಡಾಲು ಬುಡಕಟ್ಟನ್ನು ಒಕ್ಕಲೆಬ್ಬಿಸುವುದನ್ನು ಕುರಿತು ಹೋರಾಟ ಮಾಡುತ್ತಿದೆ. ಇದರಲ್ಲಿ ಹೆಚ್ಚಿನ ಪ್ರಮಾಣ ಗೌಡಾಲು ಸಮುದಾಯದವರೇ ಇದ್ದಾರೆ. ಹೀಗೆ ಮಾಡದೇ ಇದ್ದರೆ ಪಶ್ಚಿಮಘಟ್ಟದಲ್ಲಿ ೯೦ರಷ್ಟು ಬುಡಕಟ್ಟು ಸಮುದಾಯಗಳು ನಾಡಿಗೆ ಮತ್ತು ಕಾಡಿಗೆ ಯಾವುದೇ ತೊಂದರೆ ಮಾಡದೇ ತಮ್ಮ ಪಾರಂಪರಿಕ ವೃತ್ತಿಯ ಹಿನ್ನೆಲೆಯ ವ್ಯವಸ್ಥೆಯನ್ನು ಮಾಡಿಕೊಂಡು ಬಂದಿರುವಾಗ ಸರ್ಕಾರ ಮತ್ತು ಅರಣ್ಯ ಇಲಾಖೆಯು ಸೇರಿಕೊಂಡು ಅವರ ಜಾಗದಿಂದ ಬೇರೆಡೆಗೆ ಹೋಗುವಂತೆ ತಾಕೀತು ಮಾಡಿದರೆ, ಈ ದೇಶದ ಮೂಲ ಪ್ರಜೆಗಳಾದ ಬುಡಕಟ್ಟುಗಳ ಗತಿಯೇನು? ಅವರಿಗೆ ನ್ಯಾಯಬದ್ಧವಾದ ಸಾಮಾಜಿಕ ಮತ್ತು ಆರ್ಥಿಕ ಪರಿಹಾರ ಹಾಗೂ ಪುನರ್ವಸತಿ ಸೌಲಭ್ಯಗಳನ್ನು ಕೊಡದೆ ಇರುವ ಸರ್ಕಾರದ ವಿರುದ್ಧ ಕುದುರೆಮುಖ ರಾಷ್ಟ್ರೀಯ ಉದ್ಯಾನದ ವ್ಯಾಪ್ತಿಯಲ್ಲಿ ಬರುವ ಮತ್ತು ಪಶ್ಚಿಮಘಟ್ಟದ ಅಳಿವು ಉಳಿವನ್ನು ಇಟ್ಟುಕೊಂಡು ಗಿರಿಜನರ ಪರವಾಗಿ ಅನೇಕ

ಸಂಘಟನೆಗಳು ದನಿ ಎತ್ತುತ್ತಿರುವುದನ್ನು ಗಮನಿಸಲಾಗಿದೆ. ಆದರೆ ಯಾವುದೇ ಹೊರಗಿನ ಸಂಘಟನೆಗಳು ವಸ್ತುನಿಷ್ಠವಾದ ಹೋರಾಟವನ್ನು ಮಾಡದೇ ಇರುವುದು ಬುಡಕಟ್ಟುಗಳ ಅಭಿವೃದ್ಧಿಯ ಕಡೆಯಾಗಲಿ, ಸರ್ಕಾರದ ಗಮನವನ್ನು ಹರಿಸುವುದಾಗಿರಲಿ ಹಾಗೂ ಸಮಾಜಪರ ಮನೋಭಾವನೆಯ ಹೋರಾಟ ಮಾಡದೆ ಇರುವುದು ಇಲ್ಲಿ ಗಮನಿಸಬೇಕಾದ ಸಂಗತಿಯಾಗುತ್ತದೆ. ಬುಡಕಟ್ಟುಗಳನ್ನು ಭೂಮಾಲೀಕರು ಒಟ್ಟುಗೂಡಿಕೊಂಡು ಮೇಲುನೋಟಕ್ಕೆ ಗಿರಿಜನರ ಹಿತದ ದೃಷ್ಟಿಯಿಂದ ಎಂದು ಹೇಳುತ್ತಾ ತಮ್ಮ ಶ್ರೀಮಂತ ಬೆಳೆ ಮತ್ತು ೧೦೦ ಎಕರೆಗೂ ಮೀರಿದ ಭೂಮಿಯನ್ನು ಉಳಿಸಿಕೊಳ್ಳುವ ತಂತ್ರವನ್ನು ರೂಪಿಸಿಕೊಂಡು ಗೌಡಾಲು ಮತ್ತು ಇತರೇ ಬುಡಕಟ್ಟುಗಳ ಸಹಾಯವನ್ನು ಪಡೆದು ಹೋರಾಟ ಮಾಡುತ್ತಿರುವುದು ವೈಪರೀತ್ಯವಲ್ಲದೆ ಮತ್ತೇನೂ ಆಗಲಾರದು. ಪರಿಣಾಮ ಭಾರತದ ಯಾವುದೇ ಬುಡಕಟ್ಟುಗಳು ತಮಗೆ ಅರಿವಿಲ್ಲದೆ ಬೇರೆಯವರ ಹಿತಕ್ಕಾಗಿ ಸಂಘಟನೆಗೊಂಡು ಹೋರಾಡಿದ ಘಟನೆಗಳು ಗೋಚರಿಸುತ್ತಿವೆ. ಇದಕ್ಕೆ ಸಾಕ್ಷಿಯಾಗಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ರ್ಗ್ಳರ ತುಂಗಾ ಮೂಲ ಉಳಿಸಿ ಹೋರಾಟವನ್ನು ಮರೆಯುವಂತಿಲ್ಲ ಅದೇ ರೀತಿ ಕುದುರೆಮುಖ ಗಣಿಗಾರಿಕೆಯನ್ನು ನಿಲ್ಲಿಸುವಂತೆ ಕರ್ನಾಟಕ ವಿಮೋಚನಾ ರಂಗ, ಮಹಿಳಾ ಜಾಗೃತಿ ವೇದಿಕೆ ಹಾಗೂ ಪರಿಸರ ಹೋರಾಟಗಾರರ ಜೊತೆಗೂಡಿ ಗೌಡಾಲು ಸಮುದಾಯದವರು ಮಾಡಿದ ಚಳುವಳಿಯಲ್ಲಿ ಗೌಡಾಲು ಬುಡಕಟ್ಟಿನ ಅಭಿವೃದ್ಧಿ ಮಾತ್ರವಿರದೆ ಭದ್ರ ಮತ್ತು ತುಂಗೆಯ ನದಿಗಳಿಂದ ಜೀವನ ಮಾಡುತ್ತಿರುವ ಎಲ್ಲ ಶ್ರೀಮಂತರ ಹಿತಶಕ್ತಿಗಳಿಗಾಗಿ ಹಾಗೂ ಮಲೆನಾಡಿನಲ್ಲಿರುವ ಭೂಮಾಲೀಕರ ಆಸ್ತಿಗಳ ರಕ್ಷಣೆಯು ಈ ಚಳುವಳಿಯಲ್ಲಿ ಸೇರಿತು ಎನ್ನುವುದು ಇಲ್ಲಿ ಮುಖ್ಯವಾದ ಚರ್ಚೆಯ ವಿಷಯವಾಗುತ್ತದೆ. ಇದರ ಅರ್ಥ ಗೌಡಾಲು ಬುಡಕಟ್ಟಿನ ಅಭಿವೃದ್ಧಿಯು ಇತರೆ ಸಂಘ ಸಂಸ್ಥೆಗಳಿಂದ ಆಗಿದೆ. ಇದು ನಿಜವಾದರೂ ಇನ್ನೊಂದು ಕಡೆ ಹೆಚ್ಚಿನ ಅಭಿವೃದ್ಧಿಯಾಗಿರುವುದು ಪ್ರಭುತ್ವಕ್ಕೆ ಎನ್ನುವುದನ್ನು ಮರೆಯುವಂತಿಲ್ಲ. ಇದರಿಂದ ತಿಳಿಯುವುದೇನೆಂದರೆ ಈ ದೇಶದ ಬುಡಕಟ್ಟುಗಳು ಮತ್ತು ದಲಿತರು ಬೇರೆಯವರ ಸುಖಕ್ಕಾಗಿ ಹೆಚ್ಚು ಹೋರಾಟ ಮಾಡಿರುವುದು ಸತ್ಯ ಸಂಗತಿಯಾಗುತ್ತದೆ.

ಗೌಡಾಲು ಮತ್ತು ಇತರೆ ಬುಡಕಟ್ಟುಗಳ ಬಗ್ಗೆ ಕಾಳಜಿಯನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡು ತುಂಗಾ ಮೂಲ ಉಳಿಸಿ ಹೋರಾಟಕ್ಕೆ ಕೈ ಹಾಕಿರುವ ಬಗೆಯನ್ನು ಯಾರೂ ಮರೆಯುವಂತಿಲ್ಲ. ಇದುವರೆಗೂ ಈ ಹೋರಾಟದಲ್ಲಿ ಭಾಗವಹಿಸಿದ ಗೌಡಾಲು ಬುಡಕಟ್ಟಿನ ಯಾವುದೇ ಸಮಸ್ಯೆಗಳಿಗೆ ಹತ್ತಿರದಿಂದ ಸ್ಪಂದಿಸುತ್ತ ಬಂದಿರುವವರು ಶೃಂಗೇರಿ ಕಲ್ಕುಳಿ ವಿಠ್ಠಲ್ ಹೆಗ್ಡೆಯವರು. ಇವರು ಗೌಡಾಲುಗಳಂತ ಇತರೆ ಬುಡಕಟ್ಟುಗಳು ಹಾಗೂ ದಲಿತರನ್ನು ಸಂಘಟಿಸಿ ಜನರನ್ನು ಜಾಗೃತಿಗೊಳಿಸಲು ನಾಡಿನಾದ್ಯಂತ ಓಡಾಡಿದರು. ಪರಿಣಾಮವಾಗಿ ಕುದುರೆಮುಖ ಕಬ್ಬಿಣದ ಅದಿರಿನ ಕಂಪನಿಯು ಮುಚ್ಚಿತು. ಆದ್ದರಿಂದ ಸಾವಿರಗಟ್ಟಲೇ ಜನರಿಗೆ ನೀರು ಮತ್ತು ಗಿಡಮೂಲಿಕೆಯ ಸಸ್ಯ ಸಂಪತ್ತು ರಕ್ಷಣೆಯಾಗಿದ್ದಲ್ಲದೆ ಬುಡಕಟ್ಟುಗಳ ಬದುಕಿಗೆ ಒಂದು ಅರ್ಥ ಬಂತು.

ಗೌಡಾಲು ಬುಡಕಟ್ಟಿನ ಅಭಿವೃದ್ಧಿಯ ಕಡೆ ಮುಖವನ್ನು ಮಾಡುವಂತೆ ಅನೇಕ ಸಂಘ ಸಂಸ್ಥೆಗಳು ಪ್ರಭಾವ ಬೀರುತ್ತಿರುವುದು ಗಮನಾರ್ಹವಾಗಿದೆ. ಏಕೆಂದರೆ ತುಂಗ ಮೂಲ ಉಳಿಸಿ ಹೋರಾಟಕ್ಕೆ ನಾಡಿನ ಸಾಹಿತಿಗಳಾದ

ಡಾ. ಯು.ಆರ್ ಅನಂತಮೂರ್ತಿ, ನಾಡಿನ ಮ್ಯಾಗ್ಸೇಸ್ ಪ್ರಶಸ್ತಿ ಪುರಸ್ಕೃತ ಹೆಗ್ಗೋಡಿನ ಸುಬ್ಬಣ್ಣ, ಸುಂದರ್ ಮುಂತಾದವರು ಗೌಡಾಲು ಸಮುದಾಯದ ಅಭಿವೃದ್ಧಿಗೆ ಪರೋಕ್ಷವಾಗಿ ಪ್ರಭಾವ ಬೀರಿರುವುದು ಕೂಡ ಅಧ್ಯಯನದ ದೃಷ್ಟಿಯಿಂದ ಮರೆಯುವಂತಿಲ್ಲ.

ಕುದುರೆಮುಖ ಗಣಿಗಾರಿಕೆ ನಿಲ್ಲಲು ಮತ್ತು ಗೌಡಾಲುಗಳ ಬದುಕಿನ ಆತಂಕ ಕಡಿಮೆಯಾಗುವುದಕ್ಕೆ ನಮ್ಮ ಸಾಹಿತಿಗಳ ಅಲ್ಲದೆ ವಿಚಾರವಂತರು ಕೂಡ ಪ್ರಭಾವ ಬೀರಿರುವುದು ಮುಖ್ಯವಾಗುತ್ತದೆ. ಇದಕ್ಕೆ ಸಾಕ್ಷಿಯಾಗಿ ನಮ್ಮನ್ನು ಬಿಟ್ಟು ಹೋಗಿರುವ ಹಾಗೂ ಇರುವವರೆಗೆ ಪ್ರಾಣಿ, ಪಕ್ಷಿ, ಪರಿಸರದ ಬಗ್ಗೆ ಹೆಚ್ಚು ಆಸಕ್ತಿಯನ್ನು ಇಟ್ಟುಕೊಂಡು ಮಲೆನಾಡಿನ ಮಗನಾಗಿದ್ದ ನಾಡಿನ ಸಾಹಿತಿಯಾಗಿದ್ದ ಪೂರ್ಣಚಂದ್ರ ತೇಜಸ್ವಿಯವರು ಪಶ್ಚಿಮ ಘಟ್ಟದ ಉಳಿವಿನ ಹಾಗೂ ಅಲ್ಲಿ ಬದುಕುವ ಜೀವರಾಶಿಗಳ ಕುರಿತು ವಿಚಾರಗಳ ಮೂಲಕ ಹೋರಾಟ ಮಾಡಿರುವುದು ಸತ್ಯ ಸಂಗತಿಯಾಗಿರುವುದರಿಂದ ಗೌಡಾಲು ಬುಡಕಟ್ಟನ್ನು ಅಭಿವೃದ್ಧಿಯತ್ತ ಸಾಗುವಂತೆ ಮಾಡಲು ಪ್ರೋತ್ಸಾಹ ಸಿಕ್ಕಂತೆ ಆಗಿದೆ. ಪರಿಣಾಮವಾಗಿ ಸಾಮಾಜಿಕ ಬದಲಾವಣೆಗೆ ಅನುಗುಣವಾಗಿ ದುಡಿಯುವ ಬುಡಕಟ್ಟು ಸಮುದಾಯಗಳ ಬದುಕು ದಾಪುಗಾಲಿನ ಅಭಿವೃದ್ಧಿ ಕಡೆ ಮುಖವಾಡಿರುವುದಲ್ಲದೆ ಇತರೆ ಸಂಘ ಸಂಸ್ಥೆಗಳು ಪಕ್ಷಾತೀತವಾಗಿ ಪ್ರಭಾವ ಬೀರಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಚಿಕ್ಕಮಗಳೂರು ಜಿಲ್ಲೆಯು ಬ್ರಿಟಿಷರ ಮತ್ತು ಪೋರ್ಚುಗೀಸರ ಕಾಲದಿಂದಲೂ ಪ್ರಭುತ್ವದ ಹಿಡಿತದಲ್ಲಿ ಇರುವುದರಿಂದ ಇಲ್ಲಿ ಯಾವುದೇ ಸೌಕರ್ಯಗಳಿಲ್ಲದೆ ಕಾನನದಲ್ಲಿ ವಾಸಿಸುತ್ತಿರುವ ಗೌಡಾಲು ಭೂಮಾಲೀಕರ ಹಿಡಿತದಲ್ಲಿಯೇ ಜೀವನ ಸಾಗಿಸುತ್ತಿರುವುದು ದುರಂತವಾದರೂ ಅವರ ಪ್ರಭಾವ ಹೇರಳವಾಗಿ ಇವರ ಮೇಲೆ ಬೀರಿರುವುದು ಕ್ಷೇತ್ರಕಾರ್ಯದಲ್ಲಿ ಗೋಚರಿಸುತ್ತದೆ.

ಬುಡಕಟ್ಟು ಸಮುದಾಯಗಳು ಅರಣ್ಯದ ಉತ್ಪನ್ನಗಳನ್ನು ಮಾರಾಟ ಮಾಡಲು ಹಾಗೂ ಅರಣ್ಯದ ವಸ್ತುಸ್ಥಿತಿಯನ್ನು ಕಾಪಾಡುವುದರ ಮೂಲಕ ತಮ್ಮ ದಿನ ನಿತ್ಯದ ಬದುಕನ್ನು ಕಟ್ಟಿಕೊಂಡವರು. ಆದ್ದರಿಂದಲೇ ಇನ್ನೂ ಪಶ್ಚಿಮಘಟ್ಟಗಳಲ್ಲಿ ಅರಣ್ಯ ಸಂಪತ್ತು ಗೋಚರಿಸುವುದು, ಪರಿಣಾಮವಾಗಿ ಬುಡಕಟ್ಟುಗಳು ತಮ್ಮ ಆರ್ಥಿಕ ಅಭಿವೃದ್ಧಿಯನ್ನು ತಾವೇ ರೂಪಿಸಿಕೊಂಡರು ಎಂಬುದಕ್ಕೆ ಇಂದಿನ ದಿನಮಾನಗಳಲ್ಲಿ ಲ್ಯಾಂಪ್ ಸಹಕಾರ ಸಂಘಗಳೇ ಸಾಕ್ಷಿಯಾಗಿವೆ. ಬುಡಕಟ್ಟುಗಳಲ್ಲಿರುವ Lamp Societyಯ ಮುಖ್ಯ ಉದ್ದೇಶ ಬುಡಕಟ್ಟು ಜನರು ಉತ್ಪಾದಿಸುವ ವಸ್ತುಗಳಿಗೆ ಸ್ಪರ್ಧಾತ್ಮಕ ಬೆಲೆಗಳನ್ನು ನೀಡುವುದರ ಜೊತೆಗೆ ಮಾರುಕಟ್ಟೆಯನ್ನು ಒದಗಿಸಿಕೊಡುವುದಾಗಿದೆ. ಅಲ್ಲದೆ ಬುಡಕಟ್ಟು ಸಮುದಾಯಗಳಿಗೆ ಬೇಕಾಗುವ ಅವಶ್ಯಕ ವಸ್ತುಗಳನ್ನು ರಿಯಾಯಿತಿ ದರದಲ್ಲಿ ಪೂರೈಸುವುದು ಹಾಗೂ ಬುಡಕಟ್ಟುಗಳನ್ನು ಮಧ್ಯವರ್ತಿಗಳ ಹಾವಳಿಯಿಂದ ತಪ್ಪಿಸುವ ಉದ್ದೇಶದಿಂದಲೇ ಸ್ಥಾಪನೆಗೊಂಡಿರುವ Lamp Societyಯು ಬುಡಕಟ್ಟುಗಳಿಗೆ ಜೀವನದ ದಾರಿಯಾಗಿದೆ. ಈ Societyಯ ಮೂಲಕವೇ ಗೌಡಾಲು ಸಮುದಾಯವು ತನ್ನ ಬದುಕಿನ ಅಭಿವೃದ್ಧಿಯನ್ನು ಕಾಣುವಂತಾಗಿದೆ. ಇಲ್ಲಿ ಕಾಡಿಗೆ ಹೊಂದುವಂತಹ ಬೆಳೆಗಳನ್ನು ಬೆಳೆದು Lamp Societyಯ ಮೂಲಕ ಮಾರಾಟ ಮಾಡುತ್ತಾರೆ. ಅಲ್ಲದೆ, ಈ Societyಯಲ್ಲಿ ಗೌಡಾಲು ಬುಡಕಟ್ಟಿನವರೇ ಸದಸ್ಯರಾಗಿದ್ದಾರೆ. ಏಕೆಂದರೆ ಬುಡಕಟ್ಟುಗಳ ಬದುಕು

ಯಾವ ರೂಪದ್ದು ಎಂಬ ಜ್ಞಾನ ಬುಡಕಟ್ಟುಗಳಿಗೆ ಮಾತ್ರ ಚೆನ್ನಾಗಿ ಗೊತ್ತಿರುವುದರಿಂದ ಮತ್ತು ಈ ಸಂಸ್ಥೆಯಲ್ಲಿ ಯಾವುದೇ ಲೋಪಗಳು ಸಂಭವಿಸಬಾರದೆಂದು ಸರ್ಕಾರದ ನಿಯಮಗಳಿಗೆ ಅನುಗುಣವಾಗಿ Lamp ಸ್ಥಾಪನೆಯಾಗಿರುವುದರಿಂದ ಗೌಡಾಲು ಸಮುದಾಯದ ದುಡಿತ ಮನಸ್ಸುಗಳು ತಮ್ಮ ಜೀವನವನ್ನು ಅಭಿವೃದ್ಧಿಯ ಕಡೆ ಮುಖ ಮಾಡಿಕೊಂಡಿರುವುದು ಕ್ಷೇತ್ರಕಾರ್ಯದಿಂದ ತಿಳಿದ ಮಾಹಿತಿಯಾಗಿದೆ.

ಗೌಡಾಲುಗಳು ಮುರುಗನ ಹುಳಿ, ಗೆಡ್ಡೆ, ಗೆಣಸು, ಕಾಡು ಕಿತ್ತಳೆ, ಕಾಡು ಮೆಣಸು, ಗೋಡಂಬಿ, ಗಿಡಮೂಲಿಕೆಗೆ ಸಂಬಂಧಿಸಿದ ಬೇರು ಮತ್ತು ಪತ್ರೆಗಳು, ಚಕ್ಕೆ, ಲವಂಗ, ಕಾಫಿ, ಟೀ ಮುಂತಾದವುಗಳನ್ನು Lamp Societyಯ ಮೂಲಕ ಹೋರಾಟ ಮಾಡಿ ಬಂದ ಕಿರಿದಾದ ಹಣದಿಂದ ಜೀವನವನ್ನು ಕಳೆಯುತ್ತಿದ್ದಾರೆ. ಇಲ್ಲಿ ಗಮನಿಸಲೇಬೇಕಾದ ಸಂಗತಿಯೆಂದರೆ ಗೌಡಾಲು ಬುಡಕಟ್ಟು ಸಮುದಾಯವು LAMPSನ ಮೂಲಕವೇ ಮುಖ್ಯವಾಹಿನಿ ಕಡೆ ಮುಖ ಮಾಡಿದೆ.

ಗೌಡಾಲುಗಳು ಕಾಡುಗಳಲ್ಲಿ ಸಂಗ್ರಹಿಸುವ ಕಿರು ಅರಣ್ಯ ಉತ್ಪನ್ನಗಳನ್ನು ಯೋಗ್ಯ ಬೆಲೆಗೆ ಮಾರಲು ಹಾಗೂ ಜೀವನಕ್ಕೆ ಬೇಕಾಗುವ ಜೀವನಾವಶ್ಯಕ ಪದಾರ್ಥಗಳನ್ನು ಕಡಿಮೆ ಬೆಲೆಗೆ ಪಡೆಯುವ ಉದ್ದೇಶದಿಂದ ''ದೊಡ್ಡ ಪ್ರಮಾಣದ ಸಹಕಾರ ಸಂಘ'' (LAMPS) ವನ್ನು ಮುಕ್ತವಾಗಿ ಸ್ಥಾಪಿಸಿಕೊಂಡು ಬಲಪಡಿಸಿಕೊಂಡಿದ್ದಾರೆ. ಅಲ್ಲದೆ ಸರಕಾರ ಇಲಾಖೆ ವತಿಯಿಂದ ಸಹಾಯಧನವನ್ನು ಪಡೆದಿದ್ದಾರೆ. ಈ LAMPS ನಿಂದ ಗೌಡಾಲುಗಳ ಮೇಲೆ ಆಗುತ್ತಿದ್ದ ಲೇವಾದೇವಿದಾರರ, ಮಧ್ಯವರ್ತಿಗಳ ಶೋಷಣೆಯಿಂದ ದೂರವಾಗುವಂತಾಗಿದೆ. ಗೌಡಾಲು ಸಮುದಾಯದವರು ಅರಣ್ಯಗಳಲ್ಲಿ ಸಂಗ್ರಹಿಸುವಂತಹ ಹಾಗೂ ಉತ್ಪಾದಿಸುವಂತಹ ವಸ್ತುಗಳಿಗೆ ಸ್ಪರ್ಧಾತ್ಮಕ ಬೆಲೆಗೆ ಮಾರಾಟ ಮಾಡಿ ಇದರಿಂದ ಸಹಕಾರ ಸಂಘಕ್ಕೆ ಬರುವ ಲಾಭವು ಇಡೀ ಬುಡಕಟ್ಟಿಗೆ ಸೇರುತ್ತದೆ.

ಈ ರೀತಿಯ ಸಹಕಾರ ಸಂಘಗಳು ಕರ್ನಾಟಕದಲ್ಲಿ ೧೯ ಸ್ಥಳಗಳಲ್ಲಿವೆ. ಇವುಗಳಿಗೆ, ೭೨೩೪೯ ಸದಸ್ಯರನ್ನಾಗಿ ನೊಂದಾಯಿಸಿಕೊಂಡು ಬುಡಕಟ್ಟುಗಳಿಗೆ ವಿವಿಧ ರೀತಿಯ ಸವತ್ತುಗಳನ್ನು ಒದಗಿಸಲಾಗುತ್ತಿದೆ. ಇಂತಹ ಸಹಕಾರ ಸಂಘಗಳಿಗೆ ಕೇಂದ್ರ ಸರ್ಕಾರದ ''ಟ್ರೈಫೇಡ್'' ಸಂಸ್ಥೆಯ ಮೂಲಕ ಹೆಚ್ಚಿನ ಸಹಾಯ ದೊರೆಯುತ್ತದೆ. ಈ ಪರಿಣಾಮವಾಗಿ ಗೌಡಾಲುಗಳು ಸರ್ಕಾರ ಮತ್ತು ಸಂಘ ಸಂಸ್ಥೆಗಳ ಮೂಲಕವು ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳ ಅರಿವು ಪಡೆದಿದ್ದರೂ ಕೂಡ ಸಮರ್ಪಕವಾಗಿ ಅಭಿವೃದ್ಧಿಯಾಗದೆ ಇರುವುದು ಕಂಡುಬರುತ್ತದೆ.

ಭಾರತ ಸರ್ಕಾರದಿಂದ ಮಾನ್ಯತೆ ಪಡೆದ N.G.Oಗಳು ಬುಡಕಟ್ಟು ಸಮುದಾಯಗಳನ್ನು ಅಧ್ಯಯನ ಮಾಡಿ ಅವರನ್ನು ಮುಖ್ಯವಾಹಿನಿಗೆ ತರುತ್ತವೆ ಎಂದು ನಾಡಿನಿಂದ ಕಾಡಿಗೆ ಬಂದು ತಮ್ಮ ಬಿಡಾರವನ್ನು ಹೂಡುತ್ತಾರೆ. ೧೯೭೫-೭೬ ರಲ್ಲಿ ಸಾಮ್ರಾಜ್ಯಶಾಹಿ ರಾಷ್ಟ್ರಗಳಿಂದ ಧನಸಹಾಯ ಮತ್ತು ಮಾರ್ಗದರ್ಶನದಿಂದ N.G.Oಗಳು ಗ್ರಾಮೀಣಾಭಿವೃದ್ಧಿ, ಸಮುದಾಯ ಅಭಿವೃದ್ಧಿ, ಉದ್ಯೋಗ, ಉತ್ಪಾದನೆ, ಕೊಳಗೇರಿ ಸುಧಾರಣೆ, ಜೀವನ ಮಟ್ಟದಲ್ಲಿ ಸುಧಾರಣೆ ಮುಂತಾದ ಅಭಿವೃದ್ಧಿ ಎಂಬ ಗುರಿಗಳನ್ನು ಇಟ್ಟುಕೊಂಡು ತಮ್ಮ ಕಾರ್ಯವನ್ನು ಪ್ರಾರಂಭಿಸಿವೆ. ಆದರೆ N.G.Oಗಳು ಬುಡಕಟ್ಟು ಸಮುದಾಯಗಳಿಗೆ ಎಷ್ಟರಮಟ್ಟಿಗೆ ಪೂರಕವಾಗಿ ಕೆಲಸ

ಮಾಡುತ್ತಿವೆ ಎಂಬುದು ಇಲ್ಲಿ ಮುಖ್ಯವಾದ ಚರ್ಚೆಯಾಗಬೇಕಾಗಿದೆ. ಇಂದು ಗಿರಿಜನರ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರ, ಕೇಂದ್ರ ಸರ್ಕಾರಗಳು ಅನೇಕ ಸ್ವಯಂ ಸೇವಾ ಸಂಸ್ಥೆಗಳು ವಿವಿಧ ಯೋಜನೆಗಳನ್ನು ರೂಪಿಸಿ ಕಾಂಕ್ರೀಟ್ ಸಂಸ್ಕೃತಿಯನ್ನು ಬುಡಕಟ್ಟುಗಳ ಹಾಡಿಗೆ ಪರಿಚಯಿಸುತ್ತಿದೆ. ಈ ಪರಿಣಾಮವಾಗಿ ಬುಡಕಟ್ಟುಗಳ ಬದುಕಿನ ದಾರಿಯೂ ಚದುರಿರುವುದಲ್ಲದೆ ಬುಡಕಟ್ಟುಗಳನ್ನು ಸರ್ಕಾರ ಕಾಡಿನಿಂದ ಬೇರೆ ಬೇರೆ ಸ್ಥಳಗಳಿಗೆ ಸ್ಥಳಾಂತರಿಸುವ ಮಟ್ಟಕ್ಕೆ ಇಳಿಯಿತು. ಇದರಿಂದ ಗೌಡಾಲುಗಳಿಗೆ ಅನೇಕ ಸಮಸ್ಯೆಗಳು ಸೃಷ್ಟಿಯಾದವು. ಸರ್ಕಾರವು ಗೌಡಾಲುಗಳು ಆಧುನಿಕ ಸಮಾಜದಲ್ಲಿ ತಮ್ಮ ಬದುಕು ರೂಪಿಸಿಕೊಳ್ಳಲು ಅನುಕೂಲವಾಗುವಂತಹ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರಲು ನಿರ್ಧರಿಸಿ ಯೋಜನೆಗಳನ್ನು ಜಾರಿಗೆ ತರಲಾಯಿತು. ಗೌಡಾಲುಗಳಿಗೆ ವಸತಿ, ಶಿಕ್ಷಣ, ಆರೋಗ್ಯ, ಕೃಷಿ, ಗೃಹ ಕೈಗಾರಿಕೆ ಕಾಡಿನ ಉತ್ಪನ್ನಗಳ ಸಂಗ್ರಹ ಪರಿಷ್ಕರಣೆ, ಮಾರಾಟ ಮುಂತಾದವುಗಳ ಬಗೆಗೆ ಗೌಡಾಲು ಸ್ವಾವಲಂಬಿಯಾಗಿ ಬದುಕಲು ಅನುವು ಮಾಡಲು ಪ್ರಯತ್ನಿಸಿತು. ಆದರೆ ಗೌಡಾಲು ಮತ್ತು ಇತರೆ ಮಲೆನಾಡಿನ ಯಾವುದೇ ಬುಡಕಟ್ಟುಗಳಿಗೆ ಈ ಯೋಜನೆಗಳು ಸಮರ್ಪಕವಾಗಿ ತಲುಪದೇ ಇರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಈ ಯೋಜನೆಗಳನ್ನು ಪಡೆದುಕೊಂಡ ಗೌಡಾಲು ಬುಡಕಟ್ಟು ಸಮುದಾಯದ ಫಲಾನುಭವಿಗಳು ತಮ್ಮ ಬದುಕನ್ನು ರೂಪಿಸಿಕೊಳ್ಳಲಾಗದೆ ಮತ್ತೆ ಮೊದಲಿನ ವ್ಯವಸ್ಥೆಯಲ್ಲಿಯೇ ಉಳಿದಿರುವುದು ನಿಜ ಸಂಗತಿಯಾಗಿದೆ. ಆದ್ದರಿಂದ ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ರೂಪಿಸಿರುವ ಅಭಿವೃದ್ಧಿ ಯೋಜನೆಗಳು ಸರಿಯಾಗಿ ಬುಡಕಟ್ಟುಗಳಿಗೆ ತಲುಪದೆ, ಬೇರೊಬ್ಬರ ಲಾಭಕ್ಕಾಗಿ ದುಡಿದು ತಮಗೆ ಯಾವುದೇ ನೋವುಗಳು ಸಂಭವಿಸಿದರೂ ತಾವೇ ನುಂಗಿಕೊಂಡು ಜೀವಿಸುವಂತಾಗಿದೆ. ಭೂಮಾಲೀಕರು ನಾಡಿನಿಂದ ಬಂದು ನಮ್ಮ ಎಲ್ಲ ಸಂಪತ್ತನ್ನು ಪರೋಕ್ಷವಾಗಿ ವಿದೇಶಿಯ ಮನೋಭಾವನೆಯಲ್ಲಿಯೇ ನಮ್ಮಿಂದ ಕಿತ್ತುಕೊಂಡು ಹೋಗಿ ಅವರು ಲಾಭ ಮಾಡಿಕೊಳ್ಳುತ್ತಿದ್ದಾರೆ ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗೌಡಾಲು ಮಾಹಿತಿದಾರರು ಪರಿತಪಿಸುತ್ತಿರುವುದನ್ನು ಗಮನಿಸಿದರೆ ಇವರಷ್ಟೇ ಅಲ್ಲದೆ ಇಡೀ ಪಶ್ಚಿಮ ಘಟ್ಟದ ಬುಡಕಟ್ಟುಗಳ ಮುಂದಿನ ಬದುಕು ಏನಾಗಬಹುದು ಎಂಬುದು ಗಮನಾರ್ಹವಾಗಿದೆ. ಇದರ ಅರ್ಥ ಸರ್ಕಾರದ ಮತ್ತು ಸ್ವಯಂ ಸೇವಾ ಸಂಸ್ಥೆಗಳು ರೂಪಿಸಿರುವ ಅಭಿವೃದ್ಧಿ ಯೋಜನೆಗಳು ಗೌಡಾಲು ಸಮುದಾಯದ ಎಲ್ಲರಿಗೂ ಸಮಪ್ರಮಾಣದಲ್ಲಿ ದೊರೆಯದೇ ಇರುವುದು ಕಂಡುಬರುತ್ತದೆ. ಆದ್ದರಿಂದ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯ ಬಗ್ಗೆ ಮಾತಾಡುವಾಗ ಬುಡಕಟ್ಟುಗಳ ಕುರಿತ ಅಭಿವೃದ್ಧಿಯ ಕಾರ್ಯಕ್ರಮಗಳು ಯಾವ ಹಂತದಲ್ಲಿ ನಡೆಯುತ್ತಿವೆ ಎಂಬುದು ಚರ್ಚೆಯಾಗಬೇಕಾಗಿದೆ. ಗೌಡಾಲು ಬುಡಕಟ್ಟಿಗೆ ಇಲ್ಲಿಯವರೆಗೆ ಯಾವುದೇ ಸಂಘ ಸಂಸ್ಥೆಗಳು ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಆರ್ಥಿಕ ಅಭಿವೃದ್ಧಿಯ ಕುರಿತು ಸರಿಯಾಗಿ ತಿಳಿಹೇಳದೆ ಇರುವುದು ಅಲ್ಲದೇ ಅವರಲ್ಲಿರುವ ಸಂಪತ್ತನ್ನು ದೋಚಿಕೊಂಡು ಹೋಗಿರುವುದು ಕ್ಷೇತ್ರಕಾರ್ಯದಲ್ಲಿ ಮಾಹಿತಿದಾರರು ನೀಡುವ ಮಾಹಿತಿಯೂ ಸಾಕ್ಷಿಯಾಗುತ್ತದೆ.

ಗೌಡಾಲು ಸಮುದಾಯಕ್ಕೆ N.G.Oಗಳ ಅಭಿವೃದ್ಧಿಯ ಪಾತ್ರ ವಿರಳವಾಗಿರುವುದಲ್ಲದೆ ಇವರಿಂದಲೇ ಬುಡಕಟ್ಟುಗಳ ಶೋಷಣೆಯಾಗುತ್ತಿರುವುದು ಕಂಡುಬರುತ್ತದೆ. ಬುಡಕಟ್ಟುಗಳಿಗೆ ಸಂಘ ಸಂಸ್ಥೆಗಳು ಮಳೆ

ಆಶ್ರಯದ ಭೂಮಿ ಗುರುತಿಸಿ ಬದು ನಿರ್ಮಾಣ, ಸಾವಯವ ಗೊಬ್ಬರದ ಬಗೆಗೆ ತಿಳುವಳಿಕೆ, ನೀರಿನ ಹೊಂಡ, ಭಾವಿ ತೋಡಿಸುವುದು, ಕೈತೋಟ, ಗಿಡ ಮರಗಳ ನೆಡುವಿಕೆ ಮುಂತಾದವುಗಳ ಬಗ್ಗೆ ಮಾರ್ಗದರ್ಶನ ಮಾಡಬೇಗಿರುತ್ತದೆ. ಆದರೆ ಯಾವುದೇ ಸಂಘ ಸಂಸ್ಥೆಗಳು ಈ ರೀತಿಯ ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಮಾಡದೇ ಇರುವುದರಿಂದ ಕಾಡಿನಲ್ಲಿ ವಾಸ ಮಾಡುವ ಗೌಡಾಲು ತನ್ನನ್ನು ತಾನೇ ಅಭಿವೃದ್ಧಿ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಈ ಹಿನ್ನೆಲೆಯಿಂದ ಕ್ಷೇತ್ರಕಾರ್ಯದಲ್ಲಿ ಗಮನಿಸಿದಾಗ ಗೌಡಾಲು ಸಮುದಾಯವು ಅಲ್ಲಲ್ಲಿ ಚಿಕ್ಕ ಭೂಮಿಯಿಂದ ಹಾಗೂ ಮೇಲಿನ ವರ್ಗದವರ ಗದ್ದೆ, ತೋಟ ಹಾಗೂ ಮನೆಗಳಲ್ಲಿ ದಿನಗೂಲಿ ಮಾಡಿ ತಮ್ಮ ಬದುಕನ್ನು ಅಭಿವೃದ್ಧಿಯ ಕಡೆ ಮುಖ ಮಾಡುತ್ತಿದೆ.

''ಹೆಚ್ಚಿನ ಯೋಜನೆಗಳು ಈ ಸಮುದಾಯದವರಿಗೆ ದೊರಕುತ್ತಿಲ್ಲ. ಸರಕಾರ ಗೌಡಾಲು ಬುಡಕಟ್ಟು ಜನರ ಪ್ರಗತಿಗೆ ಎಷ್ಟು ಹಣ ವಿನಿಯೋಗಿಸಿದೆ ಎಂಬುದಕ್ಕಿಂತ ವಿನಿಯೋಗಿಸಿರುವ ಹಣ ಮತ್ತು ಯೋಜನೆಗಳು ಎಷ್ಟರ ಮಟ್ಟಿಗೆ ಕಾರ್ಯಗತವಾಗಿದೆ ಎಂಬುದನ್ನು ಕುರಿತು ಅವಲೋಕಿಸಬೇಕಾಗಿದೆ.

ಅಭಿವೃದ್ಧಿಯ ಶುಷ್ಕ ಆಸ್ತಿಗಳು ಪ್ರೀತಿಯಿಂದ ಸ್ಪೂರ್ತಿಗೊಂಡು ಪ್ರಜ್ವಲಿಸುವಂತಾದಾಗ, ಬುಡಕಟ್ಟು ಜನ ಪ್ರತಿಕ್ರಿಯಿಸುತ್ತಾರೆ. ಅವರು ಬದಲಾವಣೆಯನ್ನು ಬಯಸುತ್ತಾರೆ, ಅವರಿಗೆ ಬದಲಾವಣೆ ಅನಿವಾರ್ಯ.''[೫೮]

ಈ ಆದಿವಾಸಿಗಳ ಪ್ರಗತಿಗಾಗಿ ಕೆಲವೊಂದು ಸಂಸ್ಥೆಗಳು ಮುಂದೆ ಬಂದಿದ್ದು, ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಇವರನ್ನು ಸುಧಾರಿಸಲು ಪ್ರಯತ್ನಿಸುತ್ತಿವೆ. ಅವುಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

೧. ಧರ್ಮಸ್ಥಳ ೨. ಶೃಂಗೇರಿ ಶ್ರೀಮಠ ೩. ಹರಿಹರಪುರ ಮಠ ೪. ಹೊರನಾಡು ದೇವಸ್ಥಾನ ಹೀಗೆ ಈ ಮುಂತಾದ ಸಂಘ ಸಂಸ್ಥೆಗಳು ಆದಿವಾಸಿಗಳ ಪ್ರಗತಿಗೆ ಶ್ರಮಿಸುತ್ತಿವೆ. ಇಂತಹ ಸ್ವಯಂ ಸೇವಾ ಸಂಸ್ಥೆಗಳ ಯೋಜನೆಗಳೆಂದರೆ ವಸತಿ ಒದಗಿಸಿಕೊಡುವುದು, ಕೆಲವರಿಗೆ ಭೂಮಿ ಒದಗಿಸಿಕೊಡುವುದು, ಮನೆಗಳಿಗೆ ವಿದ್ಯುಚ್ಛಕ್ತಿ ಹಾಕಿಸಿಕೊಡುವುದು, ಹಳೆಯ ಮನೆಗಳ ರಿಪೇರಿಗೆ ಹಣದ ಸಹಾಯ ಮಾಡುವುದು, ಶೌಚಾಲಯ ವ್ಯವಸ್ಥೆ, ಶೈಕ್ಷಣಿಕವಾಗಿ ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೂ ಸಹಾಯವನ್ನು ಒದಗಿಸಿಕೊಡುವುದು, ಯುವಕರಿಗೆ ಮತ್ತು ಯುವತಿಯರಿಗೆ ವಿವಿಧ ಸ್ವಯಂ ಉದ್ಯೋಗ ತರಬೇತಿ ನೀಡುವುದು, ಟೈಲರಿಂಗ್, ಕಂಪ್ಯೂಟರ್, ಡ್ರೈವಿಂಗ್, ಕರಕುಶಲವಸ್ತು ತಯಾರಿಕೆ, ಹಪ್ಪಳ, ಸೋಪು, ಕ್ಯಾಂಡಲ್, ಊದುಬತ್ತಿ, ಬೀಜಗಳು, ಉಚಿತ ಹಾಸ್ಟಲ್ ವ್ಯವಸ್ಥೆ, ಸಾಮೂಹಿಕ ವಿವಾಹ, ವೈದ್ಯಕೀಯ ತಪಾಸಣೆ, ಆರ್ಥಿಕವಾಗಿ ಸಾಲವನ್ನು ಕೊಡುವುದು, ಬಡ್ಡಿರಹಿತ ಮತ್ತು ಕಡಿಮೆ ಬಡ್ಡಿದರದಲ್ಲಿ ಸಾಲಕೊಟ್ಟು ಅವರಲ್ಲಿ ಸಂಘಟನಾತ್ಮಕ ಮನೋಭಾವನೆ ಬೆಳೆಸುವುದು, ಸ್ವಯಂಸೇವಾ ಕಾರ್ಯಕರ್ತರಿಂದ, ಅಧಿಕಾರಿಗಳಿಂದ, ಆದಿವಾಸಿಗಳಿಗೆ ತರಬೇತಿ ಶಿಬಿರಗಳನ್ನು ಏರ್ಪಡಿಸುವುದು. ಹೀಗೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಆದಿವಾಸಿಗಳ ಪ್ರಗತಿಗೆ ಶ್ರಮಿಸುತ್ತಿವೆ. ಆದರೆ ಮೇಲಿನ ಯೋಜನೆಗಳು ಗೌಡಾಲು ಜನರು ನೆಲಸಿರುವ ಎಲ್ಲ ಪ್ರದೇಶಗಳಿಗೆ ತಲುಪಿಲ್ಲ. ಹಾಗೆಯೇ ಎಲ್ಲ ಜನರಿಗೂ ಇದರ ಅನುಕೂಲತೆ ಸಿಗಲಿಲ್ಲ. ಕೆಲವು ಜನರು ಮಾತ್ರ ಈ ಯೋಜನೆಗಳ ಲಾಭವನ್ನು ಪಡೆದಿರುತ್ತಾರೆ ಎಂಬುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

ಹೀಗೆ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಬದಲಾವಣೆಯು ನಿರಂತರವಾಗಿ ಮುಂದುವರೆದಿದ್ದು, ಇದು ಮೇಲಿನ ಅಂಶಗಳಿಂದ ಕಂಡುಬರುತ್ತದೆ. ಬದಲಾವಣೆಯು ಹಲವಾರು ಕ್ಷೇತ್ರಗಳಲ್ಲಿ ಆಗುತ್ತಿದ್ದು, ಸಂಸ್ಕೃತಾನುಕರಣದ ಪ್ರಭಾವವೇ ಹೆಚ್ಚು ಪರಿಣಾಮ ಬೀರಿರುವುದು ಕಂಡುಬರುತ್ತದೆ. ಹಾಗೆಯೇ ಗೌಡಾಲು ಬುಡಕಟ್ಟು ಸಮುದಾಯದವರು ಹಲವಾರು ಸಮಸ್ಯೆಗಳನ್ನು ಹೊಂದಿದ್ದು, ಈ ಎಲ್ಲ ಸಮಸ್ಯೆಗಳಲ್ಲಿ ರಾಷ್ಟ್ರೀಯ ಉದ್ಯಾನವನ ನೀತಿಯ ಪರಿಣಾಮದಿಂದ ಇವರಿಗೆ ಯಾವ ರೀತಿಯ ತೊಂದರೆಯಾಗುತ್ತಿದೆ ಎಂದು ಹೇಳಲು ಕಷ್ಟಕರವಾಗಿದೆ. ಬುಡಕಟ್ಟು ಜನರ ಅಭಿವೃದ್ಧಿಗಾಗಿ ಹಲವಾರು ಸ್ವಯಂ ಸೇವಾ ಸಂಸ್ಥೆಗಳು ಶ್ರಮಿಸುತ್ತಿವೆ. ಕೆಲವೊಂದು ಸಂಸ್ಥೆಗಳು ಸ್ವಾರ್ಥ ಮನೋಭಾವನೆಯನ್ನು ಇಟ್ಟುಕೊಂಡು ಕೆಲಸ ಮಾಡುತ್ತಿವೆ. ಅದು ಒಳ್ಳೆಯ ಲಕ್ಷಣವಲ್ಲ. ಬದಲಿಗೆ ಯಾವುದೇ ಸ್ವಯಂ ಸೇವಾ ಸಂಸ್ಥೆಗಳು ಕೆಲಸ ಮಾಡಿದರೂ ಸಹ ಅದರ ಮುಖ್ಯ ಉದ್ದೇಶ ಬುಡಕಟ್ಟು ಜನರ ಪ್ರಗತಿಯಾಗಿರಬೇಕು. ಆಗ ಮಾತ್ರ ಬುಡಕಟ್ಟು ಜನರಲ್ಲಿ ಅಭಿವೃದ್ಧಿಯನ್ನು ಕಾಣಲು ಸಾಧ್ಯವಿದೆ ಎಂಬುದು ಈ ಸಂಶೋಧನೆಯಿಂದ ಕಂಡುಕೊಳ್ಳಬಹುದಾಗಿದೆ. ಹೀಗೆ ಗೌಡಾಲು ಜನರ ಪ್ರಗತಿಗಾಗಿ ಸರಕಾರದ ಕಾರ್ಯಕ್ರಮಗಳು ಸರಿಯಾದ ರೀತಿಯಲ್ಲಿ ಕಾರ್ಯ ರೂಪಕ್ಕೆ ಬಂದಾಗ ಮಾತ್ರ ಈ ಜನರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಸಾಧ್ಯವಿದೆ.

ಹೀಗೆ ಗೌಡಾಲು ಆದಿವಾಸಿ ಸಮುದಾಯಗಳಲ್ಲಿ ಬದಲಾವಣೆಗಳಾಗಲು ಇವರ ಮೇಲೆ ಪ್ರಭಾವ ಬೀರುತ್ತಿರುವ ಹಲವಾರು ಅಂಶಗಳು ಪ್ರಮುಖ ಕಾರಣವಾಗಿವೆ. ಅವುಗಳಲ್ಲಿ ಮುಖ್ಯವಾಗಿ ಈ ಜನರಲ್ಲಿ ಕೆಲವೊಂದು ಸಂಘಟನಾಕಾರರು ಪ್ರಾರಂಭಿಸಿರುವ ಚಳುವಳಿಗಳು ಪ್ರಮುಖ ಪಾತ್ರವನ್ನು ವಹಿಸಿವೆ. ಈ ಚಳುವಳಿಗಳಲ್ಲಿ ಮುಖ್ಯವಾಗಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವಿರೋಧಿ ಒಕ್ಕೂಟ ತನ್ನ ಹೋರಾಟವನ್ನು ನಡೆಸುತ್ತಿದೆ. ಇದು ಸಮಾರು ೧೪ ವರ್ಷಗಳ ಹೋರಾಟವಾಗಿದ್ದು, ಈ ಚಳುವಳಿಯ ಪ್ರಭಾವದಿಂದಾಗಿ ಸಂಘಟಿತರಾದ ಗೌಡಾಲು ಜನರು ವೈಚಾರಿಕವಾಗಿ ಯೋಚಿಸಲು ಪ್ರಾರಂಭಿಸಿದ್ದಾರೆ. ಹಾಗೆಯೇ ಇನ್ನೂ ಹಲವಾರು ಚಳುವಳಿಗಳನ್ನು ನೋಡುವುದಾದರೆ, 'ಚಿಕ್ಕಮಗಳೂರು ಆದಿವಾಸಿ ಗಿರಿಜನ ಹಿತರಕ್ಷಣಾ ಸಮಿತಿ', 'ನಲ್ಲಿಬೀಡು ಸಂರಕ್ಷಣಾ ಸಮಿತಿ', 'ಗಿರಿಜನ ಕ್ಷೇಮಾಭಿವೃದ್ಧಿ ಸಂಘ', 'ಕರಾವಳಿ ಮತ್ತು ಮಲೆನಾಡು ಉಳಿಸಿ ಹೋರಾಟ ವೇದಿಕೆ', 'ಆದಿವಾಸಿ ಮಹಿಳಾ ಒಕ್ಕೂಟ', 'ಬುಡಕಟ್ಟು ಅರಣ್ಯ ಹಕ್ಕು ಹೋರಾಟ ಸಮಿತಿ', 'ಬಗರ್ ಹುಕುಂ ಹೋರಾಟ ಸಮಿತಿ', ಹೀಗೆ ಹಲವಾರು ಚಳುವಳಿಗಳಲ್ಲಿ ಭಾಗಿಯಾದ ಆದಿವಾಸಿಗಳು ಅವರ ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ತಿಳುವಳಿಕೆ ಮೂಡಿಸಿಕೊಂಡಿರುವುದೇ ಅವರಲ್ಲಿ ಉಂಟಾಗುತ್ತಿರುವ ಎಲ್ಲ ರೀತಿಯ ಬದಲಾವಣೆಗಳಿಗೂ ಮೂಲ ಕಾರಣವಾಗಿದೆ ಎಂಬುದನ್ನು ಕಂಡುಕೊಳ್ಳಬಹುದು. ಅಷ್ಟೇ ಅಲ್ಲದೆ ಆಧುನಿಕ ಶಿಕ್ಷಣದ ಪ್ರಭಾವವೂ ಇವರಲ್ಲಿ ಹೊಸ ಚೇತನವನ್ನು ಮೂಡಿಸಿ, ಅವರನ್ನು ಬದಲಾವಣೆಯ ಹೊಸ ಹಾದಿಯತ್ತ ಕೊಂಡೊಯ್ಯುತ್ತಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದು.

ಇವರು ಗೃಹೋಪಯೋಗಿ ವಸ್ತುಗಳ ತಯಾರಿಕೆಯಲ್ಲಿ ತಯಾರಿಸುತ್ತಿರುವ ಚಾಪೆ, ಪರಕೆ, ಗೊರಬು, ಇಳಿಕೆ, ಶಿಕ್ಕ, ಶಿಬ್ಲ, ಮರದ ಚಿಟ್ಟೆ, ಬಾಗ್ ಮರಿಗೆ, ಗೋಮಾಲೆ ಇವುಗಳ ಉತ್ಪಾದನೆಯ ಪ್ರಮಾಣ ಇತ್ತೀಚಿನ

ದಿನಗಳಲ್ಲಿ ಕಡಿಮೆಯಾಗುತ್ತಿದೆ. ವೃತ್ತಿಗಳು ಈಗಿನ ದಿನಗಳಲ್ಲಿ ಬದಲಾಗುತ್ತಿವೆ. ಈ ಗೃಹ ಕೈಗಾರಿಕೆಗಳ ಪ್ರಮಾಣವು ಇಳಿಕೆಯಾಗುತ್ತಿದೆ ಇವುಗಳನ್ನು ಮಾಡುವವರು ಇಲ್ಲದಂತಾಗಿದೆ.

**೪.೫. ಗೌಡಾಲು ಸಮುದಾಯ ಮತ್ತು ಆಧುನಿಕ ಮುಖಾಮುಖಿ**

ಭಾರತದ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಚರ್ಚಿಸುವಾಗ ಭಾರತೀಯ ಸಮಾಜದ ರಚನೆ ಎಷ್ಟರ ಮಟ್ಟಿಗೆ ಹೆಣೆದುಕೊಂಡು ಬಂದಿದೆ ಎಂಬುದನ್ನು ಅವಲೋಕಿಸಬೇಕಾದುದು ಇಂದು ಸಂಶೋಧನೆಯ ದೃಷ್ಟಿಯಿಂದ ಅನಿವಾರ್ಯವಾಗುತ್ತದೆ. ಆದ್ದರಿಂದ ಬುಡಕಟ್ಟು ಸಮುದಾಯಗಳು ಪ್ರಾಚೀನ ಕಾಲದಿಂದಲೂ ಬದುಕಿನ ಸಂಘರ್ಷದಲ್ಲಿ ತೊಳಲಾಡುತ್ತಲೇ ಬಂದಿರುವುದರಿಂದ ಬುಡಕಟ್ಟು ಸಮುದಾಯಗಳ ಜ್ಞಾನ, ಪರಂಪರೆ, ದೇಶಿಯತೆಯನ್ನು ಸಾರುವ ಯಾವುದೇ ವೃತ್ತಿಯ ಕುಲಕಸುಬುಗಳು ಪಲ್ಲಟಗೊಳ್ಳುತ್ತಲೇ ಬಂದಿರುವುದು ಎಲ್ಲರಿಗೂ ತಿಳಿದ ಸಂಗತಿಯೇ. ಈ ಹಿನ್ನೆಲೆಯಿಂದ ತಳ ಸಮುದಾಯಗಳು ಆರ್ಯರು ಮತ್ತು ಪ್ರಭುತ್ವದ ಸಮುದಾಯಗಳ ಮಧ್ಯ ವಂಶಪರಂಪರೆಯಾಗಿ ಶೋಷಣೆಗೆ ಒಳಗಾಗುತ್ತಲೇ ಬಂದಿರುವುದಲ್ಲದೆ ತಮ್ಮ ಅಸ್ತಿತ್ವವನ್ನು ಹಾಗೂ ತಮ್ಮ ಬದುಕನ್ನು ಬೇರೆಯವರ ಹಿತಾಸಕ್ತಿಗಾಗಿ ಅಲ್ಲದೆ ಮೇಲ್‌ಸ್ತರದವರ ಅಭಿವೃದ್ಧಿಗಾಗಿ ದಿನವಿಡೀ ದುಡಿಯುತ್ತಾ ತಮ್ಮ ಜೀವನವನ್ನು ಪರರಿಗಾಗಿಯೇ ಕಳೆಯುತ್ತಾ ಬಂದಿರುವುದು ಇಂದಿನದಲ್ಲ ಎಂಬ ಮಾತು ಮಾತ್ರ ಸತ್ಯ ಸಂಗತಿ. ಹೀಗಾಗಿ ಭಾರತದಲ್ಲಿರುವ ಬುಡಕಟ್ಟುಗಳ ಜೀವನದ ರೂಪರೇಷಗಳು ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತವೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯು ಪರಿವರ್ತನೆಯ ಕಡೆ ಸಾಗುತ್ತಿದೆ ಎಂದು ಎಲ್ಲರಿಗೂ ಗೋಚರಿಸುವ ಹಿನ್ನೆಲೆಯನ್ನು ಅವಲೋಕಿಸದರೆ ಬುಡಕಟ್ಟುಗಳಿಗೂ ಮತ್ತು ಆಧುನಿಕತೆಗೆ ಎಷ್ಟರ ಮಟ್ಟಿಗೆ ಸಂಪರ್ಕದ ಸೇತುವೆ ಏರ್ಪಟ್ಟಿದೆ ಎಂಬುದು ಇಲ್ಲಿ ಚರ್ಚಿಸಬೇಕಾಗಿದೆ.

ಯಾವುದೇ ಸಮುದಾಯಕ್ಕೆ ಆಧುನಿಕತೆಯ ಶೈಲಿಯ ಬದುಕು ಮತ್ತು ಆಧುನಿಕತೆಯೆಂದು ಕರೆಸಿಕೊಳ್ಳುವ ಪರಿಕರಗಳು ಮೂಲ ವಾಸಿಗಳಾದ ಕಾಡಿನೊಳಗೆ ಇರುವ ಬುಡಕಟ್ಟುಗಳ ಬದುಕಿಗೆ ಯಾವುದೇ ಕಾರಣಕ್ಕೂ ಪೂರಕವಾಗಿರದೆ ಅವರ ಬದುಕನ್ನು ಅತಂತ್ರ ಸ್ಥಿತಿಗೆ ತೆಗೆದುಕೊಂಡು ಹೋಗುವುದಕ್ಕೆ ಪ್ರೇರಕವಾಗಿರುತ್ತವೆ ಎಂಬ ಮಾತು ಮಾತ್ರ ಸತ್ಯವಾಗಿದೆ.

ಆಧುನಿಕತೆಯೆಂಬುದು ಇಂದಿನದಲ್ಲ. ಪಾಶ್ಚಾತ್ಯರು ಯಾವಾಗ ಭಾರತಕ್ಕೆ ಬಂದರೋ ಅಂದಿನಿಂದಲೇ ನಮ್ಮ ಗ್ರಾಮೀಣ ಬದುಕು ತನ್ನ ಬದುಕಿನಲ್ಲಿ ಪರಿವರ್ತನೆಯ ದಾರಿಯನ್ನು ಹಿಡಿಯಿತು ಎಂದು ಹೇಳಲಾಗುವುದು. ಪಾಶ್ಚಿಮಾತ್ಯರ ಆಧುನಿಕತೆಯ ಪ್ರಭಾವ ಈಗಲೂ ಆಗದಿರುವ ಎಷ್ಟೋ ಬುಡಕಟ್ಟುಗಳಲ್ಲಿ ಗೌಡಾಲು ಸಮುದಾಯವು ಒಂದು. ಕಾಡಿನ ಸುಂದರ ಪರಿಸರದಲ್ಲಿ ಪ್ರಕೃತಿದತ್ತವಾಗಿ ಬಂದ ಗಿಡ ಮರಗಳಿಂದ ಆಶ್ರಯವನ್ನು ಪಡೆದು ತನ್ನ ಬದುಕನ್ನು ಕಟ್ಟಿಕೊಂಡ ಬುಡಕಟ್ಟುಗಳಿಗೆ ನಾಡಿನ ವಿಭಿನ್ನವಾದ ಶೈಲಿಯ ಜೀವನವನ್ನು ಕಂಡರೆ ಭಯಪಡುವಾಗ ಆಧುನಿಕತೆಯನ್ನು ಒಪ್ಪಿಕೊಳ್ಳುವ ಮಾತು ಎಲ್ಲಿಂದ ಬರಬೇಕು. ಬಂದರೂ ಆ ಬದುಕಿಗೆ ತಕ್ಕಂತೆ ಜೀವನದಲ್ಲಿ ದುಡಿಮೆ ಇಲ್ಲವಾಗಿದೆ. ಆದ್ದರಿಂದ ಆಧುನಿಕತೆಯನ್ನು ಭಾರತದಲ್ಲಿ ಹುಟ್ಟುಹಾಕಿದವರು

ಮೊದಲು ವಿದೇಶಿಯರಾಗಿದ್ದರಿಂದ ಭಾರತವನ್ನು ಮತ್ತು ಭಾರತದಲ್ಲಿದ್ದ ಸಮುದಾಯಗಳನ್ನು ಶೋಷಿಸಿ ಇಲ್ಲಿದ್ದ ನೈಸರ್ಗಿಕ ಸಂಪತ್ತನ್ನು ದೋಚಿಕೊಂಡು ಹೋದ ಪರಿಯನ್ನು ಯಾರೂ ಮರೆಯುವಂತಿಲ್ಲ. ಇಲ್ಲಿಯ ಬದುಕು ತನ್ನ ಮೂಲ ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಾ ಬಂದಿದೆ. ಅಲ್ಲದೆ ಪ್ರಭುತ್ವವನ್ನು ತನ್ನದಾಗಿಸಿಕೊಂಡು ಬಂದಿದ್ದ ಮೇಲ್‌ಸ್ತರದ ಸಾಮಾಜಿಕ ವ್ಯವಸ್ಥೆಯು ಬುಡಕಟ್ಟುಗಳಲ್ಲಾದ ಗಣವ್ಯವಸ್ಥೆಯನ್ನು ನಾಶ ಮಾಡಿ ಆದಿಮ ಸಮಾಜದ ಬದುಕನ್ನು ಛಿದ್ರ ಛಿದ್ರವಾಗಿ ಮಾಡಿ ಬುಡಕಟ್ಟುಗಳನ್ನು ಗುಲಾಮರಾಗಿ ಮಾಡಿತು. ಅವರ ದೈವ ಅಥವಾ ದೇವರುಗಳನ್ನು ವಶಪಡಿಸಿಕೊಂಡು ಪ್ರಭುತ್ವವು ತಲತಲಾಂತರವಾಗಿ ಬದುಕನ್ನು ಸಾಗಿಸಿಕೊಂಡು ಬಂದಿತು. ಆದುನಿಕತೆಯ ಹೆಸರಿನಲ್ಲಿ ಬಂಡವಾಳಶಾಹಿಗಳ ಮುಖವಾಡವನ್ನು ಹಾಕಿಕೊಂಡಿರುವ ವಿದೇಶಿಯ ಕೈಗೊಂಬೆಯಂತೆ ಬುಡಕಟ್ಟು ಬದುಕಿನಲ್ಲಿ ಆಟವನ್ನು ಆಡುತ್ತಿರುವವರ ಮಧ್ಯ ಸಿಕ್ಕಿಕೊಂಡ ಪಶ್ಚಿಮಘಟ್ಟದ ಬುಡಕಟ್ಟುಗಳು ಮತ್ತು ಇತರೆ ಕೆಳಸಮುದಾಯಗಳ ಬದುಕು ಇಂದು ಯಂತ್ರಾಧಾರಿತ ಜೀವನ ಕ್ರಮವಾಗಿದೆ. ಇಂದು ಯಾರಾದರೂ ಬುಡಕಟ್ಟು ಸಮುದಾಯಗಳನ್ನು ಅವರಿಗೆ ಇಷ್ಟವಾಗುವಂತೆ ಬಳಸಿಕೊಳ್ಳಬಹುದಾಗಿದೆ. ಆದರೆ ಈ ರೀತಿಯ ವರ್ತನೆಗೆ ಪ್ರತಿಭಟಿಸಿದರೆ ಸಿಗುವ ಫಲವೆಂದರೆ ಶೂನ್ಯವಾಗಿರುತ್ತದೆ. ಆದ್ದರಿಂದ ಆಧುನಿಕತೆಯಂದರೆ ಯಾವ ರೂಪದ್ದು, ಅದು ಬುಡಕಟ್ಟುಗಳಿಗೆ ಯಾವ ರೀತಿಯಲ್ಲಿ ಅಭಿವೃದ್ಧಿಗೆ ಪೂರಕವಾಗಿರುತ್ತದೆ ಎಂಬುದನ್ನು ಕುರಿತು ಇಂದಿನ ದಿನಮಾನಗಳಲ್ಲಿ ಚರ್ಚಿಸಬೇಕಾದ ಸಂಗತಿಯಾಗಿದೆ.

ಆಧುನಿಕತೆಯು ನವೀನತೆಯನ್ನು ರೂಪಿಸುವ ವಿಧಾನವಾದರೂ ಅದು ಬುಡಕಟ್ಟು ಸಮುದಾಯಗಳಿಗೆ ಮುಳ್ಳಾಗಿದೆಯೇ ವಿನಾ ವರವಾಗಿಲ್ಲವೆಂಬ ಮಾತು ಮಾತ್ರ ನಿಜ ಸಂಗತಿಯಾಗಿದೆ. ಬುಡಕಟ್ಟುಗಳು ಬದುಕುವ ಪರಿಸರದಿಂದ ಆಧುನಿಕತೆಯ ನೆಪದಲ್ಲಿ ಕಾಡಿನಿಂದ ನಾಡಿಗೆ ಯಾವುದೇ ಸೌಲಭ್ಯವನ್ನು ಕೊಡದೆ ನೀರಿನಿಂದ ಮೀನನ್ನು ಹೊರಗೆ ಹಾಕುವಂತೆ ಬೀದಿಯ ಮಕ್ಕಳಂತೆ ಮಾಡಿರುವುದು ನೆನಪಿಸಿಕೊಂಡರೆ ಯಾವುದೇ ಸಂಶೋಧಕರಿಗೆ ರೋಮಾಂಚನವಾಗದೆ ಇರದು. ಆದ್ದರಿಂದ ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಬುಡಕಟ್ಟುಗಳಿಗೆ ಆಧುನಿಕತೆಯ ಯಾವುದೇ ಸೌಲಭ್ಯಗಳು ದೊರೆಯದೆ ಇರುವುದು ತಿಳಿಯುತ್ತದೆ. ಅಲ್ಲದೆ ಗೌಡಾಲು ಸಮುದಾಯವು ಆಧುನಿಕ ಕರ್ನಾಟಕದಲ್ಲಿ ಅನೇಕ ರೀತಿಯ ಸಮಸ್ಯೆಗಳಿಂದ ಬಳಲುತ್ತಿದ್ದರೂ ಆಧುನಿಕತೆಯನ್ನು ಮೈಗೂಡಿಸಿಕೊಳ್ಳಲು ಸಾಧ್ಯವಾಗದೆ ಸಂಘರ್ಷದ ಮನೋಭಾವನೆಯಲ್ಲಿ ಸಿಕ್ಕಿಹಾಕಿಕೊಂಡಿದೆ. ಅವರ ಬದುಕೇ ಅರಣ್ಯ ಅಧಿಕಾರಿಗಳು ಹಾಗೂ ಕಾಡಿನ ಮಧ್ಯೆ ಸಂಘರ್ಷಮಯವಾಗಿರುವುದಲ್ಲದೆ ಆಧುನಿಕತೆಯ ಜೀವನದ ರೂಪರೇಷೆಗಳು ವಿಶೇಷತೆಯಿಂದ ಕಾಣುವಂತಾಗಿದೆ.

ಕರ್ನಾಟಕವು ಏಕೀಕರಣಗೊಂಡ ನಂತರ ಆರ್ಥಿಕಾಭಿವೃದ್ಧಿಯು ತ್ವರಿತಗೊಳ್ಳುವಂತಹ ಅನೇಕ ಪ್ರಯತ್ನಗಳು ನಡೆದಿವೆ. ಆದರೆ ಇಂದಿಗೂ ಆರ್ಥಿಕ ಅಸಮಾನತೆ ಮುಂದುವರಿದುಕೊಂಡು ಬಂದಿದೆ. ಇಲ್ಲಿ ಗೌಡಾಲು ಸಮುದಾಯವು ಕೂಡ ಈ ರೀತಿಯ ಆರ್ಥಿಕ ಅಸಮಾನತೆಯಲ್ಲಿ ಸಿಕ್ಕಿಕೊಂಡಿದೆ. ಆಧುನಿಕತೆಯ ಸೋಗನ್ನು ಹಾಕಿಕೊಂಡ ಕೈಗಾರಿಕೀಕರಣವು ಪರಿಸರವನ್ನು ನಾಶಮಾಡುವುದಷ್ಟೇ ಅಲ್ಲದೆ ಗ್ರಾಮೀಣ ಬದುಕಿನ ಹಾಗೂ ಬುಡಕಟ್ಟುಗಳ ಸಾಂಸ್ಕೃತಿಕ ಬದುಕಿನ ದಾರಿಯನ್ನು ದಿಕ್ಕು ತಪ್ಪಿಸುತ್ತಿರುವುದು ಗೋಚರಿಸುತ್ತಿದೆ. ಆದ್ದರಿಂದ

ಗೌಡಾಲು ಸಮುದಾಯವು ಆಧುನಿಕತೆಯಿಂದ ಅಭಿವೃದ್ಧಿಯ ಕಡೆ ಮುಖ ಮಾಡಿರುವುದು ನಿಜವಾದರೂ ಕೂಡ ನಿರ್ದಿಷ್ಟವಾದ ಬದುಕಿನ ದಾರಿ ಸಿಗದಾಗಿದೆ. ಆಧುನಿಕತೆಯಿಂದ ಗೌಡಾಲು ಸಮುದಾಯವು ತನ್ನ ಉತ್ಪಾದನಾ ವ್ಯವಸ್ಥೆಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾದ ಪರಿಸ್ಥಿತಿ ಬಂದು ಒದಗಿದೆ.

ಗೌಡಾಲು ಬುಡಕಟ್ಟು ಇಂದಿನ ದಿನಮಾನಗಳಲ್ಲಿ ಆಧುನಿಕತೆಯನ್ನು ಒಪ್ಪಿಕೊಳ್ಳಲಿಕ್ಕೆ ಆಗದೆ ಕಾಡಿನಲ್ಲಿ ಅವರದೇ ಆದ ತಿಳುವಳಿಕೆಯಲ್ಲಿ ಕಾಡಿನಲ್ಲಿ ಸಿಗುವ ಗೆಡ್ಡೆ ಗೆಣಸು ಮತ್ತು ಅರಣ್ಯಉತ್ಪನ್ನಗಳನ್ನು ಸಂಗ್ರಹಿಸುತ್ತಾ ಬೇಟೆ, ಪಶುಪಾಲನೆ ಮತ್ತು ಕುಮ್ರಿ ಬೇಸಾಯದ ಮೂಲಕ ಬದುಕನ್ನು ಕಟ್ಟಿಕೊಂಡು ನಾಡಿನ ಸಂಪರ್ಕವಿಲ್ಲದೆ ಬದುಕುವ ಮೂಲ ಬುಡಕಟ್ಟಾಗಿರುವುದರಿಂದ ಆಧುನಿಕತೆಯು ಯಾವ ರೂಪದಲ್ಲಿಯೂ ಗೌಡಾಲುಗಳಿಗೆ ಉಪಯುಕ್ತವಾಗದೆ ಇರುವುದು ಕಂಡುಬರುತ್ತದೆ. ಇವರು ವಾಸ ಮಾಡುವ ಹಳ್ಳಿಗಳಾದ ಮೇಗೂರು, ಅಡಿಕೆಸು, ಕರೆಹಟ್ಟಿ, ದೇವಿಸಾರು, ಆದಿ, ಉಡುತ್ತಾಳ್, ಕಲ್ಲುಗುಡ್ಡೆ ಮೈಲ್‌ಪಾಲು ಮುಂತಾದ ಹಳ್ಳಿಗಳಿಗೆ ಸರಿಯಾಗಿ ಪ್ರಾಥಮಿಕ ಸೌಲಭ್ಯಗಳು ತಲುಪದೇ ಇರುವಾಗ ಆಧುನಿಕತೆಯ ಕಲ್ಪನೆ ಎಲ್ಲಿಂದ ಬರಬೇಕು. ಆದ್ದರಿಂದ ಗೌಡಾಲುಗಳು ಇಲ್ಲಿಯವರೆಗೂ ಆಧುನಿಕತೆಯ ಸವಿಯನ್ನು ಉಂಡವರಲ್ಲ ಎಂಬ ಮಾತು ಮಾತ್ರ ನಿಜ ಸಂಗತಿಯಾಗಿದೆ. ಅವರಿಗೆ ಸರ್ಕಾರದ ಮೂಲಭೂತ ಸೌಲಭ್ಯಗಳು ಇಲ್ಲಿಯವರೆಗೂ ಸರಿಯಾಗಿ ದೊರೆಯದೇ ಇರುವುದರಿಂದ ಮತ್ತು ನಾಡಿನ N.G.O ಗಳಂತಹ ಸಮಾಜ ಸುಧಾರಕರು ಹಾಗೂ ಅಧಿಕಾರಿಗಳ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಸಮುದಾಯವಾಗಿರುವುದರಿಂದ ಗೌಡಾಲು ಸಮುದಾಯವು ಪ್ರಪಂಚದ ನಾಗರಿಕರು ಎಂದು ಹೇಳುವ ಸಮಾಜದಿಂದ ದೂರವಿರುವ ಬುಡಕಟ್ಟು ಸಮುದಾಯವಾಗಿದೆ. ಈ ಎಲ್ಲ ಅಂಶಗಳಿಂದ ೨೧ನೇ ಶತಮಾನದ ಕಾಲದಲ್ಲಿ ಸ್ವಂತ ಶ್ರಮದಿಂದ ದುಡಿದು ಬೇರೆಯವರ ಮನೆ ಮತ್ತು ಗದ್ದೆಗಳಲ್ಲಿ ದಿನಗೂಲಿಯಾಗಿ ಜೀವಿಸುವುದಲ್ಲದೆ ಅವರದೇ ಆದ ಸಾಮಾಜಿಕ ಬಿಕ್ಕಟ್ಟುಗಳಲ್ಲಿ ಬದುಕು ಸಾಗುತ್ತಿರುವ ಸಂದರ್ಭದಲ್ಲಿ ನಗರೀಕರಣವೆಂದು ಹೇಳಿಕೊಂಡು ನಾಡಿನ ಗಣ್ಯ ವ್ಯಕ್ತಿಗಳು ಕಾಡಿನಲ್ಲಿರುವ ಸಂಪತ್ತನ್ನು ರಕ್ಷಣೆ ಮಾಡುವುದನ್ನು ಬಿಟ್ಟು ವಿದೇಶಿಯರು ದೋಚಿದ ಪರಿಯಲ್ಲಿಯೇ ಆಧುನಿಕತೆಯ ಮುಖವಾಡ ಧರಿಸಿ ಬುಡಕಟ್ಟುಗಳನ್ನು ಮುಖ್ಯವಾಹಿನಿಗೆ ತರುತ್ತೇವೆಂದು ಕಾಡಿನೊಳಗೆ ನುಸುಳಿ ಇಡೀ ಅರಣ್ಯವನ್ನು ಕಡಿದು ಪಶ್ಚಿಮ ಘಟ್ಟದ ಸಂಪತ್ತನ್ನು ನಾಶ ಮಾಡುತ್ತಿದ್ದಾರೆ. ಆದ್ದರಿಂದ ಗೌಡಾಲು ಸಮುದಾಯವು ನಾಡಿನ ಜನರಿಗೆ ಮತ್ತು ಅಧಿಕಾರಿಗಳಿಂದ ರೂಪಿತವಾದ ಹೊಸದಾದ ವ್ಯವಸ್ಥೆಯೆಂದರೆ ಭಯಪಡುತ್ತಾರೆ.

ವಸಾಹತುಶಾಹಿ ಕಾಲಘಟ್ಟದಿಂದ ಇಲ್ಲಿಯವರೆಗೆ ಬುಡಕಟ್ಟುಗಳನ್ನು ಆಧುನೀಕರಣ ಸಮಾಜದ ಕಡೆ ಮುಖಮಾಡಿಸಿ ಅಭಿವೃದ್ಧಿ ಮಾಡುತ್ತೇವೆ ಎಂದು ಹೇಳಿದ ಎಲ್ಲ ಯೋಜನೆಗಳು ಬುಡಕಟ್ಟು ಸಮುದಾಯಗಳ ಬಾಗಿಲನ್ನು ಮುಟ್ಟಿಲ್ಲ. ಹಾಗಾಗಿ ಕರ್ನಾಟಕದ ಪಶ್ಚಿಮ ಘಟ್ಟದ ಬುಡಕಟ್ಟುಗಳು ಒಂದಲ್ಲ ಒಂದು ರೀತಿಯ ಶೋಷಣೆಗೆ ಒಳಗಾಗುತ್ತಲೇ ಬಂದಿರುವುದನ್ನು ಸಂಶೋಧನೆಯ ದೃಷ್ಟಿಯಿಂದ ಅಲ್ಲಗಳೆಯಲಾಗುವುದಿಲ್ಲ. ಏಕೆಂದರೆ ಆಧುನಿಕತೆಯ ನೆಪದಲ್ಲಿ ಕಾಡನ್ನು ಕಡಿದು ಅಣೆಕಟ್ಟುಗಳನ್ನು ನಿರ್ಮಾಣ ಮಾಡಿ ಅರಣ್ಯದಲ್ಲಿದ್ದವರನ್ನು ಬೀದಿ ಪಾಲು ಮಾಡುತ್ತಿರುವುದಲ್ಲದೆ ಬುಡಕಟ್ಟುಗಳು ಸ್ವಂತ ದುಡಿಮೆ ಮಾಡಿ ಜೀವಿಸುತ್ತಿದ್ದ ವ್ಯವಸ್ಥೆಯನ್ನು

ತಪ್ಪಿಸಿ, ಬಂಡವಾಳಶಾಹಿಗಳು ಕಾಡಿನ ಪಶ್ಚಿಮಘಟ್ಟದಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸುವುದರ ಮೂಲಕ ಪರಿಸರವನ್ನು ಮಾಲಿನ್ಯ ಮಾಡುತ್ತಿರುವುದನ್ನು ಅವಲೋಕಿಸಿದರೆ ಗೌಡಾಲು ಮತ್ತು ಇತರೆ ಬುಡಕಟ್ಟುಗಳ ದಿನನಿತ್ಯದ ಕಾಡಿನ ಆಶ್ರಯದ ಬದುಕಿಗೆ ಎಷ್ಟರ ಮಟ್ಟಿಗೆ ಆಧುನಿಕತೆ ಪೂರಕವಾಗಿದೆ ಎಂದು ವಿಮರ್ಶೆ ಮಾಡಿಕೊಳ್ಳಬೇಕಾಗುತ್ತದೆ.

ಕಾಡಿನ ಉತ್ಪನ್ನಗಳಿಗೆ ಅನುಗುಣವಾಗಿದ್ದ ಬುಡಕಟ್ಟುಗಳ ಜೀವನ ಕ್ರಮಕ್ಕೆ ಆಧುನಿಕತೆಯ ಸೆರಗು ಬಡಿದ ಕೂಡಲೇ ಅವರ ಪಾರಂಪರಿಕ ಜ್ಞಾನ ಸಂಪತ್ತು ಮತ್ತು ಜೀವನ ಪದ್ಧತಿಯಲ್ಲಿ ಸ್ಥಿತ್ಯಂತರಗಳಾಗಿವೆ. ಕಾಡನ್ನು ಆಸರೆಯಾಗಿ ನಂಬಿಕೊಂಡು ಬದುಕುತ್ತಿದ್ದ ಬುಡಕಟ್ಟು ಜನರ ಜೀವನವನ್ನು ಆವರಿಸುತ್ತಿದೆ. ಆದರೆ ಭಾರತೀಯ ಸಾಂಸ್ಕೃತಿಕ ಬದುಕಿನ ಒಂದು ಭಾಗವಾಗಿದ್ದ ಗೌಡಾಲು ಬದುಕು ಆಧುನಿಕತೆಯಿಂದ ಪಲ್ಲಟಗೊಳ್ಳುತ್ತಿದೆ. ನಾಡಿನ ಬದುಕಿನ ಸಾಧನಗಳೆಲ್ಲವೂ ಕಾಡಿಗೆ ಬರುತ್ತಿವೆ. ಈ ಸಮುದಾಯವನ್ನು ಅಭಿವೃದ್ಧಿಯ ಕಡೆ ತೆಗೆದುಕೊಂಡು ಹೋಗುವ ಬದಲು ಪ್ರಾಚೀನ ಕಾಲದ ಗುಲಾಮಗಿರಿಯ ಸಾಮಾಜಿಕ ವ್ಯವಸ್ಥೆಯ ಬದುಕಿಗೆ ತೆಗೆದುಕೊಂಡು ಹೋಗುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಮಾಹಿತಿದಾರರಿಂದ ಬಂದ ಉತ್ತರಗಳು ನಮಗೆ ಆಧಾರವಾಗಿ ನಿಲ್ಲುತ್ತವೆ. ಭೂಮಾಲೀಕರು, ಬಂಡವಾಳಶಾಹಿಗಳು, ಇಂದಿನ ಸರ್ಕಾರದ ಪೂರ್ವಾಪರ ಆಲೋಚನೆಯಿಲ್ಲದ ಬುಡಕಟ್ಟು ಸಮುದಾಯಗಳ ಕುರಿತ ಯೋಜನೆಗಳೆಲ್ಲವೂ ಗೌಡಾಲು ಸಮುದಾಯದ ಬದುಕಿಗೆ ಆಸರೆಯಾಗಿ ನಿಲ್ಲದೆ ಬುಡಕಟ್ಟುಗಳನ್ನು ದಾರಿ ತಪ್ಪಿಸುವ ಯೋಜನೆಗಳಾಗಿವೆ.

ಗೌಡಾಲು ಬುಡಕಟ್ಟು ಆಧುನಿಕತೆಗೆ ಮುಖಾಮುಖಿಯಾಗುತ್ತಿದೆ. ಆದರೆ ಯಾವುದೇ ಅಭಿವೃದ್ಧಿಯ ಚಹರೆಗಳು ಇಲ್ಲಿಯವರೆಗೆ ಗೋಚರಿಸದೆ ಇರುವುದು ಕಂಡುಬರುತ್ತದೆ. ಆದ್ದರಿಂದ ಇಲ್ಲಿ ತಿಳಿದುಕೊಳ್ಳಲೇಬೇಕಾಗಿರುವುದೇನೆಂದರೆ, ಯಾಂತ್ರೀಕೃತ ನಾಗರಿಕತೆ, ವಸಾಹತುಶಾಹಿ, ಕೈಗಾರಿಕೀಕರಣ ಮುಂತಾದ ವೈಜ್ಞಾನಿಕ ಆವಿಷ್ಕಾರಗಳು ಇಡೀ ಮಾನವ ಕುಲವನ್ನು ಸ್ಪರ್ಧೆಗೀಡುಮಾಡಿವೆ ಎಂದು ಹೇಳಲಾಗುತ್ತಿದ್ದರೂ ಕೂಡ ಬುಡಕಟ್ಟು ಸಮುದಾಯಗಳಿಗೆ ಪೂರಕವಾಗಿರದೆ ಇರುವುದು ಗಮನಾರ್ಹವಾದ ಸಂಗತಿಯಾಗಿದೆ.

ಭಾರತದ ಸಮಾಜವು ಜಾತಿ ಶ್ರೇಣೀಕರಣ ಮತ್ತು ವರ್ಗ ಶ್ರೇಣೀಕರಣಗಳಿಂದ ಕೂಡಿದೆ. ಕೆಳಜಾತಿಗಳು ಜಾತಿ ಶೋಷಣೆ ಮತ್ತು ವರ್ಗ ಶೋಷಣೆ ಎರಡನ್ನೂ ಅನುಭವಿಸುತ್ತಿರುವುದು ತಿಳಿಯುತ್ತಿದೆ. ಇದು ಬುಡಕಟ್ಟು ಸಮುದಾಯಗಳಲ್ಲಿಯೂ ದಿನೇ ದಿನೇ ಹಳೆಯ ರೂಪಗಳನ್ನು ಬದಲಾಯಿಸಿಕೊಳ್ಳುತ್ತಾ ಹೊಸರೂಪ ತಾಳುತ್ತಾ ಇತ್ತೀಚಿನ ದಿನಮಾನಗಳಲ್ಲಿ ಹೆಚ್ಚಾಗಿದೆ. ಏಕೆಂದರೆ ಆಧುನಿಕ ಆರ್ಥಿಕ ಮಾನದಂಡಗಳು ಸಮಾನವಾಗಿ ಹಂಚಿಕೆಯಾಗದೆ ಸಮಾನ ಆರ್ಥಿಕ ಸಮಸ್ಯೆಗಳ ಪರಿಹಾರಕ್ಕಾಗಿ ಮತ್ತು ರಾಜಕೀಯ ಅಧಿಕಾರಕ್ಕಾಗಿ ಭಾರತದ ಚರಿತ್ರೆಯ ಉದ್ದಕ್ಕೂ ಅನೇಕ ಹೋರಾಟಗಳು ನಡೆದಿರುವುದು ಎಲ್ಲರಿಗೂ ತಿಳಿದ ಸಂಗತಿಯೇ. ಈ ಹಿನ್ನೆಲೆಯನ್ನು ಗಮನಿಸಿದರೆ ಗೌಡಾಲು ಸಮುದಾಯವು ಆರ್ಥಿಕ ಸಮಸ್ಯೆಯಿಂದ ಬಳಲುತ್ತಿರುವುದಲ್ಲದೆ ಸಮಾಜಪರ ಹೋರಾಟದ ಸಂಘಟನೆಗಳಿಗೆ ಎಡೆಮಾಡಿಕೊಟ್ಟಿದೆ. ಆದರೂ ಆಧುನಿಕತೆಯ ಅಭಿವೃದ್ಧಿಯ ಮಾನದಂಡಗಳು ಸಮರ್ಪಕವಾಗಿ ಜಾರಿಗೆ ಬರದಿರುವುದು ಗೌಡಾಲುಗಳ ಪಾಲಿಗೆ ದುರಂತವೇ ಸರಿ.

ಸಮಾಜದಲ್ಲಿರುವ ಜಾತಿ ಶ್ರೇಣೀಕರಣ, ಭೂಮಾಲೀಕರ ಧೋರಣೆಗಳು, ಪ್ರಭುತ್ವ ಆಧಾರಿತ ಕೆಲವು ಸರಕಾರಿ ಸೌಲಭ್ಯಗಳು, N.G.Oಗಳ ಸಾಮ್ರಾಜ್ಯಶಾಹಿ ನೀತಿಗಳೆಲ್ಲವೂ ಗೌಡಾಲು ಸಮುದಾಯಕ್ಕೆ ಆಧುನಿಕತೆಯ ಪರಿಕರಗಳನ್ನು ಕುರಿತು ಸರಿಯಾಗಿ ಮಾಹಿತಿ ನೀಡದಿರುವುದರಿಂದ ನಗರೀಕರಣವು ಬುಡಕಟ್ಟು ಸಮುದಾಯವನ್ನು ಅಭಿವೃದ್ಧಿಯ ಪಥದತ್ತ ತೆಗೆದುಕೊಂಡು ಹೋಗದೆ ಅತಂತ್ರ ಸ್ಥಿತಿಯ ವಾತಾವರಣವನ್ನು ಸೃಷ್ಟಿ ಮಾಡಿದೆ. ಗೌಡಾಲು ಬುಡಕಟ್ಟು ತನ್ನ ಬದುಕಿಗಾಗಿ ಹಂಬಲಿಸುತ್ತಿರುವುದು ಕಂಡುಬರುತ್ತದೆ.

ಗೌಡಾಲು ಸಮುದಾಯಕ್ಕೆ ಆಧುನೀಕರಣ ಅಥವಾ ಪರಿವರ್ತನೆಯ ಸಮಾಜದ ಪ್ರಭಾವ ಬೀರಿರುವುದು ನಿಜ. ಆದರೆ ಅದು ಸಮುದಾಯದ ಇಡಿಯಾದ ಅಭಿವೃದ್ಧಿಗೆ ಪೂರಕವಾಗಿಲ್ಲ. ಅದು ಬಂಡವಾಳಶಾಹಿಗಳಿಗೆ, ಭೂಮಾಲೀಕರ ವಿಸ್ತರಣೆಯ ಬದುಕಿಗೆ ಅನುಕೂಲಕರವಾಗಿದ್ದು ಗೌಡಾಲುಗಳನ್ನು ದಿನಗೂಲಿಗಳಾಗಿ ಮಾಡಿರುವುದು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಗೌಡಾಲು ಮಾಹಿತಿದಾರರನ್ನು ಅವಲೋಕಿಸಿದಾಗ ಅರ್ಥವಾಗುತ್ತದೆ. ಕರ್ನಾಟಕ ಸರ್ಕಾರ ರೂಪಿಸುವ ಆಧುನಿಕತೆಯನ್ನು ಎತ್ತಿ ತೋರಿಸುವ ಯೋಜನೆಗಳು ಮೇಲಿನ ವರ್ಗದವರಿಗೆ ಮಾತ್ರ ಸೀಮಿತವಾಗುವಂತಹವುಗಳಾಗಿವೆ. ಇದಕ್ಕೆ ಪೂರಕವೆಂಬಂತೆ, ಪಶ್ಚಿಮಘಟ್ಟದಲ್ಲಿರುವ ಅರಣ್ಯದ ಅಭಿವೃದ್ಧಿಯ ನೆಪ ಮಾಡಿ ಕುದುರೆಮುಖ ಪರಿಸರದ ಸುತ್ತ ರಾಷ್ಟ್ರೀಯ ಉದ್ಯಾನವನ ಯೋಜನೆಯನ್ನು ತಂದು ವಿದೇಶಿಗರು ಹಾಗೂ ಬಂಡವಾಳಶಾಹಿಗಳು ಅರಣ್ಯದೊಳಕ್ಕೆ ಬಂದು ಅಲ್ಲಿರುವ ನೈಸರ್ಗಿಕ ಸಂಪತ್ತನ್ನು ನೋಡಿ ಆನಂದಿಸುವಲ್ಲಿ ಉಪಯೋಗವಾಗಲೆಂದು ರೆಸಾರ್ಟ್‌ಗಳನ್ನು ಸ್ಥಾಪಿಸುವ ಆಲೋಚನೆಯನ್ನು ಮಾಡಿದೆ. ಆದರೆ ಈ ರೂಪದ ಅವೈಜ್ಞಾನಿಕ ಚಿಂತನೆಯ ಯೋಜನೆಯು ಗೌಡಾಲು ಸೇರಿದಂತೆ ಇತರೆ ಬುಡಕಟ್ಟುಗಳಿಗೆ ನುಂಗಲಾರದ ತುತ್ತಾಗಿದೆ.

ಆಧುನೀಕರಣ ಹಾಗೂ ಸಾಮ್ರಾಜ್ಯಶಾಹಿಯ ಪ್ರಭಾವವು ಕರ್ನಾಟಕದ ಸಮುದಾಯಗಳಲ್ಲಿ ಅನೇಕ ಆಸೆ ಮತ್ತು ಆಕಾಂಕ್ಷೆಗಳನ್ನು ಮೂಡಿಸಿದ್ದರ ಪರಿಣಾಮವಾಗಿ ಗುಲಾಮಗಿರಿಯ ಬದುಕಿನಲ್ಲಿ ಜೀವಿಸುತ್ತಿದ್ದ ತಳ ಸಮುದಾಯಗಳು ಹೊಸ ಮಾರುಕಟ್ಟೆಗಳ ಉದಯಕ್ಕೆ ಅನಿವಾರ್ಯವಾಗಿ ಹೊಂದಿಕೊಳ್ಳಬೇಕಾಯಿತು. ಆದರೆ ಬುಡಕಟ್ಟುಗಳಿಗೆ ನವೀನತೆಯನ್ನು ಒಪ್ಪಿಕೊಳ್ಳುವುದು ಅಷ್ಟು ಸುಲಭದ ಕೆಲಸವಾಗಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಜಾಗತಿಕ ಭಾರತದ ಸಂದರ್ಭದಲ್ಲಿ ಬುಡಕಟ್ಟುಗಳು ಮುಕ್ತ ಮಾರುಕಟ್ಟೆಯ ಸ್ಪರ್ಧೆಗೆ ತಮ್ಮ ಉತ್ಪಾದಕತೆಯನ್ನು ಸ್ಪರ್ಧೆಗೆ ಸೆಣಸಲು ಸಾಧ್ಯವಾಗದೆ ಇರುವಂತಹ ಪರಿಸ್ಥಿತಿ ಕಂಡುಬರುತ್ತಿರುವುದನ್ನು ಗಮನಿಸಿದರೆ ಕಂಪ್ಯೂಟರೀಕರಣದ ಯಾಂತ್ರೀಕೃತ ಬದುಕು ಸಾಂಪ್ರದಾಯಿಕ ಬದುಕಿಗೆ ಯಾವ ರೂಪದಲ್ಲಿ ಹೆಣೆದುಕೊಳ್ಳುತ್ತದೆ ಎಂದು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವಂತಹವರು ಆಲೋಚಿಸಲೇಬೇಕಾಗಿದೆ. ಆದ್ದರಿಂದ ಆಧುನಿಕತೆಯು ಎಷ್ಟೇ ಗುಣಗಳನ್ನು ಹೊಂದಿದ್ದರೂ ಇಂದು ಕಾಡಿನಲ್ಲಿರುವ ಬುಡಕಟ್ಟುಗಳಿಗೆ ಪೂರಕವಾಗಿರಬೇಕಾಗಿರುವುದು ಮುಖ್ಯ. ಆದ್ದರಿಂದ ಗೌಡಾಲು ಬುಡಕಟ್ಟಿಗೆ ಆಧುನಿಕತೆಯು ಪ್ರಭಾವ ಬೀರಿ ಅವರ ಬದುಕಿನಲ್ಲಿ ಕವಲು ದಾರಿಯನ್ನು ನಿರ್ಮಾಣ ಮಾಡಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದಂತೆ ಗೌಡಾಲು ವಾಸಮಾಡುವ ಹಳ್ಳಿಗಳಿಗೆ ಪ್ರಾಥಮಿಕ ಸೌಲಭ್ಯಗಳೇ ದೊರೆಯದಿರುವಾಗ ಆಧುನಿಕತೆಯ ಕಲ್ಪನೆ

ಎಲ್ಲಿಂದ ಬರಬೇಕು. ಆದ್ದರಿಂದ ಗೌಡಾಲುಗಳಿಗೆ ಆಧುನಿಕತೆಯು ಅಷ್ಟಾಗಿ ದೊರೆತಂತಿಲ್ಲ ಎನ್ನುವುದು ಅಧ್ಯಯನದಿಂದ ತಿಳಿಯುತ್ತದೆ. ಚಿಕ್ಕಮಗಳೂರು ಜಿಲ್ಲೆಯ ದಟ್ಟ ಕಾಡಿನಲ್ಲಿಯೇ ಹೆಚ್ಚಾಗಿ ವಾಸವಾಗಿರುವ ಗೌಡಾಲು ಸಮುದಾಯವು ನಾಡಿಗೆ ಬರುವುದೇ ಅಪರೂಪವಾಗಿದೆ. ಅಲ್ಲದೆ ಕಾಡಿನಲ್ಲಿಯೇ ಹೆಚ್ಚು ಕಾಲವನ್ನು ಕಳೆಯುವ ಸಮುದಾಯವಾಗುರುವುದರಿಂದ ನಾಡಿನ ಸಂಪರ್ಕ ವಿರಳವಾಗಿದೆ. ದಿನನಿತ್ಯ ನಾಡಿನಲ್ಲಿ ನಡೆಯುವ ಯಾವುದೇ ಚಟುವಟಿಕೆಗಳ ಜ್ಞಾನವಿಲ್ಲದವರಾಗಿದ್ದಾರೆ. ಇದರಿಂದಾಗಿ ಆಧುನಿಕತೆಯು ಪರಿಣಾಮಕಾರಿಯಾಗಿ ಪ್ರಭಾವ ಬೀರದೆ ಇರುವುದು ತಿಳಿಯುತ್ತದೆ.

### ೫.೬. ವರ್ತಮಾನದಲ್ಲಿ ಗೌಡಾಲು ಸಮುದಾಯದ ಪಾತ್ರ

ಭಾರತದಲ್ಲಿರುವ ಜನ ಜೀವನ ಮತ್ತು ನಿಸರ್ಗದ ನಡುವೆ ಕಂಡುಬರುವ ಹೊಂದಾಣಿಕೆ ಅಪೂರ್ವವಾದುದಾಗಿದೆ. ಸೃಷ್ಟಿಯಲ್ಲಿ ಎಲ್ಲ ರೀತಿಯ ಬದುಕನ್ನು ಗುರುತಿಸುವುದರ ಜೊತೆಯಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕವಾದ ಚೌಕಟ್ಟಿನಲ್ಲಿ ಶ್ರೀಮಂತವಾದ ಜೀವನವಾಗಿದೆ. ಬುಡಕಟ್ಟುಗಳು ಪ್ರಾಣಿ, ಪಕ್ಷಿ, ಮರ, ಬೆಟ್ಟ, ಪರ್ವತ, ನದಿ, ಸಾಗರ ನಿಸರ್ಗದ ಯಾವುದೇ ವಸ್ತುಗಳಲ್ಲಿಯೂ ಬದುಕನ್ನು ಕಾಣುವ ಏಕತೆಯ ಸಂಕೇತವಾದ ಜೀವನ ಪದ್ಧತಿಯನ್ನು ರಚನೆ ಮಾಡಿಕೊಂಡಿವೆ. ಹಾಗಾಗಿ ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಅರಿಯಬೇಕಾದರೆ ಚರಿತ್ರೆಯ ಮೂಲಕ ಹಾಗೂ ಬುಡಕಟ್ಟು ಸಮುದಾಯಗಳ ಮುಖಾಂತರವೇ ಎಂಬುದನ್ನು ತಿಳಿಯಲೇಬೇಕಾಗಿದೆ. ಈ ದೇಶದ ಸಾಂಸ್ಕೃತಿಕ ಮುಖ್ಯವಾಹಿನಿಗಳು ಬುಡಕಟ್ಟು ಸಮುದಾಯಗಳು, ಅಲೆಮಾರಿ, ಅರೆಅಲೆಮಾರಿಗಳಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಗೌಡಾಲು ಸಮುದಾಯವನ್ನು ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ ಗಮನಿಸಿದಂತೆ ಗೌಡಾಲು ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವುದಷ್ಟೇ ಅಲ್ಲದೆ ಭಾರತದ ಮೂಲ ಸಂಸ್ಕೃತಿಯ ಹಿನ್ನೆಲೆಯಲ್ಲಿ ತಮ್ಮ ಜೀವನವನ್ನು ರೂಪಿಸಿಕೊಂಡಿದೆ.

ವರ್ತಮಾನದಲ್ಲಿ ಗೌಡಾಲು ಸಮುದಾಯವು ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ತನ್ನ ವಾಸದ ನೆಲೆಯನ್ನು ಗುರುತಿಸಿಕೊಂಡು ಬಂದಿದೆ. ನಿತ್ಯ ಹರಿದ್ವರ್ಣದ ಕಾಡುಗಳೆನಿಸಿದ ಪಶ್ಚಿಮ ಘಟ್ಟದ ಅರಣ್ಯಗಳ ಇಳಿಜಾರುಗಳಲ್ಲಿ ಗೌಡಾಲು ತಮ್ಮ ದಿನಿತ್ಯದ ಬದುಕು ರೂಪಿಸಿಕೊಂಡಿದ್ದಾರೆ. ಈ ಪರ್ವತ ಶ್ರೇಣಿಗಳಲ್ಲಿ ಅಪರೂಪದ ಸಸ್ಯರಾಶಿಯಿದ್ದುದಲ್ಲದೆ ಜೀವ ಜಗತ್ತಿನ ಎಲ್ಲ ವಿಸ್ಮಯಗಳನ್ನು ಪ್ರತಿಬಿಂಬಿಸುವ ತಾಣಗಳಾಗಿವೆ. ಆದ್ದರಿಂದ ಪ್ರಾಚೀನ ಕಾಲದಿಂದ ಗೌಡಾಲು ತಮ್ಮ ಕುಲ ಹಾಗೂ ಪಂಗಡಗಳಿಗೆ ಗಿಡಮರಗಳ ಹೆಸರನ್ನೇ ಇಟ್ಟುಕೊಂಡು ಅವುಗಳ ಮೂಲಕವೇ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡು ಇಂದಿಗೂ ಆ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿದೆ. ಅಲ್ಲದೆ ಸಾಮಾಜಿಕವಾಗಿ ಸಂಪ್ರದಾಯವನ್ನು ಕಾಪಾಡಿಕೊಂಡು ಬಂದಿರುವುದು ತಿಳಿಯುತ್ತದೆ. ಇದಕ್ಕೆ ಪೂರಕವಾಗಿ ದೇವರ ಹೆಸರಿನಲ್ಲಿ ಮೀಸಲಿಟ್ಟ ಕಾಡುಗಳು ಇಂದಿಗೂ ದೇವರ ಕಾಡುಗಳಾಗಿ ಉಳಿದುಬಂದಿರುವುದನ್ನು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ. ಈಗಲೂ ಒಂದು ಮರವನ್ನು ಕಡಿಯಬೇಕಾದರೆ ಆ ಮರವನ್ನು ಪೂಜಿಸಿ ಅತ್ಯಂತ ಗೌರವದಿಂದ ನೋಡಿಕೊಳ್ಳುವ ಪರಿಪಾಟವಿದೆ. ದಿನನಿತ್ಯ ಕಾಡಿನ ತಿಳಿಯಾದ ವಾತಾವರಣವನ್ನು ಸವಿಯುತ್ತಾರೆ. ಗೌಡಾಲುಗಳು ಬೆಳಗಿನಲ್ಲಿ

ಹಕ್ಕಿಗಳ ಚಿಲಿಪಿಲಿನಾದ ಸವಿಯುತ್ತಲೇ ತಮ್ಮ ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ಕಾಡಿನಲ್ಲಿ ದೊರೆಯುವ ಗೆಡ್ಡೆ ಗೆಣಸು, ಹಣ್ಣು, ಹಂಪಲುಗಳನ್ನು ಅಗತ್ಯವಿದಷ್ಟು ಸಂಗ್ರಹಿಸಿ ಜೀವಿಸುತ್ತಿರುವುದಲ್ಲದೆ, ಗೌಡಾಲುಗಳು ತಾವು ವಾಸಿಸುವ ಮನೆಯ ಅಕ್ಕಪಕ್ಕದಲ್ಲಿಯೇ ತುಂಡು ತುಂಡು ಕೃಷಿ ಭೂಮಿಯನ್ನು ಮಾಡಿಕೊಂಡು ಇದರ ಜೊತೆಗೆ ಬೇಟೆಯ ಸಂಸ್ಕೃತಿಯನ್ನು ಇಟ್ಟುಕೊಂಡು ಕಾಡಿನ ಉತ್ಪನ್ನಗಳಿಗೆ ಅನುಗುಣವಾಗಿ ಬದುಕನ್ನು ರಚನೆ ಮಾಡಿಕೊಂಡಿದ್ದಾರೆ. ಆದರೆ ನಾವು ಇಲ್ಲಿ ಚರ್ಚಿಸಬೇಕಾದ ಸಂಗತಿಯೆಂದರೆ ಗೌಡಾಲು ಸಮುದಾಯವು ಕೂಡ ಕೃಷಿ ಅನ್ವೇಷಣೆಯ ನಂತರ ಒಂದೇ ಭೂಮಿಯನ್ನು ನಂಬಿಕೊಂಡು ಬಂದವರಾಗಿರಲಿಲ್ಲ. ಇದರ ಬದಲಿಗಾಗಿ ಕುಮರಿ ಬೇಸಾಯ ಪದ್ಧತಿಯಿಂದ ಜೀವನವನ್ನು ಕಂಡುಕೊಂಡು ಬಂದಿರುವುದು ಇಲ್ಲಿ ಬುಡಕಟ್ಟುಗಳ ಸಾಂಪ್ರದಾಯಿಕ ಬದುಕಿಗೆ ಸಾಕ್ಷಿಯಾಗಿದೆ.

ಗೌಡಾಲುಗಳು ಬದುಕುತ್ತಿರುವ ನಿಸರ್ಗ ಸುಂದರವಾದದ್ದು ಎಂದು ಮತ್ತೆ ಹೇಳಬೇಕಾಗಿಲ್ಲ. ಆದರೂ ಪ್ರಸ್ತುತ ಅಧ್ಯಯನ ದೃಷ್ಟಿಯಿಂದ ಚರ್ಚಿಸಬೇಕಾಗಿರುವುದರಿಂದ ಪಶ್ಚಿಮಘಟ್ಟದ ಪರ್ವತಶ್ರೇಣಿಗಳ ಸಾಲು ಆಕಾಶವನ್ನು ಮಾತಾಡಿಸುವಂತೆ ಗೋಚರಿಸುವ ಕಾಡಿನ ತೋಪುಗಳು ಅಲ್ಲಲ್ಲಿ ಬೆಟ್ಟದ ಇಳಿಜಾರಿನಲ್ಲಿ ಧುಮುಕುವ ಆಗಾಧವಾದ ಹಾಗೂ ಶುದ್ಧವಾದ ನೀರಿನಿಂದ ಕೂಡಿದ ಹಸಿರಿನ ಗರ್ಭದಲ್ಲಿ ಅಲ್ಲೊಂದು ಇಲ್ಲೊಂದು ಕಡೆ ರಚನೆಗೊಂಡಿರುವ ಗೌಡಾಲುಗಳ ಗುಡಿಸಲುಗಳು. ಈ ಗುಡಿಸಲುಗಳ ಹಿಂದೆ ಮುಂದೆ ತೆಂಗು, ಕಂಗು, ಬಾಳೆ, ಹಲಸು, ಅನಾನಸ್, ಏಲಕ್ಕಿ, ಮೆಣಸು ನಾನಾ ರೀತಿಯ ಹೂಬಳ್ಳಿಗಳನ್ನು ಅವಲೋಕಿಸಬಹುದು. ಗೌಡಾಲು ಸಮುದಾಯವು ಸಾಮಾಜಿಕವಾಗಿ ಮತ್ತು ಸಾಮುದಾಯಿಕವಾಗಿ ತನ್ನದೇ ಆದ ಪಾತ್ರವನ್ನು ಇಟ್ಟುಕೊಂಡಿದೆ. ಇಲ್ಲಿ ಬುಡಕಟ್ಟುಗಳು ಆಧುನಿಕತೆಗೆ ಅನುಗುಣವಾಗಿ ಪರಿವರ್ತನಾಕ್ರಿಯೆಯ ಬದುಕು ರೂಪಗೊಂಡಿದೆ. ಇಂದು ಕೂಡ ಅನೇಕ ಸಮಸ್ಯೆಗಳ ಮಧ್ಯೆ ಗೌಡಾಲು ತನ್ನ ಪಾತ್ರವನ್ನು ವ್ಯವಸ್ಥಿತವಾಗಿ ರೂಪಿಸಿಕೊಂಡ ಬಗೆಯನ್ನು ಕಾಣಲಾಗುವುದು.

ಗೌಡಾಲು ಸಮುದಾಯವು ಕಾಡಿನ ಮೂಲ ನಿವಾಸಿಯಾಗಿದ್ದು ಅರಣ್ಯದ ಮಧ್ಯೆ ತನ್ನ ದೈನಂದಿನ ಅವಶ್ಯಕತೆಗಳ ಪೂರೈಕೆಗಾಗಿ ಅರಣ್ಯವನ್ನು ಅವಲಂಬಿಸಿರುವುದರಿಂದ ಅದನ್ನು ನಾಶ ಮಾಡಲು ಎಲ್ಲಿಂದ ಮನಸ್ಸು ಬಂದಿತು ಎಂಬುದು ಅಧ್ಯಯನದಿಂದ ತಿಳಿಯುತ್ತದೆ. ಪ್ರಸ್ತುತ ದಿನಮಾನಗಳಲ್ಲಿ ಪ್ರಕೃತಿಯನ್ನು ಆರಾಧಿಸುತ್ತಿದ್ದಾರೆ. ಅರಣ್ಯದ ಸಮುದಾಯವಾದ ಗೌಡಾಲು ಕಾಡಿನ ಆಧಾರಗಳಾದ ನೆಲ, ಜಲ, ಸಸ್ಯ ಹಾಗೂ ಪ್ರಾಣಿ ಸಂಪತ್ತುಗಳನ್ನು ರಕ್ಷಿಸಿ ಅವುಗಳನ್ನು ವೃದ್ಧಿಸುವಂತಹ ಸಾಂಸ್ಕೃತಿಕ ಹಾಗೂ ಆರ್ಥಿಕ ಬದುಕನ್ನು ರೂಪಿಸಿಕೊಂಡು ಅರಣ್ಯ ಸಂಪತ್ತಿನ ರಕ್ಷಣೆಗಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟುಕೊಂಡಿದೆ. ಇವರು ತಮ್ಮ ಸುತ್ತ ಮುತ್ತ ಪರಿಸರದಲ್ಲಿ ಗೋಚರವಾಗುವ ಹಾಗೂ ದಿನನಿತ್ಯ ತಮ್ಮೊಡನೆ ಒಡನಾಟದಲ್ಲಿರುವ ಪ್ರಾಣಿ ಪಕ್ಷಿಗಳಿಗೆ ಹಾಗೂ ತಮಗೆ ಆಹಾರವನ್ನು ಔಷಧವನ್ನು ನೀಡುವ ಗಿಡಮೂಲಿಕೆಗಳಿಗೆ ದೈವತ್ವದ ಸ್ಥಾನವನ್ನು ನೀಡಿರುವುದು ವರ್ತಮಾನದಲ್ಲಿ ಕಾಣಲಾಗುವುದು.

ಕಾಡಿನ ಭೂಮಿಯನ್ನು ದಿನ ಬಳಕೆಯ ಆಹಾರ ಧಾನ್ಯಗಳನ್ನು ಬೆಳೆಯಲು ಬಳಸುತ್ತಿದ್ದಾರೆ. ಅಲ್ಲದೆ ಆ ಭೂಮಿಯ ಫಲವತ್ತತೆ ಮಾಸಲು ಗೌಡಾಲು ಆಸ್ಪದವನ್ನು ನೀಡುತ್ತಿಲ್ಲ. ಆದರೆ ಕಾಡಿನ ವಾಸಿಗಳಾದ ಗೌಡಾಲು

ಸಮುದಾಯದ ಮನಸ್ಸುಗಳು ಅರಣ್ಯಗಳೊಡನೆ ಸಂಬಂಧ ಕಳಚುತ್ತಾ ಬಂದಿರುವುದು ತಿಳಿಯುತ್ತದೆ. ಅರಣ್ಯಗಳ ಮೇಲೆ ಭಾರತದಲ್ಲಿ ವಸಾಹತುಶಾಹಿ ಶಕ್ತಿಗಳ ನಿಯಂತ್ರಣವು ಗೌಡಾಲುಗಳ ಮೇಲೆ ೨೦ ಮತ್ತು ೨೧ನೇ ಶತಮಾನಗಳ ಕಾಲಘಟ್ಟದಲ್ಲಿ ಪ್ರಭಾವ ಬೀರಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಏಕೆಂದರೆ ಬಂಡವಾಳಶಾಹಿಗಳ ಪ್ರಭಾವದಿಂದ ಗೌಡಾಲುಗಳ ಸಾಮುದಾಯಿಕ ಒಡೆತನದ ಪರಿಕಲ್ಪನೆಯೂ ನಾಶದ ದಾರಿಯನ್ನು ಹಿಡಿಯುತ್ತಿರುವುದು ನಿಜ ಸಂಗತಿಯೇ! ಸರ್ಕಾರಗಳು ಮತ್ತು ಅರಣ್ಯ ಇಲಾಖೆಯು ದಿನಕ್ಕೊಂದು ಅರಣ್ಯ ಕಾಯಿದೆಯನ್ನು ಜಾರಿಗೆ ತರುವುದರ ಮೂಲಕ ಕಾಡಿನ ಹಾಗೂ ಅಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳ ಮೇಲೆ ನಿಯಂತ್ರಣವನ್ನು ಹಾಕಿ ಗೌಡಾಲು ಬುಡಕಟ್ಟನ್ನು ಅತಂತ್ರ ಸ್ಥಿತಿಗೆ ಸಿಲುಕಿಸಿದೆ. ಇದರ ಪರಿಣಾಮವಾಗಿ ಈ ಸಮುದಾಯವು ಅರಣ್ಯದ ಬದುಕಿನ ಆತಂಕವನ್ನು ಅನುಭವಿಸುತ್ತಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸ ಮಾಡುತ್ತಿರುವ ಗೌಡಾಲು ಬುಡಕಟ್ಟಿಗೆ ಅರಣ್ಯದ ಮೇಲಿನ ಒಡೆತನದ ಹಕ್ಕುಗಳು ಅವರಿಂದ ದೂರವಾಗುತ್ತಾ ಇರುವುದು ಕಂಡುಬರುತ್ತದೆ. ಸರ್ಕಾರ ಹೊಸ ಹೊಸ ಯೋಜನೆಗಳಿಂದ ಆಹಾರವನ್ನು ಬೆಳೆದು ತಿನ್ನುತ್ತಿದ್ದ ಗೌಡಾಲು ಆಧುನೀಕರಣದ ಪ್ರಭಾವದಿಂದ ವರ್ತಮಾನದಲ್ಲಿ ಆಹಾರವನ್ನು ಕೊಂಡು ತಿನ್ನುವಂತಹ ಪರಿಸ್ಥಿತಿ ಸೃಷ್ಟಿಯಾಗಿದೆ. ಈ ಸಮುದಾಯಕ್ಕೆ ನಗದು ಹಣದ ಅಭಾವ ಒಂದೆಡೆಯಾದರೆ ಆಧುನಿಕ ಮಾರುಕಟ್ಟೆಯ ವ್ಯವಹಾರದ ಕುರಿತು ಸರಿಯಾದ ಜ್ಞಾನವಿಲ್ಲದಿರುವುದರಿಂದ ಇವರ ಜೀವನ ಇಂದು ಬಡತನ ಮತ್ತು ಅನಿಶ್ಚಿತತೆಗಳ ನಡುವೆ ತೂಗುಯ್ಯಾಲೆಯಂತಾಗಿದೆ.

ಕರ್ನಾಟಕದ ಪಶ್ಚಿಮಘಟ್ಟವಿರುವ ಪ್ರದೇಶಗಳಲ್ಲಿ ಮಲೆನಾಡು ಪ್ರದೇಶವಾದ ಚಿಕ್ಕಮಗಳೂರು ಜಿಲ್ಲೆಯು ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿರುವುದರಿಂದ ಇಲ್ಲಿ ವಾಸ ಮಾಡುತ್ತಿರುವ ಗೌಡಾಲು ಸಮುದಾಯವು ತೀವ್ರತರವಾದ ಸಂಕಷ್ಟಕ್ಕೆ ಸಿಲಿಕಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವ್ಯಕ್ತಿ ಅಧ್ಯಯನದಿಂದ ತಿಳಿದ ಮಾಹಿತಿಯ ಆಧಾರವಾಗಿ ನಿಲ್ಲುತ್ತದೆ. ಗೌಡಾಲು ಸಮುದಾಯವು ಸರ್ಕಾರ ಹೇಳಿದ ಸ್ಥಳಕ್ಕೆ ಅರಣ್ಯದಿಂದ ಹೊರ ಹೋಗಲು ಇಷ್ಟಪಡುವುದರಿಂದ ಈ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವಿರೋಧಿ ಸಮಿತಿಯನ್ನು ರಚಿಸಿಕೊಂಡಿದೆ. ಇದರಿಂದ ಮನವರಿಕೆಯಾಗುವುದೇನೆಂದರೆ ಬುಡಕಟ್ಟುಗಳು ವಂಶಪರಂಪರೆಯಾಗಿ ಕಾಡನ್ನು ತಾಯಿಯೆಂದು ಪರಿಭಾವಿಸಿಕೊಂಡು ಯಾವುದೇ ಭಯವಿಲ್ಲದೇ ಬದುಕುತ್ತಿದ್ದವರಿಗೆ ಇಂದು ಅಪರಿಚಿತವಾದ ನೀರು ನೆಲೆಗಳಿಲ್ಲದ ಸ್ಥಳಗಳಿಗೆ ಹೋಗಿ ಇಲ್ಲಿರುವ ನೈಸರ್ಗಿಕ ಅನುಕೂಲಗಳನ್ನು ಕಂಡುಕೊಳ್ಳಲು ಸಿದ್ಧರಿಲ್ಲದವರ ಸಾಲಿನಲ್ಲಿ ಗೌಡಾಲು ಸಮುದಾಯವು ಸೇರಿರುವುದು ಅಧ್ಯಯನದಿಂದ ತಿಳಿಯುತ್ತದೆ. ಈ ಪರಿಣಾಮವಾಗಿ ಅರಣ್ಯದಲ್ಲಿರುವ ಭೂಮಾಲೀಕರು ಕಾಡನ್ನು ಕಡಿದು ಭೂಮಿಯನ್ನು ಒತ್ತುವರಿ ಮಾಡುತ್ತಿದ್ದರೂ ಅವರನ್ನು ಪ್ರಶ್ನಿಸದೇ ಇರುವ ಸರ್ಕಾರ ತಮ್ಮಂಥ ಕಡುಬಡವರನ್ನು ಕಾಡಿನಿಂದ ಹೊರ ಹಾಕುವ ಹುನ್ನಾರ ಮಾಡುತ್ತಿದೆ ಎಂದು ಆಕ್ರೋಶ ಮತ್ತು ಅಳಲನ್ನು ತೋಡಿಕೊಳ್ಳುತ್ತಾರೆ.

ಕರ್ನಾಟಕ ಸರ್ಕಾರ ಮತ್ತು ಗೌಡಾಲು ಸಮುದಾಯಗಳ ಮಧ್ಯೆ ಏರ್ಪಟ್ಟಿರುವ ಕಂದಕವು ಗಂಭೀರವಾದ ಹೋರಾಟಕ್ಕೆ ಇಳಿಯುವಷ್ಟು ಮಟ್ಟಕ್ಕೆ ತಲುಪಿದೆ. ಈ ಹೋರಾಟದಲ್ಲಿ ಗೌಡಾಲು ಮತ್ತು ಇತರ ಬುಡಕಟ್ಟು

ಸಮುದಾಯಗಳ ಜೊತೆ ಕೈ ಜೋಡಿಸಿರುವವರು ಪರಿಸರವಾದಿಗಳು, ಬುದ್ಧಿಜೀವಿಗಳು ಹಾಗೂ ಜನಪರ ಸಂಘಟನೆಗಳೆಂದರೆ ತಪ್ಪಾಗಲಾರದು.

ಗೌಡಾಲು ತಮ್ಮ ಮೂಲ ನೆಲೆಯ ಬದುಕನ್ನು ಅರ್ಥಪೂರ್ಣವಾಗಿ ನಡೆಸುವ ಮಾರ್ಗಗಳನ್ನು ಕಾಣದೆ ಅಭಿವೃದ್ಧಿಯ ಪ್ರಕ್ರಿಯೆ ಅವರ ಮುಂದೆ ತಂದೊಡ್ಡಿರುವ ಪರ್ಯಾಯ ಅವಕಾಶಗಳನ್ನು ಬಳಸಿಕೊಳ್ಳಲಾಗದೆ ಇಂದು ಈ ಸಮುದಾಯವು ದಿನಗೂಲಿ ಕಾರ್ಮಿಕರಾಗಿ ದುಡಿಯುವ ಪರಿಸ್ಥಿತಿ ಬಂದೊದಗಿದೆ. ಅಲ್ಲದೆ ಕಾಡಿನಲ್ಲಿ ಅವರದೇ ಆದ ಬದುಕಿನಲ್ಲಿದ್ದವರು ವರ್ತಮಾನದಲ್ಲಿ ಪೇಟೆಗಳಿಗೆ ಹಾಗೂ ಬೆಂಗಳೂರಿನಂತಹ ನಗರಗಳಿಗೆ ಬಂಡವಾಳಶಾಹಿಗಳು, ಶ್ರೀಮಂತರು, ಭೂಮಾಲೀಕರ ಮನೆಯ ಕೆಲಸಗಳಿಗೆ ಗೌಡಾಲು ಹೆಣ್ಣು ಮಕ್ಕಳು ಹಾಗೂ ಹುಡುಗರು ಮನೆಯ ಕೆಲಸಕ್ಕೆ ಸೇರಿರುವುದು ಕಂಡುಬರುತ್ತದೆ. ಆದರೆ ಪೇಟೆಗಳಿಗೆ ಹೋದ ಯಾವುದೇ ಹೆಣ್ಣು ಮಗಳು ಪುನ ಸಮುದಾಯವನ್ನು ಸೇರದೆ ತಿಂಗಳೊಂದು ಸಾರಿ ಹಣವನ್ನು ಕಳಿಸುವುದನ್ನು ಬಿಟ್ಟರೆ ತನ್ನ ತಂದೆ ತಾಯಿಯರಿಗೆ ಮುಖವನ್ನು ಕೂಡ ತೋರಿಸಲಿಕ್ಕೆ ಆಗದೆ ಇರುವ ಸ್ಥಿತಿಯು ನಿರ್ಮಾಣವಾಗಿರುವುದು ಕಂಡುಬರುತ್ತಿದೆ. ಇಲ್ಲಿ ಸಮುದಾಯ ದಿನವಿಡೀ ಭೂಮಾಲೀಕರ ಮನೆಗಳಲ್ಲಿ ಮತ್ತು ತೋಟಗಳಲ್ಲಿ ಕೇವಲ ೫೦ ರೂಪಾಯಿಗಳಿಗೆ ಬಿಸಿಲು ಚಳಿ, ಕಾಡು ಎನ್ನದೇ ಯಂತ್ರದಂತೆ ದುಡಿಯುತ್ತಿದ್ದಾರೆ. ಇವರಿಗೆ ಭೂಮಿಯಿದ್ದರೂ ೧ ಎಕರೆಯಿಂದ ೨ ಎಕರೆ ಮಾತ್ರವಿದೆ. ಅದು ಇದ್ದರೂ ಸರ್ಕಾರ ಇವರ ಮನೆಗಳಿಗೆ ಮತ್ತು ಗದ್ದೆಗಳಿಗಾಗಲಿ, ಚಿಕ್ಕ ಚಿಕ್ಕ ಕೈತೋಟಗಳಿಗಾಗಲಿ ಯಾವುದೇ ಪಟ್ಟವನ್ನು ನೀಡದಿರುವುದು ಕಂಡುಬರುತ್ತದೆ.

ವರ್ತಮಾನದಲ್ಲಿ ಗೌಡಾಲು ಸಮುದಾಯವು ಕಾಡಿನಲ್ಲಿಯೇ ಇರುವ ಭೂಮಾಲೀಕರ ಮನೆಯಲ್ಲಿಯೇ ಊಟ, ತಿಂಡಿ, ಕೂಲಿ ವಾಸಸ್ಥಾನಗಳಂಥ ಕನಿಷ್ಠ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುತ್ತದೆ. ಆದರೆ ಜೀವನದಲ್ಲಿ ಸಾಮಾಜಿಕ ಬದಲಾವಣೆಯಾಗಬೇಕಾಗಿದೆ. ಅಂದರೆ ಮಕ್ಕಳಿಗೆ ಶಿಕ್ಷಣ, ಉದ್ಯೋಗ ಮುಂತಾದವು ಸರಿಯಾಗಿ ದೊರೆಯದೆ ಕಾಡಿನಲ್ಲಿಯೇ ಬದುಕನ್ನು ಸವೆಸುತ್ತಿದ್ದಾರೆ. ಅವರು ಬದಲಾದ ಪ್ರಪಂಚದ ಆಗುಹೋಗುಗಳಿಗೆ ಹೊಂದಿಕೊಳ್ಳದೆ ಹಗಲು ರಾತ್ರಿ ಇಡೀ ಬದುಕನ್ನು ಕೇವಲ ದಿನ ನಿತ್ಯದ ಅವಶ್ಯಕತೆಗಳನ್ನು ಪೂರೈಸಲು ತವಕಿಸುತ್ತಿದ್ದಾರೆ. ಆದ್ದರಿಂದ  ಗೌಡಾಲು ಬದುಕಿನಲ್ಲಿ ಅರ್ಥಪೂರ್ಣವಾದ ಬದಲಾವಣೆಗಳಾಗಬೇಕಾಗಿದೆ. ದಿನಗೂಲಿಗಾಗಿ ಬೇರೆಯವರ ಹಂಗಿನಲ್ಲಿ ಇರುವುದರಿಂದ ದೂರ ಸರಿಯಬೇಕಾದ ಅನಿವಾರ್ಯತೆ ಇವರಿಗೆ ಬರಬೇಕಾಗಿದೆ.

ಈ ಬುಡಕಟ್ಟು ಇಂದಿನ ದಿನಗಳಲ್ಲಿ ಬಿದಿರಿನಿಂದ ಬುಟ್ಟಿಯನ್ನು ಹೆಣೆಯುತ್ತಿದೆ. ಕಾಡಿನಲ್ಲಿ ಸಿಗುವ ಮುರಗನ ಹುಳಿ, ಬಿಲ್ಲುಪತ್ರೆ, ಸಿಗೆಬೀಳು, ರಾಮಪತ್ರೆ, ಗಿಡಮೂಲಿಕೆಗೆ ಬೇಕಾಗಿರುವ ವಿವಿಧ ಜಾತಿಯ ಸಸ್ಯಗಳನ್ನು ಸಂಗ್ರಹಿಸುವುದಲ್ಲದೆ ಕೃಷಿಯ ಜೊತೆಗೆ ಅಲ್ಪ ಪ್ರಮಾಣದಲ್ಲಿ ಕಾಫಿ, ಏಲಕ್ಕಿ, ಅನಾನಸ್, ಗೋಡಂಬಿ, ಚಕ್ಕೆ, ಲವಂಗ, ಮೆಣಸು, ಕಾಡುಕಿತ್ತಳೆಗಳನ್ನು ಬೆಳೆಯುವುದಲ್ಲದೆ ಕಾಡಿನಿಂದ ನಿಸರ್ಗ ದತ್ತವಾಗಿ ಬೆಳೆದ ಹಣ್ಣು ಹಂಪಲುಗಳನ್ನು ಸಂಗ್ರಹಿಸಿ lampsನ ಮೂಲಕ ಮಾರಾಟ ಮಾಡುತ್ತದೆ. ಆದರೆ ಅವುಗಳಿಗೆ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆ ಸಿಗದೆ ಇರುವುದು ದುರಂತವೇ ಸರಿ. ಸಮುದಾಯವು ಯಾವುದೇ ರೀತಿಯ ಅಹಿತಕರವಾದ

ಘಟನೆಯಲ್ಲಿ ಭಾಗಿಯಾಗದೆ ಎಲ್ಲ ಕಷ್ಟಗಳನ್ನು ನುಂಗಿಕೊಂಡಿರುವ ಸಂಗತಿ ತಿಳಿಯುತ್ತದೆ. ಅಲ್ಲದೆ ಪ್ರತಿ ದಿನ ಸಂಜೆಯಾಯಿತು ಎಂದರೆ ಇಡೀ ಸಮುದಾಯದ ಜನರು ತಮ್ಮ ದುಡಿತ ದಿನವನ್ನು ಸಾಂಸ್ಕೃತಿಕವಾಗಿ ಕಳೆಯುವುದರ ಮೂಲಕ ತಮ್ಮ ದಣಿವನ್ನು ನೀಗಿಸಿಕೊಳ್ಳುತ್ತಾರೆ. ಪ್ರಸ್ತುತ ಸಮುದಾಯವು ಆಧುನಿಕ ಸೌಲಭ್ಯಗಳಿಂದ ವಂಚಿತವಾಗಿದೆ. ಯಾವುದೇ ಹಬ್ಬ ಹರಿದಿನಗಳಲ್ಲಿ ಇಡೀ ಹಾಡಿಯ ಜನರು ಸೇರಿ ಆಚರಿಸುವ ಮನೋಭಾವನೆಯುಳ್ಳವರಾಗಿದ್ದಾರೆ. ಗೌಡಾಲುಗಳಿಗೆ ಅನಾರೋಗ್ಯವಾದರೆ ಮೊದಲು ಮಾಡುವ ಕೆಲಸವೆಂದರೆ ತಮ್ಮ ದೈವವನ್ನು ಕುರಿತು ಬೇಡಿಕೊಳ್ಳುವ ಪರಿಪಾಟವಿದೆ. ಆ ನಂತರ ಗಿಡಮೂಲಿಕೆಗಳಿಂದ ಆರೋಗ್ಯವನ್ನು ಸುಧಾರಿಸಿಕೊಳ್ಳುವ ಪದ್ಧತಿ ಈಗಲೂ ಹಿರಿಯರಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

ಸಮುದಾಯದಲ್ಲಿ ಬಗಿನಿ ಹೆಂಡವು ಹೆಚ್ಚು ಪ್ರಚಲಿತದಲ್ಲಿದೆ. ನೈಸರ್ಗಿಕವಾಗಿ ಮಲೆನಾಡಿನ ಪರಿಸರಕ್ಕೆ ಅನುಗುಣವಾಗಿ ಹೆಮ್ಮರವಾಗಿ ಬೆಳೆದು ನಿಂತ ಬಗಿನಿ ಮರಕ್ಕೆ ಕೆಲವು ಪಾತ್ರೆ ಅಥವಾ ಮಡಿಕೆಗಳನ್ನು ಕಟ್ಟಿ ಭಗಿನಿ ಮರದಿಂದ ಬಗಿನಿ ಹೆಂಡವನ್ನು ಸಂಗ್ರಹಿಸಿ ಒಂದು ದೊಡ್ಡ ಮಡಿಕೆಯಲ್ಲಿ ಹಾಕಿರುತ್ತಾರೆ. ಮನೆಗೆ ಅತಿಥಿಗಳು ಯಾರೇ ಬಂದರೂ ಅವರಿಗೆ ಬಗಿನಿ ಹೆಂಡವನ್ನು ಕೊಡುತ್ತಾರೆ. ಅದು ಬೆಳಗ್ಗೆ ೯ ಗಂಟೆಯ ಒಳಗೆ ಕುಡಿದರೆ ಯಾವುದೇ ಮತ್ತು ಬರುವುದಿಲ್ಲ. ಆದರೆ ೯ ಗಂಟೆಯ ನಂತರ ಕುಡಿದರೆ ಮತ್ತು ಬರುತ್ತದೆ. ಈ ತೆರನಾದ ಬಗಿನಿ ಹೆಂಡದ ಸಂಗ್ರಹಣೆಯ ಕ್ರಮ ಸಮುದಾಯದಲ್ಲಿ ಇರುವುದನ್ನು ಅವಲೋಕಿಸಿದರೆ ಕರ್ನಾಟಕದ ೫೦ ಬುಡಕಟ್ಟುಗಳಂತೆಯೇ ಈ ಸಮುದಾಯ ವರ್ತಮಾನದ ಆಧುನಿಕ ಸಮಾಜದಲ್ಲಿ ತನ್ನ ಪಾತ್ರವನ್ನು ಇಟ್ಟುಕೊಂಡಿದೆ. ಆದ್ದರಿಂದ ಇವರಲ್ಲಿ ಬಗಿನಿ ಹೆಂಡದ ಪರಿಕಲ್ಪನೆಯು ವಿಶಿಷ್ಟತೆಯಿಂದ ಕೂಡಿದುದಾಗಿದೆ.

ಇವರು ಜೇನು ಸಂಗ್ರಹಿಸುವ ಪರಿಪಾಟವನ್ನು ಬೆಳೆಸಿಕೊಂಡಿದ್ದಾರೆ. ಪ್ರತಿಮನೆಯಲ್ಲಿ ಜೇನು ಸಂಗ್ರಹಿಸಿ ಕಾಪಾಡಿಕೊಂಡು ಬರುತ್ತಾರೆ. ಜೇನು ಹಸು ಮಕ್ಕಳಿಗೆ ಹಾಗೂ ಆರೋಗ್ಯದ ದೃಷ್ಟಿಯಿಂದ ಬಳಕೆಗೆ ಬರುತ್ತದೆ. ಅಲ್ಲದೆ ಜೇನು ಕಾಡಿನಲ್ಲಿ ಇತ್ತೀಚಿಗೆ ಸಿಗುವುದು ಅಪರೂಪವಾಗುತ್ತಿದೆ. ಆದ್ದರಿಂದ ಅವಶ್ಯಕವಾಗಿರುವುದನ್ನು ರಕ್ಷಣೆ ಮಾಡಿಕೊಳ್ಳುವ ಪಾಠವನ್ನು ನಮ್ಮ ಹಿರಿಯರು ಹೇಳಿಕೊಟ್ಟಿದ್ದಾರೆ ಎನ್ನುತ್ತಾರೆ.

ವರ್ತಮಾನ ಸಮಾಜದಲ್ಲಿ ಗೌಡಾಲುಗಳೆಂದರೆ ಸಾಮಾನ್ಯವಾಗಿ ಇತರರು ಕೀಳುಮಟ್ಟದ ಜನರೆಂದು ತಿಳಿದಿದ್ದಾರೆ ಎಂದು ಕ್ಷೇತ್ರಕಾರ್ಯದಲ್ಲಿ ಮಾಹಿತಿದಾರರಿಂದ ತಿಳಿಯಲಾಗಿದೆ. ಇದರಿಂದ ಗೌಡಾಲುಗಳೆಂದರೆ ಆಳು ಜನವೆಂದು ಕರೆಯುವುದು ಅಥವಾ ಭಾವಿಸುವುದು ಎಷ್ಟರ ಮಟ್ಟಿಗೆ ಸರಿಯೆಂದು ಆಲೋಚಿಸಬೇಕಾದ ಸಂದರ್ಭವಿದೆ. ಇಂದಿನ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಭೂಮಾಲೀಕರು, ಬ್ರಾಹ್ಮಣರು ಮತ್ತು ಇತರೆ ದೊಡ್ಡವರೆಂದು ಹಾಗೂ ಶ್ರೀಮಂತಿಕೆಯ ಮನೋಭಾವನೆಯಲ್ಲಿ ಮರೆಯುತ್ತಿರುವ ಸಮುದಾಯಗಳು ಸಮಾನತೆಯ ಬದುಕಿನ ಅರ್ಥವನ್ನು ಸಾಮುದಾಯಿಕತೆಯ ಹಿನ್ನೆಲೆಯಿಂದ ನೋಡಬೇಕಾಗಿರುವುದು ಮುಖ್ಯವಾಗುತ್ತದೆ.

ಗೌಡಾಲುಗಳಲ್ಲಿ ಅಕ್ಕಿ ಹೆಂಡದ ಪರಿಕಲ್ಪನೆಯು ಇತರೆ ಬುಡಕಟ್ಟುಗಳಿಗಿಂತ ವಿಭಿನ್ನವಾದುದ್ದಾಗಿದೆ. ಈ ಹೆಂಡವನ್ನು ಶುದ್ಧ ಗಿಡ ಮೂಲಿಕೆ ಮತ್ತು ಭತ್ತವನ್ನು ಚೆನ್ನಾಗಿ ಕುದಿಸಿ ಹದಮಾಡಿ ಕುಡಿಯುತ್ತಾರೆ. ಇದನ್ನು

ಕುಡಿದ ಯಾವುದೇ ಮನುಷ್ಯನ ಹೊಟ್ಟೆಯಲ್ಲಿ ಕಲ್ಲು ಇದ್ದರೂ ಕೂಡ ಅದು ಕರಗುವ ಶಕ್ತಿ ಅಕ್ಕಿ ಹೆಂಡಕ್ಕೆ ಇರುತ್ತದೆ ಹಾಗೂ ಕ್ಯಾನ್ಸರ್‌ನಂತಹ ಕಾಯಿಲೆಗಳು ಬರುವುದಿಲ್ಲವೆಂದು ಗೌಡಾಲು ಸಮುದಾಯದ ಮಾಹಿತಿದಾರರು ಹೇಳಿದ್ದಾರೆ. ಇದರಿಂದಾಗಿ ಗೌಡಾಲು ಒಂದು ವಿಶಿಷ್ಟವಾದ ಸಂಪ್ರದಾಯಿಕ ಪದ್ಧತಿಯನ್ನು ಮೈಗೂಡಿಸಿಕೊಂಡು ವರ್ತಮಾನದಲ್ಲಿ ಮಾರಾಟ ಮಾಡದೆ ತಮ್ಮ ಆರೋಗ್ಯಕ್ಕೆ ಉಪಯೋಗಿಸುತ್ತಿದೆ. ಪ್ರಸ್ತುತ ಸಮಾಜದಲ್ಲಿ ಈ ಸಮುದಾಯವು ಸಮುದಾಯದ ಒಳಗೆ ತನ್ನದೇ ಆದ ಪಾತ್ರದ ಅಸ್ತಿತ್ವವನ್ನು ಇಟ್ಟುಕೊಂಡಿದೆ.

ಪ್ರಸ್ತುತ ದಿನಗಳಲ್ಲಿ ಗೌಡಾಲು ಸಮುದಾಯವು ವಿನಾಕಾರಣದಿಂದ ಎನ್‌ಕೌಂಟರ್‌ಗೆ ಒಳಗಾಗುತ್ತಿದೆ. ಆದ್ದರಿಂದ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಗೌಡಾಲು ಸಮುದಾಯದ ಮುಗ್ಧ ಮನಸ್ಸುಗಳನ್ನು ನಕ್ಸಲರಿಗೆ ಸಹಾಯ ಮಾಡುತ್ತಿದ್ದಾರೆ ಎಂದು ಸರಿಯಾಗಿ ತಿಳಿಯದೆ. ಅರಣ್ಯ ಇಲಾಖೆ ಮತ್ತು ಪೊಲೀಸ್ ಇಲಾಖೆಗಳು ಅನಾವಶ್ಯಕವಾಗಿ ತಿಳಿಯಾದ ಪಶ್ಚಿಮಘಟ್ಟದ ಪರಿಸರವನ್ನು ಕಲುಷಿತಗೊಳಿಸುತ್ತಿರುವುದಲ್ಲದೆ, ಇವರು ಅತಂತ್ರವಾದ ವಾತಾವರಣದಲ್ಲಿ ಬದುಕುವಂತಾಗಿದೆ. ಕಾಡಿನಲ್ಲಿ ರಾತ್ರಿ ಹಗಲು ಎನ್ನದೇ ತಮ್ಮ ಬದುಕಿಗಾಗಿ ಸ್ವತಂತ್ರವಾಗಿ ಅಡ್ಡಾಡುತ್ತಿದ್ದವರಿಗೆ ಸರ್ಕಾರ ಮತ್ತು ಅರಣ್ಯ ಇಲಾಖೆಗಳು ವಿವಿಧ ರೀತಿಯ ನಿಯಮಗಳನ್ನು ಹಾಕಿ ಗೌಡಾಲು ಸಮುದಾಯವಷ್ಟೇ ಅಲ್ಲದೆ ಇತರೆ ಬುಡಕಟ್ಟುಗಳನ್ನು ಕಟ್ಟಿಹಾಕಿದಂತಾಗಿದೆ. ಆದ್ದರಿಂದ ದಿನವಿಡೀ ಕಾಡಿನಲ್ಲಿ ಹಕ್ಕಿಗಳ ಚಿಲಿಪಿಲಿ ನಾದವನ್ನು ಕೇಳಿಕೊಂಡು ಬದುಕುತ್ತಿದ್ದವರಿಗೆ ಗುಂಡಿನ ಶಬ್ದವನ್ನು ಕೇಳುವಂತಾಗಿದೆ. ಪರಿಣಾಮವಾಗಿ ಗೌಡಾಲುಗಳ ಮಕ್ಕಳು ಮತ್ತು ದನಕರುಗಳ ಸ್ಥಿತಿಯಂತು ಶೋಚನೀಯವಾಗಿದೆ. ಇಡೀ ಚಿಕ್ಕಮಗಳೂರು ಜಿಲ್ಲೆಯು ಪ್ರಸ್ತುತ ಸಂದರ್ಭದಲ್ಲಿ ಭಯದ ವಾತಾವರಣದ ನೆರಳಿನಲ್ಲಿಯೇ ಇರುವುದು ಗೋಚರಿಸುತ್ತದೆ. ಒಂದು ಕಾಲದಲ್ಲಿ ಮಲೆನಾಡು ಎಂದರೆ ಸುಂದರ ತಾಣ ಎನ್ನುತ್ತಿದ್ದವರಿಗೆ ಈಗ ಮಲೆನಾಡಿನ ಸಹವಾಸವೇ ಬೇಡ ಎನ್ನುವಂತಾಗಿದೆ. ಆದರೆ ಮಲೆನಾಡಿನ ಗರ್ಭದಲ್ಲಿ ಜೀವಿಸುತ್ತಿರುವ ಬುಡಕಟ್ಟುಗಳ ಸ್ಥಿತಿಯು ಹೇಗಿರಬೇಕು ಎಂಬುದನ್ನು ಎಲ್ಲರೂ ಆಲೋಚಿಸಲೇಬೇಕಾದ ಸಂಗತಿಯಾಗುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ಆಧುನಿಕ ಸಮಾಜದ ಯಾವುದೇ ಸಲಕರಣೆಗಳನ್ನು ಸರಿಯಾಗಿ ಬಳಸದೆ ಕಾಡಿನಲ್ಲಿ ಕಾಲು ನಡಿಗೆಯಲ್ಲಿಯೇ ಅವರವರ ಹಾಡಿಗಳಿಗೆ, ಊರುಗಳಿಗೆ ಸಂಪರ್ಕವನ್ನು ಇಟ್ಟುಕೊಂಡು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುತ್ತ ಪ್ರಾಣಿ ಪಕ್ಷಿಗಳಿಗೆ ಭಯಪಡದೆ ನಿರ್ಭಯವಾಗಿ ಜೀವನವನ್ನು ಸಾಗಿಸುವ ಬುಡಕಟ್ಟಾಗಿದೆ.

ಗೌಡಾಲು ಸಮುದಾಯವು ಅವರದೇ ಆದ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಗೆ ಉತ್ತಮವಾದ ಸ್ಥಾನವನ್ನು ಕೊಟ್ಟಿದೆ. ಕೆಲವೊಂದು ನಿರ್ಧಾರವನ್ನು ತೆಗೆದುಕೊಳ್ಳುವ ಅಧಿಕಾರ ಹೆಣ್ಣಿಗೆ ಇರುವುದು ಪ್ರಸ್ತುತ ಅಧ್ಯಯನದಿಂದ ತಿಳಿಯಲಾಗಿದೆ. ಇದಕ್ಕೆ ಪೂರಕವಾಗಿ ಪ್ರತಿಯೊಂದು ಹಾಡಿಯಲ್ಲಿಯೂ ಹೆಣ್ಣು ಮಕ್ಕಳು ಸ್ವಸಹಾಯ ಸಂಘಗಳು ಮತ್ತು ಸ್ತ್ರೀಶಕ್ತಿ ಸಂಘಗಳನ್ನು ರಚನೆ ಮಾಡಿಕೊಂಡಿದ್ದಾರೆ. ಅವರ ಹಾಡಿಗಳಿಗೆ ಹತ್ತಿರವಿರುವ ಬ್ಯಾಂಕುಗಳಲ್ಲಿ ವ್ಯವಹಾರ ಮಾಡುತ್ತಿರುವುದು ಕಂಡುಬರುತ್ತದೆ.

ಶೈಕ್ಷಣಿಕವಾಗಿ ಗೌಡಾಲುಗಳು ತೀರ ಹಿಂದುಳಿದವರಾಗಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದಂತೆ ಚಿಕ್ಕಮಗಳೂರು ಜಿಲ್ಲೆಯು ಬೆಟ್ಟದ ಇಳಿಜಾರಿನ ಪ್ರದೇಶವಾಗಿರುವುದರಿಂದ ಹಾಗೂ ಗೌಡಾಲು ಕೂಡ ಇಳಿಜಾರಿನ

ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುತ್ತಿರುವುದರಿಂದ ಕಾಡಿನಿಂದ ನಾಡಿಗೆ ೩೦.೪೦ ಕಿಲೋಮೀಟರ್ ನಡೆದು ಬಂದು ಶಿಕ್ಷಣ ಪಡೆಯುವುದು ಕಷ್ಟವಾಗಿರುವುದರ ಹಿನ್ನೆಲೆಯಿಂದ ಹೆಚ್ಚಾಗಿ ಈ ಸಮುದಾಯದಲ್ಲಿ ಅವಿದ್ಯಾವಂತರು ಇರುವುದು ಕಂಡುಬರುತ್ತದೆ. ಆದರೆ ಇತ್ತೀಚಿಗೆ ಕರ್ನಾಟಕದ ಬುಡಕಟ್ಟು ಅಧ್ಯಯನ ಸಂಸ್ಥೆಯಿಂದ ೧೮ ಗಿರಿಜನ ಆಶ್ರಮ ಶಾಲೆಗಳನ್ನು ಚಿಕ್ಕಮಗಳೂರಿನಲ್ಲಿಯೇ ಸ್ಥಾಪಿಸಿರುವುದನ್ನು ನೋಡಬಹುದು. ಪ್ರಸ್ತುತ ಈ ಶಾಲೆಗಳಲ್ಲಿ ಕಲಿತ ಗೌಡಾಲು ಮಕ್ಕಳು ಉನ್ನತ ವ್ಯಾಸಂಗ ಮಾಡಿದವರು ತುಂಬ ಕಡಿಮೆಯೆಂದು ತಿಳುವಳಿಕೆಗೆ ಬಂದ ಸಂಗತಿ. ಆದ್ದರಿಂದ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಕಲಿತವರೇ ಹೆಚ್ಚಾಗಿದ್ದಾರೆ. ಸಾಮಾಜಿಕ ಬದಲಾವಣೆಗೆ ಅನುಗುಣವಾಗಿ ಇವರ ಪಾತ್ರ ವರ್ತಮಾನದಲ್ಲಿ ವಿರಳವೆಂದು ಹೇಳಲಾಗುವುದು. ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲೂಕಿನ ನೆಮ್ಮಾರಿನಲ್ಲಿರುವ ಆಶ್ರಮ ಶಾಲೆಯಲ್ಲಿ ೧೦೦ಕ್ಕೆ ೬೦ರಷ್ಟು ಗೌಡಾಲು ಮಕ್ಕಳು ಶಿಕ್ಷಣ ಕಲಿಯುತ್ತಿರುವುದು ಕಂಡುಬಂದರೆ, N.R.ಪುರ, ತರೀಕೇರೆ, ಚಿಕ್ಕಮಗಳೂರು ಮುಂತಾದ ಕಡೆ ಇತರೆ ಬುಡಕಟ್ಟು ಮಕ್ಕಳಿದ್ದಾರೆ. ಆದ್ದರಿಂದ ಗೌಡಾಲುಗಳಿರುವ ಯಾವುದೇ ಹಾಡಿಗೆ ಹೋದರೆ ಅಲ್ಲಿ ನಮಗೆ P.U.C. ಓದಿದವರು ಬೆರಳೆಣಿಕೆಯಷ್ಟು ಮಾತ್ರ ಸಿಗುತ್ತಾರೆ. ಆದ್ದರಿಂದಲೇ ಬುಡಕಟ್ಟು ವರ್ತಮಾನದಲ್ಲಿ ಶೈಕ್ಷಣಿಕವಾಗಿ ತನ್ನ ಪಾತ್ರವನ್ನು ಭದ್ರಪಡಿಸಿಕೊಳ್ಳುವುದರ ಜೊತೆಗೆ ಶಿಕ್ಷಣದ ದೃಷ್ಟಿಯಿಂದ ಶೈಕ್ಷಣಿಕ ಅಭಿವೃದ್ಧಿಯ ಕಡೆಗೆ ಮುಖ ಮಾಡಬೇಕಾದ ಅನಿವಾರ್ಯತೆಯಿದೆ.

ಸಾಂಸ್ಕೃತಿಕವಾಗಿ ಗೌಡಾಲು ಬುಡಕಟ್ಟು ಶ್ರೀಮಂತಿಕೆಯಿಂದ ಕೂಡಿದೆ. ಅದರದೇ ಆದ ನೃತ್ಯ, ಹಬ್ಬ ಆಚರಣೆ ಸೋಬಾನೆ ಪದಗಳು, ದೈವತ್ವದ ಕಲ್ಪನೆಗಳಲ್ಲಿ ಆಧುನಿಕ ಸಮಾಜಕ್ಕೆ ನಾಚಿಸುವಂತೆ ತನ್ನ ಸಮುದಾಯದ ಗುರುತಿಸುವಿಕೆಯನ್ನು ಇಟ್ಟುಕೊಂಡಿದೆ. ಗೌಡಾಲು ಪ್ರಸ್ತುತ ಕಾಲದಲ್ಲಿಯೂ ಕಳಸದ ಕಲಶೇಶ್ವರ ದೇವಸ್ಥಾನದಲ್ಲಿ ಬಿಟ್ಟಿ ಕೆಲಸ ಮಾಡುತ್ತಿದೆ. ಈ ಕಾಯಕವನ್ನು ಗೌಡಾಲು ಬುಡಕಟ್ಟು ಬಿಟ್ಟರೆ ಇತರೆ ಯಾವುದೇ ಜಾತಿಯೂ ಮಾಡುವಂತಿಲ್ಲ. ಪ್ರಸ್ತುತ ಸಂದರ್ಭದಲ್ಲಿ ಬುಡಕಟ್ಟುಗಳ ಮತ್ತು ದಲಿತರ ಬದುಕನ್ನು ಗೌಡಾಲು ಸಮುದಾಯಕ್ಕೆ ಹೋಲಿಸಿಕೊಂಡು ಸಂಶೋಧನೆಯ ಮನೋಭಾವನೆಯಿಂದ ವೀಕ್ಷಿಸಿದಾಗ ವರ್ತಮಾನದಲ್ಲಿ ಗೌಡಾಲು ಯಾವ ಯಾವ ಪಾತ್ರವನ್ನು ಸಮಾಜದಲ್ಲಿ ಇಟ್ಟುಕೊಂಡಿದೆ ಎಂಬುದು ಗಮನಾರ್ಹ ಸಂಗತಿಯಾಗುತ್ತದೆ. ಏಕೆಂದರೆ ಗೌಡಾಲು ಸಮುದಾಯದ ಶ್ರೀನಿವಾಸಗೌಡ ಕಳಸದಲ್ಲಿ ಸಮುದಾಯದ ಅಧ್ಯಕ್ಷರಾಗಿದ್ದುದಲ್ಲದೆ ಅವರೇ ದಿನನಿತ್ಯದ ಸಾಮಾನುಗಳನ್ನು ಮಾರುವಂತ ಜನರಲ್ ಸ್ಟೋರನ್ನು ಇಟ್ಟುಕೊಂಡು ಸರ್ಕಾರದ ಯಾವುದೇ ನೌಕರಿಯನ್ನು ಬಯಸದೆ ಸ್ವಂತಿಕೆಯ ಜೀವನದ ದಾರಿಯನ್ನು ಹುಡುಕಿಕೊಂಡಿರುವುದನ್ನು ನೋಡಲಾಗಿದೆ. ಆದ್ದರಿಂದ ಗೌಡಾಲುಗಳಿಗೆ ವರ್ತಮಾನದ ಸಮಾಜದಲ್ಲಿ ಬದುಕುವ ಜವಾಬ್ದಾರಿಯ ಗುಣವು ಇರುವುದು ತಿಳಿಯುತ್ತದೆ. ಇವರಲ್ಲಿ ಬೆರಳೆಣಿಕೆಷ್ಟು ಜನರು ಮಾತ್ರ ಸಣ್ಣ ಸಣ್ಣ ಉದ್ಯೋಗದಲ್ಲಿದ್ದಾರೆ. ಅದು ಬಿಟ್ಟರೆ ಉಳಿದ ೬೦ರಷ್ಟು ಜನರು ಭೂಮಾಲೀಕರ ಮನೆ, ತೋಟ, ಗದ್ದೆಗಳಲ್ಲಿ ಹಿಂಸೆಯ ಬದುಕಿನಲ್ಲಿ ಸಿಕ್ಕಿಹಾಕಿಕೊಂಡಿರುವುದು ಗಮನಾರ್ಹವಾದುದಾಗಿದೆ. ಗೌಡಾಲುಗಳಿಗೆ ಕಳಸದ ಕಲಶೇಶ್ವರ ದೇವರ ಮೇಲೆ ಅಪಾರವಾದ ಭಕ್ತಿಯಿರುವುದು ಕಂಡುಬರುವುದರಿಂದ ಅವರ ಬಾಯಿಯಿಂದಲೇ ಬರುವ ಮಾತೆಂದರೆ ಕಳಸವು ದಕ್ಷಿಣಕಾಶಿ ಎಂದು ಹೇಳುತ್ತಾರೆ. ಈಗಲೂ ದೇವಸ್ಥಾನದಲ್ಲಿ ಗೌಡಾಲು ಸಮುದಾಯದವರು ದೇವಸ್ಥಾನದ

ಯಾವುದೇ ಕೆಲಸವನ್ನು ಕಲಶೇಶ್ವರನ ಮಕ್ಕಳಂತೆ ಮಾಡುತ್ತಾರೆ. ಇಡೀ ಚಿಕ್ಕಮಗಳೂರು ಜಿಲ್ಲೆಯ ಕಾಡಿನಲ್ಲಿರುವ ಎಲ್ಲ ಗೌಡಾಲುಗಳು ಈ ದೇವರನ್ನು ತನ್ನ ಮನೆಯ ದೇವರಾಗಿ ಒಪ್ಪಿಕೊಂಡು ಕಲಶೇಶ್ವರನ ಆರಾಧಕರಾಗಿದ್ದಾರೆ. ಕಳಸದ ದೇವರ ಪೂಜೆಯನ್ನು ಬ್ರಾಹ್ಮಣರೇ ಮಾಡುತ್ತಿದ್ದು ಇತರ ಮೇಲ್‌ಜಾತಿಯ ಜನರು ಮತ್ತು ಗೌಡಾಲುಗಳ ಮಧ್ಯೆ ಸಂಬಂಧಗಳು ಸೀಮಿತವಾದ ರೀತಿಯಲ್ಲಿರುವುದು ಕಂಡುಬರುತ್ತದೆ. ಗೌಡಾಲುಗಳು ಬಿಟ್ಟಿ ಕೆಲಸ ಮಾಡುವುದು ಬೇಡ ಮತ್ತು ಅವರಿಗೆ ಬಿಟ್ಟಿಯ ಕೆಲಸಕ್ಕೆ ಉಪ್ಪು ಕೊಡುವುದು ಬೇಡವೆಂದು ಮೇಲ್‌ಜಾತಿಯವರು ತೀರ್ಮಾನ ತೆಗೆದುಕೊಂಡಿದ್ದರು. ಆದರೆ ಗೌಡಾಲು ಸಮುದಾಯದ ಯುವಕರು ತಲತಲಾಂತರವಾಗಿ ನಾವು ಕಳಸ, ಕಲಶೇಶ್ವರನ ಭಕ್ತರಾದ್ದರಿಂದ ಈ ಕೆಲಸಕ್ಕೆ ಹಣ ಕೊಡುವುದು ನಮಗೆ ಬೇಡ, ಹಣ ಕೊಡುವುದರಿಂದ ಮುಂದಿನ ದಿನಮಾನಗಳಲ್ಲಿ ಕಲಶೇಶ್ವರನಿಂದ ನಮ್ಮನ್ನು ದೂರವಿಡುವ ಪ್ರಯತ್ನ ಮಾಡುತ್ತಿದ್ದಿರಿ. ಆದ್ದರಿಂದ ದಯವಿಟ್ಟು ನಮಗೆ ದೇವರ ಕೆಲಸವನ್ನು ಮಾಡುವುದಕ್ಕೆ ಅವಕಾಶ ಮಾಡಿಕೊಡಿ, ಹಾಗೆ ನಮಗೆ ಸಮಾಜದಲ್ಲಿ ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ ಎಂದು ಹಿಂದೆ ಯಾವ ರೀತಿಯ ಪದ್ಧತಿ ಇತ್ತೋ ಅದೇ ರೀತಿಯಿರಲಿ ಎಂದು ಕೇಳಿಕೊಂಡಿದ್ದಕ್ಕೆ ಹಿರಿಯರು ಎಲ್ಲರೂ ಸಮ್ಮತಿಸಿದ ಬಗೆಯನ್ನು ಗೌಡಾಲುಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಸಿರುವುದು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗುತ್ತದೆ.

**೫.೭. ಆಧುನಿಕ ಸಂದರ್ಭದಲ್ಲಿ ಗೌಡಾಲು ಸಮುದಾಯದ ಸ್ಥಿತ್ಯಂತರ**

ಬದಲಾವಣೆಯು ಸಮಾಜದ ಮೂಲ ಪರಿಕಲ್ಪನೆಗಳಲ್ಲಿ ಒಂದಾಗಿದೆ. ಜಗತ್ತಿನಲ್ಲಿ ಬದಲಾವಣೆಯು ಇಲ್ಲದೆ ಇರುವ ಯಾವುದೇ ಸಮಾಜವನ್ನು ಗುರುತಿಸಲು ಸಾಧ್ಯವಿಲ್ಲ. ಬದಲಾವಣೆಯು ನಿರಂತರವಾಗಿದೆ ಮತ್ತು ಸರ್ವವ್ಯಾಪಿಯಾಗಿದೆ. ಬದಲಾವಣೆಯು ನಿಸರ್ಗದ ನಿಯಮಗಳಿಂದ ಆಗಬಹುದು ಅಥವಾ ಮಾನವನ ಕಾರಣದಿಂದಲೂ ಆಗಬಹುದು. ಆದರೆ ಆಗುವಂತಹ ಬದಲಾವಣೆಯು ಧನಾತ್ಮಕವಾಗಿರಲೇಬೇಕು. ಆಗ ಮಾತ್ರ ಸಮಾಜದ ಕಲ್ಯಾಣಕ್ಕೆ ಸಹಾಯಕವಾಗಿರುತ್ತದೆ. ಏನಾದರೂ ಋಣಾತ್ಮಕ ಬದಲಾವಣೆಯಾದರೆ ಅದು ಸಮಾಜಕ್ಕೆ ಮಾರಕವಾಗಿ ಪರಿಣಾಮವನ್ನು ಬೀರುತ್ತದೆ. ಬದಲಾವಣೆಯ ಕುರಿತು ನೋಡುವುದಾದರೆ ಮಾನವನ ಸಾಮಾಜಿಕ ಸಂಬಂಧಗಳ ವ್ಯವಸ್ಥೆಯಲ್ಲಿ ಕಂಡುಬರುವಂತಹ ವ್ಯತ್ಯಾಸಗಳೇ ಪರಿವರ್ತನೆಯಾಗಿದೆ. ಹಾಗೆಯೇ ಒಂದು ವಸ್ತುವಿನಲ್ಲಿ ಅಥವಾ ವ್ಯಕ್ತಿಯಲ್ಲಿ ಅಥವಾ ಒಂದು ಸಮಾಜದಲ್ಲಿ ಅಥವಾ ಒಂದು ವ್ಯವಸ್ಥೆಯಲ್ಲಿ ಆಗುವಂತಹ ಪರಿವರ್ತನೆಯೇ ಬದಲಾವಣೆ ಎಂದು ಕರೆಯಬಹುದಾಗಿದೆ. ಕೆಲವೊಂದು ಚಿಂತಕರು ಸಮಾಜದ ರಚನೆ ಮತ್ತು ಕಾರ್ಯಗಳಲ್ಲಿ ಆಗುವಂತಹ ಬದಲಾವಣೆಯನ್ನು ಸಾಮಾಜಿಕ ಬದಲಾವಣೆ ಎಂದು ಕರೆದಿದ್ದಾರೆ.

ಸಾಮಾಜಿಕ ಬದಲಾವಣೆಯ ಭೌತಿಕ ಮತ್ತು ಸಾಂಸ್ಕೃತಿಕ ಅಂಶಗಳಲ್ಲಿ ಕಂಡುಬರುವ ಪ್ರಮುಖ ಅಂಶಗಳೆಂದರೆ ಸ್ಥಿತಿಯಲ್ಲಿ ಬದಲಾವಣೆ ಹೊಂದುವುದು. ಇದು ಒಂದು ನಿರಂತರ ಕ್ರಿಯೆ. ಅದರಂತೆಯೇ ಸಮಾಜದಲ್ಲಿಯೂ ಸಹ ಅನೇಕ ಬದಲಾವಣೆಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಸಮಾಜಜೀವಿಯಾದ ಮಾನವನ ಹೊಂದಾಣಿಕೆ ಸ್ವಭಾವ, ವಿನಿಮಯ ಮಾಡಿಕೊಳ್ಳುವ ಸ್ವಭಾವ, ಪರಸ್ಪರ ಅವಲಂಬನೆ, ಅನ್ಯೋನ್ಯ ಕ್ರಿಯೆ ಮತ್ತು ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯಿಂದ ಸಂಸ್ಕೃತಿ ಸಂಕ್ರಮಣಗಳ ಫಲವಾಗಿ ಒಂದಾದ

ನಂತರ ಒಂದರಂತೆ ಕ್ರಮವಾಗಿ ಸಮಾಜದ ರಚನೆಯಲ್ಲಿ ಜನರ ನಡೆನುಡಿಗಳಲ್ಲಿ ಆಹಾರ-ವಿಹಾರಗಳಲ್ಲಿ ಉಡುಗೆ-ತೊಡುಗೆಗಳಲ್ಲಿ, ವೈವಿಧ್ಯಮಯ ವರ್ತನೆಗಳಲ್ಲಿ ಮೌಲ್ಯ ನಿರ್ಧಾರಗಳಲ್ಲಿ ಬದಲಾವಣೆಯಾದಾಗ ಸಮಾಜದ ವ್ಯವಸ್ಥೆ ಮತ್ತು ರಚನೆಯಲ್ಲಿ ಬದಲಾವಣೆಯನ್ನು ಕಾಣಬಹುದು.[೬]

ಗೌಡಾಲು ಜನಾಂಗದಲ್ಲಿ ಇತ್ತೀಚಿನ ದಿನಗಳಲ್ಲಿ ಹಲವಾರು ಬದಲಾವಣೆಗಳು ಉಂಟಾಗುತ್ತಿರುವುದು ಕಂಡುಬರುತ್ತದೆ. ಇವರು ಗುಹೆಗಳಲ್ಲಿ, ಬೆಟ್ಟಗುಡ್ಡಗಳಲ್ಲಿ, ಕಣಿವೆ ಪ್ರದೇಶದಲ್ಲಿ, ದಟ್ಟನೆಯ ಕಾಡುಗಳಲ್ಲಿ ನೂರಾರು ವರುಷಗಳಿಂದ ಜೀವನವನ್ನು ಸಾಗಿಸುತ್ತಾ ಬರುತ್ತಿದ್ದಾರೆ. ಹಿಂದೆ ಇವರು ಸಂಪ್ರದಾಯಬದ್ಧರಾಗಿದ್ದು, ತಮ್ಮದೇ ಆದ ರೂಢಿ. ಸಂಪ್ರದಾಯಗಳನ್ನು ಹೊಂದಿರುವುದು ಕಂಡುಬರುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಇವರಲ್ಲಿ ಕೆಲವೊಂದು ಬದಲಾವಣೆಯು ಸಂಪೂರ್ಣವಾಗಿ ಆಧುನಿಕತೆಯನ್ನು ಹೊಂದಿಲ್ಲ ಎಂಬುದು ಕಂಡುಬರುತ್ತದೆ.

ಈ ಗೌಡಾಲು ಬುಡಕಟ್ಟು ಜನರ ಶೈಲಿಯಲ್ಲಿ, ಸಂಪ್ರದಾಯಗಳಲ್ಲಿ, ಸಂಸ್ಕೃತಿಯಲ್ಲಿ, ಧಾರ್ಮಿಕ ನಂಬಿಕೆಗಳಲ್ಲಿ, ಕೌಟುಂಬಿಕ ಜೀವನದಲ್ಲಿ, ಸಾಮಾಜಿಕ ಸ್ಥಿತಿಗತಿಯಲ್ಲಿ ಬದಲಾವಣೆಗಳು ಆಗಿರುವುದು ಕಂಡುಕೊಳ್ಳಬಹುದು. ಹಾಗೆಯೇ ರಾಜಕೀಯ ಕ್ಷೇತ್ರದಲ್ಲಿ, ಆರ್ಥಿಕ ಸ್ಥಿತಿಗತಿಯಲ್ಲಿ, ವೃತ್ತಿಯಲ್ಲಿ, ಶೈಕ್ಷಣಿಕ ಪ್ರಗತಿಯಲ್ಲಿ, ವೈವಾಹಿಕ ಪದ್ಧತಿಯಲ್ಲಿ, ಕೃಷಿ ಕ್ಷೇತ್ರದಲ್ಲಿ, ಮಹಿಳೆಯರ ಸ್ಥಿತಿಗತಿಗಳಲ್ಲಿ, ನೈತಿಕ ಮೌಲ್ಯಗಳಲ್ಲಿ, ಉಡುಗೆತೊಡುಗೆಯಲ್ಲಿ ಊಟೋಪಚಾರ ಪದ್ಧತಿಯಲ್ಲಿ, ವಸತಿ ವ್ಯವಸ್ಥೆಯಲ್ಲಿ ವೇಷಭೂಷಣಗಳಲ್ಲಿ, ಒಟ್ಟಾರೆ ಇವರ ಜೀವನ ಶೈಲಿಯಲ್ಲಿ ಬದಲಾವಣೆಯಾಗುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಮೇಲೆ ತಿಳಿಸಲಾದ ಬದಲಾವಣೆಯನ್ನು ಕುರಿತು ಈ ಮುಂದಿನಂತೆ ವಿಸ್ತಾರವಾಗಿ ಚರ್ಚಿಸಲಾಗಿದೆ.

**ಸಾಮಾಜಿಕ ಬದಲಾವಣೆ**

ಹಿಂದಿನಿಂದಲೂ ಗೌಡಾಲು ಬುಡಕಟ್ಟು ಸಮುದಾಯದವರು ಸಾಮಾಜಿಕವಾಗಿ ಬಹಳ ಹಿಂದೆ ಉಳಿದಿದ್ದರು. ಸಮಾಜದಲ್ಲಿ ಇವರು ಹೊಂದಿರುವ ಸ್ಥಾನಕ್ಕೆ ಯಾವುದೇ ರೀತಿಯ ಮನ್ನಣೆ ಇರಲಿಲ್ಲ. ಮೂಢನಂಬಿಕೆ, ಸಾಂಪ್ರದಾಯಿಕತೆ, ಮಹಿಳೆಯರಿಗೆ ಸ್ಥಾನಮಾನ ಇಲ್ಲದೇ ಇರುವುದು, ಪುರುಷಪ್ರಧಾನ ಸಮಾಜದ ಪ್ರಾಬಲ್ಯ, ಕರ್ತನ ಅಧಿಕಾರವೇ ಅಂತಿಮ, ಕುಟುಂಬದಲ್ಲಿ ಪುರುಷರ ತೀರ್ಮಾನವೇ ಅಂತಿಮ ಎಂಬ ಅಂಶಗಳು ಪ್ರಧಾನವಾಗಿದ್ದವು. ಆದರೆ ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಬದಲಾವಣೆಗಳು ಆಗುತ್ತಿವೆ. ಕೌಟುಂಬಿಕ ಕ್ಷೇತ್ರದಲ್ಲಿ ನೋಡುವುದಾದರೆ ಕೇವಲ ಪುರುಷರಿಗೆ ಮಾತ್ರ ಪ್ರಾಧಾನ್ಯತೆ ಇರದೆ, ಮಹಿಳೆಯರಿಗೂ ಮಹತ್ವ ನೀಡುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಹಿಂದೆ ಕೌಟುಂಬಿಕ ಪದ್ಧತಿ ಅವಿಭಕ್ತವಾಗಿತ್ತು. ಒಂದೇ ಕುಟುಂಬದಲ್ಲಿ ೨ ರಿಂದ ೪ ತಲೆ ಮಾರಿನವರು ವಾಸವಾಗಿದ್ದರು. ಪರಸ್ಪರ ಒಬ್ಬರನ್ನು ಬಿಟ್ಟು ಇನ್ನೊಬ್ಬರು ಇರುತ್ತಿರಲಿಲ್ಲ. ಆದರೆ ಇತ್ತೀಚೆಗೆ ಈ ವ್ಯವಸ್ಥೆ ಬದಲಾಗಿದೆ.

ಅವಿಭಕ್ತ ಕುಟುಂಬಗಳ ಜಾಗದಲ್ಲಿ ವಿಭಕ್ತ ಕುಟುಂಬಗಳು ಬೆಳೆಯುತ್ತಿವೆ. ಗಂಡ ಹೆಂಡತಿ ಮತ್ತು ಮಕ್ಕಳು ವಾಸವಾಗಿರುವ ಕುಟುಂಬಗಳು ಇವರಲ್ಲಿ ಕಂಡುಬರುತ್ತಿವೆ. ಹಾಗಾಗಿ ಕೌಟುಂಬಿಕ ಸಂಬಂಧಗಳಲ್ಲಿ ಸಡಿಲಿಕೆ

ಉಂಟಾಗುತ್ತಿದೆ. ವೈವಾಹಿಕ ಕ್ಷೇತ್ರವನ್ನು ಅವಲೋಕಿಸುವುದಾದರೆ ವಿವಾಹಗಳು ನಡೆಯುವಾಗ ೪ ರಿಂದ ೧೦ ಜೋಡಿ ವಿವಾಹಗಳನ್ನು ಒಟ್ಟಿಗೇ ಮಾಡುತ್ತಿದ್ದರು. ಆದರೆ ಇತ್ತೀಚೆಗೆ ಅದು ಬದಲಾಗಿದೆ. ಒಂದು ಮದುವೆಯಲ್ಲಿ ಒಂದೇ ಜೋಡಿ ವಿವಾಹವಾಗುತ್ತಿದೆ. ಹಾಗೆಯೇ ಹಿಂದೆ ಗೌಡಾಲು ಜನರಲ್ಲಿ ವರದಕ್ಷಿಣೆ ಇರಲಿಲ್ಲ. ಬದಲಿಗೆ ವಧುದಕ್ಷಿಣೆ ಇತ್ತು. ಆದರೆ ಈಗಿನ ದಿನಗಳಲ್ಲಿ ಶಿಕ್ಷಣ ಪಡೆದವರು ವರದಕ್ಷಿಣೆ ಬಯಸುತ್ತಿರುವುದು ಕಂಡುಬರುತ್ತದೆ. ಅದೇ ರೀತಿ ಹಿಂದೆ ಪುರುಷಪ್ರಧಾನ ಕುಟುಂಬಗಳು ಮಾತ್ರ ಇದ್ದವು. ಪುರುಷರ ತೀರ್ಮಾನವೇ ಅಂತಿಮವಾಗಿತ್ತು. ಮಹಿಳೆಯರಿಗೆ ಅವಕಾಶ ಇರುತ್ತಿರಲಿಲ್ಲ. ಆದರೆ ಈಗ ಮಾತೃ ಪ್ರಧಾನ ಕುಟುಂಬಗಳು ಕಂಡುಬರುತ್ತಿವೆ. ಅದರಲ್ಲಿಯೂ ಹೆಚ್ಚಾಗಿ ಉಡುಪಿ ಜಿಲ್ಲೆಯಲ್ಲಿ ನೆಲೆಸಿರುವ ಗೌಡಾಲು ಸಮುದಾಯದವರಲ್ಲಿ ಮಾತೃಪ್ರಧಾನ ಕುಟುಂಬಗಳು ಹೆಚ್ಚಾಗಿವೆ. ಹಿಂದೆ ಮಹಿಳೆಯರಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನ ಇರುತ್ತಿರಲಿಲ್ಲ. ಆದರೆ ಇತ್ತೀಚೆಗೆ ವಿದ್ಯಾವಂತ ಮಹಿಳೆಯರಿಗೆ ಸಮಾಜದಲ್ಲಿ ಉನ್ನತ ಗೌರವವಿರುವುದು ಕಂಡುಬರುತ್ತದೆ. ಕರ್ತನು ಅಧಿಕಾರಕ್ಕೆ ಬಂದಾಗ ಕರ್ತ ಅವಿಭಕ್ತ ಕುಟುಂಬದ ಜವಾಬ್ದಾರಿಯನ್ನು ಸಂಪೂರ್ಣವಾಗಿ ನಿಭಾಯಿಸುತ್ತಿದ್ದ. ಆದರೆ, ಇಂದಿನ ದಿನಗಳಲ್ಲಿ ಕರ್ತನ ಜವಾಬ್ದಾರಿಯು ಕಡಿಮೆಯಾಗುತ್ತಿದೆ. ಅದೇ ಅಧಿಕಾರ ಕುಟುಂಬದ ಇತರೆ ಸದಸ್ಯರು ಹೊಂದುತ್ತಿದ್ದಾರೆ ಎಂಬುದು ಕಂಡುಬರುತ್ತದೆ. ಹಿಂದೆ ಮಹಿಳೆಯರಿಗೆ ಆಸ್ತಿಯಲ್ಲಿ ಹಕ್ಕು ಇರುತ್ತಿರಲಿಲ್ಲ. ಆದರೆ ಸರಕಾರದ ಕಾನೂನಿನ ಪ್ರಕಾರ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲುಕೊಡುತ್ತಿದ್ದಾರೆ. ಹಿಂದೆ ಅಳಿಯಕಟ್ಟು ಪದ್ಧತಿ ಇವರಲ್ಲಿ ಇತ್ತು. ಅಂದರೆ ಮಗಳಿಗೆ ಮದುವೆ ಮಾಡಿದ ನಂತರ ಅಳಿಯಬಂದು ಮಾವನಮನೆಯಲ್ಲಿಯೇ ಇರಬೇಕಾಗಿತ್ತು. ಮಾವನ ಆಸ್ತಿಗೆ ಅಳಿಯ ವಾರಸುದಾರನಾಗುತ್ತಿದ್ದ. ಆದರೆ ಇತ್ತೀಚಿನ ದಿನಗಳಲ್ಲಿ ಇದು ಬದಲಾಗಿದೆ. ಅಳಿಯಕಟ್ಟಿನ ಬದಲಾಗಿ ಮಕ್ಕಳಕಟ್ಟು ಇದೆ. ಮಕ್ಕಳ ಕಟ್ಟಿನಲ್ಲಿ ಗಂಡು ಮಕ್ಕಳು ಮನೆಯ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಹೀಗೆ ಸಾಮಾಜಿಕವಾಗಿ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಬದಲಾವಣೆಗಳು ಆಗುತ್ತಿವೆ ಎಂಬುವುದು ಈ ಸಂಶೋದನೆಯಿಂದ ಕಂಡುಬರುತ್ತದೆ.

### ಶೈಕ್ಷಣಿಕ ಕ್ಷೇತ್ರದಲ್ಲಿ ಬದಲಾವಣೆ

ಗೌಡಾಲು ಬುಡಕಟ್ಟು ಜನರು ಅನಾದಿ ಕಾಲದಿಂದಲೂ ದಟ್ಟವಾದ ಅರಣ್ಯ ಬೆಟ್ಟ ಗುಡ್ಡಗಳಲ್ಲಿ ನೆಲೆಸಿದ್ದು, ಪ್ರಾರಂಭದಲ್ಲಿ ಶೈಕ್ಷಣಿಕವಾಗಿ ಹಿಂದೆ ಉಳಿದಿದ್ದ ಇವರು, ಈಗಿನ ದಿನಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿಯನ್ನು ಹೊಂದುತ್ತಿರುವುದು ಕಂಡುಬರುತ್ತದೆ. ಇತ್ತೀಚಿನ ವರದಿಯ ಪ್ರಕಾರ ಅಕ್ಷರಸ್ಥರ ಪ್ರಮಾಣ ಶೇ.೪೮ರಷ್ಟಿದೆ. ಆದರೆ ಅನಕ್ಷರಸ್ಥರು ಶೇ.೫೧ರಷ್ಟು ಇರುವುದು ಕಂಡುಬರುತ್ತದೆ. ಹೆಚ್ಚಿನ ಗೌಡಾಲು ಬುಡಕಟ್ಟು ಜನರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಬೇಕು, ಅವರ ಕಾಲ ಮೇಲೆ ಅವರನ್ನು ನಿಲ್ಲಿಸಬೇಕು ಎಂಬ ನಿಲುವನ್ನು ಹೊಂದಿದ್ದಾರೆ. ಪುರುಷರಿಗೆ ಸಮನಾಗಿ ಸ್ತ್ರೀಯರಿಗೆ ಶಿಕ್ಷಣ ಕೊಡಿಸಲು ಬಯಸುತ್ತಾರೆ. ಕೇವಲ ಪ್ರಾಥಮಿಕ ಶಿಕ್ಷಣಕ್ಕೆ ಸೀಮಿತವಾಗಿರದೇ ತಮ್ಮ ಮಕ್ಕಳಿಗೆ ಉನ್ನತ ಹಂತದವರೆಗೆ ಶಿಕ್ಷಣ ಕೊಡಿಸಲು ಇವರು ಬಯಸುತ್ತಾರೆ. ಶಿಕ್ಷಣ ಕೊಡಿಸಲು ಕಾರಣವೇನೆಂದರೆ ಸಮಾಜದಲ್ಲಿ ಯಾವುದೇ ರಂಗದಲ್ಲಿ ಮೇಲೆ ಬರಬೇಕಾದರೆ, ಜೀವನಮಟ್ಟ

ಸುಧಾರಿಸಬೇಕಾದರೆ ಶಿಕ್ಷಣ ಅತಿ ಮುಖ್ಯ ಎಂಬ ನಿಲುವನ್ನು ಹೊಂದಿರುವ ಇವರು ಶಿಕ್ಷಣ ಕೊಡಿಸುತ್ತಿದ್ದಾರೆ. ಅದರಲ್ಲಿಯೂ ನಗರ ಪ್ರದೇಶಗಳಿಗೆ ಮಕ್ಕಳನ್ನು ಕಳುಹಿಸಿ, ಅವರಿಗೆ ವಿದ್ಯಾರ್ಥಿನಿಲಯ ಅಥವಾ ವಸತಿ ವ್ಯವಸ್ಥೆಯನ್ನು ಮಾಡಿಸಿ ಶಿಕ್ಷಣ ಕೊಡಿಸುತ್ತಿದ್ದಾರೆ. ಕೇವಲ ಕಲಾ ವಿಭಾಗಕ್ಕೆ ಮಹತ್ವ ಕೊಡದೆ, ವಾಣಿಜ್ಯ ಮತ್ತು ವಿಜ್ಞಾನ ವಿಭಾಗದಲ್ಲಿಯೂ ಅಭ್ಯಸಿಸಲು ಪ್ರೋತ್ಸಾಹ ನೀಡುತ್ತಿದ್ದಾರೆ. ಗೌಡಾಲು ಬುಡಕಟ್ಟು ಸಮುದಾಯದವರಲ್ಲಿ ಕೆಲವರು Engineiring, Diploma, LLB, I.T.I., B.A., B.Com, M.Sc., M.Com ಪದವೀಧರರಾಗಿರುವುದು ಕಂಡುಬರುತ್ತದೆ. ಹೀಗಾಗಿ ಇತ್ತೀಚಿಗೆ ಆಧುನಿಕತೆಯ ಪರಿಣಾಮದಿಂದ ಗೌಡಾಲು ಜನರ ಶೈಕ್ಷಣಿಕ ಕ್ಷೇತ್ರದಲ್ಲಿ ಬದಲಾವಣೆಯಾಗುತ್ತಿರುವುದು ಈ ಅಧ್ಯಯನದಿಂದ ಕಂಡುಬರುತ್ತದೆ.

### ಆರ್ಥಿಕ ಬದಲಾವಣೆ

ಗೌಡಾಲು ಬುಡಕಟ್ಟು ಜನರು ಹಿಂದಿನಿಂದಲೂ ಆರ್ಥಿಕವಾಗಿ ಸಬಲರಾಗಿರಲಿಲ್ಲ. ಇವರ ಆರ್ಥಿಕ ಮೂಲ ಕೃಷಿಯಾಗಿದ್ದು, ಕೂಲಿಯನ್ನೂ ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಕೃಷಿಯ ಜೊತೆಯಲ್ಲಿ ಗೃಹೋಪಯೋಗಿ ವಸ್ತುಗಳ ಸಂಗ್ರಹಣೆ, ಕಾಡಿನ ವಸ್ತುಗಳ ಸಂಗ್ರಹಣೆ, ಸಣ್ಣಪುಟ್ಟ ವ್ಯಾಪಾರ ಮಾಡುತ್ತಿದ್ದಾರೆ. ಈಗ ಬ್ಯಾಂಕು ಮತ್ತು ಇತರೆ ಆರ್ಥಿಕ ಸಂಸ್ಥೆಗಳು ಗೌಡಾಲು ಬುಡಕಟ್ಟು ಜನರ ಪ್ರಗತಿಗೆ ಶ್ರಮಿಸುತ್ತಿವೆ. ಅವುಗಳೆಂದರೆ LAMPS, IRDP, ST Banks ಇನ್ನೂ ಮುಂತಾದ ಆರ್ಥಿಕ ಸಂಸ್ಥೆಗಳು ಸಾಲದ ರೂಪದಲ್ಲಿ ಹಣವನ್ನು ನೀಡಿ, ಗೌಡಾಲು ಬುಡಕಟ್ಟು ಸಮುದಾಯದ ಆರ್ಥಿಕ ಪ್ರಗತಿಗೆ ಶ್ರಮಿಸುತ್ತಿವೆ. ಈ ಕಾರಣದಿಂದಾಗಿ ಈ ಬುಡಕಟ್ಟು ಜನರಲ್ಲಿ ಬದಲಾವಣೆಗಳು ಆಗುತ್ತಿವೆ. ಹಾಗೆಯೇ ಶಿಕ್ಷಣ ಪಡೆದವರು ಉನ್ನತ ದರ್ಜೆಯ ವೃತ್ತಿಗೆ ಆಯ್ಕೆಯಾದ ನಂತರ ಅವರ ಆರ್ಥಿಕ ಮಟ್ಟ ಸುಧಾರಿಸಿ ಜೀವನ ಶೈಲಿಯಲ್ಲಿ ಬದಲಾವಣೆಯಾಗುತ್ತಿದೆ. ಬ್ಯಾಂಕುಗಳಲ್ಲಿ, ವಿಮೆ ಕಂಪನಿಯಲ್ಲಿ, ಮನೆಗಳಲ್ಲಿ ಸಂಬಂಧಿಕರಲ್ಲಿ ಹಣ ನೀಡುವ ಮೂಲಕ ಉಳಿತಾಯ ಮಾಡುತ್ತಿದ್ದಾರೆ. ಇದರಿಂದ ಅವರ ಆರ್ಥಿಕ ಮಟ್ಟ ಸುಧಾರಣೆಯಾಗಿದೆ. ಹಿಂದೆ ಕೃಷಿಯಲ್ಲಿ ಭತ್ತ, ರಾಗಿ ಬೆಳೆಯುತ್ತಿದ್ದರು. ಆದರೆ, ಇತ್ತೀಚಿನ ವರ್ಷಗಳಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಉದಾಹರಣೆಗೆ ಅಡಿಕೆ, ಕಾಫಿ, ತೆಂಗು, ಏಲಕ್ಕಿ, ಮೆಣಸು, ಶುಂಠಿಯಂತಹ ಬೆಳೆಗಳನ್ನು ಬೆಳೆದು ಸುಧಾರಣೆ ಹೊಂದುತ್ತಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

### ಉದ್ಯೋಗದಲ್ಲಿ ಬದಲಾವಣೆ

ಗೌಡಾಲು ಬುಡಕಟ್ಟು ಸಮುದಾಯದವರು ಹಿಂದಿನಿಂದಲೂ ಕೂಲಿ ಕೆಲಸ ಹಾಗೂ ಕೃಷಿ ಕಾರ್ಮಿಕರಾಗಿ ಕೆಲಸವನ್ನು ಮಾಡುತ್ತಿದ್ದರು. ಹಾಗೆಯೇ ಕಾಡು ಉತ್ಪನ್ನಗಳನ್ನು ಸಂಗ್ರಹಿಸುತ್ತಿದ್ದರು. ಅವುಗಳೆಂದರೆ ಶೀಗೆಕಾಯಿ, ಅಂಟುವಾಳಕಾಯಿ. ಮೆಣಸು, ಏಲಕ್ಕಿ, ಗೆಡ್ಡೆಗೆಣಸು, ಜೇನು ತೆಗೆಯುವುದು, ಉಪ್ಪರಣೆ ಹುಳಿ ಇನ್ನು ಮುಂತಾದ ಕಾಡು ಉತ್ಪನ್ನಗಳನ್ನು ಸಂಗ್ರಹಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಶಿಕ್ಷಣದ ಪರಿಣಾಮದಿಂದಾಗಿ ಸಣಪುಟ್ಟ ವ್ಯಾಪಾರ, ಸರಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗ ಮಾಡುತ್ತಿದ್ದಾರೆ. ಕೆಲವರು ಶಿಕ್ಷಕರಾಗಿ, ಉಪನ್ಯಾಸಕರಾಗಿ, ಇಂಜಿನಿಯರ್‌ಗಳಾಗಿ, ವಕೀಲರಾಗಿ ಸೇವೆಯನ್ನು ಮಾಡುತ್ತಿದ್ದಾರೆ. ಹಾಗಾಗಿ ಈ ಬುಡಕಟ್ಟು ಸಮುದಾಯದವರ ವೃತ್ತಿ ಜೀವನದಲ್ಲಿ ಬದಲಾವಣೆಯಾಗುತ್ತಿರುವುದು ತಿಳಿದುಬರುತ್ತದೆ.

### ಸಾಂಸ್ಕೃತಿಕ ಬದಲಾವಣೆ

ಗೌಡಾಲು ಬುಡಕಟ್ಟು ಸಮುದಾಯದವರು ತಮ್ಮದೇ ಆದಂತಹ ಆಚಾರ-ವಿಚಾರ, ನಡೆ-ನುಡಿ, ರೂಢಿ-ಸಂಪ್ರದಾಯ, ಉಡುಗೆ-ತೊಡುಗೆ, ರೀತಿ-ರಿವಾಜಿನಲ್ಲಿ, ಹಬ್ಬ-ಹರಿದಿನ, ಜಾತ್ರೆ, ವಾರ್ಷಿಕ ಆಚರಣೆಯಲ್ಲಿ ಬದ್ಧರಾಗಿದ್ದರು. ಆದರೆ ಶಿಕ್ಷಣ ಮತ್ತು ಆಧುನೀಕರಣದ ಪರಿಣಾಮದಿಂದಾಗಿ ಇವರ ಸಾಂಸ್ಕೃತಿಕ ಕ್ಷೇತ್ರದಲ್ಲಿ ಬದಲಾವಣೆಯಾಗುತ್ತಿರುವುದು ಕಂಡುಬರುತ್ತದೆ. ಉದಾಹರಣೆಗೆ ಹಿಂದೆ ಹಬ್ಬಗಳನ್ನು ಬಹಳ ಸಾಂಪ್ರದಾಯಿಕತೆಯಿಂದ ಮಾಡುತ್ತಿದ್ದರು. ಆದರೆ ಇತ್ತೀಚೆಗೆ ಸಂಸ್ಕೃತೀಕರಣ ಮತ್ತು ಒಕ್ಕಲಿಗ ಗೌಡರ ಸಂಪ್ರದಾಯಗಳ ಪ್ರಭಾವದಿಂದಾಗಿ ಸಾಂಸ್ಕೃತಿಕ ಬದಲಾವಣೆಯಾಗುತ್ತಿದೆ. ಹಿಂದೆ ಮದುವೆಯ ಶಾಸ್ತ್ರದಲ್ಲಿ ಪುರೋಹಿತರಿಗೆ ಆದ್ಯತೆ ಕೊಡುತ್ತಿರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಪುರೋಹಿತರು ಇರಲೇಬೇಕು. ಹೆಚ್ಚಿನ ಗೌಡಾಲು ಸಮುದಾಯದವರು ಪುರೋಹಿತರನ್ನು ಕರೆಸುತ್ತಾರೆ. ಹಿಂದಿನ ಶಾಸ್ತ್ರದ ಪ್ರಕಾರ ವಿವಾಹ ಮಾಡುವಾಗ ಪ್ರಸಾದ ಮತ್ತು ಸಾಲಾವಳಿ ನೋಡುತ್ತಿದ್ದರು. ಆದರೆ ಈಗ ಜಾತಕ ನೋಡುತ್ತಿದ್ದಾರೆ. ಕೆಲವರು ಬಳಿಯನ್ನು ನೋಡುತ್ತಿದ್ದರು. ಆದರೆ ಈಗ ಬಳಿ ಸಾಲಾವಳಿ, ಜಾತಕ, ಪ್ರಸಾದ ಇವುಗಳಿಗೆ ಅಷ್ಟೊಂದು ಮಹತ್ವ ಇಲ್ಲದೆ ಇರುವುದು ಕಂಡುಬರುತ್ತದೆ.

ಹಿಂದೆ ವಿವಾಹ ಮಾಡುವಾಗ ನಾಮಧಾರಿ ಗೌಡಾಲು, ಮಲೆ ಗೌಡಾಲು, ಕುಂಬ್ರಿ ಗೌಡಾಲು, ಮಲೆಕುಡಿಯ ಗೌಡಾಲುಗಳ ಮಧ್ಯದಲ್ಲಿ ಅಂತರವಿರುತ್ತಿತ್ತು. ಈ ನಾಲ್ಕು ಪಂಗಡಗಳು ಆಯಾಯ ಪಂಗಡದ ಒಳಗೆಯೇ ವಿವಾಹವಾಗಬೇಕಾಗುತ್ತಿತ್ತು. ಆದರೆ ಈಗ ಸಂಪ್ರದಾಯ ಬದಲಾಗಿದೆ. ಯಾರು ಯಾರನ್ನು ಬೇಕಾದರೂ ವಿವಾಹವಾಗುತ್ತಿದ್ದಾರೆ. ಹಾಗೆಯೇ ಹಿಂದೆ ಪ್ರೇಮವಿವಾಹ ಅಂತರ್‌ಜಾತಿ ವಿವಾಹ, ನೋಂದಣಿ ವಿವಾಹಕ್ಕೆ ಅಷ್ಟೊಂದು ಮಹತ್ವ ಇರುತ್ತಿರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಇದು ಬದಲಾಗಿದೆ. ಸರಳ ವಿವಾಹ, ಅಂತರ್ಜಾತಿ ವಿವಾಹ ಮತ್ತು ನೋಂದಣಿ ವಿವಾಹಗಳು ಆಗುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಹಾಗೆಯೇ ವಿವಾಹ ಮಾಡುವಾಗ ತಂದೆ, ತಾಯಿ ಮತ್ತು ಸೋದರ ಮಾವನ ಪಾತ್ರವೇ ಪ್ರಮುಖವಾಗಿತ್ತು. ಈಗ ಇದರ ಜೊತೆ ಪುರೋಹಿತರ ಪಾತ್ರವೂ ಮುಖ್ಯವಾಗಿರುವುದು ಕಂಡುಬರುತ್ತದೆ. ಹೀಗೆ ಗೌಡಾಲು ಸಮುದಾಯದವರ ಸಾಂಸ್ಕೃತಿಕ ಕ್ಷೇತ್ರದಲ್ಲಿ ಬದಲಾವಣೆಗಳು ಆಗುತ್ತಿರುವುದು ಕಂಡುಬರುತ್ತದೆ.

### ಧಾರ್ಮಿಕ ಬದಲಾವಣೆ

ಗೌಡಾಲು ಬುಡಕಟ್ಟು ಜನರು ಧಾರ್ಮಿಕತೆಯನ್ನು ಹಿಂದಿನಿಂದಲೂ ಮೈಗೂಡಿಸಿಕೊಂಡು ಬಂದಿದ್ದಾರೆ. ಅವರು ಹಲವಾರು ದೇವರುಗಳನ್ನು ಆರಾಧಿಸಿಕೊಂಡು ಬಂದಿದ್ದಾರೆ. ಶಿವ, ವಿಷ್ಣು, ಲಕ್ಷ್ಮೀ, ಹಾಗೆಯೇ ದೈವಗಳಲ್ಲಿ ಪಂಜುರ್ಲಿ, ಗುಳಿಗ, ವರ್ತೆ, ಕಲ್‌ಕುಟ್ಟಿ, ಮಾರಿ, ಜಟುಗ, ಜಾಡೆ, ರಾವುಭೂತ, ಬರ್ಮ, ನಾಗ, ನಂದಿ, ಚೌಡಿ, ಹೀಗೆ ಹಲವಾರು ದೈವಗಳ ಬಗ್ಗೆ ನಂಬಿಕೆ ಇರುವುದು ಕಂಡುಬರುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಇವುಗಳ ಆಚರಣೆಯು ಕಡಿಮೆಯಾಗುತ್ತಿದೆ. ಅಂದರೆ ಆಧುನೀಕರಣದ ಪ್ರಭಾವದಿಂದಾಗಿ ಧಾರ್ಮಿಕ ಬದಲಾವಣೆಗಳು ಆಗುತ್ತಿರುವುದು ಕಂಡುಬರುತ್ತಿದೆ. ಹಾಗೆಯೇ ಹಬ್ಬಗಳಲ್ಲಿ ದೀಪಾವಳಿ, ಯುಗಾದಿ, ಜಾತ್ರೆ

ಹಬ್ಬಗಳು ಇವರಲ್ಲಿ ಮುಖ್ಯವಾಗಿದ್ದವು. ಆದರೆ, ಹಬ್ಬಗಳ ಆಚರಣೆಯು ಆಧುನಿಕ ದಿನಗಳಲ್ಲಿ ಬದಲಾಗುತ್ತಿದೆ. ಹಾಗೆಯೇ ಕದಿರುಹಬ್ಬ, ಶಿವರಾತ್ರಿ, ಜಾತ್ರೆಹಬ್ಬ, ನಾಗರ ಪಂಚಮಿ, ಆಟಿ ಅಮಾವಾಸ್ಯೆ, ಹರಕೆ ಹಬ್ಬ, ಮಹಾಲಯ ಅಮಾವಾಸ್ಯೆ ಇವುಗಳ ಬಗ್ಗೆ ಪ್ರಾರಂಭದ ವರ್ಷಗಳಲ್ಲಿ ಇದ್ದಂತಹ ನಿಲುವುಗಳು ಈಗ ಇಲ್ಲ. ಕಾರಣ ಇವರ ಧಾರ್ಮಿಕ ಆಚರಣೆಗಳು ಬದಲಾಗುತ್ತಿವೆ. ಕುಲೆಗಳಿಗೆ ಹಿಂದೆ ಪ್ರತಿ ದಿನವೂ ಎಡೆ ಇಡಬೇಕಾಗುತ್ತಿತ್ತು. ಆದರೆ ದಾರ್ಮಿಕತೆಯ ಬದಲಾವಣೆಯಿಂದ ವರ್ಷಕ್ಕೆ ಒಮ್ಮೆ ವಿಶೇಷ ಸಂದರ್ಭದಲ್ಲಿ ಕುಲೆಗಳಿಗೆ ಊಟ ಬಡಿಸುತ್ತಿರುವುದು ಕಂಡುಬರುತ್ತದೆ. ಈಗ ಇವರಿಗೆ ಆಧುನಿಕ ದೇವರುಗಳ ಬಗ್ಗೆ ನಂಬಿಕೆಯು ಮೂಡಿದೆ. ಆ ದೇವರುಗಳೆಂದರೆ, ಲಕ್ಷ್ಮೀವೆಂಕಟರಮಣ, ತಿರುಪತಿ ತಿಮ್ಮಪ್ಪ, ಶೃಂಗೇರಿಯ ಶಾರದಾಂಬೆ, ಧರ್ಮಸ್ಥಳದ ಮಂಜುನಾಥಸ್ವಾಮಿ, ಕಳಸದ ಕಲಶೇಶ್ವರ, ಕಿಗ್ಗದ ಪುಷ್ಪಶೃಂಗೇಶ್ವರ, ಸುಬ್ರಮಣ್ಯದ ಸುಬ್ರಮಣ್ಯಸ್ವಾಮಿ, ಹೀಗೆ ಗೌಡಾಲು ಜನರು ಧಾರ್ಮಿಕ ನಂಬಿಕೆಗಳ ಬಗ್ಗೆ ಸರಳ ಮನೋಭಾವನೆ ಹೊಂದಿದ್ದು, ಇವುಗಳ ಮೂಲಕ ಅವರ ಧಾರ್ಮಿಕ ವಿಚಾರಗಳಲ್ಲಿ ಬದಲಾವಣೆಯಾಗಿರುವುದು ಈ ಅಧ್ಯಯನದಿಂದ ಕಂಡುಕೊಳ್ಳಬಹುದು.

**ಸಾಂಪ್ರದಾಯಿಕ ಬದಲಾವಣೆ**

ಗೌಡಾಲು ಜನರ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಬದಲಾವಣೆ ಆಗಿರುವುದು ಕಂಡುಬರುತ್ತದೆ. ಹಳೆಯ ಸಂಪ್ರದಾಯಗಳ ಸ್ಥಾನದಲ್ಲಿ ಹೊಸ ಸಂಪ್ರದಾಯಗಳು ಬೆಳೆಯುತ್ತಿವೆ. ಹಲವಾರು ಹಳೆಯ ಸಂಪ್ರದಾಯಗಳು ಇತ್ತೀಚಿನ ದಿನಗಳಲ್ಲಿ ಕಾಣಸಿಕೊಳ್ಳುತ್ತಿಲ್ಲ. ಹಬ್ಬಹರಿದಿನಗಳಲ್ಲಿ, ಸಂಸ್ಕಾರಗಳಲ್ಲಿ, ಶಾಸ್ತ್ರಗಳಲ್ಲಿ, ಜನನಶಾಸ್ತ್ರದಲ್ಲಿ, ತೊಟ್ಟಿಲಿಗೆ ಹಾಕುವ ಸಂಪ್ರದಾಯ, ಬಯಕೆಯ ಶಾಸ್ತ್ರದಲ್ಲಿ ಮದುವೆಯ ಶಾಸ್ತ್ರದಲ್ಲಿ, ಮರಣದಶಾಸ್ತ್ರದಲ್ಲಿ ಒಟ್ಟಾರೆಯಾಗಿ ಮಗುವಿನ ಹುಟ್ಟಿನಿಂದ ಹಿಡಿದು ಸಾವಿನವರೆಗೆ ದಿನನಿತ್ಯದ ಆಚರಣೆಗಳಲ್ಲಿ ಬಹಳಷ್ಟು ಬದಲಾವಣೆಗಳು ಆಗುತ್ತಿರುವುದು ಕಂಡುಬರುತ್ತದೆ. ಉದಾಹಣೆಗೆ ದೀಪಾವಳಿ ಹಬ್ಬದ ಸಂದರ್ಭದಲ್ಲಿ ಆಡುವಂತಹ ಹಲವಾರು ಆಟಗಳು, ಮಾಡುವ ಉತ್ಸವಗಳು ಇತ್ತೀಚೆಗೆ ಕಡಿಮೆಯಾಗುತ್ತಿವೆ. ಅವುಗಳೆಂದರೆ ಅಂಟಿಗೆ ಪಂಟಿಗೆ, ಕೋಲಾಟ, ಕರಡಿ ಕುಣಿತ, ಹುಲಿಕುಣಿತ, ಹಲ್ಲಿಯ ಕುಣಿತ ಇವು ಹಿಂದಿನಿಂದಲೂ ಬೆಳೆದು ಬಂದಂತಹ ಸಂಪ್ರದಾಯಗಳಾಗಿದ್ದವು. ಇವುಗಳ ಆಚರಣೆಯು ಇತ್ತೀಚೆಗೆ ಕಡಿಮೆಯಾಗಿದೆ. ಕೆಲವೊಂದು ಕಡೆಗಳಲ್ಲಿ ಈ ಸಂಪ್ರದಾಯಗಳು ಇಂದಿಗೂ ಇದ್ದರೂ ಸಹ ಅದನ್ನು ಆಚರಿಸುವ ಕ್ರಮವು ಬೇರೆಯದೇ ಆಗಿದೆ. ಹಿಂದೆ ಕೋಲಾಟದಲ್ಲಿ ಗೌಡಾಲು ಸಮುದಾಯದವರು ಸ್ವತಃ ರಚಿಸಿದ ಪದ್ಯಗಳನ್ನು ಹಾಡುತ್ತಿದ್ದರು. ಹಾಗೆಯೇ ಪ್ರತಿಯೊಂದು ಪದ್ಯವು ಒಂದು ವಿಶಿಷ್ಟ ಅರ್ಥವನ್ನು ಹೊಂದಿತ್ತು. ಆದರೆ ಇತ್ತೀಚೆಗೆ ಈ ಕೋಲಾಟದಲ್ಲಿ ಬೇರೆಯವರು ರಚಿಸಿದ ಜಾನಪದ ಪದ್ಯಗಳನ್ನು ಮತ್ತು ಸಿನಿಮಾ ಗೀತೆಗಳನ್ನು ಹಾಡುತ್ತಿರುವುದು ಕಂಡುಬರುತ್ತದೆ. ಹೀಗೆ ಗೌಡಾಲು ಜನರ ಉಡುಗೆ-ತೊಡುಗೆ, ಊಟ-ವಸತಿ, ಆಚಾರ-ವಿಚಾರ, ಸಾಂಪ್ರದಾಯಿಕತೆಯಲ್ಲಿ ಬದಲಾವಣೆಗಳು ಆಗುತ್ತಿರುವುದು ಕಂಡುಬರುತ್ತದೆ.

**ಸಾಂಪ್ರದಾಯಿಕ ನಾಯಕತ್ವ ಹಾಗೂ ರಾಜಕೀಯ ಬದಲಾವಣೆ**

ಗೌಡಾಲು ಬುಡಕಟ್ಟು ಜನರು ಹಿಂದಿನಿಂದಲೂ ಅಧಿಕಾರವನ್ನು ಚಲಾಯಿಸಿಕೊಂಡು ಬಂದವರಲ್ಲ. ಇವರ ಸಮಾಜ ವ್ಯವಸ್ಥಿತವಾಗಿ ಇರಲು ಇವರಲ್ಲಿ ಪಂಚಾಯತಿ ವ್ಯವಸ್ಥೆ ಇತ್ತು. ಗುರಿಕಾರರು ತಮ್ಮ ವ್ಯಾಪ್ತಿಯಲ್ಲಿ

ಯಾವುದೇ ಸಮಸ್ಯೆ ಇದ್ದರೂ ಅದನ್ನು ಸಂಪೂರ್ಣವಾಗಿ ನಿಭಾಯಿಸುತ್ತಿದ್ದರು. ನ್ಯಾಯ ತೀರ್ಮಾನಿಸಲು ಗೌಡ, ಬುದ್ಧಿವಂತರು ಮತ್ತು ಯಜಮಾನರು ಇರುತ್ತಿದ್ದರು. ಒಂದು ಕೊಡಿಗೆಗೆ ಒಬ್ಬರಂತೆ ಗುರಿಕಾರರು ಇರುತ್ತಿದ್ದರು. ೩ ಕೊಡಿಗೆ, ೬ ಕೂಡಿಗೆ ಮತ್ತು ೮ ಕೊಡಿಗೆಗೆ ಸೀಮೆಗೌಡರು ಇರುತ್ತಿದ್ದರು. ಯಜಮಾನರ ಮತ್ತು ಬುದ್ಧಿವಂತರ ವಿಚಾರವನ್ನು ಆಲಿಸಿದ ಗೌಡ, ನಾಯಕ ತೀರ್ಮಾನವನ್ನು ಕೊಡುತ್ತಿದ್ದರು. ತೀರ್ಮಾನವೇ ಅಂತಿಮವಾಗಿರುತ್ತಿತ್ತು. ಹೀಗೆ ಗುರಿಕಾರರೇ ಎಲ್ಲ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದರು ಎಂಬುದು ಕಂಡುಬರುತ್ತದೆ. ಆದರೆ ಇತ್ತೀಚೆಗೆ ಈ ವ್ಯವಸ್ಥೆ ಬದಲಾಗಿದೆ. ಗೌಡಾಲು ಸದಸ್ಯರು ಚುನಾವಣೆಯಲ್ಲಿ ಭಾಗಿಯಾಗುತ್ತಿದ್ದಾರೆ. ಕೆಲವರು ಮತದಾರರಾಗಿ, ಕೆಲವರು ಪಕ್ಷದ ಸಂಘಟಕರಾಗಿ ಇನ್ನೂ ಕೆಲವರು ಚುನಾವಣೆಯ ಸಂದರ್ಭದಲ್ಲಿ ಪ್ರಚಾರ ಮಾಡುತ್ತಿದ್ದಾರೆ. ಅವರಲ್ಲಿ ಕೆಲವರು ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ ಮಟ್ಟದಲ್ಲಿ ಚುನಾವಣೆಗೆ ಸ್ಪರ್ಧಿಸಿ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ ಎಂಬುದು ಈ ಅಧ್ಯಯನದಿಂದ ಕಂಡುಬರುತ್ತದೆ. ಹೀಗೆ ಗೌಡಾಲು ಬುಡಕಟ್ಟು ಜನರಲ್ಲಿ ರಾಜಕೀಯ ಪ್ರಜ್ಞೆಯು ಬೆಳೆಯುತ್ತಿದ್ದು, ಇದರ ಮೂಲಕ ಅವರ ವೈಚಾರಿಕ ದೃಷ್ಟಿಕೋನದಲ್ಲಿ ಬದಲಾವಣೆಯಾಗುತ್ತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ. ಹಾಗೆಯೇ ಆಗುತ್ತಿರುವ ಬದಲಾವಣೆಯು ನಿಧಾನಗತಿಯಲ್ಲಿ ಮತ್ತು ಕೆಲವೊಂದು ಗೌಡಾಲು ಜನರಲ್ಲಿ ವೇಗವಾಗಿ ನಡೆಯುತ್ತಿರುವುದು ಕಂಡುಬರುತ್ತದೆ.

### ಸಾರಿಗೆ ಮತ್ತು ಸಂಪರ್ಕದಲ್ಲಿ ಬದಲಾವಣೆ

ಗೌಡಾಲು ಬುಡಕಟ್ಟು ಸಮುದಾಯದವರು ಹಿಂದಿನಿಂದಲೂ ಗುಡ್ಡಗಾಡು, ದಟ್ಟ ಅರಣ್ಯಗಳಲ್ಲಿ, ಕಣಿವೆ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ನೂರಾರು ವರುಷಗಳವರೆಗೆ ಇವರಿಗೆ ನಗರಗಳ ಸಂಪರ್ಕ ಇರಲಿಲ್ಲ. ಕ್ರಮೇಣ ಇವರು ಸಂಪರ್ಕ ಸಾಧನವನ್ನು ಕಂಡುಕೊಂಡರು. ಪ್ರತಿದಿನ ಕಾಲು ದಾರಿಯಿಂದಲೇ ೫ ರಿಂದ ೨೫ ಕಿ.ಮೀ.ವರೆಗೆ ನಡೆದುಕೊಂಡು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುತ್ತಿದ್ದರು. ಇದಕ್ಕೆ ಸೂಕ್ತ ಸಂಪರ್ಕ ಸಾಧನದ ಕೊರತೆಯೇ ಮೂಲಕಾರಣವಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಸರಕಾರದ ಯೋಜನೆಗಳ ಪ್ರಭಾವದಿಂದ ಸಾರಿಗೆ ಮತ್ತು ಸಂಪರ್ಕದ ವ್ಯವಸ್ಥೆ ಬೆಳೆಯುತ್ತಿದೆ. ಅವುಗಳೆಂದರೆ, ಗೌಡಾಲು ಜನರು ನೆಲೆಸಿರುವ ಸ್ಥಳಗಳಲ್ಲಿ ರಸ್ತೆಯನ್ನು ಮಾಡುವುದು, ಅವರಿಗೆ ವಾಹನಗಳ ಸೌಕರ್ಯ ಕಲ್ಪಿಸಿಕೊಡುವುದು, ದೂರವಾಣಿ ಸಂಪರ್ಕ ಒದಗಿಸಿಕೊಡುವುದು, ಗೌಡಾಲು ಜನರು ವಾಹನಗಳನ್ನು ಕೊಂಡುಕೊಳ್ಳುವುದಾದರೆ ಅವರಿಗೆ ಹಣಕಾಸಿನ ಅನುಕೂಲತೆ ಒದಗಿಸಿ ಕೊಡುವುದು, ಹಾಗೆಯೇ ಬೆಳೆದಿರುವ ಬೆಳೆಗಳಿಗೆ ಸರಿಯಾದ ಬೆಲೆ ಕೊಡಿಸುವುದು, ಹೊಸ ಹೊಸ ಮಾಹಿತಿಗಳನ್ನು ಒದಗಿಸುವುದು. ಹೀಗೆ ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ಮತ್ತು ಇತರೆ ಅನುಕೂಲತೆಗಳಲ್ಲಿ ಹಲವಾರು ರೀತಿಯ ಬದಲಾವಣೆಗಳು ಆಗಿರುವುದು ಕಂಡುಬರುತ್ತದೆ.

### ಜೀವನ ಶೈಲಿಯಲ್ಲಿ ಬದಲಾವಣೆ

ಹಿಂದಿನ ಕಾಲದಲ್ಲಿ ಗೌಡಾಲು ಜನರ ಜೀವನ ವಿಧಾನವು ತುಂಬ ಸರಳವಾಗಿತ್ತು. ದಿನಕ್ಕೆ ೧ರಿಂದ ೨ ಹೊತ್ತು ಗಂಜಿ ಅಥವಾ ಅಂಬಲಿ ಸಿಕ್ಕರೆ ಅದುವೇ ಅವರಿಗೆ ದೊಡ್ಡದಾಗಿರುತ್ತಿತ್ತು. ಆದರೆ ಇತ್ತೀಚೆಗೆ ಅವರ

ಜೀವನ ವಿಧಾನದಲ್ಲಿ ಆಹಾರ, ಉಡುಪು, ವಸತಿ, ವೃತ್ತಿ, ಹೀಗೆ ಜೀವನಕ್ಕೆ ಬೇಕಾಗುವ ಮೂಲ ಅವಶ್ಯಕತೆಗಳಲ್ಲಿ ಬದಲಾವಣೆಯಾಗಿದೆ. ಶ್ರೀಮಂತರಾಗದೇ ಇದ್ದರೂ ಸಹ ಸ್ವಲ್ಪ ಪ್ರಮಾಣದಲ್ಲಿ ಆರ್ಥಿಕವಾಗಿ ಸುಧಾರಣೆ ಹೊಂದಿದ್ದಾರೆ. ಶಿಕ್ಷಣದ ಮತ್ತು ಆಧುನೀಕರಣದ ಪ್ರಭಾವದಿಂದ ಹಾಗೂ ಬೇರೆಯವರ ಜೀವನ ವಿಧಾನ ಅವಲೋಕಿಸುವುದರ ಪರಿಣಾಮವಾಗಿ ಗೌಡಾಲು ಜನರ ಜೀವನ ಶೈಲಿಯಲ್ಲಿ ಬದಲಾವಣೆಗಳಾಗುತ್ತಿರುವುದು ಕಂಡುಬರುತ್ತದೆ.

**ಜನಸಂಖ್ಯೆಯಲ್ಲಿ ಬದಲಾವಣೆ**

ಅನಾದಿಕಾಲದಿಂದಲೂ ಕರ್ನಾಟಕದಲ್ಲಿ ನೆಲೆಸಿರುವ ಗೌಡಾಲು ಬುಡಕಟ್ಟು ಜನರು, ಎಲ್ಲ ಜಿಲ್ಲೆಗಳಲ್ಲಿಯೂ ವಾಸವಾಗಿದ್ದರು ಎಂಬುದು ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಇದನ್ನು ಕುರಿತು ೧೯೯೧ರ ಬುಡಕಟ್ಟು ಜನರ ಜನಗಣತಿ ಮತ್ತು ೨೦೦೧ರ ಜನಗಣತಿಯ ಅಂಕಿ ಅಂಶಗಳನ್ನು ಕೆಳಗಿನ ಕೋಷ್ಟಕದಿಂದ ಕಂಡುಕೊಳ್ಳಬಹುದು.

**ಕೋಷ್ಟಕ ೭.೦೧**

**ಗೌಡಾಲು ಬುಡಕಟ್ಟು ಜನರ ಜನಸಂಖ್ಯೆ**

**Gowdalu Scheduled Tribes Population in Karnataka 1991**

| | Male | Female | Total |
|---|---|---|---|
| 1991 | 4204 | 4018 | 8222 |
| Rural | 3563 | 3450 | 7013 |
| Urban | 641 | 568 | 1209 |

**Gowdalu Scheduled Tribes Population in Karnataka 2001**

| | | | |
|---|---|---|---|
| 2001 | 6347 | 6160 | 12507 |
| Rural | 3906 | 3874 | 7780 |
| Urban | 2441 | 2286 | 4727 |

ಮೇಲಿನ ಕೋಷ್ಟಕದಿಂದ ಕಂಡುಬರುವ ಸಂಗತಿ ಎಂದರೆ, ೧೯೯೧ರಲ್ಲಿ ಕರ್ನಾಟಕದಲ್ಲಿ ಗೌಡಾಲು ಬುಡಕಟ್ಟು ಜನರ ಒಟ್ಟು ಜನಸಂಖ್ಯೆ ೮೨೨೨ ಆಗಿದ್ದು, ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರುವವರ ಸಂಖ್ಯೆ ೭೦೧೩ ಆಗಿದ್ದು, ನಗರ ಪ್ರದೇಶದಲ್ಲಿ ೧೨೦೯ ಜನ ವಾಸವಾಗಿದ್ದರು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಒಟ್ಟು ೫೯೧೦ ಜನ ವಾಸವಾಗಿದ್ದು, ಶಿವಮೊಗ್ಗ ಜಿಲ್ಲೆಯಲ್ಲಿ ಒಟ್ಟು ೧೮೪ ಜನ ವಾಸವಾಗಿದ್ದು, ದಕ್ಷಿಣ ಕರ್ನಾಟಕದಲ್ಲಿ ಒಟ್ಟು ೭೩ ಜನ ವಾಸವಾಗಿರುವುದು ಕಂಡುಬರುತ್ತದೆ. ಹಾಗೆಯೇ ೨೦೦೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಒಟ್ಟು ೧೨೫೦೭ ಜನ ವಾಸವಾಗಿದ್ದು, ಅವರಲ್ಲಿ ೭೭೮೦ ಜನ ಗ್ರಾಮೀಣ ಪ್ರದೇಶದಲ್ಲಿ

ಮತ್ತು ೪೭೨೭ ಜನರು ನಗರ ಪ್ರದೇಶದಲ್ಲಿ ವಾಸವಾಗಿದ್ದಾರೆ. ಜಿಲ್ಲಾವಾರು ನೋಡುವುದಾದರೆ, ಚಿಕ್ಕಮಗಳೂರು ಜಿಲ್ಲೆಯಲ್ಲಿ ಒಟ್ಟು ೭೦೬೭ ಜನ ವಾಸವಾಗಿದ್ದು, ಶಿವಮೊಗ್ಗ ಜಿಲ್ಲೆಯಲ್ಲಿ ಒಟ್ಟು ೧೩೬ ಜನ ಮತ್ತು ಉಡುಪಿ ಜಿಲ್ಲೆಯಲ್ಲಿ ಒಟ್ಟು ೫೮ ಜನ ವಾಸವಾಗಿರುವುದು ಕಂಡುಬರುತ್ತದೆ.

ಹಾಗೆಯೇ ೧೯೯೧ಕ್ಕಿಂತ ಹಿಂದಿನ ಅಂಕಿ ಅಂಶವನ್ನು ನೋಡಿದರೆ ೧೯೭೧ರಲ್ಲಿ ಗೌಡಾಲು ಜನರ ಸಂಖ್ಯೆ ಒಟ್ಟು ೫೧೪೬, ೧೯೮೧ರಲ್ಲಿ ೬೨೨೩ ಜನ ವಾಸವಾಗಿರುವುದು ಕಂಡುಬರುತ್ತದೆ. ೧೯೭೧ರಿಂದ ಇತ್ತೀಚಿನ ಅಂಕಿ ಅಂಶವನ್ನು ಗಮನಿಸಿದಾಗ ಗೌಡಾಲು ಬುಡಕಟ್ಟು ಸಮುದಾಯದವರ ಜನಸಂಖ್ಯೆಯು ಹೆಚ್ಚಾಗಿದ್ದು, ಮುಂದಿನ ದಿನಗಳಲ್ಲಿ ಇನ್ನೂ ಹೆಚ್ಚಾಗುತ್ತದೆ ಎಂದು ಊಹಿಸಬಹುದು.

**ಮಹಿಳೆಯರ ಸ್ಥಾನಮಾನದಲ್ಲಿ ಬದಲಾವಣೆ**

ಸಮಾಜದಲ್ಲಿ ಪ್ರತಿಯೊಬ್ಬ ಮನುಷ್ಯನೂ ತನ್ನದೇ ಆದ ಅಂತಸ್ತನ್ನು ಹೊಂದಿರುತ್ತಾನೆ. ಹಿಂದಿನಿಂದಲೂ ಪುರುಷಪ್ರಧಾನವಾದ ಸಮಾದಲ್ಲಿ ಪುರುಷರದ್ದೇ ಮೇಲುಗೈಯಾಗಿರುವುದು ಕಂಡುಬರುತ್ತದೆ. ಅದೆ ರೀತಿ ಗೌಡಾಲು ಬುಡಕಟ್ಟು ಸಮುದಾಯದಲ್ಲಿ ಹಿಂದಿನಿಂದಲೂ ಪುರುಷಪ್ರಧಾನತೆಯೇ ಹೆಚ್ಚು. ಉದಾಹರಣೆಗೆ ಗುರಿಕಾರ ಪದ್ಧತಿ, ಕರ್ತನ ಅಧಿಕಾರ, 'ಕೊಡಿಗೆ' ಜವಾಬ್ದಾರಿ ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ಪುರುಷರಿಗೆ ಪ್ರಾಮುಖ್ಯತೆ ಇರುತ್ತಿತ್ತು. ಮಹಿಳೆಯರಿಗೆ ಯಾವುದೇ ಅಂತಸ್ತು ಇರುತ್ತಿರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಮಹಿಳೆಯರು ಕೇವಲ ಮನೆಯ ನಾಲ್ಕು ಗೋಡೆಗಳಿಗೆ ಸೀಮಿತವಾಗಿರದೆ ಹಲವಾರು ಕ್ಷೇತ್ರಗಳಲ್ಲಿ ಭಾಗಿಯಾಗುತ್ತಿದ್ದಾರೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಸಬಲೀಕರಣ ಹೊಂದುತ್ತಿದ್ದಾರೆ. ಶಿಕ್ಷಣದ ಪ್ರಭಾವ ಮತ್ತು ವೈಚಾರಿಕ ದೃಷ್ಟಿಕೋನದ ಹಿನ್ನೆಲೆಯಲ್ಲಿ ಪುರುಷರಿಗೆ ಸಮಾನರಾಗಿ ಇಲ್ಲದೇ ಇದ್ದರೂ ಸಹ, ಸ್ವಲ್ಪ ಪ್ರಮಾಣದಲ್ಲಿ ತಮ್ಮ ಸ್ಥಾನಮಾನಗಳನ್ನು ಸುಧಾರಿಸಿಕೊಳ್ಳುತಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ಆಹಾರ ಮತ್ತು ಉಡುಗೆ ತೊಡುಗೆಯಲ್ಲಿ ಬದಲಾವಣೆ**

ಮನುಷ್ಯನ ಮೂಲಭೂತ ಅವಶ್ಯಕತೆ ಎಂದರೆ ಆಹಾರ ಬಟ್ಟೆ ಮತ್ತು ವಸತಿ ಅನಾದಿ ಕಾಲದಿಂದಲೂ ಸಮಾಜದ ಮುಖ್ಯವಾಹಿನಿಯಿಂದ ದೂರ ಉಳಿದಿದ್ದ ಗೌಡಾಲು ಜನರು ಗೆಡ್ಡೆ-ಗೆಣಸು, ಹಣ್ಣು-ಹಂಪಲು, ನೊರೆಗೆಡ್ಡೆ, ಬಗನೆಹಿಟ್ಟು, ಬಿದಿರು ಅಕ್ಕಿ, ನೇರಳೆಹಣ್ಣು, ಕಲ್ಲುಸಂಪಿಗೆ, ಆಲದ ಹಣ್ಣು, ಬೆಂಬಾರಲು ಹಣ್ಣು, ಈಚಲು ಹಣ್ಣು, ಈಚಲುಗೆಡ್ಡೆ, ಪನ್ನೇರಲು, ಕಾಡುಮಾವು, ಬಾಳೆಹಣ್ಣು ತಿಂದು ಜೀವನ ನಡೆಸುತ್ತಿದ್ದರು. ಕ್ರಮೇಣವಾಗಿ ರಾಗಿ ಅಂಬಲಿ, ಅಕ್ಕಿಯ ಗಂಜಿ, ರಾಗಿಮುದ್ದೆ, ಅನ್ನ, ಕಡುಬು, ರೊಟ್ಟಿಯನ್ನು ಹಾಗೂ ಕ್ರಮೇಣವಾಗಿ ಬರಬರುತ್ತ ಆಹಾರ ತಯಾರಿಸುವ ವಿಧಾನಗಳು ತಿಳಿದುಕೊಂಡು ಕೀರು, ಪಾಯಸ ಹೀಗೆ ಮುಂತಾದ ಆಹಾರ ಪದಾರ್ಥಗಳನ್ನು ದಿನನಿತ್ಯ ಜೀವನದಲ್ಲಿ ಬಳಸುತ್ತಿರುವುದು ಕಂಡುಬರುತ್ತದೆ. ಹಾಗೆಯೇ ಉಡುಗೆ-ತೊಡುಗೆಯಲ್ಲಿ ಬಹಳಷ್ಟು ಬದಲಾವಣೆಯಾಗಿದೆ. ಹಿಂದೆ ಪಾಣಿಪಂಚೆ, ಟವಲ್, ಕಚ್ಚರವೆ (ಕಚ್ಚೆ) ಲಂಗೋಟಿ, ಮೈಮೇಲೆ ಖಾಕಿ ಅಥವಾ ಕಪ್ಪು ಬಣ್ಣದ ತೋಳುರಹಿತ ಜಾಮ ಅಥವಾ ಬುಸ್‌ಕೋಟು (ಶರ್ಟ್), ತಲೆಯ

ಹಾಳೆ ಟೊಪ್ಪಿಯನ್ನು ಧರಿಸುತ್ತಿದ್ದರು. ಬಟ್ಟೆ ಹರಿದರೆ ನೂಲು ಸೂಜಿಯನ್ನು ಬಳಸಿ ತಾವೇ ಅದನ್ನು ಹೊಲಿದುಕೊಳ್ಳುತ್ತಿದ್ದರು. ಹಾಗೆಯೇ ಕಾಲಿಗೆ ಮರದ ಚಪ್ಪಲಿ, ಅಥವಾ ಟೈರಿನ ಚಪ್ಪಲಿ ಧರಿಸುತ್ತಿದ್ದರು.[೧೬] ಆದರೆ ಇತ್ತೀಚಿನ ದಿನಗಳಲ್ಲಿ ಉಡುಗೆ-ತೊಡುಗೆಯಲ್ಲಿ ಬದಲಾವಣೆಯಾಗಿದೆ. ಸಾಮಾನ್ಯರೂ ಸಹ ಆಧುನಿಕ ಬಟ್ಟೆಯನ್ನು ಧರಿಸುತ್ತಿದ್ದಾರೆ. ವಿದ್ಯಾವಂತರು ಶರ್ಟ್, ಪ್ಯಾಂಟ್, ಬನಿಯನ್, ಬೆಲ್ಟ್, ಬೂಟ್ಸ್, ವಾಚ್, ಹೀಗೆ ಅವಶ್ಯಕವಿರುವ ಎಲ್ಲ ರೀತಿಯ ಉಡುಪುಗಳನ್ನು ಧರಿಸುತ್ತಿದ್ದಾರೆ. ಹೀಗೆ ಆಹಾರ ಮತ್ತು ಉಡುಗೆ-ತೊಡುಗೆಯಲ್ಲಿ ಹಿಂದಿನ ಕಾಲಕ್ಕೆ ಹೋಲಿಸಿದರೆ ಬಹಳಷ್ಟು ಬದಲಾವಣೆಗಳು ಆಗಿರುವುದು ಈ ಸಂಶೋಧನೆಯಿಂದ ಕಂಡುಬರುತ್ತದೆ.

**ವಸತಿಯಲ್ಲಿ ಬದಲಾವಣೆ**

ಮನುಷ್ಯನ ಅವಶ್ಯಕತೆಗಳಲ್ಲಿ ವಸತಿಯು ಮೂಲಭೂತ ಅವಶ್ಯಕತೆಯಾಗಿದೆ. ಗೌಡಾಲು ಜನರು ಹಿಂದಿನಿಂದಲೂ ಗುಹೆಗಳಲ್ಲಿ, ಕಲ್ಲುಗುಡ್ಡೆಗಳಲ್ಲಿ, ಮರದ ಕೆಳಗೆ, ವಾಸವಾಗಿದ್ದರು. ಆದರೆ ಕ್ರಮೇಣವಾಗಿ ಹುಲ್ಲಿನ ಮನೆ, ಕಾಡುಹುಲ್ಲಿನ ಮನೆ, ಜಂಜರಗಿ ಸೊಪ್ಪಿನಿಂದ ಹೊದಿಕೆಯಾಗಿರುವ ಮನೆ, ಹುಲ್ಲುಕಡ್ಡಿ ಬಳಸಿ ರಚಿಸಿದ ಮನೆ, ಕಬ್ಬಿನ ಸ್ಕ್ಯಾಗೆ, ಅಡಿಕೆಸ್ಕ್ಯಾಗೆ, ತೆಂಗಿನ ಹೆಡಲುಗಳಿಂದ ರಚಿಸಿರುವ ಮನೆ, ಹೀಗೆ ಹಲವಾರು ಪ್ರಕಾರಗಳ ಮನೆಗಳನ್ನು ರಚಿಸಿಕೊಂಡು ಜೀವನವನ್ನು ಸಾಗಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಹೆಂಚಿನ ಮನೆಗಳಲ್ಲಿ ವಾಸವಾಗಿರುವುದು ಕಂಡುಬರುತ್ತದೆ. ಆಧುನಿಕತೆಯ ಪ್ರಭಾವದಿಂದ ಸಾರಿಗೆ ಮತ್ತು ಸಂಪರ್ಕದ ಪರಿಣಾಮದಿಂದ ಇವರಲ್ಲಿ ಕೆಲವರು ಬಡಗಿಗಾಗಿ ಮರ ಕೆಲಸವನ್ನು ಮಾಡುತ್ತಿದ್ದಾರೆ. ಅವರೇ ಸ್ವತಃ ತಮ್ಮ ಮನೆಗಳನ್ನು ನಿರ್ಮಿಸಿಕೊಂಡು ವಸತಿ ವ್ಯವಸ್ಥೆಯನ್ನು ಬದಲಾಯಿಸಿಕೊಂಡಿದ್ದಾರೆ. ಹೀಗೆ, ಗೌಡಾಲು ಆದಿವಾಸಿಗಳ ವಸತಿ ವ್ಯವಸ್ಥೆಯಲ್ಲಿ ಬದಲಾವಣೆಯಾಗಿರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ.

**ಸಂಘ ಸಂಸ್ಥೆಗಳಲ್ಲಿಯ ಬದಲಾವಣೆ**

ಗೌಡಾಲು ಬುಡಕಟ್ಟು ಜನರು ಕಾಡು ಪ್ರದೇಶದಲ್ಲಿ ಚದುರಿಕೊಂಡಿರುವ ಕುಟುಂಬಗಳಾಗಿವೆ. ಇವರಲ್ಲಿ ಸಂಘಟನೆಯನ್ನು ಬೆಳೆಸುವುದು ಕಷ್ಟದ ಕೆಲಸವಾಗಿದೆ. ಹಿಂದಿನಿಂದಲೂ ಇವರು ಯಾವುದೇ ರೀತಿಯ ಸಂಘಸಂಸ್ಥೆಗಳನ್ನು ರಚಿಸಿಕೊಂಡಿರಲಿಲ್ಲ. ಕ್ರಮೇಣವಾಗಿ ರಾಷ್ಟ್ರೀಯ ಉದ್ಯಾನವನ ಕೂನೂನಿನಿಂದ ತೊಂದರೆಯಾದ ಕಾರಣದಿಂದಾಗಿ ಇವರಲ್ಲಿ ಹಲವಾರು ಸಂಘಟನೆಗಳು ರಚನೆಯಾಗಿವೆ. ಕೆಲವೊಂದು ಧಾರ್ಮಿಕ ಸಂಸ್ಥೆಗಳು ಈ ಜನರಲ್ಲಿ ಸಂಘಟನೆಗಳನ್ನು ರಚಿಸಿ ಅವರ ಪ್ರಗತಿಗಾಗಿ ಶ್ರಮಿಸುತ್ತಿವೆ. ಇತ್ತೀಚಿನ ವರುಷಗಳಲ್ಲಿ ಈ ಜನರಲ್ಲಿ ಕಂಡುಬರುತ್ತಿರುವ ಸಂಘಟನೆಗಳೆಂದರೆ ಮಹಿಳಾ ಸಂಘಗಳು, ಸ್ತ್ರೀ ಶಕ್ತಿ ಸಂಘಗಳು, ಯುವಕ ಸಂಘಗಳು, ಯುವತಿ ಮಂಡಳಿ, ಗಿರಿಜನ ಕ್ಷೇಮಾಭಿವೃದ್ಧಿ ಸಂಘ, ಧರ್ಮಸ್ಥಳ ಸಂಘ ಹೀಗೆ ಹಲವಾರು ಸಂಘ ಸಂಸ್ಥೆಗಳನ್ನು ರಚಿಸಿಕೊಂಡು ಸರಕಾರದ ಕಡೆಯಿಂದ ಮತ್ತು ಧಾರ್ಮಿಕ ಸಂಸ್ಥೆಗಳಿಂದ ಶೈಕ್ಷಣಿಕ ಹಾಗೂ ಆರ್ಥಿಕ ಸವಲತ್ತುಗಳನ್ನು, ವಿವಿಧ ಪ್ರಕಾರದ ತರಬೇತಿಗಳನ್ನು ನೀಡುತ್ತಿದ್ದು, ಇದು ಗೌಡಾಲು ಜನರ ಬದಲಾವಣೆಗೆ ಕಾರಣವಾಗಿದೆ. ಹೀಗೆ ಗೌಡಾಲು ಬುಡಕಟ್ಟು ಜನರು ಸಂಘ ಸಂಸ್ಥೆಗಳಲ್ಲಿ ಭಾಗಿಯಾಗಿ ವಿಚಾರ

ವಿನಿಮಯ ಮಾಡಿಕೊಂಡು ತಮ್ಮ ಜೀವನ ವಿಧಾನದಲ್ಲಿ ಬದಲಾವಣೆಯನ್ನು ರೂಢಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

**ಗೃಹೋಪಯೋಗಿ ವಸ್ತುಗಳಲ್ಲಿ ಬದಲಾವಣೆ**

ಮನುಷ್ಯ ಜೀವಿಸಲು ವಸತಿ ಅಥವಾ ಮನೆ ಎಂಬ ಸಮಾಜದ ಘಟಕವು ತುಂಬಾ ಅವಶ್ಯಕವಾದುದು. ಮನೆಯಲ್ಲಿ ಇರುವಂತಹ ವಸ್ತುಗಳು ಆ ಮನೆಯ ಸದಸ್ಯರ ಬೇಡಿಕೆಗಳನ್ನು ಈಡೇರಿಸುತ್ತವೆ. ಹಾಗೆಯೆ ಗೌಡಾಲು ಆದಿವಾಸಿ ಜನರಲ್ಲಿ ಅವರ ಅವಶ್ಯಕತೆಗೆ ತಕ್ಕಂತೆ ದಿನನಿತ್ಯ ಬಳಸುವ ಕೆಲವೊಂದು ಗೃಹೋಪಯೋಗಿ ವಸ್ತುಗಳು ಮುಖ್ಯವಾಗಿವೆ. ಅವುಗಳೆಂದರೆ ಮಡಿಕೆ, ಟ್ರಂಕ್, ಪಾತ್ರೆ, ಮರದ ಮಂಚ, ಮರದ ಕುರ್ಚಿ, ಛತ್ರಿ, ಹುಲ್ಲಿನ ಚಾಪೆ, ಹಿಡಿ, ಗೊರಬು, ಕತ್ತಿ, ಇಳಿಕೆ, ಸಿಕ್ಕ, ಸಿಬ್ಲ, ಮರಚಿಟ್ಟೆ, ಬಾಗಮರಿಗೆ, ವನಕೆ, ಗೋಮಾಲೆ, ಇಲಿಮರಿಕೆ, ಅರಸಲತಟ್ಟೆ, ಬೆಸಿಗೆ, ಹೀಗೆ ಹಲವಾರು ಗೃಹೋಪಯೋಗಿ ವಸ್ತುಗಳನ್ನು ಹೊಂದಿರುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ಗೃಹೋಪಯೋಗಿ ವಸ್ತುಗಳ ಸ್ವರೂಪ ಬದಲಾಗಿದೆ. ಅವುಗಳೆಂದರೆ ಕಬ್ಬಿಣದ ಮಂಚ, ಪ್ಲಾಸ್ಟಿಕ್ ಅಥವಾ ಕಬ್ಬಿಣದ ಕುರ್ಚಿಗಳು ಮನೆಯಲ್ಲಿ ರೇಡಿಯೋ, ಟೇಪ್‌ರೆಕಾರ್ಡ್‌ರ್, ಟಿ.ವಿ., ಸ್ಟೀಲಿನ ಪಾತ್ರೆಗಳು, ಮಿಕ್ಸರ್ ಹೀಗೆ ಹಲವಾರು ಆಧುನಿಕ ಗೃಹೋಪಯೋಗಿ ವಸ್ತುಗಳನ್ನು ಇವರು ಹೊಂದಿರುವುದು ಕಂಡುಬರುತ್ತದೆ. ಗೌಡಾಲು ಜನರಲ್ಲಿ ಹಳೆಯ ಗೃಹೋಪಯೋಗಿ ವಸ್ತುಗಳ ಜಾಗದಲ್ಲಿ ಹೊಸ ವಸ್ತುಗಳು ಸ್ಥಾನ ಪಡೆದಿರುವುದು ಕಂಡುಬರುತ್ತದೆ.

ಹೀಗೆ ಗೌಡಾಲು ಆದಿವಾಸಿ ಜನರ ಜೀವನದ ಪ್ರತಿಯೊಂದು ಹಂತದಲ್ಲಿಯೂ ಬದಲಾವಣೆಯು ನಿರಂತರವಾಗಿ ನಡೆಯುತ್ತಿರುವುದು ಮೇಲಿನ ಅಂಶಗಳಿಂದ ಕಂಡುಬರುತ್ತದೆ.

ಇವರು ವಾಸಿಸುವ ಅರಣ್ಯದೊಳಗೆ ಇಂದು ನಾಡಿನ ಸಂಪರ್ಕವು ಹೆಚ್ಚಾಗಿರುವುದರಿಂದ ಹಾಗೂ ಭಾರತ ಸರ್ಕಾರದ ಅನುಮತಿ ಪಡೆದು ಜಪಾನ್ ದೇಶವು ಚಿಕ್ಕಮಗಳೂರು ಜಿಲ್ಲೆಯ ಕುದುರೆಮುಖದಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯನ್ನು ಸ್ಥಾಪಿಸಿ ಅಲ್ಲಿಯ ಸಂಪತ್ತನ್ನು ದೋಚಿದ್ದರ ಪರಿಣಾಮದಿಂದಲೂ ನಾಡಿನ ಸಂಪರ್ಕವು ಹೆಚ್ಚಾಗಿ ಕಾಡಿನ ಸೌಂದರ್ಯ ಮತ್ತು ತಿಳಿಯಾದ ವಾತಾವರಣವು ಮಾಯವಾಗುತ್ತಿದೆ. ಅಲ್ಲಿ ವಾಸ ಮಾಡುವ ಗೌಡಾಲು ಸಮುದಾಯದಂತ ಅನೇಕ ಬುಡಕಟ್ಟುಗಳ ಬದುಕು ತನ್ನ ತಲತಲಾಂತರವಾಗಿ ಬಂದಿದ್ದ ಪಾರಂಪರಿಕ ಬದುಕಿನಲ್ಲಿ ಸಂಘರ್ಷ ಏರ್ಪಟ್ಟು ಸಮುದಾಯವು ಸ್ಥಿತ್ಯಂತರಕ್ಕೆ ಒಳಗಾಗಿದೆ. ಆಧುನಿಕತೆಯ ಸೆರಗನ್ನು ಹಾಕಿಕೊಂಡು ಬಂಡವಾಳಶಾಹಿಗಳು ಕಾಡಿಗೆ ಕಾಲಿಟ್ಟರೋ ಅಂದೇ ಬುಡಕಟ್ಟುಗಳ ಬಿಕ್ಕಟ್ಟುಗಳಿಂದ ಕೂಡಿದ ಬದುಕು ತಲ್ಲಣಗೊಂಡಿರುವುದು ನಿಜ ಸಂಗತಿಯಾಗಿದೆ. ಗೌಡಾಲು ಬುಡಕಟ್ಟು ಇದರಿಂದ ಹೊರತಾಗಿಲ್ಲ ಎಂಬುದು ನಿಜವಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪಡೆದ ಮಾಹಿತಿಯ ಹಿನ್ನೆಲೆಯಿಂದ ಹೇಳುವುದಾದರೆ ಪಶ್ಚಿಮಘಟ್ಟದ ಇಳಿಜಾರಿನಲ್ಲಿ ಯಾರಿಗೂ ತಿಳಿಯದೆ ಅವರದೇ ಆದ ಬದುಕಿನಲ್ಲಿ ತಲ್ಲೀನರಾಗಿದ್ದವರಿಗೆ ಸರ್ಕಾರ ಮತ್ತು ಅಧಿಕಾರಿಗಳು ಹಾಗೂ N.G.O.ಗಳಂತ ಅನೇಕ ಸಂಘ ಸಂಸ್ಥೆಗಳು 'ನಿಮ್ಮನ್ನು ಮುಖ್ಯವಾಹಿನಿಗೆ ತರುತ್ತೇವೆ ಅಥವಾ ಸರ್ಕಾರದ ಎಲ್ಲ ಸೌಲಭ್ಯಗಳನ್ನು ನಿಮಗೆ ತಲುಪಿಸುತ್ತೇವೆ' ಎಂದು ಅನೇಕ ರೀತಿಯ ಆಸೆ

ಆಕಾಂಕ್ಷೆಗಳನ್ನು ಮುಗ್ಧ ಮನಸುಗಳಲ್ಲಿ ಹುಟ್ಟಿಸಿ ಮನಸ್ಸನ್ನು ತಟ್ಟಿರುವುದರ ಪರಿಣಾಮವಾಗಿ ತಲತಲಾಂತರವಾಗಿ ಭೂ ಮಾಲೀಕರ ಗದ್ದೆ, ತೋಟ ಹಾಗೂ ಮನೆಗಳಲ್ಲಿ ಜೀತ ಮತ್ತು ದಿನಗೂಲಿಗಳಾಗಿ ದುಡಿಯುತ್ತಿದ್ದವರಿಗೆ ಸ್ವರ್ಗದ ಬಾಗಿಲು ತೋರಿಸಿದಂತಾಯಿತು. ಇದರ ಪರಿಣಾಮವಾಗಿ ಗೌಡಾಲು ಬುಡಕಟ್ಟಿನ ಜ್ಞಾನ ಪರಂಪರೆಯನ್ನು ನಾಡಿನ ಜನರು ಮತ್ತು ಬಂಡವಾಳಶಾಹಿಗಳು ಕಬಳಿಸಿರುವುದನ್ನು ಮಾಹಿತಿದಾರರು ಈಗಲೂ ದುಃಖದಿಂದ ತೋಡಿಕೊಳ್ಳುತ್ತಾರೆ. ಆದ್ದರಿಂದ ಯಾವಾಗ ಬ್ರಿಟಿಷರು ಭಾರತವನ್ನು ಆಳಲು ಪ್ರಾರಂಭಿಸಿದರೋ ಅಂದಿನಿಂದಲೇ ಬುಡಕಟ್ಟುಗಳು ತಮ್ಮ ಬದುಕನ್ನು ಹೊರಜಗತ್ತಿನ ಕಡೆ ಮುಖಮಾಡಿರುವುದನ್ನು ಯಾರು ಕೂಡ ಅಲ್ಲಗಳೆಯಲು ಆಗುವುದಿಲ್ಲ ಎಂಬುದು ಕ್ರಮಬದ್ಧವಾದುದಾಗಿದೆ. ಇಲ್ಲಿ ಗೌಡಾಲು ಕಾಶಿಯಿಂದ ಬಂದವರು ನಾವು ಎಂದು ಹೇಳಿಕೊಂಡರೂ ಕಾಡಿನಲ್ಲಿ ಆಶ್ರಯ ಪಡೆದು ಆದಿಮಾನವನ ಬದುಕನ್ನು ಮೈಗೂಡಿಸಿಕೊಂಡು ಬಿಟ್ಟಿ ಕೆಲಸವನ್ನು ಮಾಡುತ್ತಿರುವುದು ನಿಜವಾದರೂ ಆಧುನಿಕ ಬದುಕನ್ನು ಒಪ್ಪಿಕೊಳ್ಳುತ್ತಿರುವುದು ಗಮನಾರ್ಹವಾಗಿದೆ.

ಗೌಡಾಲು ಬುಡಕಟ್ಟು ವಾಸಿಸುವ ಸ್ಥಳಗಳಿಗೆ ಯಾವುದೇ ಪ್ರಾಥಮಿಕ ಸೌಲಭ್ಯಗಳು ದೊರೆಯದೇ ಇರುವುದು ಕಂಡುಬಂದರೂ ಇತ್ತೀಚೆಗೆ ಸರ್ಕಾರ ಯಾವುದೇ ಮೀನಮೇಷ ತೋರಿಸದೆ ಅಭಿವೃದ್ಧಿ, ಅರಣ್ಯ ರಕ್ಷಣೆ, ರಾಷ್ಟ್ರೀಯ ಉದ್ಯಾನವನದ ನೆಪದಲ್ಲಿ ಕಾಡಿನಿಂದ ಒಕ್ಕಲೆಬ್ಬಿಸುವ ಕಾರ್ಯಕ್ಕೆ ಕೈ ಹಾಕಿರುವುದು ದುರಂತವೇ ಸರಿ. ಇದು ಗೌಡಾಲುಗಳ ಮೇಲೆ ತುಂಬಾ ಪರಿಣಾಮ ಬೀರಿದೆ. ಅಂದರೆ ಸರ್ಕಾರದ ಕಾಯ್ದಿಟ್ಟ ಅರಣ್ಯದಲ್ಲಿ ಯಾರೂ ಹೋಗುವಂತಿಲ್ಲ. ಯಾವುದೇ ಸಮುದಾಯ ಅಲ್ಲಿ ವಾಸ ಮಾಡುವಂತೆ ಇಲ್ಲ ಎಂಬ ನಿಯಮವಿರುವುದರಿಂದ ಈ ಬುಡಕಟ್ಟಿನ ಬದುಕಿನಲ್ಲಿ ಗೊಂದಲದ ವಾತಾವರಣ ಏರ್ಪಟ್ಟಿದೆ. ಈ ಹಿನ್ನೆಲೆಯಿಂದ ಗೌಡಾಲು ತನ್ನ ಬದುಕಿನ ರೂಪಾಂತರಕ್ಕೆ ಒಳಗಾಗಿದೆ.

ಸಮಾಜದ ಅಭಿವೃದ್ಧಿ ಮತ್ತು ಬುಡಕಟ್ಟುಗಳ ಅಭಿವೃದ್ಧಿಗಳೆರಡು ಜೊತೆ ಜೊತೆಯಲ್ಲಿಯೇ ಇರುವುದರಿಂದ ಸರ್ಕಾರ ಮಾಡುವ ಕೆಲವು ನಿಯಮಗಳನ್ನು ಒಪ್ಪಿಕೊಳ್ಳಬೇಕಾಗಿರುವುದರಿಂದ ಬುಡಕಟ್ಟುಗಳಲ್ಲಿದ್ದ ಸಾಂಪ್ರದಾಯಿಕ ಆಚರಣೆಗಳು, ಮದುವೆ, ಹಬ್ಬ, ಉಡುಗೆ, ಆಹಾರ ಪದಾರ್ಥಗಳು, ವೃತ್ತಿ ಮುಂತಾದವುಗಳಲ್ಲಿ ಬದಲಾವಣೆಯ ಲಕ್ಷಣಗಳು ಕಾಣುತ್ತಿವೆ. ೨೦ನೇ ಶತಮಾನದಲ್ಲಿ ಗೌಡಾಲುಗಳ ಮದವೆಯನ್ನು ಮಾಡಿಸುವವರು ಮತ್ತು ಮಂತ್ರಗಳನ್ನು ಹೇಳುವವರು ಗೌಡಾಲುಗಳಲ್ಲಿ ಒಬ್ಬರು ವಂಶಪರಂಪರೆಯಾಗಿ ನೆರವೇರಿಸಿಕೊಂಡು ಬರುತ್ತಿದ್ದರು. ಆದರೆ ಇಂದು ಬ್ರಾಹ್ಮಣರು ಗೌಡಾಲು ಸಮುದಾಯದ ಮದುವೆಗಳನ್ನು ಮಾಡಿಸುತ್ತಿದ್ದಾರೆ. ಗೌಡಾಲು ಸಮುದಾಯದ ತನ್ನ ಮೂಲ ಸಾಂಪ್ರದಾಯಿಕ ಜೀವನದಲ್ಲಿ ಬದಲಾವಣೆಯನ್ನು ಬಯಸಿದೆ ಎಂದರೆ ಅದು ಸ್ಥಿತ್ಯಂತರಕ್ಕೆ ಒಳಗಾಗಿದೆ ಎಂಬ ಗ್ರಹಿಕೆಯ ಹಿನ್ನೆಲೆಯಿಂದ ಗೌಡಾಲು ತನ್ನ ಬದುಕಿನ ಒಂದೊಂದು ಮಜಲಿನಲ್ಲಿ ಬದಲಾವಣೆಯನ್ನು ಮಾಡಿಕೊಂಡಿದೆ.

ಚಿಕ್ಕಮಗಳೂರು ಜಿಲ್ಲೆಯು ಪರಿಸರ ಹೋರಾಟದಲ್ಲಿ ತನ್ನ ಸ್ಥಾನವನ್ನು ಗುರುತಿಸಿಕೊಂಡಿರುವ ಹಿನ್ನೆಲೆಯಲ್ಲಿ ಗೌಡಾಲು ಸಮುದಾಯದ ಪಾತ್ರವು ಅಲ್ಲಿ ವಾಸಿಸುವ ಇತರೆ ಬುಡಕಟ್ಟುಗಳಿಗಿಂತ ಹೆಚ್ಚಿನ ಪಾಲಿದೆ. ಈ ಬುಡಕಟ್ಟು ಒಂದು ರೀತಿಯಲ್ಲಿ ಹೋರಾಟದ ಬದುಕನ್ನು ಮೈಗೂಡಿಸಿಕೊಂಡಿದ್ದಕ್ಕೆ ಇಲ್ಲಿಯ ಪರಿಸರ ಬಹಳ ಮುಖ್ಯವಾಗಿದೆ.

ಆದ್ದರಿಂದ ಈ ಬುಡಕಟ್ಟಿಗೆ ನಗರದ ಸ್ಥಳಗಳಿಗೆ ಹೋಗುವುದು ಅನಿವಾರ್ಯವಾಗಿದ್ದರಿಂದ ತಮ್ಮ ಮೂಲದ ಜೀವನ ಪದ್ಧತಿಯಿಂದ ಪಟ್ಟಣದ ಜೀವನ ಶೈಲಿಯನ್ನು ಆಹ್ವಾನಿಸಿಕೊಂಡು ಸಮುದಾಯದ ಬದುಕಿನಲ್ಲಿ ಸ್ಥಿತ್ಯಂತರಕ್ಕೆ ಒಳಗಾಗಿರುವುದು ತಿಳಿಯುತ್ತದೆ.

ಅರಣ್ಯ ಅಧಿಕಾರಿಗಳು, ಶಿಕ್ಷಕರು, ಪಟ್ಟಣದಿಂದ ಕಾಡಿನಲ್ಲಿ ವಾಸ ಮಾಡುತ್ತಿರುವವರು ಇವರ ಹಾಡಿಗಳಿಗೆ ಬಂದು ಇಲ್ಲಿಯೇ ವಾಸಿಸಲು ಪ್ರಾರಂಭಿಸಿರುವುದರಿಂದಲೂ ಈ ಬುಡಕಟ್ಟಿನ ಜೀವನ ಶೈಲಿಯಲ್ಲಿ ಬದಲಾವಣೆಯು ಕಂಡುಬಂದಿದೆ. ಅಲ್ಲದೆ ದಿನನಿತ್ಯದ ಬದುಕಿಗೆ ಬೇಕಾಗಿರುವ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಲು ಪಟ್ಟಣಗಳಿಗೆ ಗೌಡಾಲುಗಳು ಬರುವುದರಿಂದ ಪೇಟೆಯ ಬದುಕು ಮತ್ತು ಅವರ ಬದುಕನ್ನು ಹೋಲಿಸಿಕೊಂಡು ಪೇಟೆಯ ಬದುಕಿಗೆ ಮಾರು ಹೋಗಿರುವುದು ಕಂಡುಬರುತ್ತದೆ.

ಗೌಡಾಲು ಸಮುದಾಯವು ಇರುವ ಸ್ಥಳಗಳಲ್ಲಿ ಅಲ್ಲಲ್ಲಿ ಗಿರಿಜನ ಶಾಲೆಗಳನ್ನು ಸರ್ಕಾರ ಪ್ರಾರಂಭಿಸಿದೆ. ಪರಿಣಾಮವಾಗಿ ಶಾಲೆಯಲ್ಲಿ ಶಿಕ್ಷಕರು ಹೇಳಿಕೊಡುವ ಪಾಠಗಳಿಗೆ ಮಾರು ಹೋದ ವಿದ್ಯಾರ್ಥಿಗಳು ತಮ್ಮ ಬದುಕಿನಲ್ಲಿ ಸ್ಥಿತ್ಯಂತರಕ್ಕೆ ಒಳಗಾಗಿದ್ದಾರೆ. ಅಲ್ಲದೆ ತಮ್ಮ ಪೋಷಕರ ಕೃಷಿಯ ರಂಗದಲ್ಲಿಯೂ ಸ್ಥಿತ್ಯಂತರ ಕಂಡುಬರುತ್ತಿದೆ. ಆದರೆ ಹಿರಿಯರಲ್ಲಿ ಈಗಲೂ ಸಾಂಪ್ರದಾಯಿಕತೆ ಉಳಿದಿರುವುದು ಕಂಡುಬರುತ್ತದೆ. ಈ ಬುಡಕಟ್ಟಿನಲ್ಲಿ ಪ್ರಾಚೀನ ಕಾಲದಿಂದಲೂ ಇದ್ದ ನ್ಯಾಯಪಂಚಾಯಿತಿ ಮಾತ್ರ ಹಾಗೇ ಮುಂದುವರೆದುಕೊಂಡು ಬಂದಿದೆ. ಇದಕ್ಕೆ ಸಾಕ್ಷಿಯಾಗಿ ಸಮುದಾಯದಲ್ಲಿ ಏನಾದರೂ ತಪ್ಪು ಸಂಭವಿಸಿದರೆ ನ್ಯಾಯ ಪಂಚಾಯಿತಿಯನ್ನು ಸಮುದಾಯದ ೩ ಕೂಡಿಗೆಯವರು ಒಂದು ಸ್ಥಳದಲ್ಲಿ ಸೇರುತ್ತಾರೆ. ಇದರಲ್ಲಿ ಯಜಮಾನ ಕೂಡಿಗೆ, ಜಿರ್ ಕೂಡಿಗೆ ಮತ್ತು ಮುಂಡಾನೆ ಕೂಡಿಗೆಯ ಹಿರಿಯರು ಸೇರಿ ತೀರ್ಮಾನ ಮಾಡುವ ಪದ್ಧತಿ ಈಗಲೂ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ. ಆದರೆ ಇವರ ಸಾಂಸ್ಕೃತಿಕತೆಯೂ ಬದಲಾದ ಸಾಮಾಜಿಕ ವ್ಯವಸ್ಥೆಗೆ ಅನುಗುಣವಾಗಿ ಸ್ಥಿತ್ಯಂತರಕ್ಕೆ ಒಳಗಾಗಿದ್ದರೂ ಗೌಡಾಲುಗಳು ಮಾಡುವ ಹಬ್ಬ ಆಚರಣೆಗಳು ಇನ್ನೂ ಮೂಲ ರೂಪದಲ್ಲಿಯೇ ಇವೆ. ಇವರು ಆಚರಿಸುವ ಅಂಟಿಕೆ ಪಂಟಿಕೆ ಮೂಲ ರೂಪವನ್ನು ಕಳೆದುಕೊಂಡಿಲ್ಲ ಎಂಬುದು ನೈಜತೆಯಿಂದ ಕೂಡಿದೆ. ಆದ್ದರಿಂದ ಯಾವುದೇ ಬುಡಕಟ್ಟು ಒಮ್ಮೆಲೇ ತನ್ನ ಮೂಲ ರೂಪದ ಬದುಕನ್ನು ಕಳೆದುಕೊಳ್ಳದೆ ಹಂತ ಹಂತವಾಗಿ ಬದಲಾವಣೆಯನ್ನು ಬಯಸುತ್ತದೆ. ಇದರಿಂದಾಗಿ ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಗೌಡಾಲು ಸಮುದಾಯ ಸಮುದಾಯದ ಹೊರಗಿನ ಬದುಕಿನಲ್ಲಿಯೇ ಹೆಚ್ಚಾಗಿ ಸ್ಥಿತ್ಯಂತರಕ್ಕೆ ಒಳಗಾಗಿರುವುದು ನಿಜ ಸಂಗತಿ. ಆದರೆ ಸಮುದಾಯದ ಹೃದಯ ಭಾಗದಲ್ಲಿ ಸ್ಥಿತ್ಯಂತರಕ್ಕೆ ಒಳಗಾಗುವುದು ಅಷ್ಟು ಸುಲಭದ ಮಾತಲ್ಲ ಎನ್ನುವುದು ಸಂಶೋಧನೆಯಿಂದ ತಿಳಿದ ಸಂಗತಿ. ನಾಡಿನ ಜನರ ಸಂಪರ್ಕದಿಂದ ಬದುಕಿನ ಸ್ಥಿತ್ಯಂತರ ಆಗುತ್ತಿದೆ. ವಿನಾ ಅವರೇ ಸ್ವಇಚ್ಛೆಯಿಂದ ಬದುಕಿನ ಬದಲಾವಣೆಯನ್ನು ಬಯಸಲಾರರು ಇಂದಿನ ಶೈಕ್ಷಣಿಕ ವ್ಯವಸ್ಥೆ, ರಾಜಕೀಯ ಮಾನದಂಡಗಳು, ಸಾಮಾಜಿಕ ಸ್ಥಾನಮಾನ ಮುಂತಾದವುಗಳಲ್ಲಿ ಸಾಮಾಜಿಕ ಸ್ಥಿತ್ಯಂತರದ ಪ್ರಕ್ರಿಯೆ ನಡೆದಿರುವುದು ಗೋಚರಿಸುತ್ತಿದೆ.

ಭಾರತದಲ್ಲಿ ಯಾವುದೇ ಬುಡಕಟ್ಟು ಸಮುದಾಯವಿದೆಯೆಂದರೆ ಅದೊಂದು ಉತ್ಪಾದನಾ ಘಟಕವೆಂದು ಭಾವಿಸಬೇಕಾಗುತ್ತದೆ. ಗೌಡಾಲು ಬುಡಕಟ್ಟು ಒಂದು ಸ್ವಯಂಪೂರ್ಣ ಸಾಮಾಜಿಕ ಆರ್ಥಿಕ ಅವಕಾಶದ ಒಳಗೆ

ಒಂದು ನಿಶ್ಚಿತ ಉತ್ಪಾದನೆಯನ್ನು ಅವಲಂಬಿಸಿಕೊಂಡು ಬಂದಿರುವುದು ತಿಳಿಯುತ್ತದೆ. ಆದ್ದರಿಂದ ಈ ಬುಡಕಟ್ಟು ಭಾರತದ ಸಾಮಾಜಿಕ ಸ್ಥಿತ್ಯಂತರಗಳ ಹಲವು ಕಾಲಘಟ್ಟದಲ್ಲಿ ವಿವಿಧ ಬಗೆಯ ಸಮಸ್ಯೆಗಳಿಂದ ಬಳಲುತ್ತಾ ಪದೇ ಪದೇ ತಮ್ಮ ಸ್ವರೂಪವನ್ನು ಬದಲಿಸುತ್ತಾ ಬಂದಿರುವುದು ಗಮನಾರ್ಹವಾಗಿದೆ. ಈ ಹಿನ್ನೆಲೆಯಿಂದ ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಏಣಿಶ್ರೇಣೀತರಣವು ಹೆಚ್ಚಾಗಿರುವುದರಿಂದ ಬುಡಕಟ್ಟುಗಳ ಬದುಕಿನ ಸ್ಥಾನಮಾನಗಳಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆಗಳು ಸಂಭವಿಸಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿಯಾಗಿದೆ. ಬುಡಕಟ್ಟುಗಳ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳ ಮೇಲೆ ಪ್ರಭುತ್ವವು ಆಯಾಯ ಕಾಲಘಟ್ಟದಲ್ಲಿ ಪ್ರಭಾವ ಬೀರಿರುವುದು ಚರಿತ್ರೆಯಿಂದಲೂ ಸತ್ಯವಾದರೂ ಇಂದಿನ ದಿನಮಾನಗಳಲ್ಲಿ ಗೌಡಾಲುಗಳು ಭೂಮಾಲೀಕರು, ಬಂಡವಾಳಶಾಹಿಗಳು ಮತ್ತು ಪ್ರಭುತ್ವ ಜಾತಿಗಳಿಂದ ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಗಾಗಿದೆ.

ಕರ್ನಾಟಕದಲ್ಲಿ ಗೌಡಾಲು ಸಮುದಾಯವು ಒಂದು ಶೋಷಿತ ಬುಡಕಟ್ಟಾಗಿದೆ. ಇದಕ್ಕೆ ಸಾಕ್ಷಿಯಾಗಿ ಈ ನಾಡಿನಲ್ಲಿರುವ ಚರಿತ್ರೆಯ ಪುಟಗಳನ್ನು ತೆರೆದು ನೋಡಿದಾಗ ದಿನನಿತ್ಯದ ಬವಣೆಗಳಿಗೆ ಪ್ರಭುತ್ವವೆನ್ನುವುದು ಎಷ್ಟರ ಮಟ್ಟಿಗೆ ಪೂರಕವಾದ ವ್ಯವಸ್ಥೆಯನ್ನು ಸೃಷ್ಟಿ ಮಾಡುತ್ತ ಬಂದಿದೆ ಎಂಬುದು ಅರ್ಥಗರ್ಭಿತವಾಗುತ್ತದೆ. ಆದ್ದರಿಂದ ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಈಗಲೂ ಕೂಡ ಚಿಕ್ಕಮಗಳೂರು ಜಿಲ್ಲೆಯ ಉಳ್ಳವರು ಹಾಗೂ ಮೇಲಿನ ವರ್ಗದವರು ಇವರನ್ನು ಶೋಷಿಸುತ್ತಲೇ ಬಂದಿರುವುದು ಕಂಡುಬರುತ್ತದೆ. ಇದರ ಪರಿಣಾಮವಾಗಿ ಬದುಕಿನ ಸ್ಥಿತ್ಯಂತರವಾಗುವುದು ಅನಿವಾರ್ಯವಾಗಿದೆ.

ಇಂದು ಬುಡಕಟ್ಟು ಸಮುದಾಯಗಳ ವಾಸ್ತವ ಲೋಕದ ಬದುಕಿನ ಕಡೆ ಗಮನ ಹರಿಸಿದರೆ ಅಷ್ಟೇ ಅದು ಹಿಂದುಳಿದಿರುವುದು ತಿಳಿಯುತ್ತದೆ. ಗೌಡಾಲುಗಳು ಹಾಗೂ ಇತರೆ ಬುಡಕಟ್ಟುಗಳು ಆದಿಮ ಸ್ಥಿತಿಯಲ್ಲಿಯೇ ಜೀವನ ನಡೆಸುತ್ತಿದ್ದಾರೆ. ಕೆಲವೊಂದು ಬುಡಕಟ್ಟುಗಳು ಆಧುನಿಕ ವಿದ್ಯಮಾನಗಳೊಂದಿಗೆ ಮುಖಾಮುಖಿಯಾಗುತ್ತ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿವೆ. ಗೌಡಾಲುಗಳನ್ನು ಗಮನಿಸಿದರೆ ಕರ್ನಾಟಕದ ಅಂತೆಯೇ ಭಾರತದ ಯಾವುದೇ ಬುಡಕಟ್ಟು ಸಮುದಾಯವೂ ಹಳೆಯದನ್ನು ಬಿಡುವ ಹೊಸದನ್ನು ತನ್ನದಾಗಿಸಿಕೊಳ್ಳುವಲ್ಲಿ ಆತುರದಿಂದ ತುದಿಗಾಲ ಮೇಲೆ ನಿಂತಿವೆ. ಆದರೆ ಅದು ಸುಲಭ ಸಾಧ್ಯವಲ್ಲ. ಗತದ ಜೀವನದ ಚರಿತ್ರೆಯ ಹೆಜ್ಜೆಗಳ ಅರಿವನ್ನು ವರ್ತಮಾನದಲ್ಲಿ ನೆನಪಿಸಿಕೊಳ್ಳುತ್ತಾ ಭವಿಷ್ಯತ್ತನ್ನು ಕನಸಿನ ದಿನಗಳ ಬದುಕಿಗಾಗಿ ಬಹು ಎಚ್ಚರಿಕೆಯಿಂದ ಎಲ್ಲ ಸಮುದಾಯಗಳು ನಡೆದುಕೊಳ್ಳುತ್ತಿವೆ.

೧೯ನೇ ಶತಮಾನವು ಭಾರತೀಯ ಸಮಾಜವನ್ನು ಸತ್ವಪರೀಕ್ಷೆಗೆ ಒಡ್ಡಿದ ಕಾಲಮಾನ ವಸಾಹತು ಆಡಳಿತದ ಜೊತೆಗೆ ಬಂದ ಶಿಕ್ಷಣ, ಆಧುನಿಕತೆ ಬುಡಕಟ್ಟು ಸಮುದಾಯಗಳ ಪರಿವರ್ತನೆಗೆ ಸಾಕಷ್ಟು ಪ್ರಭಾವ ಬೀರಿವೆ. ಕೈಗಾರಿಕೀಕರಣದ ಪ್ರಭಾವವೂ ಬುಡಕಟ್ಟು ಸಮುದಾಯಗಳ ಬದಲಾವಣೆಗೆ ಸಹಕಾರಿಯಾಗಿದೆ. ಇಂತಹ ಬದಲಾವಣೆಗಳಿಗೆ ಒಳಗಾದ ಕರ್ನಾಟಕದಲ್ಲಿ ನೆಲೆ ನಿಂತಿರುವ ಬುಡಕಟ್ಟುಗಳಿಗೆ ಆಧುನೀಕರಣದ ಪ್ರಭಾವ ನುಂಗಲಾರದ ಬಿಸಿ ತುಪ್ಪದಂತಾಗಿದೆ. ಆದ್ದರಿಂದ ಪರಂಪರೆಯಿಂದ ನಂಬಿಕೊಂಡು ಬಂದ ವೃತ್ತಿಗಳಿಗೆ ಹಾಗೂ ಜೀವನ ಮೌಲ್ಯಗಳಿಗೆ ಆಧುನಿಕತೆಯ ಬಿರುಗಾಳಿ ಗೊಂದಲಕ್ಕೀಡು ಮಾಡಿರುವುದು ಗಮನಾರ್ಹವಾದ ಸಂಗತಿ.

ಸುಮಾರು ವರ್ಷಗಳಿಂದ ಕಾಡಿನಲ್ಲಿಯೇ ನೆಲೆ ಕಂಡುಕೊಂಡು ಬದುಕುತ್ತಿರುವ ಗೌಡಾಲುಗಳಿಗೆ ಸ್ವತಂತ್ರ ಭಾರತದ ಸಂವಿಧಾನಬದ್ಧ ಹಕ್ಕುಗಳಾವೂ ಸಾಮಾಜಿಕ ಸ್ಥಾನಮಾನವನ್ನು ತಂದುಕೊಟ್ಟಿಲ್ಲ. ಮೂಲ ನಿವಾಸಿಗಳಾಗಿ ಜೀವನ ಸಾಗಿಸುತ್ತಿರುವ ಇವರು ಇಂದೂ ಪರಕೀಯರಂತೆ ಜೀವನ ಸಾಗಿಸುತ್ತಿದ್ದಾರೆ. ಸುಮಾರು ಕುಟುಂಬಗಳು ಈಗಲೂ ಬಡತನ ರೇಖೆಯಲ್ಲಿಯೇ ಜೀವನ ಸಾಗಿಸುತ್ತಿವೆ. ಇಷ್ಟೆಲ್ಲ ಇದ್ದರೂ ಶೇಕಡ ೮೦ರಷ್ಟು ಜನರು ಭೂಮಾಲೀಕರ ಗದ್ದೆ ತೋಟಗಳಲ್ಲಿ ದಿನಗೂಲಿಗಳಾಗಿ ಜೀವನ ಸಾಗಿಸುತ್ತಿದ್ದಾರೆ.

ಗೌಡಾಲು ಸಮುದಾಯವು ಸಮಾಜದ ಪರಿವರ್ತನೆಗೆ ಅನುಗುಣವಾಗಿ ದಿನಬಳಕೆ ವಸ್ತುಗಳಾದ ಮಣ್ಣಿನ ಪಾತ್ರೆಗಳ ಬದಲಿಗೆ ಅಲ್ಯುಮಿನಿಯಂ, ಸ್ಟೀಲ್ ಪಾತ್ರೆಗಳನ್ನೂ ಬಳಸುತ್ತವೆ. ಸೀಮೆಎಣ್ಣೆ ದೀಪಗಳ ಬದಲಿಗೆ ಸರ್ಕಾರಿ ಭಾಗ್ಯ ಜ್ಯೋತಿಯಡಿಯಲ್ಲಿ ಕೆಲವು ಮನೆಗಳು ವಿದ್ಯುತ್ ದೀಪಗಳ ಆಶ್ರಯವನ್ನು ಪಡೆದು ಬೆಳಗುತ್ತಿವೆ. ಪಟ್ಟಣದ ಪ್ರಭಾವಕ್ಕೊಳಗಾದ ಸ್ತ್ರೀಯರು ಚೂಡಿದಾರ, ನೈಟಿ, ಲಂಗ ರವಿಕೆಯಂತಹ ಉಡುಪುಗಳನ್ನು ಬಳಸುವುದರ ಜೊತೆಗೆ ಸ್ನೋ, ಪೌಡರ್, ಲಿಪ್‌ಸ್ಟಿಕ್‌ನಂತಹ ಅಲಂಕಾರ ಸಾಮಗ್ರಿಗಳನ್ನು ಬಳಸುತ್ತಿದ್ದಾರೆ. ಅಲ್ಲದೆ ಪುರುಷರು ಹಳೆಯದಾದ ಉಡುಪುಗಳನ್ನು ಬಿಟ್ಟು ನವೀನತೆಯ ಬದುಕಿಗೆ ಹೊಂದಿಕೊಂಡು ಟೀ ಷರ್ಟ್, ಜೀನ್ಸ್ ಪ್ಯಾಂಟ್ ಇನ್ನಿತರ ರಂಗು ರಂಗಿನ ಉಡುಪುಗಳಿಗೆ ಮಾರು ಹೋಗಿದ್ದಾರೆ. ಆದರೆ ಹಿರಿಯ ತಲೆಮಾರಿನ ಸ್ತ್ರೀ, ಪುರುಷರು ಮಾತ್ರ ಮೂಲ ರೂಪದ ಬದುಕಿನ ಉಡುಪುಗಳನ್ನೇ ಧರಿಸುತ್ತಿರುವುದು ಕಂಡುಬರುತ್ತದೆ. ಈ ಪರಿಣಾಮವಾಗಿ ಗೌಡಾಲುಗಳು ಪಟ್ಟಣಗಳಿಗೆ ಹೋಗಿ ಬರುವುದರಿಂದ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಭೌತಿಕವಾಗಿ ಅಲ್ಪ ಸ್ವಲ್ಪ ಬದಲಾವಣೆಯನ್ನು ಕಂಡುಕೊಂಡಿದೆ.

ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಗೌಡಾಲುಗಳು ಪರಿವರ್ತನೆಯ ಹಾದಿಯಲ್ಲಿದ್ದಾರೆಂದು ಮೇಲ್ನೋಟಕ್ಕೆ ಅನ್ನಿಸಿದರೂ ಸಹ ವಸ್ತುಸ್ಥಿತಿ ಹಾಗಿಲ್ಲ. ರಾಜಕೀಯ ಪಕ್ಷಗಳು ಇವರನ್ನು Vote Bank ಎಂದು ಪರಿಗಣಿಸಿದ್ದಾರೆಯೇ ವಿನಃ ಎಂದೂ ಇವರ ಕ್ಷೇಮಾಭಿವೃದ್ಧಿಯ ಕಡೆ ಗಮನ ಹರಿಸಿಲ್ಲ. ಕನಿಷ್ಠ ಶಿಕ್ಷಣವನ್ನು ಸಹ ಪಡೆಯದ ಇವರಿಗೆ ರಾಜಕಾರಣಗಳ ಒಳಗುಟ್ಟು ತಿಳಿಯದಂತಾಗಿದೆ. ಭೌತಿಕವಾಗಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಕಂಡುಕೊಂಡಿದ್ದರೂ ಸಹ ಸಾಂಸ್ಕೃತಿಕವಾಗಿ ಅಷ್ಟೊಂದು ಬದಲಾವಣೆಗಳು ಕಂಡುಬರುತ್ತಿಲ್ಲ. ಮದುವೆ, ಜನನ, ಸಾವು ಇತ್ಯಾದಿ ಸಂಪ್ರದಾಯ ಆಚರಣೆಗಳ ಸಂದರ್ಭದಲ್ಲಿ ಬ್ರಾಹ್ಮಣ ಪೌರೋಹಿತ್ಯವು ಬಂದಿದೆ. ಪಟ್ಟಣದ ಸಮಾಜದೊಂದಿಗೆ ಸಂಬಂಧವನ್ನು ಹೊಂದಿದ್ದರೂ ಸಹ ನಗರ ಸಂಸ್ಕೃತಿಯ ಪ್ರಭಾವ ಅಷ್ಟೊಂದು ಆಗಿಲ್ಲ. ತಮ್ಮಲ್ಲಿನ ಒಳಜಗಳಗಳನ್ನು ತಮ್ಮ ಕುಲಪಂಚಾಯ್ತಿಯಲ್ಲೇ ಬಗೆಹರಿಸುತ್ತಾರೆ ವಿನಾ ಹೊರಗಿನ ಕೋರ್ಟುಗಳಿಗೆ ಹೋಗಲು ಪ್ರಸ್ತುತ ಕಾಲದವರೆಗೂ ಅವಕಾಶವಿಲ್ಲ. ವರದಕ್ಷಿಣೆ ಸಮಸ್ಯೆ ಮುಗಿಲು ಮುಟ್ಟಿರುವ ಇಂದಿನ ಸಂದರ್ಭದಲ್ಲಿ ಗೌಡಾಲುಗಳು ಇನ್ನೂ ವಧುದಕ್ಷಿಣೆ ಪದ್ಧತಿಯನ್ನೇ ಅನುಸರಿಸುತ್ತಿರುವುದು ವಿಶೇಷವಾಗಿದೆ. ಅಪಾರ ದೈವಭಕ್ತಿಯುಳ್ಳ ಇವರು ಎಷ್ಟೇ ಕಷ್ಟದಲ್ಲಿದ್ದರೂ ಯಾವ ಆಚರಣೆಗಳನ್ನು ನಿಲ್ಲಿಸುವುದಿಲ್ಲ. ಸಾಮಾಜಿಕ ಶಿಕ್ಷಣದ ಕೊರತೆಯಿರುವ ಇವರಲ್ಲಿ ಬಲಿಯಂತಹ ಆಚರಣೆಗಳು ಇನ್ನೂ ನಿಂತಿಲ್ಲ. ಇಂತಹ ಆಚರಣೆಗಳ ಮೂಲಕ ದೇವರನ್ನು ತೃಪ್ತಿಪಡಿಸುವುದು, ಆ ಮೂಲಕ ತಾವು ಮಾಡಿದ ತಪ್ಪುಗಳಿಗೆ

ದೈವದಲ್ಲಿ ಕ್ಷಮೆ ಕೋರುವುದು ಹೀಗೆ ದೈವ ಮತ್ತು ದೇವರು ಹಾಗೂ ಇವರ ನಡುವೆ ಭಾವನಾತ್ಮಕವಾದ ಸಂಬಂಧವೇರ್ಪಟ್ಟಿರುವುದರಿಂದ ಇಂತಹ ಆಚರಣೆಗಳಿಗೆ ಕೊನೆ ಎಂಬುದು ಇಲ್ಲದಂತಾಗಿದೆ. ಮೂಲ ಬುಡಕಟ್ಟಾಗಿರುವ ಗೌಡಾಲು ಇತರೆ ಸಮುದಾಯಗಳೊಂದಿಗೆ ಬೆರೆತಿದೆ. ಆದರೆ ತಮ್ಮ ಮೂಲ ಸಾಮಾಜಿಕ ಮೌಲ್ಯಗಳನ್ನು ತೊರೆಯದೆ ಹಾಗೂ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಸಂಪೂರ್ಣ ಬೆರೆಯದೇ ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಮತ್ತು ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ. ಆದಿಮಾನವನ ಲಕ್ಷಣಗಳನ್ನೊಳಗೊಂಡಿರುವ ಇವರ ಜೀವನವು ಶಿಷ್ಟ ಸಮುದಾಯಕ್ಕಿಂತ ಭಿನ್ನವಾಗಿದೆ.

ವಸಾಹತುಶಾಹಿ ನೀತಿ ಭಾರತವನ್ನು ಆಕ್ರಮಿಸಿ ಕಾಡಿನ ಮೇಲೆ ಹಿಡಿತವನ್ನು ಸಾಧಿಸಿದ ಮೇಲೆ ಕಾಡಿನ ಸಂಪತ್ತನ್ನು ಅನುಭೋಗಿಸುವ ಗೌಡಾಲುಗಳ ಹಕ್ಕನ್ನು ಕಸಿದುಕೊಂಡ ಕಾರಣ ಇವರ ಬದುಕು ಚಿಂತಾಜನಕವಾಗಿದೆ. ಇಂದು ಸ್ವಂತ ಬುದ್ಧಿಶಕ್ತಿಯನ್ನು ಬಳಸಿ ಜೀವನ ನಿರ್ವಹಣೆಗಾಗಿ ಅನುಸರಿಸಿರುವ ವೃತ್ತಿಕಸುಬುಗಳು ಇವರ ಹೊಟ್ಟೆ ತುಂಬಿಸುವಲ್ಲಿ ಸಹಕಾರಿಯಾಗುತ್ತಿಲ್ಲ. ಸುಗ್ಗಿಯ ಸಮಯದಲ್ಲಿ ಮಾತ್ರ ಹೊಟ್ಟೆ ತುಂಬ ಊಟ ಮಾಡುತ್ತಾರೆ. ಆದರೆ ಉಳಿದ ದಿನಗಳಲ್ಲಿ ಅರೆ ಹೊಟ್ಟೆಯಲ್ಲಿರುವರು. ಇವರು ಉತ್ತಮ ಬೇಟೆಗಾರರು. ಬಗಿನಿ ಹೆಂಡವನ್ನು ಇಳಿಸುವುದರಲ್ಲಿ ನಿಪುಣರು. ಬಿದಿರಿನ ಸಾಮಗ್ರಿಗಳನ್ನು ಅವರಿಗೆ ಇಷ್ಟಬಂದಂತೆ ರೂಪಿಸಿಕೊಳ್ಳುತ್ತಾರೆ. ಆದರೆ ಈಗಲೂ ಭೂಮಾಲೀಕರ ತೋಟಗಳಲ್ಲಿ ದಿನಗೂಲಿಗಳಾಗಿ ದುಡಿಯುತ್ತಿದ್ದಾರೆ. ಆದ್ದರಿಂದ ಸರ್ಕಾರ ಇವರು ಸ್ವತಃ ತಾವೇ ಬದುಕಿಗಾಗಿ ಮಾಡಿಕೊಂಡಿರುವ ತುಂಡು ತುಂಡು ಭೂಮಿಯ ಪಟ್ಟವನ್ನು ಕೊಟ್ಟರೆ ಇವರ ಬದುಕಿಗೊಂದು ಅರ್ಥ ಬರುವುದಲ್ಲದೆ ಇವರ ಜೀವನ ಹಸನಾಗುವುದು.

ಭಾರತ ಸರ್ಕಾರ ಸ್ವಾತಂತ್ರ್ಯಾನಂತರ ಬುಡಕಟ್ಟುಗಳ ಸುಧಾರಣೆಗಾಗಿ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟು ಪ್ರತ್ಯೇಕ ಸಂಸ್ಥೆಗಳನ್ನು ತೆರೆಯಿತು. ಅವುಗಳಲ್ಲಿ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ (LAMPS)ಗಳನ್ನು ಸ್ಥಾಪಿಸಿದೆ. ಹಾಗೂ ITDPಯಂತಹ ಹಲವು ಸಂಸ್ಥೆಗಳು ಬುಡಕಟ್ಟುಗಳ ಬದುಕಿಗೆ ರೂಪಕೊಡಲೆಂದೇ ನಿರ್ಮಾಣವಾದವು. ಆದ್ದರಿಂದ ಈ ಎಲ್ಲ ಸೌಲಭ್ಯಗಳನ್ನು ಪಡೆಯುತ್ತಿರುವ ಗೌಡಾಲು ಬುಡಕಟ್ಟು ಆರ್ಥಿಕವಾಗಿ ಬದಲಾವಣೆಯತ್ತ ಸಾಗುತಿರುವುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ಚರ್ಚಿಸಬೇಕಾಗಿರುವುದು ಗಿರಿಜನರ ಉದ್ಧಾರಕ್ಕಾಗಿ ಹಾಗೂ ಬುಡಕಟ್ಟುಗಳ ಜೀವನವನ್ನು ಅಭಿವೃದ್ಧಿ ಮಾಡುವುದಕ್ಕಾಗಿ ಹುಟ್ಟಿಕೊಂಡಿರುವ ಸಂಸ್ಥೆಗಳು ಮತ್ತು ಗಿರಿಜನ ಆಶ್ರಮಗಳು ನಿಷ್ಪಕ್ಷಪಾತವಾಗಿ ಕಾರ್ಯ ನಿರ್ವಹಿಸದೆ ಇರುವುದು. ಅಲ್ಲದೆ ವಿಶ್ವವಿದ್ಯಾಲಯಗಳಲ್ಲಿ ಬುಡಕಟ್ಟುಗಳನ್ನು ಕುರಿತು ನಡೆಯುತ್ತಿರುವ ಸಂಶೋಧನೆಗಳು ಅಧ್ಯಯನಕ್ಕೆ ಮಾತ್ರ ಸೀಮಿತವಾಗಿವೆ. ಈ ಎಲ್ಲ ಅಂಶಗಳಿಂದ ಗೌಡಾಲು ಬುಡಕಟ್ಟು ಮತ್ತು ಇತರೆ ಬುಡಕಟ್ಟುಗಳು ಸಾಮಾಜಿಕ ಬದಲಾವಣೆಯ ಬದುಕನ್ನು ರೂಪಿಸಿಕೊಳ್ಳುವುದಷ್ಟೇ ಅಲ್ಲದೆ ಸಮಾಜದ ಮುಖ್ಯವಾಹಿನಿಗೆ ಬರುತ್ತಿರುವುದು ಅಧ್ಯಯನದಿಂದ ತಿಳಿಯುತ್ತದೆ. ಗೌಡಾಲು ಸಮುದಾಯದ ಬೆರಳೆಣಿಕೆಷ್ಟು ಜನರು ಮಾತ್ರ ಸರ್ಕಾರದ ಸೌಲಭ್ಯವನ್ನು ಪಡೆದಿದ್ದಾರೆ. ಅದರಲ್ಲಿ ಆಧುನಿಕ ಕೃಷಿ ಉಪಕರಣಗಳು, ಪವರ್ ಟಿಲ್ಲರ್‌ಗಳನ್ನು ಪಡೆದಿರುವುದಲ್ಲದೆ ಸರ್ಕಾರ ಬುಡಕಟ್ಟು ಸಮುದಾಯದ ಹೊಲಗಳಲ್ಲಿ ನೀರು ಸಂಗ್ರಹಣೆ ಮಾಡಲು ನೀರು

ತಡೆ ವಿನ್ಯಾಸಗಳನ್ನು ರಚಿಸಿ ಕೃಷಿ ಉತ್ಪಾದನೆಯನ್ನು ಅಭಿವೃದ್ಧಿಪಡಿಸುವ ಯೋಜನೆಯನ್ನು ಇವರು ಪಡೆದಿದ್ದಾರೆ. ಆದ್ದರಿಂದ ಗೌಡಾಲು ಬುಡಕಟ್ಟು ಸಾಮಾಜಿಕ ಬದುಕಿನ ಸ್ಥಿತ್ಯಂತರಕ್ಕೆ ಒಳಗಾಗಿದೆ.

ಗೌಡಾಲುಗಳ ಆರಂಭದ ಬದುಕಿಗೂ ಇತ್ತೀಚಿನ ಸಾಮಾಜಿಕ ಪರಿವರ್ತನೆಯ ಹಿನ್ನೆಲೆಯಲ್ಲಿ ರೂಪಿತಗೊಂಡಿರುವ ಬದುಕಿಗೂ ತುಂಬ ಭಿನ್ನತೆಗಳು ಗೋಚರಿಸುತ್ತವೆ. ಆದರೆ ಸರ್ಕಾರ ಬುಡಕಟ್ಟುಗಳ ಅಭಿವೃದ್ಧಿಗಾಗಿ ರೂಪಿಸಿರುವ ಯೋಜನೆಗಳು ಸಮರ್ಪಕವಾಗಿ ಅನುಷ್ಠಾನವಾಗಿಲ್ಲ. ಸರ್ಕಾರದ ಯೋಜನೆಗಳು ಎಷ್ಟರ ಮಟ್ಟಿಗೆ ಬುಡಕಟ್ಟುಗಳು ಅಭಿವೃದ್ಧಿಯ ಕಡೆ ಸಾಗುತ್ತಿವೆ ಎಂಬುದನ್ನು ಮರುಪರೀಕ್ಷಿಸದೆ ಇರುವುದರಿಂದ ಗೌಡಾಲುಗಳಲ್ಲಿ ಬೆರಳೆಣಿಕೆಯಷ್ಟು ಜನರು ಮಾತ್ರ ಮುಖ್ಯವಾಹಿನಿಗೆ ಬರುವುದಕ್ಕೆ ದಾಪುಗಾಲು ಹಾಕುವಂತಾಗಿದೆ. ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆ ಕಾಡಿನ ತೋಪುಗಳಿಂದ ಕೂಡಿದೆ. ಇತರೆ ಬುಡಕಟ್ಟುಗಳಿಗೆ ಹೋಲಿಸಿಕೊಂಡರೆ ಅತೀ ಕಡಿಮೆ ಜನಸಂಖ್ಯೆಯನ್ನು ಹೊಂದಿರುವ ಅಂದರೆ ೧೫೫೦೦ರಷ್ಟು ಜನಸಂಖ್ಯೆಯನ್ನು ಹೊಂದಿರುವ ಬುಡಕಟ್ಟಾದರೂ ಇವರ ಬದುಕು  ಭೂಮಾಲೀಕರ ಬದುಕಿಗೆ ತಕ್ಕದಾದ ಬದುಕಾಗಿಲ್ಲ ಎಂಬುದು ನಿಖರವಾದುದಾಗಿದೆ.

ಇಂದು ಗೌಡಾಲು ಸಮುದಾಯದ ಸ್ಥಿತ್ಯಂತರದ ಬಗ್ಗೆ ಮಾತನಾಡುವಾಗ ಸಮಾಜಶಾಸ್ತ್ರಜ್ಞರು ಹೇಳಿದ ವಿಚಾರಗಳನ್ನು ಮರೆಯುವಂತಿಲ್ಲ. ಅಂದರೆ ಸಮಾಜವೆಂದರೆ ಸಾಮಾಜಿಕ ಸಂಬಂಧಗಳ ಬಲೆ. ಸಮಾಜಜೀವಿಗಳ ಕಾರ್ಯಕಲಾಪಗಳು ಪರಸ್ಪರ ಅವಲಂಬನೆಯಿಂದ ಕೂಡಿರುತ್ತವೆ. ಈ ಬುಡಕಟ್ಟು ಸಮುದಾಯವು ಬೇರೊಬ್ಬರ ಅವಲಂಬನೆಯಲ್ಲಿ ಇರುವುದರಿಂದ ಇಲ್ಲಿ ಮ್ಯಾಕ್ ಐವರ್ ಮತ್ತು ಪೇಜ್ ಅವರ ಮುಖ್ಯ ವಿಚಾರವಾಗುತ್ತದೆ. ಇಲ್ಲಿ ಸಮಾಜವು ನಿರಂತರ ಬದಲಾವಣೆಗೆ ಒಳಗಾಗಿದೆ ಹಾಗೂ ಸಂಕೀರ್ಣ ಸ್ವಭಾವದ ಸಮುದಾಯವಾಗಿದೆ. ಆದ್ದರಿಂದ ಸಮಾಜಶಾಸ್ತ್ರಜ್ಞರು ಹೇಳುವಂತೆ ಸಮಾಜದ ಪರಿವರ್ತನೆಯು ಮಾನವನ ಜೀವನದ ಸಫಲತೆಗೆ ಅನಿವಾರ್ಯವಾಗಿದೆ.

ಗೌಡಾಲು ಸಮುದಾಯವು ತನ್ನ ಬದುಕಿನ ಸಂಘರ್ಷದಲ್ಲಿ ಸಿಕ್ಕಿಹಾಕಿಕೊಂಡಿದೆ. ಅಂದರೆ ಜೀವನ ಸಾಗಿಸುವಲ್ಲಿ ಸ್ಥಿತ್ಯಂತರಕ್ಕೆ ತನಗೆ ಅರಿವಿಲ್ಲದೆ ಒಳಗಾಗಿದೆ. ಆದ್ದರಿಂದ ಇಡೀ ಪಶ್ಚಿಮಘಟ್ಟದಲ್ಲಿರುವ ಇತರೆ ಬುಡಕಟ್ಟುಗಳಿಗಿಂತ ಪೇಟೆಯ ಜೀವನವನ್ನು ಅರ್ಥ ಮಾಡಿಕೊಳ್ಳುವಲ್ಲಿ ಸಫಲತೆಯನ್ನು ಪಡೆಯುತ್ತಿರುವ ಬುಡಕಟ್ಟಾಗಿದೆ. ಈ ಪರಿಣಾಮವಾಗಿ ತನ್ನ ದಿನನಿತ್ಯದ ಬದುಕಿನಲ್ಲಿ ಹೋರಾಟವನ್ನು ಮಾಡುತ್ತಿದೆ. ಈ ಭಾಗದಲ್ಲಿ ಪರಿಸರ ಪಶ್ಚಿಮಘಟ್ಟ ರಾಷ್ಟ್ರೀಯ ಉದ್ಯಾನವನ, ತುಂಗಾ ಮೂಲ, ಕೋಮು ಸೌಹಾರ್ದತೆ, ನಕ್ಸಲ್‌ನಂತಹ ಅನೇಕ ಹೋರಾಟಗಳು ನಡೆದಿವೆ. ಈ ಹೋರಾಟಗಳಿಗೆ ಪರೋಕ್ಷವಾಗಿ ಅಲ್ಲಲ್ಲಿ ಸಹಕರಿಸುತ್ತಿರುವುದು ಅಧ್ಯಯನ ದೃಷ್ಟಿಯಿಂದ ಗಮನಾರ್ಹವಾದ ಸಂಗತಿ. ಈ ಹಿನ್ನೆಲೆಯಿಂದ ಗೌಡಾಲು ಬುಡಕಟ್ಟು ಸಮಾಜದ ಸ್ಥಿತ್ಯಂತರ ಒಳಗಾಗುವುದರಲ್ಲಿ ಯಾವುದೇ ಸಂದೇಹವಿಲ್ಲ. ನಾಡಿನ ಅಧಿಕಾರಿಗಳು, ಮಂತ್ರಿಗಳು, ಹೋರಾಟಗಾರರು, ಬುದ್ಧಿಜೀವಿಗಳ ಪ್ರಭಾವದಿಂದ ಇವರ ಸಾಮಾಜಿಕ ಸಂಬಂಧಗಳು ವಿಶಾಲವಾಗಿ ಆಧುನೀಕರಣದ ಸಂಸ್ಕೃತಿಯನ್ನು ಆಹ್ವಾನಿಸುವವರಾಗಿದ್ದಾರೆ. ಆದ್ದರಿಂದ ಗೌಡಾಲು ಬುಡಕಟ್ಟು ಕಾಡಿನ ಇಳಿಜಾರಿನಲ್ಲಿ ಪರಿಸರದ ಮಕ್ಕಳಾಗಿದ್ದರೂ

ಬದಲಾವಣೆಯ ಸಾಮಾಜಿಕ ವ್ಯವಸ್ಥೆಗೆ ಹೊಂದಾಣಿಕೆಯಾಗುವಂತೆ ಸರ್ಕಾರದ ನಿಯಮಗಳು ಹಾಗೂ ಈ ನಾಡಿನ ಪ್ರಜಾಪ್ರಭುತ್ವ ವ್ಯವಸ್ಥೆಯೂ ಪರೋಕ್ಷವಾಗಿ ಆಧುನಿಕತೆಯನ್ನು ಒಪ್ಪಿಕೊಳ್ಳುವಂತೆ ಗೌಡಾಲುಗಳ ಮನ ತಟ್ಟಿರುವುದು ಕಂಡುಬರುತ್ತದೆ. ಈ ಎಲ್ಲ ಅಂಶಗಳಿಂದ ಇವರು ಆಧುನಿಕತೆಯ ಸೆರಗನ್ನು ಒಪ್ಪಿಕೊಳ್ಳುವ ತವಕದಲ್ಲಿದ್ದಾರೆ.

**೫.೮. ಇತರೆ ಬುಡಕಟ್ಟುಗಳೊಂದಿಗೆ ಗೌಡಾಲು ಸಮುದಾಯದ ಸಂಪರ್ಕ**

ಪ್ರಪಂಚದಲ್ಲಿ ವಾಸ ಮಾಡುವ ಪ್ರತಿಯೊಬ್ಬ ಮಾನವ ಪ್ರಾಣಿ ಒಂದಿಲ್ಲೊಂದು ಸಮೂಹದ ಸದಸ್ಯನಾಗಿ ಜೀವನವನ್ನು ಸಾಗಿಸುತ್ತಾ ಬಂದಿದ್ದಾನೆ. ಆದ್ದರಿಂದ ಹಲವಾರು ಮಾನವ ಪ್ರಾಣಿಗಳಲ್ಲಿ ಅನೇಕಾನೇಕ ಸಮೂಹಗಳಿರುವುದು ಕಂಡುಬರುತ್ತದೆ. ಈ ತೆರನಾದ ಸಮೂಹಗಳಿಂದ ಒಂದು ವ್ಯವಸ್ಥೆ ನಿರ್ಮಾಣವಾಗುತ್ತದೆ. ಇಂಥಹ ವ್ಯವಸ್ಥೆಯನ್ನು ಸಮಾಜವೆಂದು ಪರಿಗಣಿಸುವುದು ಸಾಮಾಜಿಕ ಅಧ್ಯಯನಗಳ ಹಿನ್ನೆಲೆಯಲ್ಲಿ ಅರ್ಥಗರ್ಭಿತವಾಗಿದ್ದೆ, ಹೀಗಾಗಿ ಮಾನವನು ಪ್ರಾಚೀನ ಕಾಲದಿಂದ ಇಲ್ಲಿಯವರೆಗೂ ಒಂಟಿಯಾಗಿ ಜೀವಿಸದೆ ಒಟ್ಟಾಗಿ ಸೇರಿಕೊಂಡೇ ಜೀವಿಸುತ್ತಾ ಬಂದಿದ್ದಾನೆ.

ಪ್ರಾಚೀನ ಕಾಲದ ಗುಂಪಿನ ಸಾಂಪ್ರದಾಯಿಕ ಬದುಕು ಈಗಲೂ ಅಸ್ತಿತ್ವದಲ್ಲಿದೆ ಎಂದರೆ ಅದು ಬುಡಕಟ್ಟುಗಳಲ್ಲಿ ಮಾತ್ರ. ಕಾಡಿನಲ್ಲಿರುವ ಬುಡಕಟ್ಟು ಸಮುದಾಯಗಳ ಬದುಕಿಗೂ ನಾಡಿನ ಸಮುದಾಯಗಳ ಬದುಕಿಗೂ ತುಂಬ ಭಿನ್ನತೆಯಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದ ವಿಷಯಕ್ಕೆ ಅನುಗುಣವಾಗಿ ಚರ್ಚಿಸುತ್ತಾ ಹೊರಟರೆ ಪ್ರಾಚೀನ ಸಮಾಜವು ಮಧ್ಯಕಾಲೀನ ಸಮಾಜವಾಗಿ ರೂಪಾಂತರಗೊಳ್ಳುತ್ತಾ ಬಂದಿದ್ದರೂ ಇಂದಿನ ಆಧುನಿಕತೆಯಿಂದ ಕೂಡಿದ ತಾಂತ್ರಿಕ ಯುಗದಲ್ಲಿಯೂ ಸಮೂಹದ ಕಲ್ಪನೆ ಇರುವುದು ಇಲ್ಲಿ ಮುಖ್ಯವಾಗಿದೆ. ಆದ್ದರಿಂದ ಆದಿಮಾನವನ ಬದುಕು ಗಣಗಳ ಮೂಲಕ ದಾಪುಗಾಲಿನ ರೂಪದಲ್ಲಿ ಬೆಳವಣಿಗೆಯಾಗುತ್ತ ಬಂದು ಗಣಗಳು ಗುಂಪುಗಳಾಗಿ ಅನಂತರ ಸಮೂಹ ಸಮೂಹದ ರೂಪದಲ್ಲಿ ಬದುಕನ್ನು ಕಟ್ಟಿಕೊಂಡು ಬಂದ ಬಗೆಯನ್ನು ಹಾಗೂ ಆ ರೀತಿಯ ಲಕ್ಷಣಗಳಿರುವ ಬುಡಕಟ್ಟುಗಳನ್ನು ಈಗಲೂ ಕಾಣಬಹುದು. ಈ ಹಿನ್ನೆಲೆಯಲ್ಲಿಯೇ ಗೌಡಾಲು ಬುಡಕಟ್ಟು ಸಮುದಾಯ ತಾನು ಇತರರಿಗಾಗಿ ಇತರರು ತನಗಾಗಿ ಎಂಬ ಸಹಬಾಳ್ವೆಯ ಜೀವನವನ್ನು ರೂಪಿಸಿಕೊಂಡಿರುವುದು ಕಂಡುಬರುತ್ತದೆ.

ಇಂದು ಕೈಗಾರಿಕೀಕರಣದಿಂದ ಉಂಟಾದ ಸಾಮಾಜಿಕ ಪರಿವರ್ತನೆಯ ಹಾದಿಯಲ್ಲಿ ಗೌಡಾಲುಗಳು ಮುಖ್ಯವಾಗಿ ಸಾಂಸ್ಕೃತಿಕ ಏಕರೂಪಕತೆಯನ್ನು ಪಡೆಯುತ್ತಾ ಆಸಕ್ತಿ ತೋರುತ್ತಿರುವುದು ಗಮನಾರ್ಹವಾಗಿದೆ. ಅಂದರೆ ಗೌಡಾಲುಗಳು ಇತರೆ ಬುಡಕಟ್ಟುಗಳಿಗಿಂತ ಭಿನ್ನವಾದ ಆಚರಣೆಯನ್ನು ತಮ್ಮ ಜೊತೆಯಲ್ಲಿ ಹೆಣೆದುಕೊಂಡು ಬಂದಿರುವುದರಿಂದ ಅದರಲ್ಲಿ ಪ್ರಾವೀಣ್ಯತೆಯನ್ನು ಕಾಪಾಡಿಕೊಂಡು ಬರುವುದಕ್ಕೆ ಆಸಕ್ತಿ ತೋರಿಸುತ್ತಿದ್ದಾರೆ. ಅಲ್ಲದೆ ಇವರು ಪಶ್ಚಿಮಘಟ್ಟದ ಇಳಿಜಾರಿನ ಕಾಡಿನಲ್ಲಿ ವಾಸ ಮಾಡುತ್ತಿದ್ದರೂ ಇತರೆ ಬುಡಕಟ್ಟುಗಳ ಜೊತೆ ಅನ್ಯೋನ್ಯವಾದ ಸಂಬಂಧವನ್ನು ಹೊಂದಿದ್ದಾರೆ. ಇತರೆ ಸಮುದಾಯಗಳೊಡನೆ ಇವರ ಸಾಮಾಜಿಕ ಸಂಬಂಧಗಳು ಆರೋಗ್ಯಕರವಾಗಿದೆ. ಇಡೀ ಚಿಕ್ಕಮಗಳೂರು ಜಿಲ್ಲೆಯಲ್ಲಿ ಬರುವ ಮಲೆಕುಡಿಯರು,

ಮರಾಠಿ ನಾಯಕರು, ಹಸಲರು, ಕುಣಬಿಯರ ಸಂಗಡ ಸೇರಿ ನಾವೆಲ್ಲರೂ ಗಿರಿಜನರು ಎಂಬ ವಿಶಾಲವಾದ ಮನೋಭಾವನೆಯನ್ನು ಹೊಂದಿದ್ದಾರೆ.

ಗೌಡಾಲು ಸಮುದಾಯವು ಆಚರಿಸುವ ಹಬ್ಬ, ಮದುವೆ, ಜೀವನಾವರ್ತನದ ಆಚರಣೆಗಳಲ್ಲಿ ಇತರೆ ಸಮುದಾಯಗಳು ಬರುತ್ತವೆ. ಇವರು ಮೂಲ ಸಾಂಪ್ರದಾಯಿಕ ಬದುಕನ್ನು ಮರೆಯದೆ ಪರಿವರ್ತನೆಯ ಸಮಾಜದಲ್ಲಿ ಇತರರ ಮಧ್ಯ ಸಂಪರ್ಕವನ್ನು ಇಟ್ಟುಕೊಂಡಿರುವುದು ಇಲ್ಲಿ ಮುಖ್ಯ. ಇವರು ಕಲಶೇಶ್ವರನ ದೇವಸ್ಥಾನದ ಬಿಟ್ಟಿ ಕೆಲಸವನ್ನು ಮಾಡುವವರಾಗಿರುವುದರಿಂದ ದೇವರ ತೇರನ್ನು ''ವಾಟೆ'' ಎಂಬ ಬಿದಿರಿನಿಂದ ಕಟ್ಟುತ್ತಾರೆ. ಆದ್ದರಿಂದ ಇವರು ಅನಿವಾರ್ಯವಾಗಿ ಇತರ ಸಮುದಾಯಗಳ ಮಧ್ಯೆ ಸಂಪರ್ಕವನ್ನು ಇಟ್ಟುಕೊಂಡಿರುವುದು ಕಂಡುಬರುತ್ತದೆ. ಅಲ್ಲದೆ ಕಾಡಿನಲ್ಲಿರುವ ಭೂಮಾಲೀಕರ ತೋಟ ಗದ್ದೆಗಳಲ್ಲಿ ದಿನಗೂಲಿಗಳಾಗಿ ಹೋಗುವುದರಿಂದ ಅವರ ಅರಿವಿಗೆ ಬರದೆ ಇದ್ದರೂ ಇವರ ಮಧ್ಯೆ ಆರ್ಥಿಕ ಕಾರಣಗಳಿಗಾಗಿ ಸಂಪರ್ಕವಿದೆ.

ಈ ಬುಡಕಟ್ಟು ಮಲೆಕುಡಿ ಬುಡಕಟ್ಟಿನೊಂದಿಗೆ ಸಂಬಂಧವನ್ನು ಮಾಡಿದೆ. ಅಂದರೆ ಹೆಣ್ಣು ಕೊಡುವ ಮತ್ತು ಅವರಿಂದ ಹೆಣ್ಣನ್ನು ತೆಗೆದುಕೊಳ್ಳುವ ಸಂಬಂಧವನ್ನು ಏರ್ಪಡಿಸಿಕೊಂಡು ಅವರು ನಮ್ಮ ಬೀಗರು ಎನ್ನುವುದಷ್ಟೇ ಅಲ್ಲ ಮಲೆಕುಡಿಯರು ನಮ್ಮ ಸಹೋದರ ಬುಡಕಟ್ಟು ಎನ್ನುತ್ತಾರೆ. ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ಮಲೆಕುಡಿಯರ ಕೆಲವು ಬಳಿಗಳು ಇವರ ಬಳಿಗಳಿಗೆ ನೆಂಟಸ್ತಿಕೆಯನ್ನು ಏರ್ಪಡಿಸಿವೆ. ಗೌಡಾಲು ಆಚರಣೆಗಳು ಮಲೆಕುಡಿಯರ ಜೀವನಾವರ್ತನ ಆಚರಣೆಗಳು ಒಂದೇ ನೆಲೆಯಲ್ಲಿ ನಿಲ್ಲುತ್ತವೆ. ಹುಟ್ಟು, ಋತುಮತಿ, ಮದುವೆ, ನಾಮಕರಣ, ಸಾವಿನ ಆಚರಣೆಗಳಲ್ಲಿ ಈ ಎರಡು ಬುಡಕಟ್ಟುಗಳಲ್ಲಿ ಸಾಮ್ಯತೆಯಿರುವುದು ಕಂಡುಬರುತ್ತದೆ.

ಗೌಡಾಲು ಬುಡಕಟ್ಟಿನ ಆಹಾರ, ಉಡುಗೆ, ತೊಡುಗೆಗಳಲ್ಲಿ ಮಲೆಕುಡಿಯರ ಆಹಾರ ಮತ್ತು ಉಡುಗೆ ತೊಡುಗೆಗಳಂತೆ ಸಾಮ್ಯತೆ ಇರುವುದರಿಂದ ಪ್ರಸ್ತುತ ಸಂದರ್ಭದಲ್ಲಿ ಇವೆರಡು ಬುಡಕಟ್ಟುಗಳಲ್ಲಿ ವೈವಾಹಿಕ ಸಂಬಂಧವು ಏರ್ಪಟ್ಟಿರುವುದಲ್ಲದೆ ಸಾಮಾಜಿಕ ಸಂಬಂಧಗಳು ಅದೇ ರೀತಿಯಲ್ಲಿ ಮುಂದುವರಿಯುತ್ತಿರುವುದು ಕಂಡುಬರುತ್ತದೆ. ಅಲ್ಲದೆ ಗೌಡಾಲುಗಳು ಗಿರಿಜನರಲ್ಲದೆ, ಗೌಡಾಲುಗಳು ಅಥವಾ ಒಕ್ಕಲಿಗರು ಎಂದು ಕರೆಯುವ ಸಮುದಾಯದವರೊಡನೆ ವ್ಯಾವಹಾರಿಕವಾದ ಸಂಬಂಧಗಳನ್ನು ಇಟ್ಟುಕೊಂಡಿದ್ದಾರೆ. ಆದರೆ ಇವರ ಮಧ್ಯೆ ಯಾವುದೇ ಕೊಡುವ ಮತ್ತು ತೆಗೆದುಕೊಳ್ಳುವ ಸಂಬಂಧವನ್ನು ಇಟ್ಟುಕೊಂಡಿಲ್ಲ. ಗೌಡರು ಗೌಡಾಲುಗಳನ್ನು ಮನೆಯ ಒಳಗಡೆ ಈಗಲೂ ಬಿಟ್ಟುಕೊಳ್ಳದೆ ಇರುವುದು ಕ್ಷೇತ್ರಕಾರ್ಯದಲ್ಲಿ ಗಮನಕ್ಕೆ ಬಂದ ಮಾಹಿತಿಯಾಗುತ್ತದೆ. ಇನ್ನೂ ಭೂಮಾಲೀಕರು ಇವರನ್ನು ಆಳುಗಳೆಂದು ಕರೆಯುವುದಲ್ಲದೆ ಗ್ರಾಮ್ಯ ಭಾಷೆಯಲ್ಲಿ ಗೌಡಾಲುಗಳೆಂದು ಗುರುತಿಸಿ ಕರೆಯುವ ಪದ್ಧತಿ ಇದೆ. ಆದ್ದರಿಂದ ಈ ಬುಡಕಟ್ಟು ಸಾಮಾಜಿಕ ಸ್ತರವಿನ್ಯಾಸದ ಒಳಗೆ ಸಿಕ್ಕಿ ಹಾಕಿಕೊಂಡಿರುವುದು ಕಾಡಿನೊಳಗೆ ಇರುವ ಸಮುದಾಯದ ಸ್ಥಿತಿಗತಿಯನ್ನು ಕುರಿತು ವಿಮರ್ಶೆ ಮಾಡಬೇಕಾದ ವ್ಯವಸ್ಥೆಯು ಇಂದಿನ ದಿನಮಾನಗಳಲ್ಲಿ ನಿರ್ಮಾಣವಾಗಿರುವುದು ಕ್ಷೇತ್ರಕಾರ್ಯದಿಂದ

ತಿಳಿಯುತ್ತದೆ. ಆದ್ದರಿಂದ ಈ ಬುಡಕಟ್ಟು, ಇತರ ಬುಡಕಟ್ಟುಗಳ ಮಧ್ಯೆ ಉತ್ತಮವಾದ ಸಂಬಂಧವನ್ನು ಹೊಂದಿದ್ದರೆ ಮೇಲ್ಜಾತಿಯ ಸಮುದಾಯಗಳ ಮಧ್ಯೆ ಕೆಳಜಾತಿಗಳು ಎಂದು ಗುರುತಿಸಿಕೊಂಡಿದೆ.

ಗೌಡಾಲು ಸಮುದಾಯವು ತನ್ನ ಜೀವನಾವರ್ತನಾಚರಣೆಗಳಲ್ಲಿ ಇತರೆ ಬುಡಕಟ್ಟು ಜೊತೆ ಸಹೋದರ ಮನೋಭಾವನೆಯನ್ನು ಹೊಂದಿರುವುದರಿಂದ ನಾವೆಲ್ಲರೂ ಗಿರಿಜನರು ಎನ್ನುವ ಏಕರೂಪದ ಮನಸ್ಥಿತಿಯೂ ಎದ್ದು ಕಾಣುತ್ತದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಗೌಡಾಲು ಸಮುದಾಯವು ಸಾಮಾಜಿಕ ಪರಿವರ್ತನೆಗೆ ಅನುಗುಣವಾಗಿ ಬದುಕನ್ನು ರೂಪಿಸಿಕೊಳ್ಳುತ್ತಿರುವುದರಿಂದ ಇತರೆ ಬುಡಕಟ್ಟುಗಳಿಗೆ ಹೋಲಿಸಿಕೊಂಡರೆ ಗೌಡಾಲು ತನ್ನ ಬದುಕಿನಲ್ಲಿ ಎಲ್ಲ ಬುಡಕಟ್ಟುಗಳ ಸಹಕಾರವನ್ನು ಬಯಸುವುದರ ಜೊತೆಗೆ ಗಿರಿಜನರ ಯಾವುದೇ ತೊಂದರೆಗಳಿಗೆ ಸ್ಪಂದಿಸುವ ಮನೋಭಾವನೆಯನ್ನು ಹೊಂದಿದೆ. ಈ ಪರಿಣಾಮವಾಗಿ ಕಾಡಿನಲ್ಲಿ ವಾಸ ಮಾಡುವ ಎಲ್ಲ ಬುಡಕಟ್ಟುಗಳ ಪ್ರತಿನಿಧಿಗಳು Lamp Societyಯಲ್ಲಿ ಸದಸ್ಯತ್ವನ್ನು ಪಡೆದಿರುವುದಲ್ಲದೆ Lamp Societyಯ ಯಾವುದೇ ಲಾಭ ನಷ್ಟಗಳನ್ನು ಸಮನಾಗಿ ಸ್ವೀಕರಿಸುತ್ತಾರೆ. ಕೊಪ್ಪದಲ್ಲಿರುವ Lampನಲ್ಲಿ ಗೌಡಾಲು, ಹಸಲರು ಮರಾಠಿನಾಯಕರು, ಮಲೆಕುಡಿಯರು ಸದಸ್ಯತ್ವನ್ನು ಪಡೆದು ತಾವು ಸಂಗ್ರಹಿಸಿದ ಅರಣ್ಯ ಉತ್ಪನ್ನಗಳನ್ನು ಇಲ್ಲಿ ಮಾರಾಟ ಮಾಡುವ ವ್ಯವಸ್ಥೆ ತುಂಬ ಅಚ್ಚುಕಟ್ಟಾಗಿ ನಡೆಯುತ್ತದೆ. ಅಲ್ಲದೆ ಬಸಿರುಕಟ್ಟೆ, ಕಳಸ, ವರನಾಡುಗಳ ಸುತ್ತಮುತ್ತಲಿರುವ Lamp Societyಯಲ್ಲಿಯೂ ಎಲ್ಲ ಬುಡಕಟ್ಟುಗಳು ಯಾವುದೇ ವೈಮನಸ್ಸಿಲ್ಲದೆ ತಮ್ಮ ಜೀವನವನ್ನು ಸಾಗಿಸುತ್ತಿರುವುದು ನಿಜ ಸಂಗತಿಯಾಗಿದೆ.

ಬದಲಾವಣೆಯ ಸಮಾಜದ ಕಾಡಿನಲ್ಲಿರುವ ಬುಡಕಟ್ಟುಗಳು ದಿಟ್ಟ ನಿರ್ಧಾರದ ಮನೋಸ್ಥಿತಿಯನ್ನು ಹೊಂದಿದವರಾಗಿದ್ದಾರೆ. ಆದ್ದರಿಂದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಮುಖ್ಯ ಪಟ್ಟಣಗಳಲ್ಲಿ ಆದಿವಾಸಿ ಹಿತರಕ್ಷಣ ಸಮಿತಿ ಎಂಬ ಸಂಘಗಳನ್ನು ಕಟ್ಟಿಕೊಂಡು ಎಲ್ಲ ಗಿರಿಜನರು ಒಂದೇ ಎಂಬ ವಾತಾವರಣವನ್ನು ಸೃಷ್ಟಿ ಮಾಡುತ್ತಿದ್ದಾರೆ. ತಮ್ಮ ತಮ್ಮ ಬದುಕಿಗಾಗಿ ಈ ಸಂಘದ ಮೂಲಕ ಹೋರಾಟಗಳನ್ನು ಮಾಡುತ್ತಿದ್ದಾರೆ. ಇತ್ತೀಚೆಗೆ ಬುಡಕಟ್ಟುಗಳಲ್ಲಿ ಸಾಮಾಜಿಕ ಜಾಗೃತಿಯ ಮನೋಭಾವನೆ ಸೃಷ್ಟಿಯಾಗುತ್ತಿದೆ. ಇದಕ್ಕೆಲ್ಲ ಕಾರಣವನ್ನು ಹುಡುಕುತ್ತಾ ಹೊರಟರೆ ನಾಡಿನ ಸಮುದಾಯಕ್ಕಿಂತ ಒಗ್ಗಟ್ಟು ಸಮುದಾಯಗಳಲ್ಲಿ ಕಾಣಸುತ್ತಿರುವುದು ಗೋಚರಿಸುತ್ತದೆ. ಇದಕ್ಕೆ ಉದಾಹರಣೆಯಾಗಿ ಅಧ್ಯಯನದ ಕ್ಷೇತ್ರವಾದ ಕಳಸದ ಸುತ್ತಮುತ್ತವಿರುವ ಗೌಡಾಲುಗಳು ಕುದುರೆಪೂಜೆಯ ಹಬ್ಬವನ್ನು ಆಚರಿಸುವಾಗ ಮುಂಡಾನಿ ಕೂಡಿಗೆ, ಜರೂಡಿಗೆ, ದಾನ ಕೂಡಿಗೆಯ ೩ ಗುಂಪುಗಳು ಒಂದು ಸ್ಥಳದಲ್ಲಿ ಸೇರುತ್ತಾರೆ. ಅಲ್ಲದೆ ಇಡೀ ಚಿಕ್ಕಮಗಳೂರು ಜಿಲ್ಲೆಯ ಗೌಡಾಲುಗಳ ಪ್ರತಿನಿಧಿಯಂಬಂತೆ ಒಟ್ಟಾಗಿ ಸೇರಿ ಈ ಹಬ್ಬವನ್ನು ಆಚರಿಸುವ ಪರಿಪಾಟವನ್ನು ಇಲ್ಲಿಯ ತನಕ ಕಾಪಾಡಿಕೊಂಡು ಬಂದಿರುವುದನ್ನು ಅವಲೋಕಿಸಿದರೆ ಈ ಸಮುದಾಯ ಇತರೆ ಸಮುದಾಯಗಳ ಮಧ್ಯೆ ಸಂಬಂಧವನ್ನು ಯಾವ ರೂಪದಲ್ಲಿ ಹೆಣೆದುಕೊಂಡಿದೆ ಎಂಬುದು ಸಾಬೀತಾಗುತ್ತದೆ. ಆದ್ದರಿಂದ ಗೌಡಾಲು ಮೂಲತಃ ಕಾಡಿನ ಪರಿಸರಕ್ಕೆ ಅನುಗುಣವಾದಂತೆ ಸಮೂಹ ಜೀವಿಯಾಗಿದೆ. ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಿಸಿದಂತೆ ಈಗಲೂ ಪ್ರತಿಯೊಂದು ಬುಡಕಟ್ಟುಗಳು ಪರಸ್ಪರ ಹೊಂದಾಣಿಕೆಯ ಜೀವನವನ್ನು ಸಾಗಿಸುತ್ತಿವೆ. ಇದಕ್ಕೆ ಸಾಕ್ಷಿಯಾಗಿ

ಕಾಡಿನಲ್ಲಿರುವ ಇವರಿಗೆ ಯಾವುದೇ ತೊಂದರೆ ಬಂದರೆ ಎಲ್ಲರೂ ಸೇರಿ ಎದುರಿಸುವ ಸ್ವಭಾವವನ್ನು ಮೈಗೂಡಿಸಿಕೊಂಡಿದ್ದಾರೆ. ಅವರು ಅದೇ ರೀತಿಯ ನಂಬಿಕೆಯ ಆಧಾರದ ಮೇಲೆ ಬದುಕುತ್ತಿದ್ದಾರೆ. ಗೌಡಾಲುಗಳು ಇತರೆ ಬುಡಕಟ್ಟು ಸಮುದಾಯಗಳೊಂದಿಗೆ ಇದುವರೆಗೆ ಯಾವುದೇ ವೈಮನಸ್ಸು ಸೃಷ್ಟಿ ಮಾಡಿಕೊಳ್ಳದೆ ಬದುಕು ರೂಪಿಸಿಕೊಂಡಿರುವುದು ಕಂಡುಬರುತ್ತದೆ. ಕಾಡಿನಲ್ಲಿ ವಾಸ ಮಾಡುವ ಪ್ರತಿಯೊಂದು ಸಮುದಾಯಕ್ಕೆ ಇತರರ ಸಹಕಾರದ ಮನೋಭಾವನೆ ಬೇಕಾಗಿರುವುದು ಅನಿವಾರ್ಯದ ಹಿನ್ನೆಲೆಯಲ್ಲಿ ಮಾನವನ ಮೂಲ ರೂಪದ ಬದುಕು ಇನ್ನೂ ಉಳಿದುಕೊಂಡಿದೆ. ಎಂದರೆ ಅದು ಬುಡಕಟ್ಟು ಸಮುದಾಯಗಳಲ್ಲಿ ಮಾತ್ರ ಎಂಬುದು ಇಲ್ಲಿ ಗಮನಾರ್ಹವಾದುದಾಗಿದೆ.

ಅರಣ್ಯದೊಳಗೆ ದಿನದ ಬದುಕಿಗಾಗಿ ಕಾಡಿನಲ್ಲಿ ಬೇಟೆ, ವ್ಯವಸಾಯ, ಮೀನುಗಾರಿಕೆ, ಜೇನು ಸಂಗ್ರಹಿಸುವಿಕೆ ಹಾಗೂ ಅರಣ್ಯಉತ್ಪನ್ನಗಳನ್ನು ಸಂಗ್ರಹಿಸಲು ಈಗಲೂ ಸುತ್ತಾಡುತ್ತಿರುವ ಗೌಡಾಲು ಸಮುದಾಯಕ್ಕೆ ಸಾಮಾಜಿಕ ಸಮೂಹದ ಮನೋಭಾವನೆಯು ಹೆಚ್ಚಾಗಿ ಬೇಕಾಗಿದೆ. ಆದ್ದರಿಂದ ಗೌಡಾಲುಗಳಷ್ಟೇ ಅಲ್ಲದೆ ಇತರೆ ಬುಡಕಟ್ಟುಗಳ ಜೊತೆಗಾರಿಕೆಯ ಸಂಬಂಧವು ಅವರಿಗೆ ತಿಳಿಯದೆ ಅವರವರ ಮನಸ್ಸಿನಲ್ಲಿ ಇತರರು ಬದುಕಿಗೆ ಇರಲೇಬೇಕು ಎಂಬುದು ಎಲ್ಲ ಬುಡಕಟ್ಟುಗಳು ಸಂದರ್ಶನದ ಸಮಯದಲ್ಲಿ ಅವರ ಮಾತುಗಳನ್ನು ಮನಸ್ಸಿನಿಂದ ಹೊರ ಹಾಕುವಾಗ ತಿಳಿದಿದೆ. ಆದ್ದರಿಂದ ಇವರು ಸಮೂಹಜೀವಿಯಾಗಿದ್ದಾರೆ.

ಗೌಡಾಲು ಬುಡಕಟ್ಟು ಪಶ್ಚಿಮ ಘಟ್ಟದಲ್ಲಿ ವಾಸಮಾಡುತ್ತಿರುವ ಸಮುದಾಯವಾಗಿರುವುದರಿಂದ ಮನೆಯನ್ನು ಕಟ್ಟುವ ಕೆಲಸವನ್ನು ಅವರೇ ಮಾಡಿಕೊಳ್ಳುತ್ತಾರೆ. ಅಲ್ಲದೆ ಅಕ್ಕಪಕ್ಕದ ಬುಡಕಟ್ಟುಗಳ ಸಹಕಾರವನ್ನು ತೆಗೆದುಕೊಂಡು ಮನೆಗಳನ್ನು ನಿರ್ಮಾಣ ಮಾಡುವ ಪರಿಪಾಟವಿದೆ. ದೈವದ ಕಲ್ಪನೆಯಲ್ಲಿ ಸಾಮಾನ್ಯವಾಗಿ ಈ ಭಾಗದ ಬುಡಕಟ್ಟುಗಳಲ್ಲಿ ಒಂದೇ ರೀತಿಯ ಮನೋಭಾವನೆ ಇರುವುದು ಕಂಡುಬರುತ್ತದೆ. ಅಲ್ಲದೆ ಕಾಡುವಾಸಿಗಳಾದ ಇವರಲ್ಲಿ ಜಾನಪದೀಯ ಸೊಗಡು ಗೋಚರಿಸುತ್ತಿದೆ. ಈ ಹಿನ್ನೆಲೆಯಿಂದ ಸೋಬಾನೆ ಪದಗಳು, ಮದುವೆ, ಹಬ್ಬ ಹಾಗೂ ವಿಶೇಷವಾದ ದಿನಗಳಲ್ಲಿ ಅಕ್ಕ ಪಕ್ಕದ ಬುಡಕಟ್ಟುಗಳು ಸೇರಿ ಹಾಡುತ್ತಾರೆ. ಇದರಿಂದಾಗಿ ಮಲೆನಾಡಿನಲ್ಲಿ ವಾಸ ಮಾಡುತ್ತಿರುವ ಇವರು ಮೂಲತಃ ಮಾತೃಪ್ರಧಾನ ವ್ಯವಸ್ಥೆಯ ಕುಟುಂಬದ ಅಡಿಯಲ್ಲಿ ಜೀವಿಸುವವರಾಗಿರುವುದರಿಂದ ಗೌಡಾಲು ಮತ್ತು ಇತರೆ ಬುಡಕಟ್ಟುಗಳ ಸಾಮಾಜಿಕ ಸಂಬಂಧಗಳು ಜವಾಬ್ದಾರಿಯುತವಾಗಿರುವುದು ಕಾಣುತ್ತದೆ. ಗೌಡಾಲು ಬುಡಕಟ್ಟು ಯಾವುದೇ ಪ್ರದೇಶಕ್ಕೆ ಸ್ಥಳಾಂತರಗೊಳ್ಳದೆ ಅಲ್ಲಿಯೇ ಘರ್ಷಣೆಗೆ ಒಳಗಾಗಿದೆ. ಅಂದರೆ ಭೂಮಾಲೀಕರು ಮತ್ತು ಮೇಲ್ಜಾತಿಯವರ ಬದುಕಿಗೂ ಬುಡಕಟ್ಟುಗಳ ಬದುಕಿಗೂ ತುಂಬ ವ್ಯತ್ಯಾಸವಿದೆ. ಆದರೂ ಇತರೆ ಬುಡಕಟ್ಟುಗಳ ಜೀವನದೊಂದಿಗೆ ಸೇರ್ಪಡೆಗೊಂಡು ಆಧುನಿಕತೆಯ ಕಡೆ ಮುಖ ಮಾಡಿರುವುದು ಕೂಡ ಇವರಲ್ಲಿ ಕಂಡುಬರುತ್ತದೆ. ಸಾಮಾಜಿಕ ಸಂಬಂಧಗಳನ್ನು ಗುರುತಿಸುವುದಷ್ಟೇ ಅಲ್ಲದೆ ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಅವಲೋಕಿಸಿದಾಗ ಭಾರತೀಯ ಸಾಮಾಜಿಕ ಬದಲಾವಣೆಯು ಹಂತ ಹಂತವಾಗಿ ನಡೆದುಕೊಂಡು ಬರುತ್ತಿರುವ ಪ್ರಕ್ರಿಯೆಯಾಗಿದೆ. ಗೌಡಾಲು ಸಮುದಾಯವು ಆದಿಮಾನವನ ಸಂಸ್ಕೃತಿಯಿಂದ ಹೊರಬರುತ್ತಿದ್ದರೂ ಇಂದಿನ ದಿನಮಾನಗಳಲ್ಲಿ

ಇತರೆ ಬುಡಕಟ್ಟುಗಳ ಮಧ್ಯೆ ಸಾಮ್ಯತೆಯ ಬದುಕು ಮಾಡುತ್ತಿರುವುದು ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತದೆ. ಅಲ್ಲದೆ ವಸಾಹತುಶಾಹಿ ಕಾಲದಿಂದ ಇಲ್ಲಿಯವರೆಗೆ ಕರ್ನಾಟಕದಲ್ಲಿ ಸಮುದಾಯಗಳು ತನ್ನ ಮೂಲದ ಜೀವನದಿಂದ ಹೊರಬಂದಿರುವ ಹಿನ್ನೆಲೆಯಲ್ಲಿ ಗೌಡಾಲುಗಳನ್ನು ವೀಕ್ಷಿಸಿದಾಗ ಈ ಸಮುದಾಯವು ಕಾಡಿನಲ್ಲಿರುವುದರಿಂದ ಭಾರತೀಯ ಸಮಾಜಶಾಸ್ತ್ರಜ್ಞರಾದ ಎಂ.ಎನ್. ಶ್ರೀನಿವಾಸ್, ಎ.ಆರ್. ದೇಸಾಯಿಯಂತಹ ಶಾಸ್ತ್ರಜ್ಞರು ಹೇಳಿದ ನೆಲೆಯಲ್ಲಿಯೇ ಜೀವನ ಸಾಗಿಸುತ್ತಾ ತನ್ನ ಬದುಕಿನಲ್ಲಿ ರೂಪಾಂತರಗೊಳ್ಳುತ್ತಿದೆ.

ಭಾರತೀಯ ಸಮಾಜಶಾಸ್ತ್ರವನ್ನು ಕುರಿತು ಅಧ್ಯಯನ ಮಾಡ ಹೊರಟರೆ ಮೊದಲು ಮಾಡಬೇಕಾಗಿರುವುದು ತಳ ಸಮುದಾಯಗಳ ಅಧ್ಯಯನ. ಆಗ ಮಾತ್ರ ದೇಶದ ಸಾಮಾಜಿಕ ಸ್ಥಾನಮಾನಗಳೇನು ಎಂಬುದು ಅರ್ಥವಾಗುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನವು ಬುಡಕಟ್ಟು ಸಮುದಾಯವನ್ನು ಕುರಿತಿರುವುದರಿಂದ ಗೌಡಾಲು ಸಮುದಾಯವು ಇತರೆ ಬುಡಕಟ್ಟುಗಳೊಂದಿಗೆ ಯಾವ ತೆರನಾದ ಸಾಮಾಜಿಕ ಸಂಬಂಧಗಳನ್ನು ಹೊಂದಿದೆ ಎಂದು ಕುರಿತು ಚರ್ಚಿಸುವುದು ಉಪಯುಕ್ತ. ಈ ಬುಡಕಟ್ಟು ಇತರರೊಂದಿಗೆ ಪ್ರಾಥಮಿಕ ಸಂಬಂಧಗಳನ್ನು ಇಟ್ಟುಕೊಂಡು ಸಾಮಾಜಿಕ ಸಂರಚನೆಯನ್ನು ರೂಪಿಸಿದೆ. ವಿನಾ ಮಾಧ್ಯಮಿಕ ಸಂಬಂಧಗಳ ಮೂಲಕ ಸಾಮಾಜಿಕ ವ್ಯವಸ್ಥೆಯನ್ನು ರಚಿಸಿಕೊಂಡಿಲ್ಲ. ಆದ್ದರಿಂದ ಗೌಡಾಲುಗಳಷ್ಟೇ ಅಲ್ಲದೆ ಇತರೆ ಯಾವ ಬುಡಕಟ್ಟುಗಳು ಸ್ವಾರ್ಥಪರ ಜೀವನ ಶೈಲಿಯನ್ನು ಹೊಂದಿರುವುದಿಲ್ಲ ಎಂಬ ಮಾತು ಕ್ಷೇತ್ರಕಾರ್ಯದಿಂದ ದೃಢವಾಗಿರುತ್ತದೆ. ಹೀಗಾಗಿ ಸಾಮಾಜಿಕ ಬದಲಾಣೆಗೆ ಅನುಗುಣವಾಗಿ ತನ್ನ ಸಾಂಸ್ಕೃತಿಕ ನಿರಂತರತೆಯನ್ನು ಕಾಪಾಡಿಕೊಂಡು ಕಾಡಿನಲ್ಲಿ ಗೌಡಾಲುಗಳು ಜೀವಿಸುತ್ತಿದ್ದಾರೆ. ಇದರಿಂದಾಗಿ ಮಲೆನಾಡಿನಲ್ಲಿ ವಾಸ ಮಾಡುತ್ತಿರುವ ಸಮುದಾಯಗಳ ಸಂಸ್ಕೃತಿಯೂ ಶ್ರೀಮಂತವಾದುದಾಗಿದೆ. ಅಲ್ಲದೆ ದೇಶಿಯ ಬದುಕು ಈಗಲೂ ನಮಗೆ ಉಳಿದುಕೊಂಡು ಬಂದಿರುವಂತೆ ಮನಸ್ಸಿಗೆ ಭಾಸವಾಗುತ್ತಿದೆಯೆಂದರೆ ಅದು ಬುಡಕಟ್ಟುಗಳ ಆಚರಣೆಗಳಿಂದ ಎಂಬುದನ್ನು ಮರೆಯಬಾರದು. ಈ ಹಿನ್ನೆಲೆಯ ಬದುಕು ಗೌಡಾಲುಗಳದ್ದಾಗಿದೆ. ಈ ಸಮುದಾಯವು ಇತರರೊಡನೆ ಸಂಬಂಧವನ್ನು ಇಟ್ಟುಕೊಂಡಿರುವುದರಿಂದ ಮಲೆಕುಡಿಯರ ವೃತ್ತಿಯ ಪ್ರಾಚೀನತೆಗೂ ಇವರ ವೃತ್ತಿಯ ಪ್ರಾಚೀನತೆಗೂ ಪರಸ್ಪರ ಹೊಂದಾಣಿಕೆಯೂ ಕಂಡುಬರುತ್ತದೆ. ಇದಕ್ಕೆ ಸಾಕ್ಷಿಯಾಗಿ ಸಂಪ್ರದಾಯಗಳು ಮತ್ತು ನಂಬಿಕೆಗಳಲ್ಲಿ ಸಾಮ್ಯತೆ ಇರುವುದು ಗೋಚರಿಸುತ್ತದೆ. ಎಂ.ಎನ್ ಶ್ರೀನಿವಾಸರವರು ಹೇಳುವಂತೆ ಪ್ರಭುತ್ವದ ಜೀವನದ ಶೈಲಿಯ ಪ್ರಭಾವವು ಹಂತ ಹಂತವಾಗಿ ಇವರ ಮೇಲಾಗಿರುವುದು ಗಮನಾರ್ಹವಾದ ಸಂಗತಿ. ಇವರು ಭೂಮಾಲೀಕರು ಮತ್ತು ಇತರರ ಮಧ್ಯೆ ದಿನನಿತ್ಯದ ಬದುಕಿನಲ್ಲಿ ತೊಡಗಿರುವುದರಿಂದ ಪರಸ್ಪರರ ಆರ್ಥಿಕ ಸಂಬಂಧಗಳು ನಡೆಯುತ್ತಿವೆ.

ಮಲೆನಾಡಿನಲ್ಲಿರುವ ಗೌಡರು ಮತ್ತು ಗೌಡಾಲುಗಳ ಸಂಪ್ರದಾಯಗಳು ಅಲ್ಪಸ್ವಲ್ಪ ಒಂದೇ ಎನಿಸಿದರೂ ಗೌಡಾಲುಗಳನ್ನು ಗೌಡರು ಕೆಳಮಟ್ಟದ ಮನೋಭಾವನೆಯಿಂದ ನೋಡುತ್ತಿದ್ದಾರೆ. ಆದರೆ ಇವರ ಕುದುರೆ ಪೂಜೆಯ ನೃತ್ಯ, ಅಂಟಿಕೆ ಪಂಟಿಕೆಯಂತ ಆಚರಣೆಗಳು ಇಡೀ ರಾತ್ರಿ ಮಾರ್ಗದ ಮಧ್ಯ ಮಧ್ಯ ಅಕ್ಕಿ ಹೆಂಡ

ಹಾಗೂ ಪಾನಕ ಕೊಡುವ ಗೌಡಾಲು ಸಮುದಾಯದ ಪರಂಪರೆ ವಿಶಿಷ್ಟವಾದುದಾಗಿದೆ. ಈ ರೀತಿಯ ಹಬ್ಬದಲ್ಲಿ ಅಕ್ಕ ಪಕ್ಕದ ಬುಡಕಟ್ಟುಗಳು ಸಹಕಾರವನ್ನು ನೀಡುತ್ತಾರೆ. ಆದರೆ ಆಚರಣೆಯಲ್ಲಿ ಪಾಲುಗೊಳ್ಳದೆ ಇರುವುದು ವಿಶಿಷ್ಟವಾಗಿದೆ. ಆದ್ದರಿಂದ ಈ ಬುಡಕಟ್ಟು ಧಾರ್ಮಿಕ ವಿಧಿವಿಧಾನಗಳಲ್ಲಿ ತನ್ನದೇ ಆದ ದೈವತ್ವದ ನಿಯಮವನ್ನು ಕಾಪಾಡಿಕೊಂಡು ಬಂದಿದೆ.

ಇಲ್ಲಿ ಗೌಡಾಲುಗಳಷ್ಟೇ ಅಲ್ಲದೆ ಇತರೆ ಬುಡಕಟ್ಟುಗಳು ಸಹ ಭೂಮಾಲೀಕರ ಗದ್ದೆ, ತೋಟ ಮತ್ತು ಮನೆಗಳಲ್ಲಿ ದಿನಗೂಲಿಗಳಾಗಿ ಕೆಲಸಕ್ಕೆ ಹೋಗುತ್ತಿದ್ದಾರೆ. ಪ್ರತಿಯೊಬ್ಬ ಬುಡಕಟ್ಟು ಪುರುಷರು ಮತ್ತು ಮಹಿಳೆಯರು ಒಟ್ಟಾಗಿಯೇ ಕೆಲಸ ಮಾಡುವುದರಿಂದ ಇವರ ಮನೆಗಳ ವಿನ್ಯಾಸವು ಕಾಡಿನ ಪರಿಸರಕ್ಕೆ ಅನುಗುಣವಾಗಿ ಇರುವಂತೆ ಕಟ್ಟಿಕೊಂಡಿದ್ದಾರೆ. ಗೌಡಾಲು ಸಮುದಾಯವು ಊಟೋಪಚಾರಗಳಿಗೆ ಬಳಸುವ ಪರಿಕರಗಳು ಮತ್ತು ಇತರೆ ಸಮುದಾಯಗಳು ಬಳಸುವ ಸಾಧನಗಳಲ್ಲಿಯೂ ಸಾಮ್ಯತೆ ಕಂಡುಬರುತ್ತದೆ. ಮಲೆಕುಡಿಯರಂತೂ ಇವರ ನೆಂಟರಾಗಿದ್ದಾರೆ. ಆದ್ದರಿಂದ ಇವೆರಡು ಬುಡಕಟ್ಟಿನಲ್ಲಿ ಒಂದೇ ಸಮುದಾಯವೆಂದು ಹೇಳುವ ಸಾಮಾಜಿಕ ರಚನೆಯಾಗಿರುವುದು ಗೋಚರಿಸುತ್ತದೆ. ಮಲೆನಾಡಿನ ಬುಡಕಟ್ಟುಗಳಲ್ಲಿ ಬೇಟೆಯ ಸಾಂಪ್ರದಾಯಿಕ ಪದ್ಧತಿಯ ನಿಯಮಗಳನ್ನು ಪಾಲಿಸುತ್ತಿದ್ದಾರೆ. ಇತರೆ ಬುಡಕಟ್ಟು ಜನರ ಬೇಟೆ ಆಚರಣೆಗೂ ಹೊಂದಾಣಿಕೆಯಾದ ವ್ಯವಸ್ಥೆ ಇಲ್ಲಿದೆ. ಆದ್ದರಿಂದ ಮಾನವ ಸಮೂಹ ಜೀವಿ ಎಂಬುದನ್ನು ತನ್ನ ಬದುಕಿನಲ್ಲಿ ಮೈಗೂಡಿಸಿಕೊಂಡಿರುತ್ತಾನೆ ಎಂಬ ಸಮಾಜಶಾಸ್ತ್ರದ ಚಿಂತಕರ ನಿಲುವು ಗೌಡಾಲುಗಳಲ್ಲಿ ಗೋಚರಿಸುತ್ತದೆ. ಕ್ಷೇತ್ರಕಾರ್ಯದಲ್ಲಿ ತಿಳಿದ ಮಾಹಿತಿ ಹಾಗೂ ವಿದ್ವಾಂಸರಾದ ಹಿ.ಚಿ. ಬೋರಲಿಂಗಯ್ಯ, ಮೈತ್ರಿ, ಎ.ಎಸ್. ಪ್ರಭಾಕರ, ಕೇಶವನ್ ಪ್ರಸಾದ್, ಚಲುವರಾಜು, ಗಂಗಾಧರ ದೈವಜ್ಞ, ಮಹಮದ್ ಪೀರ್, ವಿಘ್ನೇಶ್ ಎನ್.ಭಟ್ ಮುಂತಾದವರು ಬುಡಕಟ್ಟುಗಳನ್ನು ಕುರಿತು ಚರ್ಚೆ ಮಾಡಿದ ಹಿನ್ನೆಲೆಯನ್ನು ಗಮನಿಸಿದಾಗ, ಸಾಮಾನ್ಯವಾಗಿ ಎಲ್ಲ ಬುಡಕಟ್ಟುಗಳಲ್ಲಿಯೂ ಹುಟ್ಟು, ಮದುವೆ ಮತ್ತು ಸಾವುಗಳಲ್ಲಿ ಕೂಡ ಅವುಗಳಿಗೆ ಸಾಮಾಜಿಕವಾದ ಒಂದು ರೂಪವನ್ನು ನೀಡುವುದು ರೂಢಿಯಲ್ಲಿದೆ. ಈ ತೆರನಾದ ಪದ್ಧತಿ ಗೌಡಾಲುಗಳಲ್ಲಿ ರೂಢಿಗತವಾಗಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ವಾಸ ಮಾಡುವ ಬುಡಕಟ್ಟುಗಳ ಶಾರೀರಿಕ ಲಕ್ಷಣವು ಸಾಮಾನ್ಯವಾಗಿ ಒಂದೇ ತೆರನಾಗಿದೆ. ಗೌಡಾಲುಗಳು, ಮಲೆಕುಡಿಯರು ಹಾಗೂ ಇತರೆ ಬುಡಕಟ್ಟುಗಳಾದ ಮಾಲೇರು, ಮರಾಠಿ ನಾಯಕರ ಶಾರೀರಿಕ ಲಕ್ಷಣದಲ್ಲಿ ಸಾಮ್ಯತೆ ಇರುವುದರಿಂದ ಕಾಡು ಕಣಿವೆ, ಗಿರಿ, ಝುರಿ, ಗುಹೆ-ಗುಹ್ವರಗಳ ವಾಸ ಎಲ್ಲರಲ್ಲೂ ಸಾಮಾನ್ಯ ಅಂಶ. ಹಾಗೆಯೇ ಆಧುನಿಕ ಸಮಾಜವಾದ ಪೇಟೆಯಿಂದ ದೂರವಿದ್ದು ಅರಣ್ಯದ ಆಜು ಬಾಜು ವಾಸಿಸುವಂತಹ ಬುಡಕಟ್ಟುಗಳು ಕಾಡನ್ನು ಅತ್ಯಂತ ಪ್ರೀತಿಯಿಂದ ಕಾಣುತ್ತಾರೆ. ಆಹಾರ ಪದ್ಧತಿಯೂ ಇಲ್ಲಿಯ ಪ್ರದೇಶಗಳಲ್ಲಿ ಸಿಗುವ ವಸ್ತುಗಳ ಆಧಾರದ ಮೇಲೆ ಅವಲಂಬಿತವಾಗಿದೆ. ಎಲ್ಲ ಬುಡಕಟ್ಟುಗಳೂ ಮಾಂಸಾಹಾರಿಗಳಾಗಿದ್ದಾರೆ. ಅಲ್ಲದೆ ಬೇಟೆಯೂ ಇಲ್ಲಿರುವ ಎಲ್ಲ ಬುಡಕಟ್ಟುಗಳಲ್ಲಿ ಕಂಡುಬರುತ್ತದೆ. ಆದ್ದರಿಂದ ಭೌತಿಕ ಸಂಸ್ಕೃತಿ ಮತ್ತು ಅಭೌತಿಕ ಸಂಸ್ಕೃತಿಯಲ್ಲಿ ಗೌಡಾಲು ಬುಡಕಟ್ಟು ಇತರೆ ಬುಡಕಟ್ಟುಗಳೊಂದಿಗೆ

ಸಾಮ್ಯತೆ ಪಡೆದಿದೆ. ಸಾಮಾಜಿಕ ವ್ಯವಸ್ಥೆಯ ವ್ಯಾಪ್ತಿಯಲ್ಲಿ ಬರುವ ಕುಟುಂಬ ಮತ್ತು ವಿವಾಹ ರಕ್ತ ಸಂಬಂಧದಂತಹ ಸಾಮಾಜಿಕ ರಚನೆಯ ವಿಷಯಗಳಿಂದ ಹಿಡಿದು ಸಮಾಜದಲ್ಲಿ ಶಿಸ್ತು ಶಾಂತಿಯನ್ನು ನೆಲೆಗೊಳಿಸಲು ಬೇಕಾದ ಆಡಳಿತಾಧಿಕಾರಿಗಳಿಂದ ಕೂಡಿದ ರಾಜಕೀಯ ವ್ಯವಸ್ಥೆ, ಧರ್ಮ ಮತ್ತು ಸಂಪ್ರದಾಯಗಳವರೆಗೂ ಪರಸ್ಪರ ಸಾಮ್ಯತೆ ಇರುವುದು ಕಂಡುಬರುತ್ತದೆ.

ಗೌಡಾಲು ಬುಡಕಟ್ಟು ಭಾಷೆ ಮತ್ತು ಸಾಹಿತ್ಯಗಳಲ್ಲಿ ಮಲೆಕುಡಿಯರೊಡನೆ ಸಾಮ್ಯತೆಯನ್ನು ಇಟ್ಟುಕೊಂಡಿದೆ. ಏಕೆಂದರೆ ಪ್ರಾಣಿಗಳಲ್ಲಿಲ್ಲದ ಮಾನವನಿಗೆ ವಿಶಿಷ್ಟವಾದ ಸಂಸ್ಕೃತಿ ರೂಪಗೊಳ್ಳಲು ಮೂಲವಾದುದು ಭಾಷೆ. ಇದು ನಾನಾ ಬಗೆಯಲ್ಲಿ ಅಭಿವ್ಯಕ್ತಿಗೊಳ್ಳುವುದರ ಮೂಲಕ ಮಾನವ ಸಂಸ್ಕೃತಿಯ ವಾಹಕವಾಗಿ ಕಾರ್ಯ ಮಾಡುತ್ತದೆ. ಈ ಹಿನ್ನೆಲೆಯಿಂದ ಭಾಷೆ ಅಭಿವ್ಯಕ್ತಿಯನ್ನು ಪಡೆಯುವುದು, ಮೂರ್ತರೂಪವನ್ನು ತಾಳುವುದು ಆದ್ದರಿಂದ ಬುಡಕಟ್ಟುಗಳ ಬದುಕಿನಲ್ಲಿ ಜಾನಪದೀಯ ಅಂಶವು ಗೋಚರಿಸುತ್ತಿದೆ.

**ಟಿಪ್ಪಣಿಗಳು**

೧. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು.೫೪

೨. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು.೫೪

೩. ಶ್ರೀನಿವಾಸಗೌಡ ವಯಸ್ಸು, ೪೦, ಕಳಸ ಮೂಡಿಗೆರೆ ತಾಲೂಕು

೪. ಆದಿವಾಸಿ ಅಖ್ಯಾನ ೨೦೦೭, ಪುಟ

೫. ಬೋರಲಿಂಗಯ್ಯ ಹಿ.ಚಿ., ಮತ್ತು ಪ್ರಭಾಕರ ಎ.ಎಸ್., ೨೦೦೪, ಬುಡಕಟ್ಟು ಅಧ್ಯಯನ, ಪು.೧೪೪-೧೩೧

೬. ಕರ್ನಾಟಕ ವಿಮೋಚನಾ ರಂಗ, (೨೦೦೦), ಆದಿವಾಸಿಗಳಿಗೆ ಎತ್ತಂಗಡಿ, ಸಾಮ್ರಾಜ್ಯಶಾಹಿಗಳಿಗೆ ರತ್ನಗಂಬಳಿ ಪು. ೧-೨೦

೭. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು. ೨೨೭-೨೩೫

೮. Criminal Tribes Act.

೯. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು. ೧೯೦

೧೦. ಬೋರಲಿಂಗಯ್ಯ ಹಿ.ಚಿ., ಮತ್ತು ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಧ್ಯಯನ - ೨,

೧೧. Shankar Rao C.N, (2005) Indian Society, P.199.

೧೨. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು. ೧೯೨-೨೨೦

೧೩. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು. ೧೧೨-೨೨೫

೧೪. ಪಾರ್ವತಮ್ಮ (೨೦೦೭), ಆದಿವಾಸಿ ಸಮುದಾಯಗಳ ಅಭಿವೃದ್ಧಿ, ಪು. ೫೭-೬೦.

೧೫. ೧೯೭೮ ಮತ್ತು ೧೯೮೬ರ ಸಂವಿಧಾನಿಕ ತಿದ್ದುಪಡಿ ಕಾಯ್ದೆ.

೧೬. ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಅಧಿನಿಯಮ ೨೦೦೬ (೨೦೦೭ರ ೨)

೧೭. ದಿನ ಪತ್ರಿಕೆಗಳು ಪ್ರಜಾವಾಣಿ, ವಿಜಯಕರ್ನಾಟಕ

೧೮. ಪಾರ್ವತಮ್ಮ (೨೦೦೭), ಆದಿವಾಸಿ ಸಮುದಾಯಗಳ ಅಭಿವೃದ್ಧಿ, ಪು. ೧೧-೨೦.

೧೯. ಪ್ರಭಾಕರ ಎ.ಎಸ್., (೨೦೦೪), ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪು. ೧೩೧-೨೨೫

* * *

### ಅಧ್ಯಾಯ ಐದು

## ಸಮಾರೋಪ

ಬಹುತೇಕವಾಗಿ ಕಾಡು ಮೇಡುಗಳಲ್ಲಿ ವಾಸವಾಗಿರುವ ಗೌಡಾಲು ಸಮುದಾಯದವರು, ತಮ್ಮ ಜೀವನವನ್ನು ತೀರ ಕಷ್ಟಕರವಾದ ವ್ಯವಸ್ಥೆಯಲ್ಲಿ ನಡೆಸುತ್ತಿರುವುದು, ಇಡೀ ನಾಡಿಗೆ ಪರಿಚಯಿಸುವ ಮತ್ತು ಅವರ ಸಮಸ್ಯೆಗಳ ಪರಿಹಾರೋಪಾಯದ ಉದ್ದೇಶದಿಂದ ಈ ಸಂಶೋಧನಾ ಅಧ್ಯಯನವನ್ನು ಕೈಗೊಂಡಿದ್ದು, ಇದು ನನ್ನ ಸಂಶೋಧನೆಗೆ ಕಠಿಣ ಸವಾಲೇ ಆಗಿತ್ತು. ಕಾಡು ಮೇಡುಗಳನ್ನು ಅಲೆದು ಗೌಡಾಲು ಸಮುದಾಯವನ್ನು ಸಂದರ್ಶಿಸಿ ಅಧ್ಯಯನವನ್ನು ಈ ಮಹಾಪ್ರಬಂಧದಲ್ಲಿ ಮಾಡಲಾಗಿದೆ.

ಈ ಮಹಾಪ್ರಬಂಧವು ಒಟ್ಟು ಐದು ಅಧ್ಯಾಯಗಳನ್ನು ಒಳಗೊಂಡು ಅದರ ಜೊತೆಗೆ ಸಮಾರೋಪವನ್ನು ಹೊಂದಿರುತ್ತದೆ. ಇಲ್ಲಿ ಮುಖ್ಯವಾದ ಐದು ಅಧ್ಯಯನಗಳು ಈ ಕೆಳಗಿನ ವಸ್ತು ವಿಷಯಗಳನ್ನು ಒಳಗೊಂಡಿರುತ್ತದೆ. ಒಂದನೇ ಅಧ್ಯಾಯವು ಒಟ್ಟಾರೆ ಮಹಾಪ್ರಬಂಧದ ತಾತ್ವಿಕ ಒಲವು ಸರಳವಾಗಿ ವಿವರಿಸಲಾಗಿದೆ. ಎರಡನೆ ಅಧ್ಯಾಯವು ಗೌಡಾಲು ಸಮಾಜದ ಸಂರಚನೆಯನ್ನು ಹೊಂದಿದೆ, ಅಂದರೆ ಗೌಡಾಲು ಸಮುದಾಯದ ಮೂಲ, ಭೌಗೋಳಿಕ ಪರಿಸರ ಒಟ್ಟು ಜನಸಂಖ್ಯೆಯನ್ನು ಹೊಂದಿದ್ದಾಗಿದೆ. ಗೌಡಾಲುಗಳ ಕೃಷಿ ಪದ್ಧತಿ, ಕೃಷಿಯೇತರ ಚಟುವಟಿಕೆ ಮತ್ತು ಅರಣ್ಯ ಉತ್ಪನ್ನಗಳು ಮತ್ತು ದಿನಗೂಲಿಗಳಾಗಿರುವ ಬೆಗೆಗೆ ಚರ್ಚಿಸಲಾಗಿದೆ. ಅಧ್ಯಾಯ ಮೂರರಲ್ಲಿ ಗೌಡಾಲು ಬುಡಕಟ್ಟಿನ ಸಾಂಸ್ಕೃತಿಕ ಚಟುವಟಿಕೆಗಳು ಸಮುದಾಯದ ಅಂತರಾಳದಲ್ಲಿ ಯಾವ ರೀತಿಯಾಗಿ ಮನೆಮಾಡಿಕೊಂಡಿವೆ. ಎಂಬುದನ್ನು ಸ್ಥೂಲವಾಗಿ ಚರ್ಚಿಸಿ ಪ್ರಮುಖವಾಗಿ ದೇವರು ಮತ್ತು ನಂಬಿಕೆಗಳು, ವಿಧಿ ನಿಷೇಧಗಳು, ಹಬ್ಬ-ಆಚರಣೆಗಳು ಯಾವ ಯಾವ ರೂಪದಲ್ಲಿ ಸಮುದಾಯದ ಸಮಾಜಿಕ ಬೇರುಗಳಾಗಿವೆ ಎಂಬುದನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ. ನಾಲ್ಕನೇ ಅಧ್ಯಾಯ ಗೌಡಾಲುಗಳು ವರ್ತಮಾನದಲ್ಲಿ ಯಾವ ತೆರನಾದ ಬದುಕನ್ನು ಸಾಗಿಸುತ್ತಿದ್ದಾರೆ ಹಾಗೂ ಇವರಿಗೆ ಎದುರುಗೊಳ್ಳುವ ಸವಾಲುಗಳು ಯಾವ ಸ್ವರೂಪದವುಗಳು ಎಂಬುದನ್ನು ಕುರಿತು ಚರ್ಚಿಸಿರುವುದಲ್ಲದೆ ಭೂಮಾಲಿಕರು ಮತ್ತು ಗೌಡಾಲುಗಳ ನಡುವಿನ ಸಂಬಂಧವು ಭೂಸ್ವಾಧೀನ ಹಕ್ಕಿನ ಹಿನ್ನೆಲೆಯಲ್ಲಿ ಹೇಗೆ ಹೆಣೆದುಕೊಂಡಿದೆ ಎಂಬುದನ್ನು ಚರ್ಚಿಸಿದೆ. ರಾಜಕೀಯವು ಸಮುದಾಯದಲ್ಲಿ ಯಾವ ರೀತಿ ತನ್ನ ಸ್ಥಾನವನ್ನು ಸ್ಥಿರಗೊಳಿಸಿದೆ ಎಂದು ತಿಳಿದು, ಮಹಾಪ್ರಬಂಧಕ್ಕೆ ಪೂರಕವಾಗಿ ಚಿತ್ರಿಸಲಾಗಿದೆ. ಅಲ್ಲದೆ ಸರ್ಕಾರಿ ಸೌಲಭ್ಯಗಳಾವುವು ಇವುಗಳು ಎಷ್ಟರ ಮಟ್ಟಿಗೆ ಸರಳೀಕರಣಗೊಂಡಿವೆ ಎಂಬುದನ್ನು ಕೂಡ ಚರ್ಚೆಗೆ ಒಳಪಡಿಸಿ, ಗೌಡಾಲುಗಳ ಅಭಿವೃದ್ಧಿಯಲ್ಲಿ ಇತರೆ ಸಂಘ-ಸಂಸ್ಥೆಗಳ ಪಾತ್ರಗಳು ಯಾವ ಯಾವ ರೀತಿಯಲ್ಲಿ ಪೂರಕವಾಗಿ ರೂಪಿತಗೊಂಡಿವಿಯೋ ಅಥವಾ ಇಲ್ಲವೆ ಎಂದು ಮಹಾಪ್ರಬಂದದಲ್ಲಿ ಕಟ್ಟಿಕೊಡಲಾಗಿದೆ. ಗೌಡಾಲು

ಸಮುದಾಯವನ್ನು ಆಧುನಿಕ ಸಮಾಜಕ್ಕೆ ಮುಖಾಮುಖಿ ಮಾಡಿ ವರ್ತಮಾನದಲ್ಲಿ ಇವರ ಪಾತ್ರವೇನು? ಇವರು ಸರ್ಕಾರ ಮತ್ತು ಸೌಲಭ್ಯಗಳಲ್ಲಿ ಹೇಗೆ ತಮ್ಮ ಪಾತ್ರದ ಪ್ರಭಾವವನ್ನು ಬೀರಿದ್ದಾರೆ. ಹಾಗೂ ಯೋಜನೆಗಳ ಬಗ್ಗೆ ಇವರಲ್ಲಿ ಯಾವ ರೀತಿಯ ಜ್ಞಾನವಿದೆ ಎಂಬುದನ್ನು ಚರ್ಚಿಸಿ. ಆಧುನಿಕ ಸಂದರ್ಭದಲ್ಲಿ ಗೌಡಾಲುಗಳು ಯಾವ ರೀತಿ ಬದುಕಿನ ಸ್ಥಿತ್ಯಂತರಕ್ಕೆ ಒಳಗಾಗಿದ್ದಾರೆ ಮತ್ತು ಸಮುದಾಯಕ್ಕೆ ಯೋಜನೆಗಳ ಸಫಲತೆ ಹಾಗೂ ವಿಫಲತೆಯನ್ನು ಇಲ್ಲಿ ಚರ್ಚಿಸಲಾಗಿದೆ. ಮುಂದುವರಿದು ಇತರೆ ಸಮುದಾಯಗಳ ಮಧ್ಯ ಗೌಡಾಲುಗಳು ಯಾವ ತೆರನಾದ ಸಂಬಂಧ, ಸಂಪರ್ಕವನ್ನು ಇಟ್ಟುಕೊಂಡಿದೆ ಎಂದು ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ. ಅಧ್ಯಾಯ ಐದು, ಉಪಸಂಹಾರದಲ್ಲಿ ಗೌಡಾಲು ಸಮುದಾಯದ ಬದುಕಿನ ದಾರಿ ಕುರಿತು ವಿಮರ್ಶಾತ್ಮಕವಾಗಿ ಚರ್ಚಿಸುತ್ತ ಬುಡಕಟ್ಟುಗಳು, ಸಾಮಾಜಿಕ ವ್ಯವಸ್ಥೆಯಲ್ಲಿ ಹೇಗೆ ತಮ್ಮ ಅಸ್ತಿತ್ವವನ್ನು ಇಟ್ಟುಕೊಂಡಿವೆ ಮತ್ತು ಬಹುರೂಪಿ ಸಂಸ್ಕೃತಿಯ ಜೀವಕಣದ ಬುಡಕಟ್ಟು ಸಮಾಜಕ್ಕೆ ವಸಾಹತು ಶಾಹಿಯು ತಂದ ಬದಲಾವಣೆಯು ಒಂದು ರೀತಿಯಲ್ಲಿ ಬಿರುಗಾಳಿಯಾಗಿ ಪ್ರಳಯ ರೂಪಿಯಂತೆ ಬಂದೆರಗಿದೆ. ಈ ಸಂದರ್ಭದಲ್ಲಿ ಬುಡಕಟ್ಟು ಬದುಕಿನ ಗರ್ಭದೊಳಗೆ ಉದ್ಭವವಾದ ಪಲ್ಲಟಗಳನ್ನು ಮಹಾಪ್ರಬಂಧದ ಮೂಲಕ ಗೌಡಾಲು ಸಾಮಾಜಿಕ ಸಂಬಂಧಗಳನ್ನು ಅವುಗಳ ಬಹುಮುಖಿಗಳನ್ನು ಕಂಡುಕೊಳ್ಳಲಾಗಿದೆ. ಈ ರೀತಿಯ ಆಲೋಚನೆಯ ಅಂಶಗಳನ್ನು ಉಪಸಂಹಾರದಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮಹಾಪ್ರಬಂಧದ ಫಲಿತಗಳನ್ನು ಕೂಡ ಉಪಸಂಹಾರದಲ್ಲಿ ಹೇಳಲಾಗಿದೆ. ಆದ್ದರಿಂದ ಪ್ರಸ್ತುತದಲ್ಲಿ ನಡೆದ ಅಧ್ಯಯನ ಸ್ಥೂಲವಾದ ವಿವರಗಳು ಇಲ್ಲಿ ಚರ್ಚೆಗೆ ಒಳಪಟ್ಟು ಸಂರಚನೆಗೊಂಡಿರುವುದು ಸಂಶೋಧನೆಯ ದೃಷ್ಟಿಯಿಂದ ಮುಖ್ಯವಾಗಿದೆ.

* ರಾಷ್ಟ್ರೀಯ ಉದ್ಯಾನವನ ನೀತಿಯಿಂದ ಇವರಿಗೆ ನೆಮ್ಮದಿ ಇಲ್ಲ. ಯಾವ ಸಂದರ್ಭದಲ್ಲಿ ಯಾರು ಬಂದು ಒಕ್ಕಲೆಬ್ಬಿಸುತ್ತಾರೋ ಏನೋ ಎಂಬ ಭಯಹೊಂದಿದ್ದು, ಅಧಿನಿಯಮ ೨೦೦೬ (೨೦೦೭ರ ೨) ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಕಾನೂನು ಬಂದನಂತರ ಜೀವನದಲ್ಲಿ ನಿಟ್ಟುಸಿರು ಬಿಡುತ್ತಿದ್ದಾರೆ.
* ಪೋಲೀಸ್ ಇಲಾಖೆಯು ಈ ಮುಗ್ಧ ಜನರನ್ನು ಸಂಶಯಾಸ್ಪದ ರೀತಿಯಲ್ಲಿ ನೋಡುತ್ತಿದೆ. ಅಂದರೆ ಕೆಲವರು ನಕ್ಸಲೀಯರ ಚಟುವಟಿಕೆಯಲ್ಲಿ ಭಾಗಿಯಾಗಿರಬಹುದು ಅಥವಾ ಅವರಿಗೆ ಪ್ರೋತ್ಸಾಹ ನೀಡುತ್ತಿರಬಹುದು ಎಂಬ ಶಂಕೆಯ ದೃಷ್ಟಿಯಿಂದ ಅವರನ್ನು ನೋಡುತ್ತಾರೆ ಎಂದು ತಮ್ಮ ನೋವನ್ನು ವ್ಯಕ್ತಪಡಿಸುತ್ತಾರೆ.
* ಕೆಲವೊಂದು ತಿಳುವಳಿಕೆದಾರರ ಪ್ರಕಾರ ನಕ್ಸಲಿಯರ ಚಟುವಟಿಕೆಗಳು ಪ್ರಾರಂಭವಾದನಂತರ ತಾವು ಕೆಲಸ ಮಾಡುವ ಮಾಲೀಕರಿಂದ ಯಾವುದೇ ಒತ್ತಡವಿಲ್ಲ, ಕೂಲಿ ಹೆಚ್ಚಾಗಿದೆ. ಹಾಗೆಯೇ ಸರಕಾರದ ಹಲವಾರು ಯೋಜನೆಗಳು ಕಾರ್ಯರೂಪಕ್ಕೆ ಬಂದಿದ್ದು, ಅನುಕೂಲವಾಗಿದೆ ಎಂಬ ನಿಲುವನ್ನು ವ್ಯಕ್ತಪಡಿಸಿರುತ್ತಾರೆ.

* ವಿವಾಹದ ಸಮಯದಲ್ಲಿ ಹಿಂದಿನಿಂದ ಗುರಿಕಾರರು ಅಥವಾ ಮುಖಂಡರು ನಿಂತು ವಿವಾಹವನ್ನು ಮಾಡಿಸಿಕೊಡುತ್ತಿದ್ದರು. ಆದರೆ ಕ್ರಮೇಣವಾಗಿ ಪುರೋಹಿತರು ಪ್ರಮುಖ ಪಾತ್ರವಹಿಸುತ್ತಿದ್ದು, ಇವರೇ ನಿಂತು ವಿವಾಹದ ಕಾರ್ಯ ನೆರವೇರಿಸುತ್ತಿದ್ದಾರೆ. ಇದಕ್ಕೆ ಮುಖ್ಯಕಾರಣ ಎಂದರೆ, ಸಂಸ್ಕೃತೀಕರಣ ಮತ್ತು ಹೊಸ ಸಂಪ್ರದಾಯಗಳ ಪ್ರಭಾವವಾಗಿದೆ ಎಂಬುದು ಕಂಡುಬರುತ್ತದೆ.

* ಧಾರ್ಮಿಕವಾಗಿ ದೈವಗಳ ನಂಬಿಕೆಯು ಕಡಿಮೆಯಾಗುತ್ತಿದ್ದು, ಹಳೆಯ ಸಂಪ್ರದಾಯಗಳ ಸ್ಥಾನದಲ್ಲಿ ಹೊಸ ಸಂಪ್ರದಾಯಗಳು ಕಂಡುಬರುತ್ತಿವೆ. ಹಿಂದಿನ ಭೂತದ ಕೋಲ, ಅಂಟಿಗೆ ಪಂಟಿಗೆ, ಹಲ್ಲಿ ಕುಣಿತ, ಕೋಲಾಟದಂತಹ ಕಲೆಯು ಇತ್ತೀಚಿನ ದಿನಗಳಲ್ಲಿ ಕಣ್ಮರೆಯಾಗುತ್ತಿದೆ.

* ಶಿಕ್ಷಣ ಪಡೆದು ಉದ್ಯೋಗಗಳಿಸಿಕೊಳ್ಳುವ ಮೂಲಕ ಸರ್ಕಾರಿ ಮತ್ತು ಖಾಸಗಿ ಕ್ಷೇತ್ರದ ಉದ್ಯೋಗದಲ್ಲಿ ಕೆಲಸ ಮಾಡುವವರ ಸಂಖ್ಯೆಯು ಅಧಿಕವಾಗುತ್ತಿದ್ದು, ಆರ್ಥಿಕವಾಗಿ ಪ್ರಗತಿಯನ್ನು ಹೊಂದುತ್ತಿರುವುದು ಕಂಡುಬರುತ್ತದೆ.

* ರಾಜಕೀಯ ಕ್ಷೇತ್ರದಲ್ಲಿ ಹೆಚ್ಚಿನವರು ಮತದಾರರಾಗಿ ಭಾಗಿಯಾಗುತ್ತಿದ್ದಾರೆ. ಹಿಂದೆ ಇವರಿಗೆ ರಾಜಕೀಯದ ಬಗ್ಗೆ ಆಲೋಚನೆಯೇ ಇರಲಿಲ್ಲ. ಆಧುನೀಕರಣ, ಶಿಕ್ಷಣ ಮತ್ತು ನಗರೀಕರಣದ ಪ್ರಭಾವದಿಂದಾಗಿ ಇವರಲ್ಲಿ ರಾಜೀಯದ ಅರಿವು ಬೆಳೆಯುತ್ತಿರುವುದು ಕಂಡುಕೊಳ್ಳಲಾಗಿದೆ.

* ಗೌಡಾಲು ಜನರ ಜೀವನ ಶೈಲಿ, ಸಾಮಾಜಿಕ, ಶೈಕ್ಷಣಿಕ ಹಾಗೂ ಇನ್ನೂ ಹಲವಾರು ಕ್ಷೇತ್ರಗಳಲ್ಲಿ ಬದಲಾವಣೆಯಾಗಲು ಮುಖ್ಯ ಅಂಶವೆಂದರೆ ಇವರು ಬೆಳೆಸಿಕೊಂಡು ಬಂದ ಕೆಲವೊಂದು ಹೋರಾಟಗಳು, ಅವುಗಳೆಂದರೆ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಹೋರಾಟ ಸಮಿತಿ, ಚಿಕ್ಕಮಗಳೂರು ಜಿಲ್ಲಾ ಆದಿವಾಸಿ ಗಿರಿಜನ ಹಿತರಕ್ಷಣಾ ಸಮಿತಿ, ಗಿರಿಜನ ಕ್ಷೇಮಾಭಿವೃದ್ಧಿ ಸಂಘ, 'ನಲ್ಲಿಬೀಡು' ಸಂರಕ್ಷಣಾ ಸಮಿತಿ, ಇವುಗಳ ಮೂಲಕ ಮಾಡುತ್ತಿರುವ ಹಲವಾರು ಆಂದೋಲನಗಳು ಇವರ ಜೀವನ ಶೈಲಿಯ ಬದಲಾವಣೆಗೆ ಪ್ರಮುಖ ಕಾರಣವಾಗಿದೆ.

* ಹಲವಾರು ಕ್ಷೇತ್ರಗಳಲ್ಲಿ ಬದಲಾವಣೆಗಳು ಇದ್ದು, ಇವರಲ್ಲಿ ಇತ್ತೀಚಿನ ದಿನಗಳಲ್ಲಿ ಯುವಕ ಸಂಘಗಳು, ಯುವತಿ ಸಂಘಗಳು, ಸ್ತ್ರೀಶಕ್ತಿ ಸಂಘ, ಮಹಿಳಾ ಸ್ವಸಹಾಯ ಸಂಘ, ಸಹಕಾರಿ ಸಂಘ, ಗಿರಿಜನ ಸಂಘ, ಹೀಗೆ ಹಲವಾರು ಸಂಘಗಳನ್ನು ರೂಪಿಸಿಕೊಂಡು ಸಂಘಟನಾ ಮನೋವೃತ್ತಿ ಬೆಳೆಸಿಕೊಂಡಿರುವುದು ಕಂಡುಬರುತ್ತದೆ.

* ಹಿಂದೆ ಇವರಲ್ಲಿ ಹೆಚ್ಚಿನವರು ಗುಡಿಸಲುಗಳಲ್ಲಿ ವಾಸವಾಗಿದ್ದರು. ಆದರೆ ಇತ್ತೀಚೆಗೆ ಶೇ.೫೦ರಷ್ಟಕ್ಕಿಂತ ಹೆಚ್ಚು ಜನ ಹೆಂಚಿನ ಮನೆಗಳಲ್ಲಿ ವಾಸವಾಗಿರುವುದು ದೃಢಪಟ್ಟಿದೆ.

* ಇವರು ಮುಂಚಿನಿಂದ ಉಳಿತಾಯದ ಮನೋಭಾವನೆ ಹೊಂದಿರಲಿಲ್ಲ. ಇತ್ತೀಚಿಗೆ ಇವರಲ್ಲಿ ಹೆಚ್ಚಿನವರು ಸಣ್ಣ ಉಳಿತಾಯವನ್ನು ಮಾಡುತ್ತಿದ್ದಾರೆ. ಕೆಲವರು ಬ್ಯಾಂಕುಗಳಲ್ಲಿ ವಿಮಾ ಕಂಪೆನಿಯಲ್ಲಿ, ಮನೆಯಲ್ಲಿ, ಮಹಿಳಾ ಸಂಘಗಳಲ್ಲಿ, ಯುವಕ ಸಂಘಗಳಲ್ಲಿ ಉಳಿತಾಯ ಮಾಡುತ್ತಿರುವುದು ಕಂಡುಬರುತ್ತಿದೆ.

* ಮುಗ್ಧ ಮನೋಭಾವನೆ ಹೊಂದಿರುವ ಗೌಡಲು ಜನರ ಅಭಿವೃದ್ಧಿ/ಏಳಿಗೆಯ ಸರಕಾರದ ಮತ್ತು ಸಮಾಜದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಿದ್ದು, ಸಾಮಾನ್ಯ ಜನರಂತೆ ಇವರಿಗೂ ಸಹ ಬದುಕುವ ಅವಕಾಶವನ್ನು ಕಲ್ಪಿಸಿಕೊಡಬೇಕು.

* ಒಂದೇ ಮಗುವಿನ ನೀತಿಯನ್ನು ಶೇ.೫೦ಕ್ಕಿಂತ ಜನರು ಒಪ್ಪುವುದಿಲ್ಲ. ಎರಡು ಅಥವಾ ಅದಕ್ಕಿಂತ ಹೆಚ್ಚು ಮಕ್ಕಳು ಇರಬೇಕು ಎಂಬುವುದು ಇವರ ನಿಲುವಾಗಿದೆ. ಈ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ, ಸಾಹಿತ್ಯಗಳ ಅಧ್ಯಯನ, ಸಾಮಾನ್ಯ ಅವಲೋಕನ ಮತ್ತು ಪರಿಣಿತರಿಂದ ಹಾಗೂ ವಿಷಯಕ್ಕೆ ಸಂಬಂಧಿಸಿದ ತಜ್ಞರ ಜೊತೆಗಿನ ಚರ್ಚೆಗಳಿಂದ ರಚಿಸಿಕೊಂಡಂತಹ ಪರಿಕಲ್ಪನೆಗಳು ಸಂಶೋಧನೆಯಲ್ಲಿ ದೃಢಪಟ್ಟಿದ್ದು, ಅವುಗಳನ್ನು ಈ ಕೆಳಗಿನಂತೆ ನಮೂದಿಸಲಾಗಿದೆ.

* ಸರಳ ಜೀವನ, ಬಡತನ, ಕಡಿಮೆ ಆದಾಯ, ವಿಭಕ್ತ ಕುಟುಂಬ ಪದ್ಧತಿ ಸಂಪ್ರದಾಯ, ಮೂಢನಂಬಿಕೆಗಳು, ಸಾಂಸ್ಕೃತಿಕ ಮತ್ತು ಸಾಮಾಜಿಕವಾಗಿ ತಮ್ಮದೇ ಆದ ನಿಲುವನ್ನು ಹೊಂದಿರುವುದು ಸ್ಪಷ್ಟವಾಗಿರುತ್ತದೆ.

* ಅರಣ್ಯ ಹಕ್ಕುಗಳನ್ನು ಮಾನ್ಯಮಾಡುವ ಕಾನೂನು, ಸರಕಾರಿ ಮತ್ತು ಖಾಸಗಿ ವೃತ್ತಿಯಲ್ಲಿ ತೊಡಗಿಸುವಿಕೆ, ಶಿಕ್ಷಣದ ಮಹತ್ವ, ವೃತ್ತಿ ಶಿಕ್ಷಣಕ್ಕೆ ಮಹತ್ವ ಹಾಗೂ ಆರ್ಥಿಕ, ಶೈಕ್ಷಣಿಕ ಅಂಶಗಳಲ್ಲಿ ಆಗುತ್ತಿರುವ ಬದಲಾವಣೆಯೊಂದಿಗೆ, ಸಾಮಾಜಿಕ ಸಾಂಸ್ಕೃತಿಕ ಅಂಶಗಳಲ್ಲಿಯೂ ಬದಲಾವಣೆಯಾಗುತ್ತಿದೆ ಎಂಬುವುದು ಈ ಸಂಶೋಧನೆಯಿಂದ ದೃಢಪಟ್ಟಿದೆ.

* ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗುತ್ತಿರುವುದು, ವಿವಾಹದ ಸಂಸ್ಥೆಯಲ್ಲಿನ ಬದಲಾವಣೆ, ರೂಢಿ-ಸಂಪ್ರದಾಯ, ಆಚಾರ-ವಿಚಾರಗಳಲ್ಲಿ ವ್ಯತ್ಯಾಸಗಳು ಇರುವುದು ಈ ಸಂಶೋಧನೆಯಿಂದ ದೃಢಪಟ್ಟಿದೆ.

* ಚಿಕ್ಕಮಗಳೂರು ಜಿಲ್ಲೆಯಲ್ಲಿ ನೆಲೆಸಿರುವ ಗೌಡಾಲು ಬುಡಕಟ್ಟು ಜನರ ಜೀವನ ಶೈಲಿಯಲ್ಲಿ, ವೃತ್ತಿಗಳಲ್ಲಿ, ಆರ್ಥಿಕ ಸ್ಥಿತಿಗತಿಯಲ್ಲಿ ಶೈಕ್ಷಣಿಕ ಸ್ಥಿತಿಯಲ್ಲಿ, ಜೀವನಮಟ್ಟದಲ್ಲಿ ವ್ಯತ್ಯಾಸಗಳಾಗುತ್ತಾ ಇರುವುದು ಈ ಸಂಶೋಧನೆಯಿಂದ ದೃಢಪಟ್ಟಿದೆ.

ಸಂಶೋಧನಾ ಅಧ್ಯಯನದ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಹಾಗೂ ಸಂಶೋಧನೆಯಿಂದ ವ್ಯಕ್ತವಾದ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಗೌಡಾಲು ಬುಡಕಟ್ಟು ಜನರ ಸಾಮಾಜಿಕ-ಸಾಂಸ್ಕೃತಿಕ ವಿಷಯವನ್ನು ಉಳಿಸಿಕೊಂಡು ಹೋಗುವ ಉದ್ದೇಶದಿಂದ ಕೆಲವೊಂದು ಸಲಹೆಗಳನ್ನು ನೀಡಲಾಗಿದೆ.

ಗೌಡಾಲು ಜನಪದ ಕಲೆಗಳಾದ ಅಂಟಿಗೆ ಪಂಟಿಗೆ, ಕೋಲಾಟ, ಹಲ್ಲಿಹಬ್ಬ, ಕರಡಿಕುಣಿತ, ಹುಲಿವೇಷ, ಜಾತ್ರೆಗಳು, ಜನಪದ ಹಾಡುಗಳು, ಸಮಾಜಕ್ಕೆ ಕೊಡುಗೆಗಳಾಗಿದ್ದು, ಇವುಗಳನ್ನು ಉಳಿಸಿಕೊಂಡು ಬೆಳೆಸಿಕೊಂಡು ಹೋಗಬೇಕಾದ ಅಗತ್ಯತೆ ಇದೆ. ಹೆಚ್ಚಿನವರು ಸಮಾಜದ ಮುಖ್ಯ ವಾಹಿನಿಯಿಂದ ನೂರಾರು ವರುಷಗಳಷ್ಟು ಹಿಂದೆ ಇರುವಂತಹ ಜೀವನವನ್ನು ನಡೆಸುತ್ತಿರುವ ಇವರುಗಳಿಗೆ ಸಮಾಜದ ಮುಖ್ಯವಾಹಿನಿಗೆ ತರುವಂತಹ ಅಗತ್ಯತೆ ಇದೆ. ಇವರ ಆರಾಧನಾ ಪ್ರಕರಣಗಳು, ದೈವಿಕನಂಬಿಕೆ, ಕೋಲಗಳ ಆಚರಣೆ, ಹೊಂದಾಣಿಕೆ, ತಮ್ಮ ಚಿಕಿತ್ಸಾ ಪದ್ಧತಿ, ನ್ಯಾಯ ತೀರ್ಮಾನ, ರಕ್ಷಣೆಯಂತಹ ಕಾರ್ಯಗಳಿಂದಾಗಿ ಸಮಾಜದ ಸ್ವಾಸ್ಥ್ಯ ಕಾಪಾಡಿಕೊಂಡು ಹೋಗುವಲ್ಲಿ

ಸಹಾಯಕವಾಗಿದೆ. ಈ ಎಲ್ಲಾ ವಿಶೇಷ ಅಂಶಗಳ ರಕ್ಷಣೆಯಿಂದ ನಮ್ಮ ಹಳೆಯ ಸಂಪ್ರದಾಯಗಳನ್ನು ಜೀವಂತವಾಗಿರಿಸಿಕೊಳ್ಳಲು ಸಾಧ್ಯವಿದೆ. ಪಗಡೆ, ಕುಂಟಾಬಿಲ್ಲೆ, ಚನ್ನೆಮಣೆ, ಚೆಂಡಿನ ಆಟ, ಕಣ್ಣಾಮುಚ್ಚಾಲೆ, ಲಗೋರಿ, ಚಿನ್ನಿದಾಂಡು, ಬುಗರಿ, ಜೋಕಾಲಿ, ತೆಂಗಿನ ಕಾಯಿಯ ಆಟ ಮುಂತಾದ ಆಟಗಳು ಇವರ ಸಂಸ್ಕೃತಿಯ ಪ್ರತೀಕವಾಗಿರುವುದರಿಂದ ಇವುಗಳನ್ನು ಉಳಿಸಿ, ಬೆಳೆಸಿಕೊಂಡು ಹೋಗಬೇಕಾದ ಅಗತ್ಯತೆ ಇದೆ. ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನವನ್ನು ಹೆಚ್ಚಿಸಲು ಸಹಾಯಕವಾಗುವ ಶಿಕ್ಷಣದಿಂದ ವಂಚಿತರಾದವರನ್ನು ಗುರುತಿಸಿ, ಅವರಿಗೆ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಿಕೊಡಬೇಕಾಗಿದೆ. ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯಲ್ಲಿ ನೆಲೆಸಿರುವ ಇವರುಗಳಿಗೆ ಯಾವುದೇ ರೀತಿಯ ತೊಂದರೆಗಳನ್ನು ನೀಡದೆ, ನೆಮ್ಮದಿಯ ಜೀವನ ನಡೆಸಲು ಹಕ್ಕುಪತ್ರಗಳನ್ನು ನೀಡಿ, ಇವರ ಅವಶ್ಯಕತೆಗಳನ್ನು ಈಡೇರಿಸಬೇಕು. ಪೋಲೀಸ್ ಇಲಾಖೆ ಮತ್ತು ಪಟ್ಟಭದ್ರ ಹಿತಾಸಕ್ತಿಗಳಿಂದ ಯಾವುದೇ ರೀತಿಯ ತೊಂದರೆಗಳು ಆಗದ ರೀತಿಯಲ್ಲಿ ನೋಡಿಕೊಳ್ಳುವಂತಹ ಸರಕಾರವು ವಿಶೇಷ ಧನಸಹಾಯದ ಮೂಲಕ ಹೊಸ ಹೊಸ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು. ಇವರ ಮೂಲಭೂತ ಅವಶ್ಯಕತೆಗಳಾದ ಆಹಾರ, ನೀರು, ವಸತಿ, ಬಟ್ಟೆ, ಮುಖ್ಯವಾಗಿ ಆರೋಗ್ಯದ ಬಗ್ಗೆ ಹೆಚ್ಚಿನ ಒತ್ತನ್ನು ಕೊಟ್ಟು, ಅವರ ಸಮಸ್ಯೆಗಳನ್ನು ಸರಕಾರ, ಸರ್ಕಾರೇತರ ಸಂಸ್ಥೆಗಳು ನೀಗಿಸಬೇಕು. ಕೃಷಿ ಮತ್ತು ಕೂಲಿ ಕೆಲಸದಲ್ಲಿ ತೊಡಗಿರುವ ಗೌಡಾಲು ಜನರಲ್ಲಿ ಹೆಚ್ಚಿನವರು ಬಡವರು. ಇವರು ಆರ್ಥಿಕವಾಗಿ ಹಿಂದುಳಿದಿರುವುದರಿಂದ ಕೃಷಿಗೆ ಮತ್ತು ಕೂಲಿಗೆ ಪೂರಕವಾದ ಮತ್ತು ಕೃಷಿಯೇತರ ಚಟುವಟಿಕೆಗಳನ್ನು ಪ್ರೋತ್ಸಾಹಿಸುವ ಮೂಲಕ ಅವರ ಆರ್ಥಿಕ ಮಟ್ಟವನ್ನು ಹೆಚ್ಚಿಸುವತ್ತ ಗಮನ ಹರಿಸಬೇಕಾಗಿದೆ. ಸರಕಾರಿ ಸೌಲಭ್ಯಗಳಿಂದ ವಂಚಿತರಾದವರನ್ನು ಗುರುತಿಸಿ, ಅಂತಹವರಿಗೆ ಸೌಲಭ್ಯಗಳು ಸಮರ್ಪಕ ರೀತಿಯಲ್ಲಿ ದೊರೆಯುವಂತೆ ಮಾಡಿ ಅವರ ಜೀವನವನ್ನು ಉತ್ತಮ ಪಡಿಸಬೇಕಾಗಿದೆ.

ಈ ಎಲ್ಲಾ ಸಲಹೆಗಳು ಹಾಗೂ ಶಿಫಾರಸ್ಸುಗಳನ್ನು ಅಳವಡಿಸಿಕೊಳ್ಳುವ ಮೂಲಕ ಗೌಡಾಲು ಜನರ ಹಿತರಕ್ಷಣೆಯನ್ನು ಕಾಪಾಡಬಹುದು. ಉಳಿದಂತೆ ಈ ಸಂಶೋಧನೆಗೆ ಸಂಬಂಧಿಸಿದ ಹಾಗೆ ಈ ಕೆಳಕಂಡಂತೆ ಇನ್ನೂ ಕೆಲವು ದೃಷ್ಟಿಕೋನದಲ್ಲಿ ಸಂಶೋಧನೆಗಳನ್ನು ಕೈಗೊಳ್ಳಬಹುದಾಗಿದೆ.

* ಗೌಡಾಲು ಜನರ ಕೌಟುಂಬಿಕ ಸಂಸ್ಕಾರಗಳು
* ಗೌಡಾಲು ಜನರ ವೃತ್ತಿಗಳು
* ಗೌಡಾಲು ಜನರಲ್ಲಿ ಮಹಿಳೆಯರ ಸ್ಥಾನಮಾನಗಳು
* ಗೌಡಾಲು ಜನರಲ್ಲಿ ಆಗುತ್ತಿರುವ ಬದಲಾವಣೆಗಳು
* ಗೌಡಾಲು ಜನರ ಸಮಸ್ಯೆಗಳು
* ಗೌಡಾಲು ಜನರ ಸಾಂಪ್ರದಾಯಿಕ ವ್ಯವಸ್ಥೆ
* ಗೌಡಾಲು ಕುಟುಂಬ, ವಿವಾಹ ಮತ್ತು ಬಂಧುತ್ವ ವ್ಯವಸ್ಥೆ
* ಗೌಡಾಲು ಜನರ ಸಂಬಂಧಗಳು

* ಗೌಡಾಲು ಜನರ ಆರಾಧನಾತ್ಮಕ ಆಚರಣಗಳು ಮತ್ತು ಆಚರಣಾತ್ಮಕ ಕ್ರೀಡೆಗಳು, ಸಮಾಜಶಾಸ್ತ್ರೀಯ ವಿಶ್ಲೇಷಣೆ. ಹೀಗೆ ಕೆಲವೊಂದು ವಿಷಯಗಳ ಮೇಲೆ ಸಂಶೋಧನೆ ನಡೆಸುವ ಮೂಲಕ ಇನ್ನೂ ಅನೇಕ ಸೂಕ್ಷ್ಮ ವಿಚಾರಗಳನ್ನು ಹೊರತಂದು ಒಂದು ಜನಾಂಗದ ಸಮಗ್ರ ಜೀವನದ ದಾಖಲಾತಿ ಮಾಡಬಹುದು.

ಗೌಡಾಲು ಬುಡಕಟ್ಟು ಜನರು ತಮ್ಮದೇ ಆದಂತಹ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಯನ್ನು ಇಂದಿಗೂ ಸಾಕಷ್ಟು ಪ್ರಮಾಣದಲ್ಲಿ ಉಳಿಸಿಕೊಂಡುಬರುತ್ತಿದ್ದಾರೆ. ಆಧುನಿಕ ಸಮಾಜದ ಬದುಕಿನಿಂದ ದೂರ ಉಳಿದಿರುವ ಇವರು ಜೀವನದಲ್ಲಿ ಕೆಲವೊಂದು ಬದಲಾವಣೆಯಗಳನ್ನು ಹೊಂದುತ್ತಿದ್ದಾರೆ. ಮುಂದಿನ ದಿನಗಳಲ್ಲಿ ಹೆಚ್ಚಿನ ಬದಲಾವಣೆಗಳು ಆಗುವ ಸಾಧ್ಯತೆಗಳು ಕಂಡುಬರುತ್ತವೆ. ಇವರ ಮೂಲ ಕಸುಬುಗಳಾದ ಕೃಷಿ, ಕೂಲಿಕೆಲಸ, ಗೃಹೋಪಯೋಗಿ ವಸ್ತುಗಳ ತಯಾರಿಕೆ, ಪಶುಸಂಗೋಪನೆ ಮತ್ತು ಆಧುನಿಕ ಕಸುಬುಗಳ ಜೊತೆಯಲ್ಲಿ ಸರಕಾರಿ, ಅರೆಸರಕಾರಿ, ಖಾಸಗಿ ಉದ್ಯೋಗ ಮತ್ತು ಸಣ್ಣಪುಟ್ಟ ವ್ಯಾಪಾರವನ್ನು ಮಾಡುತ್ತಿರುವುದನ್ನು ಹಾಗೂ ಕೆಲವರು ನಗರ ಪ್ರದೇಶಗಳಿಗೆ ಹೋಗಿ ಬೇರೆ ಬೇರೆ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಗಮನಿಸಬಹುದು. ಶೈಕ್ಷಣಿಕವಾಗಿಯೂ ಸುಧಾರಣೆ ಕಂಡುಬರುತ್ತಿದೆ. ಶಿಕ್ಷಣ ಪಡೆದವರು ಆಧುನಿಕ ಉದ್ಯೋಗಗಳನ್ನು ಪಡೆಯುವಲ್ಲಿ ಒಲವು ವ್ಯಕ್ತಪಡಿಸುತ್ತಿದ್ದಾರೆ. ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ತಮ್ಮದೇ ಆದ ಅಂತಸ್ತು ಹೊಂದಿರುವ ಇವರು, ಕಲೆ, ಸಂಸ್ಕೃತಿ, ಧಾರ್ಮಿಕತೆ, ಸಾಂಪ್ರದಾಯಿಕತೆ, ಜನಪದ ನೃತ್ಯಗಳು, ಆರಾಧನೆ, ಅಂಟಿಗೆ-ಪಂಟಿಗೆ, ಹಬ್ಬ-ಹರಿದಿನಗಳು, ಹರಕೆ, ಜಾತ್ರೆ, ಉತ್ಸವ, ಹಲ್ಲಿಕುಣಿತ, ಹುಲಿವೇಷ, ಕರಡಿವೇಷ ಸಾಂಪ್ರದಾಯಿಕ ಆಟಗಳು ಇಂದಿಗೂ ಇವರ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದು, ಕೌಟುಂಬಿಕ ಪದ್ಧತಿಗಳು, ಆಚಾರ-ವಿಚಾರ, ಸಂಸ್ಕಾರಗಳು ಅವರು ನೆಲೆಸಿರುವ ಸುತ್ತಮುತ್ತಲಿನ ಸಮುದಾಯದವರಿಂದ ಪ್ರಭಾವಿತರಾಗಿರುವುದು ಕಂಡುಬರುತ್ತದೆ. ಈ ಮೇಲಿನ ಅಂಶಗಳಲ್ಲಿ ಬದಲಾವಣೆಗಳು ಆಗುತ್ತಿರುವುದು ಕಂಡುಬರುತ್ತದೆ. ಆದರೆ ವಿವಾಹದ ಶಾಸ್ತ್ರಗಳಲ್ಲಿ ಇತರೆ ಸಮುದಾಯದವರ ಆಧುನಿಕ ಪದ್ಧತಿಗಳನ್ನು ನಿಧಾನಗತಿಯಲ್ಲಿ ಬಳಸುತ್ತಿದ್ದಾರೆ. ಮಾತೃವಂಶೀಯ ಕುಟುಂಬ ಪದ್ಧತಿಯು ಬದಲಾಗುತ್ತಾ ಪಿತೃವಂಶೀಯ ಕುಟುಂಬ ಪದ್ಧತಿಯಾಗುತ್ತಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಆಧುನೀಕರಣದ ಪ್ರಭಾವದಿಂದಾಗಿ ಈ ಗೌಡಾಲು ಬುಡಕಟ್ಟು ಸಮುದಾಯ ತನ್ನ ಮೂಲ ಆಚಾರ ವಿಚಾರಗಳನ್ನು, ಸಂಪ್ರದಾಯ ಕಟ್ಟುಪಾಡುಗಳನ್ನು ಬದಲಾಯಿಸಿಕೊಳ್ಳಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಅದಕ್ಕೆ ಪೂರಕವಾಗಿ ಸರಕಾರವು ಕೂಡ ಈ ಸಮುದಾಯದವರ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿಗಳನ್ನು ಉತ್ತಮ ಪಡಿಸಲು ಸೂಕ್ತ ಯೋಜನೆಗಳನ್ನು ಸಿದ್ಧಪಡಿಸಿ, ಬುಡಕಟ್ಟು ಜೀವನದಿಂದ ಆಧುನೀಕರಣದತ್ತ ಸಾಗಲು ಸ್ಪಂದಿಸಬೇಕೆಂಬುದು ಆಶಯವಾಗಿದೆ.

**ಫಲಿತಗಳು**

ಗೌಡಾಲುಗಳು ಕಾಡಿನ ಇಳಿಜಾರಿನಲ್ಲಿ ಬದುಕನ್ನು ರೂಪಿಸಿಕೊಳ್ಳುತ್ತಿರುವ ಸಮುದಾಯವಾಗಿರುವುದರಿಂದ ಇತರೆ ಸಮುದಾಯಗಳಿಂತ ಭಿನ್ನವಾದ ಜೀವನ ಇವರದ್ದಾಗಿದೆ. ಈ ಸಮುದಾಯದ ಅಧ್ಯಯನದಿಂದ ತಿಳುವಳಿಕೆಗೆ

ಬಂದಿರುವುದೇನೆಂದರೆ ಕಾಡಿನಲ್ಲಿ ಸಮುದಾಯಗಳಿಗೆ ಸಮಾನತೆಯನ್ನು ಸೂಚಿಸುವುದಷ್ಟೇ ಅಲ್ಲ ಇವರಿಗೆ ಸರ್ಕಾರದ ಯೋಜನೆಗಳು ನ್ಯಾಯ ರೂಪದಲ್ಲಿ ತಲುಪುವಂತೆ ಮಾಡಬೇಕು ಎಂದು ಪಣತೊಟ್ಟು ಹೋರಾಟಕ್ಕೆ ಇಳಿದಿರುವ ಪ್ರಗತಿಪರ ಹೋರಾಟಗಾರರು ಚಿಕ್ಕಮಗಳೂರು ಮತ್ತು ಪಶ್ಚಿಮ ಘಟ್ಟದ ಇತರೆ ಜಿಲ್ಲೆಗಳನ್ನು ನೆಲೆ ಮಾಡಿಕೊಂಡಿದ್ದಾರೆ. ಈ ಹಿನ್ನೆಲೆಯಿಂದ ಸಂಶೋಧನೆ ಮುಖ್ಯವಾಗಿರುವುದರ ಪರಿಣಾಮವಾಗಿ ಅಧ್ಯಯನದಿಂದ ದೊರೆತ ಫಲಿತಗಳೆಂದರೆ.

೧. ಬದಲಾಗುತ್ತಿರುವ ಆರ್ಥಿಕ ಅವಲಂಬನೆ ಮತ್ತು ಹೆಚ್ಚುತ್ತಿರುವ ಬಡತನ.

೨. ಮತಾಂತರ ಸಮುದಾಯದ ನಂಬಿಕೆಯಾಗುತ್ತಿರುವ ಪಲ್ಲಟ.

೩. ಹಿಂದುತ್ವದ ಜತೆ ಗೌಡಾಲು ಸಮುದಾಯ.

೪. ಸಂಸ್ಕೃತೀಕರಣ: ಮೇಲ್ವರ್ಗದ ಅನುಕರಣೆ

೫. ಔಡಾಲು ಸಮುದಾಯವು ಇತರೆ ಪ್ರಬಲ ಸಮುದಾಯಗಳಿಂದ ಬೇದಭಾವಕ್ಕೆ ಒಳಗಾಗಿದೆ.

೬. ಕಡಿಮೆಯಾಗುತ್ತಿರುವ ಅರಣ್ಯ ಸಂಪತ್ತು.

೭. ಗೌಡಾಲು ಸಮುದಾಯ ಕಟ್ಟಿಕೊಳ್ಳುತ್ತಿರುವ ನವೀನ ಅನನ್ಯತೆ.

೮. ಶೈಕ್ಷಣಿಕವಾಗಿ ಪರಿವರ್ತನೆ ಸಮಾಜದ ಜೊತೆ ಹೊಂದಾಣಿಕೆ ಮಾಡಿಕೊಂಡರು ಅದು S.S.L.C, P.U.C.ಯವರಿಗೆ ಮಾತ್ರ ಸೀಮಿತವಾಗಿದೆ ವಿನಹಃ ಮುಂದುವರಿದು ಉನ್ನತ ಮಟ್ಟದ ಶಿಕ್ಷಣ ಪಡೆಯಲು ಸಾಧ್ಯವಾಗುತ್ತಿಲ್ಲ.

೯. ಗೌಡಾಲು ಸಮುದಾಯಕ್ಕೆ ಗಿರಿಜನ ಶಾಲೆಗಳು ಇದ್ದಾವೆ. ಎಂದು ಗೊತ್ತಿದ್ದರೂ ಕೂಡ ಶಾಲೆಗಳು ಇತ್ತೀಚೆಗೆ ಅಭಿವೃದ್ಧಿಗೊಳ್ಳುತ್ತಿವೆ ಎಂಬುದು ಮನವರಿಕೆಯಾಗದೆ ಇರುವುದರಿಂದ ಹಾಗೂ ಶಾಲೆಗಳ ಬಗ್ಗೆ ಅಪನಂಬಿಕೆ ಇರುವುದರಿಂದ ಇವರಿಗೆ ಗಿರಿಜನ ಶಾಲೆಗಳ ಮಹತ್ವವನ್ನು ಕುರಿತು ತರಬೇತಿಗಳು ಮುಖ್ಯವಾಗಿವೆ.

೧೦. ಇವರು ವಾಸಮಾಡುವ ಪ್ರದೇಶಗಳು ಇಳಿಜಾರಿನವುಗಳಾಗಿರುವುದರಿಂದ ಹಾಗೂ ಮಳೆಯ ಆರ್ಭಟವಿರುವ ತಾಣಗಳು ಹಾಗಿರುವುದರಿಂದ ರಸ್ತೆ, ವಿದ್ಯುತನಂತಹ ಸೌಲಭ್ಯಗಳು ಸರಿಯಾಗಿ ತಲುಪಿರುವುದಿಲ್ಲ.

೧೧. ಗೌಡಾಲು ಸಮುದಾಯದ ಅಭಿವೃದ್ಧಿಯ ಕುರಿತು ಸರ್ಕಾರದ ಯೋಜನೆಗಲು ನಿಷ್ಪಕ್ಷಪಾತವಾಗಿ ಜಾರಿಗೊಳ್ಳದೆ ಇರುವುದು.

೧೨. ಈ ಸಮುದಾಯ ವಾಸಿಸುವ ಸ್ಥಳಗಳಲ್ಲಿ ಪ್ರಾಥಮಿಕ ಮತ್ತು ಅಂಗನವಾಡಿ ಶಾಲೆಗಳು ಇದ್ದರು ಸರಿಯಾಗಿ ನಡೆಯದೆ ಇರುವುದು ಹಾಗೂ ಕೆಲವು ಶಾಲೆಗಳು ಇದ್ದರು ಹಾಳಾಗಿ ಹೋಗಿರುವುದಲ್ಲದೆ ದುರಸ್ತಿಯಾಗದೆ ಇರುವುದು.

೧೩. ITDPಯ ಯೋಜನೆಗಳು ಸಮುದಾಯಕ್ಕೆ ಮನವರಿಕೆಯಾಗದೆ ಇರುವುದು.

೧೪. ಸರ್ಕಾರ ಕಾಲದಿಂದ ಕಾಲಕ್ಕೆ ಅರಣ್ಯ ಕಾಯಿದೆಗಳನ್ನು, ಭೂ ಮಾಲಿಕರು ಮತ್ತು ಯಾರು ಪರಂಪರಾಗತವಾಗಿ

ಕಾಡಿನಲ್ಲಿ ವಾಸಮಾಡುತ್ತಾ ಬಂದು ಆರ್ಥಿಕವಾಗಿ ಬಲಿಷ್ಠವಾಗಿರುವವರಿಗೆ ಅನುಕೂಲವಾಗುವಂತೆ ಜಾರಿಗೆ ತರುತ್ತಿರುವುದರಿಂದ ಸಾಮಾಜಿಕ ಸಮಾನತೆಯ ನ್ಯಾಯವನ್ನು ಗೌಡಾಲುಗಳಿಗೆ ಸರ್ಕಾರ ಮಾಡುವುದು ಸಾಧ್ಯವಾಗುತ್ತಿಲ್ಲ.

೧೫. ಚಿಕ್ಕಮಗಳೂರು ಜಿಲ್ಲೆಯು ಕಾಡುಮೇಡಿನ ಜಿಲ್ಲೆ ನಿಜ ಆದರೆ ಈ ಜಿಲ್ಲೆಯಿಂದ ಹುಟ್ಟಿದ ನದಿಗಳಿಂದ ಯಾವುದೇ ಬೆಳೆ ಬಳೆಯಲು ನೀರು ಬಳಕೆಯಾಗುವುದಿಲ್ಲ. ಸರ್ಕಾರ ನಿರ್ಮಾಣ ಮಾಡಿದ ಡ್ಯಾಂಗಳಿಂದ ಇಲ್ಲಿರುವ ಸಮುದಾಯ ಮತ್ತು ಬುಡಕಟ್ಟುಗಳಿಗೆ ಯಾವುದೇ ಪ್ರಯೋಜನವಾಗದೆ ಇರುವುದು ಕಂಡುಬರುತ್ತದೆ.

* * *

## ಅನುಬಂಧಗಳು

### ೧. ತಿಳುವಳಿಕೆದಾರರ ಪಟ್ಟಿ

| ಕ್ರ.ಸಂ | ತಾಲ್ಲೂಕುಗಳು | ಜನಸಂಖ್ಯೆ | ಪರಿಶಿಷ್ಟ ಪಂಗಡ |
|---|---|---|---|
| ೧. | ಚಿಕ್ಕಮಗಳೂರು | ೨೯೪೪೪೩ | ೨೮೭೫ |
| ೨. | ಕಡೂರು | ೨೮೯೦೯೨ | ೧.೩೮೬ |
| ೩. | ಮೂಡಿಗೆರೆ | ೧೪೧೨೫೫ | ೧.೧೨೯೪ |
| ೪. | ನರಸಿಂಹರಾಜಪುರ | ೬೫೬೨೪ | ೨೦೦೭ |
| ೫ | ಶೃಂಗೇರಿ | ೩೬೯೩೨ | ೨೦೭೬ |
| ೬. | ಕೊಪ್ಪ | ೨೭೬೬೩ | ೩೪೯೪ |
| ೭. | ತರೀಕೆರೆ | ೨೨೪೦೯೩ | ೩೪೦೬ |

ಆಧಾರ Census of India 1991

ಗೌಡಾಲು ಸಮುದಾಯದ ಅಕ್ಷರತೆ ಮತ್ತು ಅನಕ್ಷರತೆ ಹಾಗೂ ಕೆಲಸ ಮಾಡುವವರು ಮತ್ತು ಕೆಲಸ ಮಾಡದೇ ಇರುವವರು.

| | ಅಕ್ಷರಸ್ಥರು | | | ಅನಕ್ಷರಸ್ಥರು | |
|---|---|---|---|---|---|
| ಒಟ್ಟು | ೩.೦೦೧ | ೪೩.೧ | ಒಟ್ಟು | ೩೯೬೨ | ೫೬.೯ |
| ಗಂಡು | ೧೭೭೨ | ೪೯.೫ | ಗಂಡು | ೧೮೦೯ | ೫೦.೫ |
| ಹೆಣ್ಣು | ೧.೨೨೮ | ೩೬.೩ | ಹೆಣ್ಣು | ೨೧೫೫ | ೬೩.೭ |

| ಕೆಲಸ ಮಾಡುವವರು | | ಕೆಲಸ ಮಾಡದೇ ಇರುವವರು | |
|---|---|---|---|
| ಒಟ್ಟು | ೪೦೦೦ | ಒಟ್ಟು | ೪೨೨೨ |
| ಗಂಡು | ೨೪೫೪ | ಗಂಡು | ೧೭೫೦ |
| ಹೆಣ್ಣು | ೧೫೪೬ | ಹೆಣ್ಣು | ೨೪೭೨ |

ಆಧಾರ Census of India 1991

### ಗೌಡಾಲು ಸಮುದಾಯದ ತಿಳುವಳಿಕೆದಾರರ ಪಟ್ಟಿ

| ಕ್ರ.ಸಂ. | ಹೆಸರು | ಊರು | ತಾಲೂಕು | ವಯಸ್ಸು |
|---|---|---|---|---|
| ೧. | ಪರಮೇಶ | ಮೇಗೂರು | ಕೊಪ್ಪ | ೩೦ |
| ೨. | ಎನ್.ಟಿ. ದೇವೇಂದ್ರ | ಮೆಣಸಿನಹಾಡ್ಯ | ಕೊಪ್ಪ | ೨೯ |
| ೩. | ಕೃಷ್ಣೇಗೌಡ | ಮೆಣಸಿನಹಾಡ್ಯ | ಕೊಪ್ಪ | ೫೦ |
| ೪. | ಜಿ.ಡಿ. ಗೋಪಾಲ್‌ಗೌಡರು | ಮೆಣಸಿನಹಾಡ್ಯ | ಕೊಪ್ಪ | ೩೫ |
| ೫. | ಜಿ.ವಿ. ಸದಾಶಿವ | ಮೆಣಸಿನಹಾಡ್ಯ | ಕೊಪ್ಪ | ೪೦ |
| ೬. | ಕಾಳೇಗೌಡ | ಯಡಗುಂದ | ಕೊಪ್ಪ | ೪೨ |
| ೭. | ರುದ್ರಪ್ಪ | ಮೇಗೂರು | ಕೊಪ್ಪ | ೩೧ |
| ೮. | ಕಾಡಮ್ಮ | ಮಕ್ಕಿಮನೆ | ಕೊಪ್ಪ | ೪೫ |
| ೯. | ಲಕ್ಷ್ಮಿ | ಮೆಣಸಿನಹಾಡ್ಯ | ಕೊಪ್ಪ | ೩೫ |
| ೧೦. | ಸುಶ್ಮಿತ | ಮೆಣಸಿನಹಾಡ್ಯ | ಕೊಪ್ಪ | ೨೧ |
| ೧೧. | ತಿಮ್ಮೇಗೌಡ | ಯಡಗುಂದ | ಕೊಪ್ಪ | ೪೭ |
| ೧೨. | ಲೋಕೇಶಿ | ಉಡತಾಳ | ಶೃಂಗೇರಿ | ೩೦ |
| ೧೩. | ಚಂದ್ರಪ್ಪ | ನೆಮ್ಮಾರು | ಶೃಂಗೇರಿ | ೩೨ |
| ೧೪. | ಪುಟ್ಟಪ್ಪ | ಮುಂಡುಗಾರು | ಶೃಂಗೇರಿ | ೩೬ |
| ೧೫. | ರಾಮೇಗೌಡ | ಆರಗಲ್ | ಶೃಂಗೆರಿ | ೪೦ |
| ೧೬. | ಬಾಬುಗೌಡಲು | ಕಳಸ | ಮೂಡಿಗೆರೆ | ೪೫ |
| ೧೭. | ಶ್ರೀನಿವಾಸಗೌಡ | ಕಳಸ | ಮೂಡಿಗೆರೆ | ೩೮ |
| ೧೮. | ಪ್ರಸನ್ನಕುಮಾರ ಎಂ.ಕೆ. | ಮುಮ್ಮಗೆ | ಮೂಡಿಗೆರೆ | ೨೯ |
| ೧೯. | ಮೋಹಿನಿ | ಕಳಸ | ಮೂಡಿಗೆರೆ | ೪೦ |
| ೨೦. | ರತ್ನ | ಗಂಟಿಮಕ್ಕಿ | ಮೂಡಿಗೆರೆ | |
| ೨೧. | ಹೂವಪ್ಪ ಆರ್. | ಗಣಪತಿ ಕಟ್ಟೆ | ಕಳಸ | ೩೯ |
| ೨೨. | ಮೀನಾಕ್ಷಿ | ನಲ್ಲಿಕೂಟ | ಮೂಡಿಗೆರೆ | ೪೫ |
| ೨೩. | ಬೋಭಮ್ಮ | ಕಳಸ | ಮೂಡಿಗೆರೆ | ೪೬ |
| ೨೪. | ಕಮಲಮ್ಮ | ಕಳಸ | ಮೂಡಿಗೆರೆ | ೩೮ |

ಗೌಡಾಲುಗಳಿರುವ ಊರುಗಳು

೧. ಬಾಳಗೋಡು ಕೂಡಿಗೆ
೨. ಸಿರ್ಲ್
೩. ಚಂಟ್ಲಮನೆ
೪. ಹಿತ್ತಲ ಮನೆ
೫. ಬಂಚುಳ್ಳಿ
೬. ಊರಿಣಿ

೭. ಮುಡಬಾ
೮. ಚೆಂದ್ರಮಕಿ
೯. ಕರೆಕಟ್ಟೆ
೧೦. ಕೂಡಿಗೆ
೧೧. ಗುರುಗೆ - ೨೧
೧೨. ಮುಂಡುಗಾರು - ೨೦
೧೩. ಇಮೇಗಾ
೧೪. ಮಿನಿಗರಡಿ
೧೫. ಸೂಳೋಳ್ಳಿ
೧೬. ಹುಲ್ಲುಗರಡಿ
೧೮. ಮೆಣಸಿನಹಾಡ್ಯ
೧೯. ಬಸಿರುಕಟ್ಟೆ
೨೦. ಅಡಿಕೇಸು
೨೧. ಕಲ್ಲುಗುಡ್ಡೆ
೨೨. ಬಾಳಿಗೆರೆ - ೨೧೬
೨೩. ಕಿಗ್ಗ - ೨೩
೨೪. ಮುದಲ್ಕೆ ಬೈಲ್ - ೮ ಮನೆ
೨೫. ಉಡುತ್ತಾಳ್ - ೧೨ ಮನೆ
೨೬. ಆದಿ
೨೭. ಕಡ್ಕಲ್ - ೮ ಮನೆ
೨೮. ಮುಂಡಸಾರು - ೭ ಮನೆ
೨೯. ಒಲೆಕಡಿ
೩೦. ಕರುಚಾರು
೩೧. ಹುಬಳಿಕೆರೆ
೩೧. ಹೆಮ್ಮಿಗೆ - ೩ ಮನೆ
೩೨. ತಾರೊಳ್ಳಿ - ೩೦ ಮನೆ
೩೩. ಬಾಳೆಗೋಡು - ೩೦ ಮನೆ
೩೪. ಬಂಗಾಡಿ - ೧೦ ಮನೆ
೩೫. ಹಂಚಿನ ಕೂಡಿಗೆ - ೩೦ ಮನೆ
೩೬. ದೊಡ್ಡಹಡ್ಲು
೩೭. ಬೆಳಗಲ್ಲು
೩೮. ಕಾರಗದ್ದ
೩೯. ಹಳ್ಳುಳ್ಳಿ
೪೦. ತಲವಂತಿ - ೩೦ ಮನೆ
೪೧. ತಲವಂತಿ - ೧೦ ಮನೆ
೪೨. ಬಾಳೆಹೊಳೆ
೪೩. ಕೊಟ್ಟಿಗೆ ಮಕ್ಕಿ
೪೪. ನಲ್ಲಿಕೂಟ
೪೫. ಗಣಪತಿ ಕಟ್ಟೆ - ೪
೪೬. ಗಂಟಿಮಕ್ಕಿ
೪೭. ಮುಮ್ಮಗೆ - ೧೨ ಮನೆ
೪೮. ಜಾಂಬಾಳೆ - ೬೫ ಮನೆ
೪೯. ಬಿಳಗಲ್ - ೩೫ ಮನೆ

**ಗೌಡಾಲು ಸಮುದಾಯದ ಇರುವ ಜಿಲ್ಲೆಗಳು**

| ಕ್ರ.ಸಂ. | ಜಿಲ್ಲೆಗಳು | ಒಟ್ಟು | ಪುರುಷರು | ಸ್ತ್ರೀಯರು |
|---|---|---|---|---|
| ೧. | ಬಾಗಲಕೋಟೆ | ೨ | ೧ | ೧ |
| ೨. | ಬೆಂಗಳೂರು ಗ್ರಾಮಾಂತರ | ೩೦ | ೧೯ | ೧೧ |
| ೩. | ಬೆಂಗಳೂರು ನಗರ | ೪.೬೪೧ | ೨.೪೦೨ | ೨.೨೩೯ |
| ೪. | ಬಳ್ಳಾರಿ | ೬೪ | ೩೩ | ೩೧ |
| ೫. | ಬೆಳಗಾಂ | ೧೧ | ೭ | ೪ |
| ೬. | ಬೀದರ್ | ೫೯ | ೨೮ | ೩೧ |
| ೭. | ಬಿಜಾಪುರ | ೧೭ | ೮ | ೯ |

| | | | | |
|---|---|---|---|---|
| ೮. | ಚಾಮರಾಜನಗರ | ೬೨ | ೩೨ | ೩೦ |
| ೯. | ಚಿಕ್ಕಮಗಳೂರು | ೭.೦೬೭ | ೩.೫೨೦ | ೩.೫೪೭ |
| ೧೦. | ಚಿತ್ರದುರ್ಗ | ೯ | ೫ | ೪ |
| ೧೧. | ದಕ್ಷಿಣ ಕನ್ನಡ | ೬೫ | ೩೬ | ೨೯ |
| ೧೨. | ದಾವಣಗೆರೆ | ೧೩ | ೮ | ೫ |
| ೧೩. | ಧಾರವಾಡ | ೧ | ೧ | - |
| ೧೪. | ಗುಲಬರ್ಗಾ | ೧೭ | ೯ | ೮ |
| ೧೫. | ಹಾಸನ | ೨೬ | ೧೫ | ೧೧ |
| ೧೬. | ಕೊಡಗು | ೪೬ | ೨೮ | ೧೮ |
| ೧೭. | ಕೋಲಾರ | ೫೩ | ೩೩ | ೨೦ |
| ೧೮. | ಕೊಪ್ಪಳ | ೪ | ೩ | ೧ |
| ೧೯. | ಮಂಡ್ಯ | ೪೩ | ೨೧ | ೨೨ |
| ೨೦. | ಮೈಸೂರು | ೩೭ | ೧೭ | ೨೦ |
| ೨೧. | ರಾಯಚೂರು | ೧೨ | ೭ | ೩ |
| ೨೨. | ಶಿವಮೊಗ್ಗ | ೧೩೬ | ೬೫ | ೧೧ |
| ೨೩. | ತುಮಕೂರು | ೧೧ | ೬ | ೫ |
| ೨೪. | ಉಡುಪಿ | ೫೮ | ೨೯ | ೨೯ |
| ೨೫. | ಉತ್ತರ ಕನ್ನಡ | ೨೩ | ೧೪ | ೯ |
| | ಒಟ್ಟು | ೧೨.೫೦೭ | ೬.೩೪೭ | ೬.೧೬೦ |

ಲಿಂಗಾಧಾರಿತ ಗೌಡಾಲು ಸಮುದಾಯದ ಜನಸಂಖ್ಯೆ (೨೦೦೧)

| ಒಟ್ಟು | ಪುರುಷರು | ಸ್ತ್ರೀಯರು | ಶೇಕಡಾವಾರು |
|---|---|---|---|
| ೧೨.೫೦೭ | ೬.೩೪೭ | ೬.೧೬೦ | ೬೬.೦೬ |
| ೭.೭೮೦ | ೩.೯೦೬ | ೩.೮೭೪ | ೬೨.೭೩ |
| ೪.೭೨೭ | ೨.೪೪೧ | ೨.೨೮೪ | ೭೧.೫೮ |

ಗೌಡಾಲು ಸಮುದಾಯದ ಕುಟುಂಬಗಳ ಸಂಖ್ಯಾವಾರು ವಿವರ

| ಕ್ರ.ಸಂ. | ತಾಲ್ಲೂಕುಗಳು | ಊರು | ಕುಟುಂಬಗಳು |
|---|---|---|---|
| ೧. | ಕೊಪ್ಪ | ಮೆಣಸಿನಹಾಡ್ಯ | ೬೦ |
| ೨. | ಕೊಪ್ಪ | ಅಗಲಾಗನಾಂಡಿ | ೩೫ |
| ೩. | ಕೊಪ್ಪ | ಹೆರೂರು | ೫೦ |
| ೪. | ಕೊಪ್ಪ | ಮೆಗೂರು | ೧೨೦ |

| | | | |
|---|---|---|---|
| ೫. | ಕೊಪ್ಪ | ಜೈಪುರ | ೪೫ |
| ೬. | ಕೊಪ್ಪ | ಹರಿಹರಪುರ | ೫೦ |
| ೭. | ಮೂಡಿಗೆರೆ | ಸಂಕೆಸಾಲ್ | ೪೦ |
| ೮. | ಮೂಡಿಗೆರೆ | ಅಭಾರಗುಡುಗು | ೧೫ |
| ೯. | ಮೂಡಿಗೆರೆ | ಶಾಂಪಿಗಾನ | ೩೦ |
| ೧೦. | ಮೂಡಿಗೆರೆ | ಮರಸನಾಗೆ | ೫೦ |
| ೧೧. | ಮೂಡಿಗೆರೆ | ಹಲವಾಲಿ | ೫೫ |
| ೧೨. | ಮೂಡಿಗೆರೆ | ಬಾಳೆವಳೆ | ೨೫ |
| ೧೩. | ಮೂಡಿಗೆರೆ | ಕಳಸ | ೬೦ |
| ೧೪. | ಮೂಡಿಗೆರೆ | ಹೊರನಾಡು | ೧೨೦ |
| ೧೫. | ಮೂಡಿಗೆರೆ | ಸಮಸೆ | ೯೦ |
| ೧೬. | ಮೂಡಿಗೆರೆ | ಕುದುರೆಮುಖ | ೪೦ |
| ೧೭. | ಮೂಡಿಗೆರೆ | ಬಸರಿಕಾಲು | ೨೦ |
| ೧೮. | ಮೂಡಿಗೆರೆ | ನೆಲ್ಲಿಬೀಡು | ೩೦ |
| ೧೯. | ಮೂಡಿಗೆರೆ | ಬಸಿರುಕಟ್ಟೆ | ೭೦ |
| ೨೦. | ಶೃಂಗೇರಿ | ಕಿಗ್ಗಾ | ೧೫೦ |
| ೨೧. | ಶೃಂಗೇರಿ | ಶೃಂಗೇರಿ | ೪೦ |
| ೨೨. | ಶೃಂಗೇರಿ | ಬುಕ್ಕಡಿಬೈಲು | ೭೦ |
| ೨೩. | ಶೃಂಗೇರಿ | ನೆಮ್ಮಾರು | ೪೦ |
| ೨೪. | ಶೃಂಗೇರಿ | ಮೇಲಿನಿಮಾರು | ೨೦ |
| ೨೫. | ಶೃಂಗೇರಿ | ಬಿದರುಗೂಡು | ೨೫ |
| ೨೬. | ಶೃಂಗೇರಿ | ಶಿರ್ಲ್ | ೩೦ |
| ೨೭. | ಶೃಂಗೇರಿ | ಅಡಿಕೇಸು | ೨೦ |
| ೨೮. | ಶೃಂಗೇರಿ | ತಲವಂತ ಕೂಡಿಗೆ | ೪೦ |
| | | ಒಟ್ಟು | ೧೪೩೫ |

ಗೌಡಾಲು ಸಮುದಾಯದ ತಿಳುವಳಿಕೆದಾರರು

ಮೆಣಸಿನಹಾಡ್ಯ

೧. ದೇವೇಂದ್ರ

೩. ಕೆಂಪೇಗೌಡ

೫. ಮಂಜೇಗೌಡ

೭. ಗಿಡ್ಡಮ್ಮ

೨. ಗೋಪಾಲಕೃಷ್ಣ

೪. ಜಿ. ಸದಾಶಿವ

೬. ಜಯಲಕ್ಷ್ಮಿ

೮. ಚಾಂದುಗೌಡ

೯. ಪುಟ್ಟೇಗೌಡ
೧೦. ರಾಮೇಗೌಡ
೧೧. ಈರಮ್ಮ
೧೨. ರವಿಚಂದ್ರ
೧೩. ಜಿ.ವಿ. ಮಂಜಪ್ಪ
೧೪. ಜೆ.ಡಿ ಗೋಪಾಲಗೌಡ
೧೫. ಲಕ್ಷ್ಮಮ್ಮ
೧೬. ಸರೋಜ
೧೭. ಪ್ರದೀಪ
೧೮. ಗೀತಾಂಜಲಿ
೧೯. ಸೀತಮ್ಮ
೨೦. ಗಜೇಂದ್ರ
೨೧. ಅಚ್ಯುತ
೨೨. ರಾಧ
೨೩. ಲಲಿತ
೨೪. ಮಂಜಪ್ಪ
೨೫. ಸಿಂಗೇಗೌಡ
೨೬. ಸುಬ್ಬಮ್ಮ
೨೭. ಪರಮೇಶ್ವರ
೨೮. ವಿಜಯ
೨೯. ಶಾಂತಮ್ಮ
೩೦. ಶಕುಂತಲ

**ಮುಡಗುಂದ**

೧. ರಂಗನಾಥ
೨. ಕೋಮಲ
೩. ಮಹೇಗೌಡ

**ಸಿರ್ಲು ಗ್ರಾಮ**

೧. ಸೋಮಶೇಖರ
೨. ರತ್ನಮ್ಮ
೩. ವನಜಾಕ್ಷಿ
೪. ಕೆಂಪೇಗೌಡ
೫. ಚಂದ್ರಪ್ಪ

**ಮೂಡಿಗೆರೆ, ಸಂಸೆ, ಬೆಳಗೊಳ**

೧. ಗಿರಿಜ
೨. ಚಿನ್ನಗೌಡ
೩. ಚಿನ್ನಯ್ಯ
೪. ಮೀನಾಕ್ಷಿ

**ಮುಂಡುಗಾರು ಶೃಂಗೇರಿ**

೧. ಪುಟ್ಟಪ್ಪ
೨. ಚಂದ್ರಪ್ಪ
೩. ರತ್ನಾಕರ
೪. ಮಾಲಿನಿ
೫. ವಿಜಯ

**ತಾರೂಳ್ಳಿ ಕೂಡಿಗೆ**

೧.ಸೋಮಶೇಖರ
೨. ರಂಗಪ್ಪ
೩. ರಾಮಮೂರ್ತಿ
೪. ಸಾವಿತ್ರಿ
೫. ಯಶೋದೆ
೬. ಮಂಜುಳ

## ೨. ಪರಾಮರ್ಶನ ಗ್ರಂಥಗಳು

೧. ಅಂಬಳಿಕೆ ಹಿರಿಯಣ್ಣ, ಬುಡಕಟ್ಟು ಜನರ ಬದಲಾಗುತ್ತಿರುವ ಆರ್ಥಿಕ ಜೀವನ ಜಾನಪದ: ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು - ೧೯೯೯

೨. ಅಂಬಳಿಕೆ ಹಿರಿಯಣ್ಣ, ಮಲೆನಾಡ ಒಕ್ಕಲಿಗರ ಸಂಸ್ಕೃತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು - ೧೯೯೯

೩. ಅಕ್ಕಮಹಾದೇವಿ, ಬುಡಕಟ್ಟುನ್ಯಾಯ, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೮೮

೪. ಅಭಯ ಕುಮಾರ ಕೌಕ್ರಾಡಿ, ಮುಗೇರರು ಜನಾಂಗದ ಜನಪದ ಅಧ್ಯಯನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು - ೧೯೯೭

೫. ಕಾರ್ಲ್ ಮಾರ್ಕ್ಸ್, ಬಂಡವಾಳದ ಉದ್ಭವ, ಪ್ರಗತಿ ಪ್ರಕಾಶನ, ಮಾಸ್ಕೋ - ೧೯೮೧

೬. ಕೇಶವನ್ ಪ್ರಸಾದ್ ಕೆ., ಸೋಲಿಗರು ಹಾಡಿದ ಬಿಳಿಗಿರಿ ರಂಗನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಕೇಶವನ್ ಪ್ರಸಾದ್ ಕೆ., ಬುಡಕಟ್ಟು ವಿಸ್ಮಯ, ಅಭಿರುಚಿ ಪ್ರಕಾಶನ, ಸರಸ್ವತಿಪುರಂ, ಮೈಸೂರು - ೨೦೦೫

೮. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ಚಂದ್ರಪ್ಪ ಎನ್, ಭಗವಾನ್ ಬಿರ್ಸಾ ಮುಂಡ, ಮುಂಡ ಪ್ರಕಾಶನ, ಬೆಂಗಳೂರು - ೨೦೦೦

೧೦. ಚಲುವರಾಜು, ಜುಂಜಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೮

೧೧. ಚಲುವರಾಜು, ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಚಂದ್ರ ಪೂಜಾರಿ (ಸಂ) ಸಮುದಾಯ ಮತ್ತು ಸಹಭಾಗಿತ್ವ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨

೧೩. ಚಂದ್ರಶೇಖರ್ ಟಿ.ಆರ್, ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ ರಾಜಕೀಯ ವೈಫಲ್ಯದ ಒಂದು ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೪

೧೪. ಚಲುವರಾಜು, ದಕ್ಕಲರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ - ೧೯೯೩

೧೫. ಚಿನ್ನಸ್ವಾಮಿ ಸೋಸಲೆ ಎನ್., ನಮ್ಮ ಗ್ರಾಮಗಳು: ಅಂದು-ಇಂದು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೪

೧೬. ತಪಸ್ವೀಕುಮಾರ್ ನಂ., ಸಂಸ್ಕೃತಿ ವಿಕಾಸ, ಚೇತನ ಬುಕ್‌ಹೌಸ್, ಮೈಸೂರು - ೨೦೦೦

೧೭. ತಂಬಂಡ ವಿಜಯ ಪೂಣಚ್ಚ, (ಸಂ) ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೧

೧೮. ದೇವಿಪ್ರಸಾದ್ ಚಟ್ಟೋಪಾಧ್ಯಾಯ, (ಅನು) ಕಕ್ಕಿಲ್ಲಾಯ ಬಿ.ವಿ., ಭಾರತೀಯ ದರ್ಶನಗಳು, ನವಕರ್ನಾಟಕ ಪ್ರಕಾಶನ - ೧೯೯೪

೧೯. ದೇವಿಪ್ರಸಾದ್ ಚಟ್ಟೋಪಾಧ್ಯಾಯ, (ಅನು) ಕುಮಾರಪ್ಪ ಜಿ., ಮಾತೆಯರು ಮಾನ್ಯರಾಗಿದ್ದಾಗ, ನವಕರ್ನಾಟಕ ಪ್ರಕಾಶನ - ೧೯೯೭

೨೦. ನಟರಾಜ್ ಹುಳಿಯಾರ್, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೪

೨೧. ನಂಜುಂಡಪ್ಪ ಡಿ.ಎನ್., ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಸಹಕಾರ ಚಳುವಳಿ, ರಾಜ್ಯ ಸಹಕಾರ ಮಹಾಮಂಡಳ, ಬೆಂಗಳೂರು - ೨೦೦೪

೨೨. ನಂಜಮ್ಮಣ್ಣಿ ಎಂ., ಭಾರತೀಯ ಸಾಮಾಜಿಕ ಸಂಸ್ಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೮೨

೨೩. ನಂಜಮ್ಮಣ್ಣಿ ಎಂ., ಸಾಮಾಜಿಕ ಮಾನವಶಾಸ್ತ್ರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೪. ಪ್ರಭಾಕರ ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೦

೨೫. ಪ್ರಭಾಕರ ಎ.ಎಸ್., (ಸಂ) ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೪

೨೬. ಪ್ರಭಾಕರ ಎ.ಎಸ್., ಚಂದ್ರಕಾಂತ, ಟಿ.ಎಸ್., (ಸಂ) ಡೊಂಬರು: ಒಂದು ಚಾರಿತ್ರಿಕ ಹಿನ್ನೋಟ ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ - ೨೦೦೬

೨೭. ಪ್ರಭಾಕರ ಎ.ಎಸ್., (ಸಂ) ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ - ೨೦೦೬

೨೮. ಬರಗೂರು ರಾಮಚಂದ್ರಪ್ಪ., ರಂಜಾನ್‌ದರ್ಗಾ., ಕೋಮುವಾದ, ರಾಜ್ಯ ಬಂಡಾಯ ಸಾಹಿತ್ಯ ಸಂಘಟನೆ, ಬೆಂಗಳೂರು.

೨೯. ಬಂಜಗೆರೆ ಜಯಪ್ರಕಾಶ, ಕನ್ನಡ ರಾಷ್ಟ್ರೀಯತೆ, ಕ್ರಾಂತಿಸಿರಿ ಪ್ರಕಾಶನ, ಬೆಂಗಳೂರು - ೨೦೦೦.

೩೦. ಭಗವಾನ್ ಶರಣ ಉಪಾಧ್ಯಾಯ, ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು - ೨೦೦೪

೩೧. ಬೋರಲಿಂಗಯ್ಯ ಹಿ.ಚಿ., ಗಿರಿಜನರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೪

೩೨. ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ದೈವರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೦

೩೩. ಬೋರಲಿಂಗಯ್ಯ ಹಿ.ಚಿ., ಕಾಡು, ಕಾಂಕ್ರಿಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ - ೧೯೯೫

೩೪. ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು - ೧೯೯೧

೩೫. ಬೋರಲಿಂಗಯ್ಯ ಹಿ.ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು - ೨೦೦೧

೩೬. ಬೋರಲಿಂಗಯ್ಯ ಹಿ.ಚಿ., ಹುಚ್ಚಪ್ಪ ಮಾಸ್ತರ ಎನ್., ಕಾಗೋಡು ಚಳುವಳಿ ಸುವರ್ಣ ಸಂಪುಟ - ೨೦೦೨

೩೭. ಭೈರಪ್ಪ ಕೆ., ಸುಂದರ ಪರಿಸರ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು - ೨೦೦೪

೩೮. ಭೈರೇಗೌಡ ಎಂ., ಇರಳಿಗರು ಜಾನಪದ ಅಧ್ಯಯನ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು - ೨೦೦೦

೩೯. ಮಂಜುನಾಥ ಬೇವಿನಕಟ್ಟಿ., ಆದಿವಾಸಿ ಸಂಸ್ಕೃತಿಯ ಸ್ಥಿತಿಗತಿ, ಸಾಹಿತ್ಯ ನಂದನ, ಬೆಂಗಳೂರು - ೨೦೦೭

೪೦. ಮಂಜುನಾಥ ಬೇವಿನಕಟ್ಟಿ., ಜಾನಪದ ಸಂಸ್ಕೃತಿ, ತೇಜಸ್ವಿ ಪ್ರಕಾಶನ, ಹ್ಯಾರಡ, ೧೯೯೪

೪೧. ಮಂಜುನಾಥ ಬೇವಿನಕಟ್ಟಿ., ದೇಸೀ ⅟ ಜಾಗತೀಕರಣ, ಸಿ.ವಿ.ಜಿ ಪಬ್ಲಿಕೇಶನ್ಸ್, ಬೆಂಗಳೂರು - ೨೦೦೪

೪೨. ಮಂಜುನಾಥ ಬೇವಿನಕಟ್ಟಿ, ದೇಸೀ ಚಹರೆ, ರೂಪಾ ಪ್ರಕಾಶನ, ಮೈಸೂರು - ೨೦೦೪

೪೩. ಮೈತ್ರಿ ಕೆ.ಎಂ., ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ-ಬುಡಕಟ್ಟು ಮಹಾಕಾವ್ಯ ಮಾಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೭

೪೪. ಮೈತ್ರಿ ಕೆ.ಎಂ., ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೨

೪೫. ಮೈತ್ರಿ ಕೆ.ಎಂ., ಬುಡ್ಗಜಂಗಮರು, (ಪ್ರ.ಸಂ.) ಕರ್ನಾಟಕ ಬುಡ್ಗ ಜಂಗಮರು ಸಂಘ(ರಿ), ಹೊಸಪೇಟೆ - ೨೦೦೫

೪೬. ಮೊಗಳ್ಳಿ ಗಣೇಶ್., (ಸಂ), ದಲಿತ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨

೪೭. ಮೊಗಳ್ಳಿ ಗಣೇಶ್., ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೯

೪೮. ಮೊಗಳ್ಳಿ ಗಣೇಶ್., ಆದಿಮ, ಸಾರಂಗ, ಪ್ರಕಾಶನ, ತಿಪಟೂರು - ೨೦೦೫

೪೯. ಮೋಹನ್‌ಕೃಷ್ಣ ರೈ. ಕೆ., ಪರಿಸರ ಚಳುವಳಿ, ಏಕೀಕರಣೋತ್ತರ ಕರ್ನಾಟಕ ಚಳುವಳಿ ಸಂಪುಟ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೨

೫೦. ಮೋಹನ್‌ಕೃಷ್ಣ ರೈ.ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, - ೨೦೦೪

೫೧. ಮಹಾಶ್ವೇತಾ ದೇವಿ., (ಅನು) ಕುಮಾರಪ್ಪ ಜಿ., ಅಗ್ನಿಗರ್ಭ, ನವಕರ್ನಾಟಕ ಪ್ರಕಾಶನ - ೨೦೦೨

೫೨. ಮಹಾಶ್ವೇತಾ ದೇವಿ., (ಅನು) ಬಿ.ಸುಜ್ಞಾನಮೂರ್ತಿ., ಯಾರದೀ ಕಾಡು, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು - ೨೦೦೩

೫೩. ವಿವೇಕ ರೈ ಬಿ.ಎ, ಯದುಪತಿಗೌಡ ಡಿ., ಮಲೆಕುಡಿಯರು, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ ೧೯೯೬

೫೪. ಶರ್ಮ ಆರ್.ಎಸ್., (ಅನು) ಗುರುದತ್, ಎಸ್., ಆರ್ಯರಿಗಾಗಿ ಹುಡುಕಾಟ, ನವಕರ್ನಾಟಕ ಪ್ರಕಾಶನ - ೧೯೯೬

೫೫. ಶರ್ಮ ಆರ್.ಎಸ್., (ಅನು) ಶಂಕರನಾರಾಯಣ ರಾವ್ ಎನ್.ಪಿ., ಪ್ರಾಚೀನ ಭಾರತ, ನವಕರ್ನಾಟಕ ಪ್ರಕಾಶನ - ೧೯೯೯

೫೬. ಶರ್ಮ ಆರ್.ಎಸ್., (ಅನು) ಶ್ರೀನಿವಾಸಮೂರ್ತಿ, ಶೋಭಾ ಆರ್, ಗುರುದತ್ ಎಸ್, ರಾಮಕೃಷ್ಣ ಜಿ, ಪ್ರಾಚೀನ ಭಾರತದಲ್ಲಿ ಶೂದ್ರರು, ನವಕರ್ನಾಟಕ ಪ್ರಕಾಶನ - ೨೦೦೪

೫೭. Anantha Krishna Iyer L.K., Mysore Tribes and Castes, Volume-I, Published Under The Auspices of the Mysore University, Mysore - 1935

೫೮. Alexander K.C., Tribals Reliabilitation and Development, - 1991

೫೯. Bhowmick P.K., Customary, Low of Austria Speaking Tribes, Kalpaz Publications, Delhi - 2002

೬೦. Bhowmick P.K., Primitive Tribal Groups In Eastern India, Gyan Publishing House, New Delhi - 1994

೬೧. Bhatt S.C. and Gopal K. Bharyava., Land and People of Indian States and Union Territories, In 36 Volumes, Karanataka, Volume 13, Kalpaz Publications, Delhi - 2006

೬೨. Dube S.C. Understanding Change, Anthropological and Sociological Perspective, Vikas Publishing House, Pvt, Ltd 576, Masjid Road Jangpura, New Delhi - 1993

೬೩. Edgar Thurston and K. Rangachari, Caste and Tribes of Southern India, Volume I, II, III, IV, V, VI, VII, Asian Educational Services, New Delhi - 1987

೬೪. Enthoven R.E., The Tribes and Castes of Bombay, Volume-III, Asian Educational Services, New Delhi - 1990

೬೫. Enthoven R.E., The Tribes and Castes of Bombay, Volume-I, Asian Educational Services, New Delhi - 1990

೬೬. Edwin Jayadas., Tribals in our Global Village. Pan media, 43/1-26th cros Wilson Gardens, Banglore - 1993

೬೭. Indra Devashrirama, Society and Culture In India, Rawat Publications, Jaipur and New Delhi - 1999

೬೮. Jain P.V., Planned Development Among Tribals, Rawat Publications, Jaipur and New Delhi - 1999

೬೯. Lewis, T.M., Social Anthropology in Perspective, Cambridge University Press - 1985,

೭೦. Madan T.N., Family and Kinship, A Study of the Pandits of Rurul Kasmir, Oxford University Press, New Delhi - 1989

೨೦. Srinivas M.N., The Rememberd Village, Oxford University Press, Bombay - 1976

೨೧. Srinivas M.N., Caste in modern India, Media, Promaters and Publishers P.V.T, LTD, Bombay - 1992

೨೩. Srinivas M.N., Collected Essays, Oxford University Press, New Delhi - 2002

೨೪. Sumit Sarkar, Griting Social History, Oxfored University Press New Delhi - 1997

೨೫. Singh K.S., People of India, National Servies, Volume-IV, Indias Communities Anthropological Survey of India, Oxford University Press, Delhi - 1998

೨೬. Nithyanada Patnaik, Folklore of Tribal Communities, Gyan Publishing House, New Delhi -2002

೨೭. Nirmal Kumar Bose, Some Indian Tribes, National book Trust of India, New Delhi - 1972

* * *

# ಕರ್ನಾಟಕ
## ೨೦೦೧



ಬೀದರ್
ಗುಲ್ಬರ್ಗಾ
ಬಿಜಾಪುರ್
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಧಾರವಾಡ
ಗದಗ್
ಬಳ್ಳಾರಿ
೧ - ತುಮಕೂರು
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
೧
ಶಿವಮೊಗ್ಗ
ಕೋಲಾರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಬೆಂಗಳೂರು
ಹಾಸನ
ಮಂಡ್ಯ
ಬೆಂಗಳೂರು ಗ್ರಾಮಾಂತರ
ದಕ್ಷಿಣ ಕನ್ನಡ
ಕೊಡಗು
ಮೈಸೂರು
ಚಾಮರಾಜನಗರ



ಗೌಡಾಲು ಸಮುದಾಯದ ಗುಡಿಸಲುಗಳು



ಭತ್ತ ಕುಟ್ಟುತ್ತಿರುವ ಗೌಡಾಲು ಮಹಿಳೆಯರು



ಗೌಡಾಲು ಸಮುದಾಯದ ಕುಟುಂಬ



ಧಾನ್ಯ ಬೀಸುತ್ತಿರುವ ಗೌಡಾಲು ಮಹಿಳೆ



ಬುಟ್ಟಿ ಹೆಣೆಯುತ್ತಿರುವ ಗೌಡಾಲು ಹಿರಿಯ



ಗೌಡಾಲು ಸಮುದಾಯದ ಕುಟುಂಬ



ಗಿರಿಜನ ಶಾಲೆಯಲ್ಲಿ ಗೌಡಾಲು ಸಮುದಾಯದ ಮಕ್ಕಳು



ಪ್ರಾರ್ಥನೆಯಲ್ಲಿ ತಲ್ಲೀನರಾಗಿರುವ ಗಿರಿಜನ ಮಕ್ಕಳು



ಗೌಡಾಲು ಸಮುದಾಯದ ಮದುವೆಯ ಆಚರಣೆ



ಒಕ್ಕಲುತನಕ್ಕೆ ಸಿದ್ಧನಾಗಿರುವ ಗೌಡ್ಲು



ಗೌಡಾಲು ಸಮುದಾಯದ ಧಾನ್ಯದ ಗೂಡೆ



ಗೌಡಾಲು ಸಮುದಾಯ ಧಾನ್ಯ ಚಿತ್ತುವ ಉಪಕರಣ



ದಿನಗೂಲಿ ಕೆಲಸ ಮಾಡಿ ಬರುತ್ತಿರುವ ಗೌಡ್ಲು



ಹೆಂಡ ಇಳಿಸುತ್ತಿರುವ ಗೌಡ್ಲು



ಮಳೆಗಾಲದಲ್ಲಿ ಕೂಲಿ ಕೆಲಸಕ್ಕೆ ಸಿದ್ಧವಾಗಿರುವ ಗೌಡಾಲು ಮಹಿಳೆ



ತೋಟದಿಂದ ಬರುತ್ತಿರುವ ಗೌಡ್ಲು



ಗೌಡಾಲು ಸಮುದಾಯದ ಹಿರಿಯ

ನೊಂದು ಹೋರಾಟದಲ್ಲ ಮಗ್ನರಾಗಿರುವ ಗೌಡಾಲು ಸಮುದಾಯದವರು





ನಮಗೆ ನ್ಯಾಯ ಕೊಡಿ



ಪೊಲೀಸ್ ವಿರುದ್ಧ ಆದಿವಾಸಿಗಳ ಆಕ್ರೋಶ